ARYAVAIDYAK GRANTHAMALA: NO. 4.

# ASHTANGA-HRIDAYA

## of Vagbhata

## Part I

## (Sutrasthan)

A Translation with Text, copious and explaintory Notes in Kannada

BY

VAIDYA-GURU ANANTACHARYA ADYA

Editor "DHANVANTARI"

Author of "GRIHAVAIDYA" "WHAT IS AYURVEDA?" Etc.

Forward by

VAIDYARATNA CAPTAIN G. SHRINIWASMURTY

B. A., B. L., M. B. & C. M.

Principal: GOVERNMENT SCHOOL OF INDIAN MEDICINE,

MADRAS.

1955

PRICE: Rs. 10—0—0

ಅಚ್ಚುಗಾರರು:
ಶ್ರೀಮಾನ್ ನರಸಿಂಗರಾವ ನಾಯಿಕ ಬಿ. ಎ. ಎಲ್‌ಎಲ್. ಬಿ.
ಕರ್ನಾಟಕ ವೈಭವ, ಮುದ್ರಾಲಯ
ವಿಜಾಪೂರ

ಎರಡನೆಯ ಮುದ್ರಣ ೧೦೦೦ ಪ್ರತಿಗಳು


ಪ್ರಕಾಶಕರು:
ವೈದ್ಯಗುರು ಆದ್ಯ ಅನಂತಾಚಾರ್ಯರು
ಆರ್ಯ ವೈದ್ಯಕ ಗ್ರಂಥಮಾಲಾ ವಿಜಾಪೂರ.



ದಾನವೀರ ಕೃಷ್ಣರಾವ ಹಣಮಂತರಾವ ಕಬ್ಬೂರ
ಮುಂಬಯಿ.

ಈ ಗ್ರಂಥಕ್ಕೆ ಉದಾರ ಸಹಾಯ ಮಾಡಿದ ಸದ್ಗೃಹಸ್ಥರು.

# उपोद्घातः

इह खलु जगति सकलपुरुषार्थसाधकमारोग्यभासुरमायुरासादयितुं तदुच्छेदकानामयानुन्मूलयितुमप्यवश्यमावश्यकमुपायजातमुपादिशत्सु विविधेषु वैद्यतंत्रेषु पुरोजन्मतया गुणैश्च प्रथमं प्रधानं च स्थानमधितिष्ठत्यस्माकमायुर्वेद-भारती। आतंकपंकमग्नस्य जगतः समुद्दिधीर्षया भूरिभूतानुकंपाकुला ऋषीश्वराः करबदरवदखिलमपि विश्वतत्त्वं ज्ञानदृष्ट्या साक्षादालक्षयंतो निजागंतुविकाराणामनुत्पत्त्यै समुत्पन्नानां शांतये च तंत्रमिदं कलयामासुः किल प्रचारयामासुश्च।

तत्र च तावदद्य वैद्यानां वैद्यविद्यार्थिनां च मध्ये प्रचुरं प्रचारमावहतां वैद्यग्रंथानामेकतमं श्रीमद्वाग्भटाचार्यविरचित-मष्टांगहृदयमित्यत्र नास्ति संदेहः। विपुलग्रंथपठने कंठस्थिरीकरणे च कालक्रमेण जनेषु पराङ्मुखेषु अग्निवेशादिप्रणीतानि तिरोधातुं स्थानानि च तेषामध्यतिष्ठंश्चरकसुश्रुतादयो ग्रंथाः। कालांतरे पुनश्चरकादिष्वपि अनंतरकालजातया जनतया दुरध्येयतामिव गतेषु अनायासग्राह्या अष्टांगहृदयादयो ग्रंथा निरमीयंत।

अष्टांग-संग्रहकर्तुः सिंहगुप्ततनूजाद्वृद्धवाग्भटाद्भिन्नोऽयमष्टांगहृदयकर्ता वाग्भट इति संभावयंतो विमर्शका अस्य कालं क्रिस्तुपूर्वद्वितीयशतकमारभ्य क्रिस्तूत्तरनवमशतकपर्यंतमभ्यूहंते। यतः कुतश्चिदागतं सुभाषितं प्राचीनार्वाचीनादिभेददृष्टिमपहाय सुभाषितत्वमात्रेण गृह्णंतो वयं न पुनरेतादृशान् विचारान्विशिष्टप्रयोजनान्मन्यामहे।

आह चाचार्यः—

ऋषिप्रणीते प्रीतिश्चेन्मुक्त्वा चरकसुश्रुतौ ॥
भेडाद्याः किं न पठ्यंते तस्माद्ग्राह्यं सुभाषितम् ॥

कालिदासोऽपिः—

पुराणमित्येव न साधु सर्वं
न चापि काव्यं नवमित्यवद्यम् ।
सन्तः परीक्ष्यान्यतरद्भजंते
मूढः परप्रत्ययनेयबुद्धिः ॥

आकारे ह्रस्वमप्यष्टांग-हृदयमसंदिग्धया संक्षिप्तया सरलया च सरण्या चरकसुश्रुतादिषु प्रतिपादितानखिलानपि विषयान् पौनरुक्त्यादिदोषमंतरैव सुविशादमुपपादयतीति वैद्यशास्त्राध्ये-तृणामत्यंतोपकारकं भवति। अष्टांग-हृदयमामूलाग्रमधीतवतां चरकादिषु वर्णिता गहना विषया अप्यनायासेनैव यथाशक्ति ग्राह्या भवंति। अपरं च। चरकादिष्वनुक्ताः केचन प्रयोगाः (एकमूलिकादयः) अष्टांग-हृदये संग्रहे च तत्र तत्र निगूहिताः सन्तीति श्रूयते। इदमेव तत्त्वं 'दक्षस्तीर्थात्तशास्त्रार्थः' इत्यत्र 'तीर्थात्तशास्त्रार्थे' पदेनाचार्य एव सूचयति।

वाग्भटाचार्यस्तावज्जन्मना वैदिकधर्मानुयायी तथापि कालांतरे बौध्दमतानुयाय्यासीत् इति वार्ता श्रूयते। जैनमतमंगय कार्षीदिति केषांचिन्मतम्। तत्र हेतुः तदानीं बौध्द-जैनमात्रा वगतानि बहूनि वैद्यक-तत्वानि विज्ञाय लोकोपकारार्थं प्रकाश-यितुमिति चावितथा कथा श्रूयते। एवमादिभिः कारणैरष्टांग हृदयमतिप्रधानं किमपि ग्रंथरत्नमित्यलमतिविस्तरेण।

अत एव ।प्रांग-हृदयं श्रीमद्भगवद्गीतेव भारतवर्षे प्रायः सर्वास्वपि भाषासु विवर्तितं वर्तते । वर्तते चास्य विवर्तनानि तिवेतन् शर्मण्यादिभाषासु । एतावता कालेनापि तस्य कर्णाटकभाषायां नासीद्भाषांतरीकरणमिति महदिदं लज्जास्पदं भिषजाम् । न्यूनतामिमां परिहर्तुमस्य कर्णाटकभाषायां विवर्तनं विरचयतो विजापुरवास्तव्यस्य "आयुर्वेदतीर्थ" विरुद्धारिणः श्रीमतः 'अनंताचार्य आद्य' महाशयस्य कार्तज्ञमावहंति सर्वेऽपि कर्णाटकभिषजः । अमरभाषायामन्यादृशं पांडित्यमावहतः आयुर्वेदस्थेयसीं प्रतिष्ठामधिगतवतः प्रक्रियायां प्रवीणस्य आद्यमहाशयस्य विवर्तनमिदं मूलार्थमक्लिष्टया सरलया भाषया विशदं व्याख्याति । सर्वथा विवर्तनस्यास्य विपुलं प्रचारं तत्प्रणेतुरायुरारोग्ययशःसंपत्समृद्धिं भूयोऽप्येतादृशेषु लोकोपकारेषु व्यवसायेष्वप्रतिहतमुत्साहं च वितरतु विश्वनाथ इति प्रार्थये ।

अडियार |
मद्रास |

जी. श्रीनिवासमूर्तिः



# ಅನುವಾದಕರ ಮಾತು

ಅಷ್ಟಾಂಗ-ಹೃದಯುದ ಈ ಕನ್ನಡ ಅನುವಾದದ ಬಗ್ಗೆ ಕೆಲವು ಮಾತುಗಳನ್ನು ಹೇಳುವ ಮೊದಲು ಅಷ್ಟಾಂಗ ಹೃದಯುದ ಲೇಖಕರಾದ ವಾಗ್ಭಟಾಚಾರ್ಯರ ಪರಿಚಯುವನ್ನು ಸ್ವಲ್ಪದರಲ್ಲಿ ಮಾಡಿ ಕೊಡುವದು ಯೋಗ್ಯವೆಂದು ತೋರುತ್ತದೆ.

ವಾಗ್ಭಟಾಚಾರ್ಯರು ಸಿಂಧುದೇಶ (ಸಿಂಧಪ್ರಾಂತ)ದವರು. ಇವರು ಅಲ್ಲಲ್ಲಿ ವೈದಿಕಮಂತ್ರ, ಬ್ರಾಹ್ಮಣರ ಸ್ತುತಿ, ವೈದಿಕ ಬ್ರಹ್ಮ ಹಾಗು ಋಷಿಗಳನ್ನು ಮನ್ನಿಸಿರುವದರಿಂದ ವೈದಿಕರೆಂದು ಕೆಲವರೂ ಇವರೇ ಬರೆದ "ಅಷ್ಟಾಂಗ-ಸಂಗ್ರಹ" ವೆಂಬ ಗ್ರಂಥದ ಮಂಗಲಾಚರಣ ಶ್ಲೋಕದಲ್ಲಿ "ಬುದ್ಧಾಯ-ತಸ್ಮೈನಮಃ" ಎಂದು ಹೇಳಿದ್ದರಿಂದ ಇವರು ಬೌದ್ಧರೆಂದು ಹಲವರೂ, ಮೊದಲು ವೈದಿಕರಿದ್ದು ಹಿಂದುಗಡೆಯುಲ್ಲಿ ಬೌದ್ಧರಾದರೆಂದು ಬೇರೆ ಕೆಲವರೂ ತರ್ಕಿಸುತ್ತಾರೆ.

ಇವರ ಅಜ್ಜನ ಹೆಸರು 'ವಾಗ್ಭಟ' ಎಂದೂ, ಅದನ್ನೇ ತಮಗೆ ಇಟ್ಟರುವರೆಂದು ಸ್ವತ: ವಾಗ್ಭಟಾಚಾರ್ಯರೇ ಹೇಳಿರುವರು. ತಮ್ಮ ತಂದೆಯುವರಾದ "ಸಿಂಹಗುಪ್ತ" ಇವರಿಂದಲೂ 'ಅವಲೋಕಿತ" ಎಂಬವರಿಂದಲೂ ತಾವು ವಿದ್ಯೆಯುನ್ನು ಸಂಪಾದಿಸಿರುವರೆಂದೂ ಹೇಳಿದ್ದಾರೆ. ಇವರಿಗೆ 'ಜೆಜ್ಜಟ' 'ಇಂದು' ಮುಂತಾದ ಶಿಷ್ಯರಿದ್ದರು. ಆದರೆ ಇವರಿಗೆ ಮಕ್ಕಳು ಇದ್ದರೋ ಇಲ್ಲವೋ ಎಂಬುದು ತಿಳಿದುಬಂದಿಲ್ಲ.

ಇವರು ತಮ್ಮ ಗ್ರಂಥದಲ್ಲಿ 'ಶಕಾಂಗನಾ' 'ಶಕಾಧಿಪತಿ' ಗಳ ಉಲ್ಲೇಖ ಮಾಡಿರುವರು. ಶಕರು ಕ್ರಿಸ್ತವರ್ಷ ೧ನೇ ಶತಕದಿಂದ ೪ನೇ ಶತಕದ ವರೆಗೆ ರಾಜ್ಯವಾಳಿದರು. 'ಇತ್ಸಿಂಗ'ನೆಂಬ ಚೀನೀ ಪ್ರವಾಸಿಯು ಭಾರತಕ್ಕೆ ಬಂದಾಗ್ಗೆ (೫ನೆಯ ಶತಕ) ವಾಗ್ಭಟಾಚಾರ್ಯರ ಗ್ರಂಥದ ಪ್ರಸಾರವು ಅಖಿಲ ಭಾರತದಲ್ಲಿಯೇ ಆಗಿತ್ತೆಂದು ಬರೆದಿರುವನು. ಇವೆಲ್ಲ ಹಾಗು ಇನ್ನಿತರ ಆಧಾರಗಳನ್ನು ಅನುಲಕ್ಷಿಸಿ ಇವರು ೪ನೇ ಶತಮಾನದಲ್ಲಿ ಇದ್ದಿರಬೇಕೆಂದು ಸಂಶೋಧಕರು ಬರೆದಿರುತ್ತಾರೆ.

ಸಂಸ್ಕೃತ ಸಾಹಿತ್ಯದಲ್ಲಿ ಎಂಟು ಜನ ವಾಗ್ಭಟರು ಆಗಿಹೋಗಿರುವರು. ಅವರು ಬೇರೆ ಬೇರೆ ಶಾಸ್ತ್ರಗಳಲ್ಲಿ ಗ್ರಂಥಗಳನ್ನು ಬರೆದಿರುವರು. ಸಿಂಹಗುಪ್ತರ ಮಕ್ಕಳಾದ ಪ್ರಕೃತ **ವಾಗ್ಭಟಾಚಾರ್ಯ**ರು ಬರೆದ ಮುಖ್ಯ ಗ್ರಂಥಗಳೆಂದರೆ "ಅಷ್ಟಾಂಗ-ಸಂಗ್ರಹ" (ಈ ಗ್ರಂಥಕ್ಕೆ "ವೃದ್ಧ ವಾಗ್ಭಟ" ಎಂದೂ ಹೇಳ್ಳುತ್ತಾರೆ.) ಹಾಗು "ಅಷ್ಟಾಂಗ-ಹೃದಯ". 'ಅಷ್ಟಾಂಗ-ಸಂಗ್ರಹ'ವು ಸುಮಾರು ೧೩೦೦೦ ಗ್ರಂಥ (೩೨ ಅಕ್ಷರವೆಂದರೆ ಒಂದು ಗ್ರಂಥ) ದಷ್ಟು ಇದೆ. ಅಲ್ಲದೇ ಗದ್ಯಪದ್ಯಮಯವಾಗಿರುವದು. ಇದು ಇಷ್ಟೊಂದು ದೊಡ್ಡದಾಗಿರುವದರಿಂದ ಅದನ್ನು ಸಂಕ್ಷೇಪ ಮಾಡಿ "ಅಷ್ಟಾಂಗ-ಹೃದಯ" ಎಂಬ ಗ್ರಂಥವನ್ನು ಬರೆದರು. ಕಂಠಪಾಠವಾಗುವಂತೆ ಪದ್ಯಮಯವಾಗಿ ಈ ಗ್ರಂಥವನ್ನು ಬರೆದಿದ್ದಾರೆ. ಭರತಖಂಡದಲ್ಲಿ ಅಷ್ಟೇ ಅಲ್ಲದೇ ಇತರ ಅನೇಕ ದೇಶಗಳಲ್ಲಿ ಈ ಗ್ರಂಥವು ಮಾನ್ಯವಾಗಿದೆ. ಇದಕ್ಕೆ ಸಂಸ್ಕೃತದಲ್ಲಿ ಅನೇಕರು ಟೀಕೆಗಳನ್ನು ಬರೆದಿರುವರು. ಅವರಲ್ಲಿ ಅರುಣದತ್ತ, ಚಂದ್ರನಂದನ, ಹಾಗು ಹೇಮಾದ್ರಿ ಇವರು ಪ್ರಮು^ರು.

ಕನ್ನಡದಲ್ಲಿ **ಆಯುರ್ವೇದ** ಸಾಹಿತ್ಯವು ತೀರ ಹೀನ ಸ್ಥಿತಿಯಲ್ಲಿ ಇದೆ **ಆಯುರ್ವೇದದ ಬೃಹತ್ತ್ರಯೀ** ಎಂದೆನಿಸಿಕೊಂಡ, ಜಗತ್ತಿನ ಎಲ್ಲ ಭಾಷೆಗಳಲ್ಲಿ ಭಾಷಾಂತರವಾದ **ಅಷ್ಟಾಂಗ-ಸಂಗ್ರಹ, ಚರಕ** ಹಾಗು **ಸುಶ್ರುತ**ಗಳಂಥ ಆಯುರ್ವೇದದ ಮೂಲಗ್ರಂಥಗಳ ಭಾಷಾಂತರವಾಗದಿರುವದು-ಅದರಲ್ಲಿಯೂ ವಿಶೇಷತಃ ವೈದ್ಯ ಪ್ರಪಂಚಕ್ಕೇ ಮಾನ್ಯವಾದ, ವಿದಾರ್ಥಿಯಿಂದ ವೃದ್ಧ-ವೈದ್ಯರವರಿಗೆ ಅಗತ್ಯ ಬೀಳುವ " **ಅಷ್ಟಾಂಗ ಹೃದಯ**"ದ ಭಾಷಾಂತರವಾಗದಿರುವದು. ಕನ್ನಡಿಗರಿಗೆ ಲಜ್ಜಾಸ್ಪದವಾದ ವಿಷಯವು. ಆಯುರ್ವೇದದ ತತ್ವಗಳನ್ನು ತಿಳಿಸುವ " **ಸೂತ್ರಸ್ಥಾನ** "ವು ಅತಿ ಮಹತ್ವದ್ದು ಇರುವದು. ಇದನ್ನು ಅರಿಯದೆ ವೈದ್ಯಕ-ಮಾಡುವವನು ಆಯುರ್ವೇದೀಯ ವೈದ್ಯನೇ ಅಲ್ಲವೆಂದು ಹೇಳಬಹುದು. ಇದನ್ನು ಅಷ್ಟಾಂಗ-ಹೃದಯದಲ್ಲಿಯಷ್ಟು ಸ್ಪಷ್ಟ ಮತ್ತು ವ್ಯವಸ್ಥಿತವಾಗಿ ಬೇರೆ ಎಲ್ಲಿಯೂ ಬರೆದಿಲ್ಲ.

**ನಿದಾನೇ ಮಾಧವಃ ಶ್ರೇಷ್ಠಃ ಸೂತ್ರಸ್ಥಾನೇ ತು ವಾಗ್ಭಟಃ**
**ಶಾರೀರೇ ಸುಶ್ರುತಃ ಶ್ರೇಷ್ಠಶ್ಚರಕಸ್ತು ಚಿಕಿತ್ಸಿತೇ ॥**

ಎಂಬುದು ಎಲ್ಲರೂ ಅರಿತ ವಿಷಯವೇ ಆಗಿದೆ. ಆದ್ದರಿಂದ ಆಯು ರ್ವೇದದ ಸೇವೆಯಲ್ಲಿ ನನ್ನದೊಂದು ಮುಡಿಪು ಎಂದು 'ಸೂತ್ರಸ್ಥಾನ' ದ ಕನ್ನಡ ಅನುವಾದವನ್ನು ಕನ್ನಡಿಗರ ಕೈಯಲ್ಲಿಡಲು ನನಗೆ ಬಹಳ ಸಂತೋಷ ವಾಗುತ್ತಿದೆ.

ಈ ಅನುವಾದವು ಒಳ್ಳೇ ವ್ಯವಸ್ಥಿತವಾಗಿ ಬರೆಯಲ್ಪಟ್ಟಿದೆ.

೧. ಮೊದಲು ಅಧ್ಯಾಯದ ಕ್ರಮಾಂಕ.

೨. ಆ ಮೇಲೆ ಹಿಂದಿನ ಅಧ್ಯಾಯದಲ್ಲಿ ಹೇಳಿದ ವಿಷಯಕ್ಕೂ ಈ ವಿಷಯಕ್ಕೂ ಸಂಬಂಧ (ಅಧ್ಯಾಯ ಸಂಗತಿ)

೩. ಅನಂತರ ಈ ಅಧ್ಯಾಯದ ವಿಷಯ.

೪. ಈ ವಿಷಯದ ಬಗ್ಗೆ ಹೆಚ್ಚಿಗೆ ತಿಳಿದುಕೊಳ್ಳ ಬಯಸುವ ವಿದ್ಯಾರ್ಥಿ ಮತ್ತು ವೈದ್ಯರಿಗಾಗಿ ಅಷ್ಟಾಂಗ ಸಂಗ್ರಹ, ಚರಕ ಮತ್ತು ಸುಶ್ರುತಗಳಲ್ಲಿ ಈ ವಿಷಯವು ಎಲ್ಲಿ ಹೇಳಿದೆ ಎಂಬುದನ್ನು ತಿಳಿಸುವ ದಕ್ಕಾಗಿ ಗ್ರಂಥ ನಿರ್ದೇಶಪೂರ್ವಕ ಅವುಗಳ ಸ್ಥಾನ ಅಧ್ಯಾಯಗಳನ್ನು ಟಿಪ್ಪಣಿಯಲ್ಲಿ ಕೊಡಲಾಗಿದೆ.

೫. ಅದರ ಮುಂದೆ ಹೇಳಲ್ಪಡುವ ವಿಷಯ ವಿಶೇಷವನ್ನು ಸಣ್ಣ ಅಕ್ಷರದಲ್ಲಿ ಬರೆದ ಅವತಾರಿಕೆಯಿಂದ ತಿಳಿಸಲಾಗಿದೆ.

೬. ಆ ಮೇಲೆ ಮೂಲ ಸಂಸ್ಕೃತ ಶ್ಲೋಕಗಳನ್ನು ದಪ್ಪಕ್ಷರ ದಲ್ಲಿ ಬರೆಯಲಾಗಿದೆ.

೭. ಅದರ ಕೆಳಗೆ ಅದರ ಅರ್ಥವನ್ನು ತಿಳಿಗನ್ನಡದಲ್ಲಿ ಸುಬೋಧ ವಾಗಿ ಕೊಡಲಾಗಿದೆ.

೮. ದುರ್ಬೋಧ ಸ್ಥಳದಲ್ಲಿ ಅರ್ಥ ವಿವರಣೆಗಾಗಿ ಕೆಳಗೆ ಟಿಪ್ಪಣಿ ಯನ್ನು ಕೊಟ್ಟಿರುವೆವು. ಅದಕ್ಕಾಗಿ ವಾಗ್ಭಟದ ಪ್ರಸಿದ್ಧ ಟೀಕಾಕಾರರಾದ ಹೇಮಾದ್ರಿ ಅರುಣದತ್ತರ ಸಂಸ್ಕೃತ ಟೀಕೆಗಳ ನೆರವನ್ನು ಪಡೆದಿ ರುವೆವು.

೯. ಇದಲ್ಲದೆ ಅವರು ಹೇಳಿದ ಹೆಚ್ಚಿನ ಮಹತ್ವದ ಸಂಗತಿಗಳನ್ನು ಉಲ್ಲೇಖಿಸಿರುವೆವಲ್ಲದೆ ಆಕ್ಷೇಪ ಸಮಾಧಾನಗಳನ್ನು ಕೊಟ್ಟಿರುವೆವು. ಅವರ ಮತಭೇದಗಳನ್ನೂ ಅವಶ್ಯ ಕಂಡಲ್ಲಿ ತೋರಿಸಿರುವೆವು.

೧೦. ಪಾಠ ಭೇದಗಳಲ್ಲಿ ಯುಕ್ತವೆಂದು ಕಂಡ ಪಾಠಗಳನ್ನೇ ಆರಿಸಿಕೊಂಡು ಅರ್ಥ ಬರೆದಿರುವೆವು ಆದರೂ ಕೆಲವು ಪಾಠಭೇದಗಳನ್ನು ಅಲ್ಲಲ್ಲಿ ಕೊಟ್ಟಿರುವೆವು.

೧೧. ಬೇರೆ ಗ್ರಂಥಗಳಲ್ಲಿಯ ಮಹತ್ವದ ಶ್ಲೋಕಗಳನ್ನು ವಿದ್ಯಾರ್ಥಿಗಳು ಪಾಠ ಮಾಡಲಿ ಎಂದು ಹಾಗೆಯೇ ಟಿಪ್ಪಣಿಯಲ್ಲಿ ಇಟ್ಟಿರುವೆವು.

೧೨. ಅರ್ಥದಲ್ಲಿ ಬಂದ ಅತಿದೇಶ, ನಿರ್ದೇಶ ಮತ್ತು ಅವತರಣಿಕೆಗಳ ಮುಂದೆ ಅವುಗಳಿಗೆ ಸಂಬಂಧಿಸಿದ ಗ್ರಂಥ, ಸ್ಥಾನ ಮತ್ತು ಶ್ಲೋಕಗಳನ್ನು ಕೊಟ್ಟು ಅವನ್ನು ನೋಡಿ ತಿಳಿದುಕೊಳ್ಳಲು ಅನುಕೂಲ ಮಾಡಿಕೊಟ್ಟಿರುವೆನು.

೧೩. ಕೆಲವು ವನಸ್ಪತಿಗಳಿಗೆ ಹೆಸರುಗಳು ವಿಶ್ವಸನೀಯವಾಗಿ ತಿಳಿದು ಬಂದಿಲ್ಲ ಅಂಥಲ್ಲಿ ಸಂಸ್ಕೃತ ಹೆಸರುಗಳನ್ನು ಹಾಗೆಯೇ ಇಡಲಾಗಿದೆ

ಒಟ್ಟಿನ ಮೇಲೆ ಈ ಗ್ರಂಥವು ಕನ್ನಡ ನಾಡಿನ ಆಯುರ್ವೇದ ವಿದ್ಯಾರ್ಥಿಗಳಿಗೂ ವೈದ್ಯರಿಗೂ ಎಲ್ಲ ರೀತಿಯಿಂದ ಉಪಯುಕ್ತವಾಗುವಂತೆ ಮಾಡಬೇಕಾದ ಎಲ್ಲ ಪ್ರಯತ್ನಗಳನ್ನು ಯಥಾಶಕ್ತಿ ಮಾಡಿರುವೆವು. ಆದರೂ ಅನೇಕ ನ್ಯೂನತೆಗಳು ಇರಬಹುದು. ಪಂಡಿತರು ಅವನ್ನು ತಿಳಿಸಿದಲ್ಲಿ ಮುಂದಿನ ಆವೃತ್ತಿಯಲ್ಲಿ ತಿದ್ದಿಕೊಳ್ಳುವೆನು.

ಇದರ ೧ನೇ ಆವೃತ್ತಿಯು ತೀರಿ ಹೋದ್ದರಿಂದ ವಿದ್ಯಾರ್ಥಿಗಳೂ ಅಧ್ಯಾಪಕರೂ ಅನೇಕರೂ ಇದರ ಪುನರ್ಮುದ್ರಣ ಮಾಡಲು ಬಿನ್ನವಿಸಹತ್ತಿ ಬಹಳ ದಿನಗಳಾದವು. ಆದರೆ “ ಸರ್ವಾರಂಭಾಸ್ತಂಡುಲಾಃ ಪ್ರಸ್ಥಮೂಲಾಃ ” ಅಲ್ಲವೇ, ಆದ್ದರಿಂದ ನಾವು ತಡೆದಿದ್ದೆವು. ಇಷ್ಟರಲ್ಲಿ ಒಬ್ಬ ಉದಾರಹೃದಯಿಗಳು ಮುಂದೆ ಬಂದರು. ‘ ಕರ್ಣಾಟಕ ಕರ್ಣ’ರೆಂದು ಹೆಸರಾದ ಶ್ರೀಮಂತ ಕೃಷ್ಣರಾವ ಕಬ್ಬೂರವರ ಹೆಸರನ್ನು ಕೇಳದ ಯಾವ ಕನ್ನಡಿಗನೂ ಇರಲಿಕ್ಕಿಲ್ಲ. ಇವರು ಅನೇಕ ಸಂಸ್ಥೆಗಳಿಗೆ ಸಾವಿರಗಟ್ಟಲೆ-ಅಲ್ಲ ಲಕ್ಷಗಟ್ಟಲೆ ಹಣವನ್ನು ಕೊಟ್ಟು ನೆರವಾಗಿದ್ದಾರೆ. ಚರಕ ಸಂಹಿತೆಯು ಚಿಕಿತ್ಸಾಸ್ಥಾನದ ೧ನೇ ಭಾಗವೂ ಇವರ ವೆಚ್ಚದಿಂದಲೇ ಮುದ್ರಿತವಾಗಿದೆ. ಎಂಬ ಸಂಗತಿಯನ್ನು ನಮ್ಮ ವಾಚಕರು ಅರಿಯದೇ ಇಲ್ಲ. ಈ ಗ್ರಂಥದ ವೆಚ್ಚವನ್ನೂ ಇವರೇ ವಹಿಸಿರುವರು. ಇವರು ಇದನ್ನು ಮಾಡದೇ

ಹೋಗಿದ್ದರೆ ಇದು ಬೆಳಕು ಕಾಣುತ್ತಲೇ ಇದ್ದಿಲ್ಲ. ಇದಕ್ಕಾಗಿ ನಾವು ಅವರಿಗೆ ಅತ್ಯಂತ ಋಣಿಯಾಗಿರುವೆವು. ಇದರಂತೆ ಮುಂಬಯಿಯ ಪ್ರಖ್ಯಾತ ವಕೀಲರೂ 'ದಾತಾರ' ಕುಲೋತ್ಪನ್ನರೂ ಆದ ಕಾಂತರಾಯರೂ ಇದಕ್ಕೆ ಸಹಾಯ ಮಾಡಿ ತಮ್ಮ 'ದಾತಾರ' ಎಂಬ ಕುಲದ ಹೆಸರನ್ನು ಅನ್ವರ್ಥ ಮಾಡಿರುವರು. ಅವರಿಗೂ ನಾವು ಋಣಿಯಾಗಿರುವೆವು. ಭಗವಾನ್ ಧನ್ವಂತರಿಯು ಇನ್ನು ಮುಂದೆಯೂ ಇಂಥ ಅನೇಕ ಸಂಸ್ಥೆಗಳಿಗೆ ಸಹಾಯವಾಗುವಂತೆ ಇವರಿಗೆ ವಿಪುಲ ಆಯುರಾರೋಗ್ಯ ಐಶ್ವರ್ಯಗಳನ್ನು ದಯಪಾಲಿಸಲಿ ಎಂದು ಅವನನ್ನು ಪ್ರಾರ್ಥಿಸುವೆವು.

ಇದರ ಮುಂದಿನ ಎರಡು ವಿಭಾಗಗಳ ಮುದ್ರಣಕ್ಕಾಗಿಯೂ ಯಾರಾದರೂ ಉದಾರಿಗಳು ಮುಂದೆ ಬಂದು ಕನ್ನಡದಲ್ಲಿ ಒಂದು ಅಷ್ಟಾಂಗ ಹೃದಯ ಗ್ರಂಥವಾದರೂ ಸಂಪೂರ್ಣವಾಗಿ ಮುದ್ರಿತವಾಗುವಂತೆ ಮಾಡಲಿ ಎಂದು ಹಾರೈಸುತ್ತೇವೆ.

ಈ ಗ್ರಂಥದ ಮುದ್ರಣವನ್ನು ಸಕಾಲದಲ್ಲಿ ಸುಂದರವಾಗಿ ಮಾಡಿಕೊಟ್ಟ ಕರ್ನಾಟಕ ವೈಭವ ಮುದ್ರಣಾಲಯದ ಒಡೆಯರಾದ ಶ್ರೀಮಾನ್ ನರಸಿಂಗರಾವ ನಾಯಿಕ ಬಿ. ಎ. ಎಲ್. ಎಲ್. ಬಿ. ಇವರಿಗೆ ತುಂಬಾ ಋಣಿಯಾಗಿರುವೆವು. ಇದರಂತೆ ಆಗಾಗ್ಗೆ ನಮ್ಮ ಶಿಷ್ಯರಾದ ಶ್ರೀ ಶ್ರೀನಿವಾಸಾಚಾರ್ಯ ಕೋಲ್ಹಾರ ಮುದ್ರಣ ಪ್ರತಿಗಳನ್ನು ತಿದ್ದಿ ನೆರವಾದದಕ್ಕಾಗಿ ಇವರಿಗೆ ಅನೇಕ ಧನ್ಯವಾದಗಳನ್ನು ಅರ್ಪಿಸುವೆನು. ನಿರ್ಣಯಸಾಗರ ಪ್ರೆಸ್ಸಿನವರು ತಮ್ಮ ಗ್ರಂಥದಲ್ಲಿಯ ಚಿತ್ರಗಳನ್ನು ಬ್ಲಾಕು ಮಾಡಿ ಮುದ್ರಿಸಲು ಅನುಮತಿ ಕೊಟ್ಟಿದ್ದಕ್ಕಾಗಿ ಅವರಿಗೂ ಉಪಕೃತರಾಗಿರುವೆವು.

ಬಿಜಾಪುರ. ಆದ್ಯ ಅನಂತಾಚಾರ್ಯರು

ಉಗಾದಿ ೧೮೭೭.

# ವಿಷಯಾನುಕ್ರಮಣಿಕೆ.



§ ಶ್ಲೋಕದ ಪೂರ್ಣ ಅಂಕೆಯು ಅದರ ಉತ್ತರಾರ್ಧವನ್ನು ಸೂಚಿಸುತ್ತದೆ.

| ವಿಷಯ | | ಶ್ಲೋಕಗಳು | ಪುಟ |
|---|---|---|---|
| **೧೭ನೆಯ ಅಧ್ಯಾಯವು (ಸ್ವೇದವಿಧಿ)** | | (೨೯॥) | ೩೨೬-೩೩೪ |
| ಸ್ವೇದಗಳು | .... | ॥—೨೯॥ | ೩೨೬-೩೩೪ |
| **೧೮ನೆಯ ಅಧ್ಯಾಯವು (ವಮನ ವಿರೇಚನ ವಿಧಿ)** | | (೬೦॥) | ೩೩೫-೩೫೧ |
| ವಮನ ವಿಚಾರ | .... | ॥—೭ | ೩೩೫-೩೩೭ |
| ವಿರೇಚನ ವಿಚಾರ | — | ೭॥—೨೨ | ೩೩೭-೩೪೦ |
| ವಮನ ವಿಧಿ | — | ೨೨॥—೩೨ | ೩೪೦-೩೪೩ |
| ವಿರೇಚನ ವಿಧಿ | .... | ೩೨॥—೬೦॥ | ೩೪೩-೩೫೧ |
| **೧೯ನೆಯ ಅಧ್ಯಾಯವು (ಬಸ್ತಿವಿಧಿ)** | | (೮೭) | ೩೫೨-೩೭೩ |
| ಬಸ್ತಿಯ ಪ್ರಕಾರಗಳು | — | ೧॥ | ೩೫೩ |
| ಬಸ್ತಿ-ಸಾಧ್ಯರೋಗಗಳು | — | ೨—೩ | ೩೫೩ |
| ಬಸ್ತಿಯಂತ್ರ | — | ೯—೧೭ | ೩೫೫-೩೫೭ |
| ಬಸ್ತಿ ವಿಧಿ | — | ೨೧॥—೫೦॥ | ೩೫೮-೩೬೪ |
| ಕರ್ಮ, ಕಾಲ, ಯೋಗ-ಬಸ್ತಿಗಳು | | ೬೨॥—೬೪॥ | ೩೬೭ |
| ಮಾತ್ರಾಬಸ್ತಿ | — | ೬೭—೬೯ | ೩೬೮ |
| ಉತ್ತರ ಬಸ್ತಿ | — | ೬೯॥—೮೨ | ೩೬೯-೩೭೧ |
| **೨೦ನೆಯ ಅಧ್ಯಾಯವು (ನಸ್ಯವಿಧಿ)** | | (೩೯) | ೩೭೪-೩೮೭ |
| ನಸ್ಯದ ಭೇದಗಳು ಹಾಗು ತತ್ಸಾಧ್ಯ ರೋಗಗಳು | — | ೧॥—೧೨॥ | ೩೭೫-೩೭೮ |
| ನಸ್ಯಗಳ ಕಾಲ | — | ೧೩—೧೬ | ೩೭೯-೩೮೦ |
| ನಸ್ಯ ವಿಧಿ | — | ೧೬॥—೨೨॥ | ೩೮೦-೩೮೨ |
| ವಿವಿಧ ನಸ್ಯಗಳ ಯೋಗಗಳು | — | ೨೩—೨೫ | ೩೮೨-೩೮೩ |
| ನಸ್ಯ ಧೂಮಾದಿಗಳಿಗೆ ಅನರ್ಹರು | — | ೩೦—೩೧ | ೩೮೪ |

## ೩೦ನೆಯ ಅಧ್ಯಾಯವು

# ಪರಿಶಿಷ್ಟ

ಟಿಪ್ಪಣಿ ಪುಟ ೪೯-೬ ಅಧ್ಯಾಯ ೨೫ ಶ್ಲೋಕ ೫೯, ೬೦, ೬೧

೧ ಕೋಶ (ಕತ್ತಿಯ ವರೆ) ಬಂಧಃ— ಇದನ್ನು ಅಂಗುಷ್ಠ ಮತ್ತು ಅಂಗುಲಿಪರ್ವಗಳಲ್ಲಿ ಉಪಯೋಗಿಸುವರು. ಕಟ್ಟುವದಿಲ್ಲ ಕೇವಲ ಶಿಗಿಸುವರು.

(೨) ಸ್ವಸ್ತಿಕ (ಸ್ವಸ್ತಿಕ ಚಿನ್ಹ) ಬಂಧಃ— ಇದನ್ನು ಸಂಧಿ, ಹುಬ್ಬು ಸ್ತನಗಳ ನಡುವಿನ ಭಾಗ, ಕಿವಿ ಇವುಗಳಲ್ಲಿ ಉಪಯೋಗಿಸುವರು.

(೩) ಮುತ್ತೋಲಿಬಂಧಃ—ಇದು ಆಕಳ ಮೋರೆಯಂತೆ ಇದ್ದು ಅದಕ್ಕೆ ಜಾಳಿಗೆಯಂತೆ ತೂತುಗಳು ಇರುತ್ತವೆ. ಕುತ್ತಿಗೆ, ಶಿಶ್ನಗಳಲ್ಲಿ ಉಪಯೋಗ.

(೪) **ಚೀನಬಂಧಃ**— ಇದನ್ನು ಬಹಳ ಪಟ್ಟಿಗಳನ್ನು ಹಚ್ಚಿ ಮಾಡುವರು. ಅಪಾಂಗ (ಕಣ್ಣಿನ ಕೊನೆ) ಗಳಲ್ಲಿ ಉಪಯೋಗಿಸುವರು.

(೫) **ದಾಮ** (ಹಗ್ಗ) ಬಂಧಃ— ದನಗಳಿಗೆ ಕಟ್ಟುವ ಹಗ್ಗಗಳಂತೆ ೪ ಪಟ್ಟಿಗಳು ಇದಕ್ಕೆ ಇರುವವು. ಇಕ್ಕಟ್ಟಿನ ಸ್ಥಳದಲ್ಲಿ ಉಪಯೋಗಿಸುವರು.

(೬) **ಅನುವೇಲ್ಲಿತಬಂಧಃ**— ಇದನ್ನು ಹಿಂದಕ್ಕೆ ತಿರಿಗಿಸಿಕೊಂಡು ಕಟ್ಟುವರು. ಕೈಕಾಲುಗಳಲ್ಲಿ ಇದರ ಉಪಯೋಗವಾಗುವದು.

(೭) **ಖಟ್ವಾ** (ಹೊರಸು) ಬಂಧಃ— ಇದಕ್ಕೆ ಕಾಲುಗಳಂತೆ ಅನೇಕ ಪಟ್ಟಿಗಳು ಇರುವವು. ಗದ್ದದಲ್ಲಿ ಉಪಯೋಗಿಸುವರು.

೮) **ವಿಬಂಧ** (ವಿವಿಧ ಬಂಧ) ಬಂಧಃ-ಇದರಲ್ಲಿ ಅನೇಕ ಅಡ್ಡ ಉದ್ದ ಬಂಧಗಳೂ ೬ ಗಂಟುಗಳೂ ಇರುತ್ತವೆ. ಹೊಟ್ಟೆ, ಬೆನ್ನುಗಳಲ್ಲಿ ಉಪಯೋಗ.

(೯) **ಸ್ಥಗಿಕಾ** (ಮುಚ್ಚುವ) ಬಂಧಃ- ಔಷಧ ಹಚ್ಚಿ ಕಟ್ಟಿದ ಮೇಲೆ ಅದನ್ನು ಮುಚ್ಚುವದಕ್ಕಾಗಿ ಇದನ್ನು ಕಟ್ಟುವರು. ಅಂಗುಷ್ಠ, ಬೆರಳು, ಶಿಶ್ನ ಇವುಗಳ ತುದಿಗೆ ಇದನ್ನು ಕಟ್ಟುವರು.

(೧೦ **ವಿತಾನ** (ವಿಸ್ತೃತ)ಬಂಧಃ- ವಿಸ್ತೃತವಾದ ಅವಯವ ಹೊಟ್ಟೆ, ಬೆನ್ನು ಮುಂ. ಗಳಲ್ಲಿ ಇದನ್ನು ಉಪಯೋಗಿಸುವರು.

(೧೧) **ಉತ್ಸಂಗ** (ಮೇಲ್ಭಾಗದ ಬಂಧಃ- ಇದನ್ನು ಜೋತಾಡುವ ಅವಯವಗಳಿಗೆ ಕಟ್ಟುವರು.

(೧೨) **ಗೋಷ್ಫಣಾ** (ಕವಣೆ) ಬಂಧಃ- ಇದನ್ನು ಮೂಗು ಮುಂತಾದ ಕಡಿಗೆ ಉಪಯೋಗಿಸುವರು.

(೧೩) **ಯಮಕ** (ಜೋಡ) ಬಂಧಃ- ಒಂದಕ್ಕೊಂದು ಹತ್ತಿ ಇದ್ದ ವ್ರಣಗಳಿದ್ದಲ್ಲಿ ಇದನ್ನು ಉಪಯೋಗಿಸುವರು

(೧೪) **ಮಂಡಲ** (ದುಂಡ) ಬಂಧಃ- ದುಂಡ ಅವಯವಗಳಲ್ಲಿ ದುಂಡಾಗಿ ಸುತ್ತಲು ಉಪಯುಕ್ತವು

(೧೫) **ಪಂಚಾಂಗೀ** (೫ ಅವಯವಗಳುಳ್ಳ) ಬಂಧಃ- ಐದು ಮಗ್ಗಲಿಗೆ ೫ ಪಟ್ಟಿಗಳನ್ನು ಕಟ್ಟಿ ಜತ್ರುವಿನ ಮೇಲ್ಭಾಗದಲ್ಲಿ ಕಟ್ಟುವರು.

## ವಾಗ್ಭಟ - ವಿರಚಿತ

# ಅಷ್ಟಾಂಗ - ಹೃದಯ

## ಸೂತ್ರಸ್ಥಾನ

## ೧ನೆಯ ಅಧ್ಯಾಯ

**ರಾಗಾದಿರೋಗಾನ್ ಸತತಾನುಷಕ್ತಾನಶೇಷಕಾಯಪ್ರಸೃತಾನ-
ಶೇಷಾನ್ ||
ಔತ್ಸುಕ್ಯಮೋಹಾರತಿದಾಞ್ಜಘಾನ ಯೋऽಪೂರ್ವವೈದ್ಯಾಯ
ನಮೋऽಸ್ತು ತಸ್ಮೈ || ೧ ||**

ಅರ್ಥ:— ಯಾವಾಗಲೂ ಮನುಷ್ಯನಿಗೆ ಅಂಟಿಕೊಂಡಿದ್ದು ಆತನ ಎಲ್ಲ ದೇಹಗಳಲ್ಲಿಯೂ ವ್ಯಾಪಿಸಿ, ವಿಚಾರವಿಲ್ಲದೆ ಕಾರ್ಯದಲ್ಲಿ ತೊಡಗೋಣ, ಮೋಹ (ವಿಚಾರಶಕ್ತಿಯ ನಾಶ), ದುಃಖಗಳನ್ನು ಉಂಟುಮಾಡುತ್ತಿರುವ ರಾಗ(ಆಸಕ್ತಿ), ದ್ವೇಷ ಮೊದಲಾದ ಎಲ್ಲ ರೋಗಗಳನ್ನು ನಾಶಮಾಡಿದ ಆ ವಿಲಕ್ಷಣ ವೈದ್ಯನಿಗೆ ನಮಸ್ಕಾರವಿರಲಿ.

**ಟಿಪ್ಪಣಿ:**—ರೋಗಗಳು ಯಾವಾಗಲೂ ಇರುವದಿಲ್ಲ. ಎಲ್ಲ ಜನ್ಮಗಳಲ್ಲಿಯೂ ಇರುವದಿಲ್ಲ, ಎಲ್ಲವೂ ಒಮ್ಮೆಲೇ ಬರುವದಿಲ್ಲ. ಅದ್ದರಿಂದ ಅವುಗಳನ್ನು ಸಾಧಾರಣ ವೈದ್ಯರೂ ಕಳೆಯುವರು. ಆದರೆ ಯಾವಾಗಲೂ ಎಲ್ಲ ಶರೀರಗಳಲ್ಲಿಯೂ ಇರುವ ಕಾಮ, ಕ್ರೋಧ ಮುಂತಾದ ರೋಗಗಳನ್ನು ಒಮ್ಮೆಲೇ ಕಳೆಯುವ ಈ [ಭವರೋಗ] ವೈದ್ಯರು [ದೇವರು] ವಿಲಕ್ಷಣ ಶಕ್ತಿಯುಳ್ಳವರು ಎಂಬ ತಾತ್ಪರ್ಯ.

ವಿಘ್ನವಿಲ್ಲದೆಯೇ ಸಮಾಪ್ತಿಯಾಗುವುದಕ್ಕಾಗಿ ಗ್ರಂಥದ ಆರಂಭದಲ್ಲಿ ಮಂಗಲಾ ಚರಣ ಮಾಡಿ ಅದರಲ್ಲಿಯೇ ಆರಂಭದಲ್ಲಿ ಹೇಳತಕ್ಕ **ಅನುಬಂಧ ಚತುಷ್ಟಯ** ಅಂದರೆ **ವಿಷಯ, ಪ್ರಯೋಜನ, ಅಧಿಕಾರ** ಮತ್ತು ಸಂಬಂಧಗಳನ್ನು ಸೂಚಿಸಿದ್ದಾರೆ.

ಈ ಶಾಸ್ತ್ರದಲ್ಲಿ ರೋಗದ ಕಾರಣ, ಲಕ್ಷಣ ಮತ್ತು ಔಷಧಗಳು ವಿಷಯವು; ಧಾತುಸಾಮ್ಯ [ಆರೋಗ್ಯ] ದ್ವಾರಾ ಆಯುರ್ವೃದ್ಧಿಯಿಂದ ಸತ್ಕರ್ಮಾನುಷ್ಠಾನವಾಗಿ ಅದರಿಂದಾಗುವ ಐಹಿಕ ಪಾರತ್ರಿಕ ಸುಖವು ಪ್ರಯೋಜನವು; ಅದನ್ನು ಬಯಸು ವವನೇ ಅಧಿಕಾರಿ; ಉಪಾಯೋಪೇಯ ಭಾವವು ಸಂಬಂಧವೆಂದು ಹೇಳಿದಂತಾ ಯಿತು. [೧]

**ಅಥಾತ ಆಯುಷ್ಕಾಮೀಯಮಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಇನ್ನು ಮೇಲೆ ಆಯುಷ್ಕಾಮೀಯ (ಆಯುಸ್ಸನ್ನು ಬಯಸುವವನಿಗೆ ಹಿತಕರವಾದ) ಅಧ್ಯಾಯವನ್ನು ಹೇಳುವೆವು.

**ಟಿಪ್ಪಣೀ**— **ಅಥ** ಶಬ್ದವನ್ನು ಮಂಗಲಾರ್ಥವಾಗಿ ಮತ್ತು **ಅತಃ** ಶಬ್ದ ವನ್ನು ಅಧಿಕಾರ ಪ್ರಾಪ್ತಿಯ ನಂತರ ಅಥವಾ ಇನ್ನು ಮುಂದೆ ಎಂಬ ಅರ್ಥದಲ್ಲಿ [ಉದಾಃ— "ಅಥಾತೋ ಬ್ರಹ್ಮಜಿಜ್ಞಾಸಾ, ಅಥಾತೋ ಧರ್ಮಮೀಮಾಂಸಾ" ಎಂದು ಎಲ್ಲ ಶಾಸ್ತ್ರಗಳ ಆರಂಭದಲ್ಲಿ ಪ್ರಾಚೀನ ಋಷಿಗಳು ಪ್ರಾಯಶಃ ಉಪಯೋಗಿಸು ತ್ತಾರೆ. ಬೇರೆ ಮಂಗಲಾಚರಣವನ್ನು ಅವರು ಮಾಡುತ್ತಿರಲಿಲ್ಲ. ಆದರೆ **ವಾಗ್ಭಟಾ ಚಾರ್ಯರು 'ರಾಗಾದಿರೋಗಾನ್'** ಎಂದು ಮೊದಲೇ ಮಂಗಲಾಚರಣ ಮಾಡಿದ್ದ ರಿಂದ ಪುನರುಕ್ತಿಯ ಭಯದಿಂದ ಹೇಮಾದ್ರಿಯು **ಅಥ ಶಬ್ದಕ್ಕೆ** ಅನಂತರ ಎಂಬರ್ಥ ವನ್ನು ಹೇಳಿರುವನು. ವಸ್ತುತಃ ಈ 'ಅಥ-ಅತಃ' ಶಬ್ದಗಳು ಗ್ರಂಥದ ಆರಂಭ ದಲ್ಲಿಯೇ ಇರದೆ ಪ್ರತಿ ಅಧ್ಯಾಯದ ಆರಂಭದಲ್ಲಿಯೂ ಇವೆ. ಕಾರಣವೇನಂದರೆ **ಆರ್ಷ** ಕಾಲದಲ್ಲಿ ಪ್ರತಿ ದಿವಸ ಒಂದು ವಿಷಯವನ್ನು ಕುರಿತು ಚರ್ಚೆ ಅಥವಾ ಅಧ್ಯಾಪನ ಮಾಡುತ್ತಿದ್ದರು. ಮಾಡುವಾಗ್ಗೆ ' ಅಥಾತಃ ' ಎಂದು ಉಚ್ಚರಿಸುತ್ತಿದ್ದರು. ಆದ್ದರಿಂದ ಆರ್ಷಗ್ರಂಥಗಳ ಪ್ರತ್ಯಧ್ಯಾಯದ ಆರಂಭಕ್ಕೆ ಈ ಶಬ್ದಗಳು ಇವೆ. **ವಾಗ್ಭಟಾಚಾರ್ಯರು** ಆರಂಭದ "ಅಥಾತಃ" ಶಬ್ದಗಳನ್ನು ಋಷಿಗಳ ಗೌರವದಿಂದ ಹಾಗೆಯೇ ತೆಗೆದುಕೊಂಡಿರುವರು. ಅಥವಾ ಮೊದಲಿನ ಶ್ಲೋಕವು ಇಡೀ ಗ್ರಂಥಾರಂಭದ ಮಂಗಲವೆಂದೂ ಮುಂದಿನ **ಅಥ** ಶಬ್ದಗಳು ಪ್ರತ್ಯಧ್ಯಾಯದ ಮಂಗಲವೆಂದೂ ಹೇಳಬಹುದು. ಈ ಆಯುರ್ವೇದಕ್ಕೆ ಅಧಿಕಾರವೆಂದರೆ ಆಯುರ್ವೇದದ ಅಂಗಗಳಾದ ಸಾಂಖ್ಯ, ನ್ಯಾಯ, ವ್ಯಾಕರಣ ಮುಂತಾದ ಶಾಸ್ತ್ರಗಳ ಜ್ಞಾನ, ಕುಲ, ಸುಬುದ್ಧಿ, ಧಾರಣಾಶಕ್ತಿ ಮುಂತಾದವು.

ಇಡೀ ಆಯುರ್ವೇದಶಾಸ್ತ್ರವೇ ಆಯುಷ್ಕಾಮೀಯವಾಗಿರಲು ಇದೊಂದು ಅಧ್ಯಾಯಕ್ಕೇ **' ಆಯುಷ್ಕಾಮೀಯ '** ಎಂಬ ಹೆಸರು ಕೊಡುವ ಕಾರಣವೇನಂದರೆ,

ಯಾವದಾದರೊಂದು ವಿಷಯವನ್ನು ಮೊದಲು ಸಾಮಾನ್ಯವಾಗಿ ಆ ಮೇಲೆ ವಿಶೇಷವಾಗಿ, ಮೊದಲು ಸಂಕ್ಷಿಪ್ತವಾಗಿ ಆ ಮೇಲೆ ವಿಸ್ತೀರ್ಣವಾಗಿ ಹೇಳಿದರೆ ಸುಲಭವಾಗಿ ತಿಳಿಯುವದು. ಆದ್ದರಿಂದ ಈ ಅಧ್ಯಾಯದಲ್ಲಿ ಆಯುರ್ವೇದವನ್ನು ಸಾಮಾನ್ಯವಾಗಿ ಮತ್ತು ಸಂಕ್ಷಿಪ್ತವಾಗಿ ಹೇಳಿರುವದರಿಂದ ಇದಕ್ಕೆ ಆಯುಷ್ಕಾಮೀಯವೆಂಬ ಹೆಸರು ಇಟ್ಟಿದೆ. ಚರಕಾಚಾರ್ಯರು ಇದಕ್ಕೆ 'ದೀರ್ಘಜೀವಿತೀಯ' ಎಂದು ಕರೆದಿರುವರು. ಎರಡರರ್ಥವೂ ಒಂದೇ.

ಈ ಗ್ರಂಥವು ಕೇವಲ ನನ್ನ ಬುದ್ಧಿಯಿಂದ ಕಲ್ಪಿಸಿದ್ದು [ನಿರ್ಮೂಲ] ಅಲ್ಲ; ಪೂರ್ವದ ಆಚಾರ್ಯರು ಹೇಳಿದ್ದನ್ನೇ ಇಲ್ಲಿ ನಾನು ಹೇಳುವೆನು; ಇದಕ್ಕೆ ಹೀಗೆ ಆಧಾರವಿರುವದರಿಂದ ಪ್ರಮಾಣ ಭೂತವಾಗಿದೆ; ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ**

ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಟಿಪ್ಪಣಿಃ—** ಇದರ ಮೇಲೆ ಅವರ ಗ್ರಂಥಗಳೇ ಇರಲು ನೀವೇಕೆ ಈ ಗ್ರಂಥ ಬರೆದಿರಿ? ಎಂದು ಗ್ರಂಥಕ್ಕೆ ವೈಯರ್ಥ್ಯ-ಶಂಕೆಯು ಬರುವದು. ಇದಕ್ಕೆ ಉತ್ತರವನ್ನು ಸಂಗ್ರಹದಲ್ಲಿ ಹೇಳಿರುತ್ತಾರೆ.

**ತೇಷಾಮೇಕೈಕಮಪ್ಯಾಪಿ ಸಮಸ್ತವ್ಯಾಧಿಸಾಧನೇ**
**ಪ್ರತಿತಂತ್ರಾಭಿಯೋಗೇ ತು ಪುರುಷಾಯುಷಸಂಕ್ಷಯಃ**
**ಭವತ್ಯಧ್ಯಯನೇನೈವ ಯಸ್ಮಾತ್ಪ್ರೋಕ್ತಃ ಪುನಃ ಪುನಃ ।**
**ಸರ್ವತಂತ್ರಾಣ್ಯತಃ ಪ್ರಾಯಃ ಸಂಹೃತ್ಯಾಷ್ಟಾಂಗಸಂಗ್ರಹಃ ॥**
**ಅಸ್ಥಾನವಿಸ್ತರಾಕ್ಷೇಪಪುನರುಕ್ತಾದಿವರ್ಜಿತಃ ।**
**ವಿನಿಗೂಢಾರ್ಥತತ್ವಾನಾಂ ಪ್ರದೇಶಾನಾಂ ಪ್ರಕಾಶಕಃ ॥**
**ಯುಗಾನುರೂಪಸಂದರ್ಭೋ ವಿಭಾಗೇನ ಕರಿಷ್ಯತೇ ।**
**ತೇಽರ್ಥಾಃ ಸ ಗ್ರಂಥಬಂಧಶ್ಚ ಸಂಕ್ಷೇಪಾಯ ಕ್ರಮೋಽನ್ಯಥಾ ॥**

"ಪ್ರಾಚೀನ ಗ್ರಂಥಗಳಲ್ಲಿ ಒಂದರಲ್ಲಿಯೇ ಎಲ್ಲ ರೋಗಗಳ ನಿದಾನ-ಚಿಕಿತ್ಸೆಗಳು ಇಲ್ಲ. ಇನ್ನು ಎಲ್ಲ ಗ್ರಂಥಗಳನ್ನೂ ಓದಬೇಕಾದರೆ ಆಯುಷ್ಯವೇ ಸಾಲದು. ಏಕೆಂದರೆ ಒಂದರಲ್ಲಿ ಹೇಳಿದ್ದನ್ನೇ ಮತ್ತೊಂದರಲ್ಲಿ ಹೇಳಿದ್ದಾರೆ. ಆದಕಾರಣ ಎಲ್ಲ ಗ್ರಂಥಗಳನ್ನು ಸಂಕ್ಷೇಪಿಸಿ ಸಿಕ್ಕಿದ್ದನ್ನು ಸಿಕ್ಕಲ್ಲಿ ಹೇಳೋಣ, ಅತಿ ವಿಸ್ತಾರ ಅಥವಾ ಅತಿ ಸಂಕ್ಷೇಪ, ಪುನರುಕ್ತಿ ಮುಂತಾದವುಗಳು ಇಲ್ಲದಂತೆ ಗೂಢ ತತ್ವಗಳನ್ನು ಪ್ರಕಟ ಮಾಡುವ, ಈಗಿನ ಕಾಲಕ್ಕೆ ಅನುರೂಪವಾದ, ಅಷ್ಟಾಂಗ ಸಂಗ್ರಹವೆಂಬ ಗ್ರಂಥವನ್ನು ಬರೆಯುವೆನು." ಈ ಗ್ರಂಥದ ಕೊನೆಯಲ್ಲಿಯೂ

ಏತತ್ ಪಠನ್ ಸಂಗ್ರಹಬೋಧಶಕ್ತಃ । ಸ್ವಭ್ಯಸ್ತಕರ್ಮಾ ಭಿಷಗಪ್ರಕಂಪ್ಯಃ॥
ಆಕಂಪಯತ್ಯನ್ಯವಿಶಾಲತಂತ್ರಕೃತಾಭಿಯೋಗಾನ್ಯದಿ ತನ್ನ ಚಿತ್ರಮ್ ॥

ಎಂದು ಇದರಿಂದ ಚರಕ ಸುಶ್ರುತಾದಿ ಗ್ರಂಥಗಳಿಗಿಂತ ಹೆಚ್ಚು ಜ್ಞಾನವಾಗುವದೆಂದು ನಿರ್ಭಯವಾಗಿ ಸಾರಿದ್ದಾರೆ. ಕೇವಲ ಋಷಿಪ್ರಣೀತವೆಂದು ಇಡೀ ಆಯುಷ್ಯವೆಲ್ಲ ಕಲಿತು ದುಃಖಪಡಬೇಡಿರಿ ಎಂದೂ ಎಚ್ಚರಿಕೆ ಕೊಟ್ಟಿದ್ದಾರೆ. ಈ ಗ್ರಂಥದಿಂದ ಸ್ವಲ್ಪ ಕಾಲದಲ್ಲಿ ಎಲ್ಲ ಆಯುರ್ವೇದ—ವಿಷಯಗಳ ಜ್ಞಾನವಾಗುವದರಿಂದ ಈ ಗ್ರಂಥವು ವ್ಯರ್ಥವಲ್ಲೆಂದು ಭಾವವು.

**ಆಯುಃ ಕಾಮಯಮಾನೇನ ಧರ್ಮಾರ್ಥಸುಖಸಾಧನಮ್ ।**
**ಆಯುರ್ವೇದೋಪದೇಶೇಷು ವಿಧೇಯಃ ಪರಮಾದರಃ ॥೨॥**

ಅರ್ಥ:— ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ದೊರಕಿಸಲು ನೆರವಾಗಬಲ್ಲಂತಹ ಆಯುಷ್ಯವನ್ನು ಬಯಸುವವನು ಆಯುರ್ವೇದದ ಉಪದೇಶಗಳಲ್ಲಿ ಹೆಚ್ಚು ಆದರವನ್ನು ಇಡಬೇಕು. ( ಆಯುರ್ವೇದ ಶಾಸ್ತ್ರವನ್ನು ಓದೋಣ, ಅರ್ಥ ತಿಳಿದುಕೊಳ್ಳೋಣ ಅದರಂತೆ ವರ್ತಿಸೋಣ ಇವುಗಳಲ್ಲಿ ವಿಶೇಷ ಯತ್ನವನ್ನು ಮಾಡಬೇಕು. )

ಟಿಪ್ಪಣಿ:— **'ಆಯುಃ ವೇದಯತೀತಿ ಆಯುರ್ವೇದಃ'** ಅಂದರೆ ಆಯುಷ್ಯವನ್ನೂ ಅದಕ್ಕೆ ಉಪಯೋಗವಾಗುವಂಥ ಹಿತಾಹಿತ ಪ್ರಮಾಣಗಳನ್ನೂ ತಿಳಿಸುವದು ಆಯುರ್ವೇದವು. **'ಆಯುರ್ವಿದ್ಯತೇ [ಜ್ಞಾಯತೇ], ಲಭ್ಯತೇ, ವಿಚಾರ್ಯತೇ ಇತಿ ವಾ ಆಯುರ್ವೇದಃ'** ಯಾತರಿಂದ ಆಯುಷ್ಯದ ಜ್ಞಾನ ಅಥವಾ ಪ್ರಾಪ್ತಿ ಅಥವಾ ವಿಚಾರವಾಗುವದೋ ಅದು ಆಯುರ್ವೇದವು. [೨]

ಇಂತಹ ಆಯುರ್ವೇದದಲ್ಲಿ ಭಕ್ತಿಯನ್ನು ಹುಟ್ಟಿಸುವದಕ್ಕಾಗಿ ಅದರ ಪರಂಪರೆಯನ್ನು ಇಲ್ಲಿ ಹೇಳಲಾಗುತ್ತದೆ.

**ಬ್ರಹ್ಮಾ ಸ್ಮೃತ್ವಾಽಽಯುಷೋ ವೇದಂ ಪ್ರಜಾಪತಿಮಜಿಗ್ರಹತ್ ॥**
**ಸೋಽಶ್ವಿನೌ ತೌ ಸಹಸ್ರಾಕ್ಷಂ ಸೋಽತ್ರಿಪುತ್ರಾದಿಕಾನ್ ಮುನೀನ್ ॥೩**
**ತೇಽಗ್ನಿವೇಶಾದಿಕಾಂಸ್ತೇ ತು ಪೃಥಕ್ ತಂತ್ರಾಣಿ ತೇನಿರೇ ॥**

ಅರ್ಥ:— ಆಯುರ್ವೇದವನ್ನು ಬ್ರಹ್ಮನು ಮುಂಚೆ ನೆನಪಿಗೆ ತಂದುಕೊಂಡು ಬಳಿಕ ಅದನ್ನು ದಕ್ಷಪ್ರಜಾಪತಿಗೆ ಹೇಳಿಕೊಟ್ಟನು. ಮುಂದೆ ಆ ಪ್ರಜಾಪತಿಯು ಅಶ್ವಿನೀ ದೇವತೆಗಳಿಗೆ, ಅವರು ಇಂದ್ರನಿಗೆ, ಅವನು

ಆತ್ರೇಯ, ಪುನರ್ವಸು, ಭಾರದ್ವಾಜ, ಕಶ್ಯಪ ಮುಂತಾದ ಋಷಿಗಳಿಗೆ, ಅವರು ಅಗ್ನಿವೇಶ, ಭೇಡ, ಜಾತೂಕರ್ಣ, ಪರಾಶರ, ಹಾರೀತ, ಕ್ಷಾರಪಾಣಿ ಮುಂತಾದವರಿಗೆ ಹೇಳಿದರು. ಅಗ್ನಿವೇಶಾದಿಗಳು ಬೇರೆ ಬೇರೆ ಗ್ರಂಥಗಳನ್ನು ಬರೆದು ಭೂಮಿಯಲ್ಲಿ ಅದರ ಪ್ರಸಾರ ಮಾಡಿದರು.

ಟಿಪ್ಪಣಿ:— ಆಯುರ್ವೇದವು ಅಪೌರುಷೇಯವಾದದ್ದೂ, ನಿತ್ಯವಾದದ್ದೂ ಇರುವದರಿಂದಲೇ "ಕೃತ್ವಾ" ಎನ್ನದೆ "ಸ್ಮೃತ್ವಾ" ಎಂದು ಶ್ಲೋಕದಲ್ಲಿ ಕೊಟ್ಟಿದ್ದಾರೆ. [೩॥]

**ತೇಭ್ಯೋಽತಿವಿಪ್ರಕೀರ್ಣೇಭ್ಯಃ ಪ್ರಾಯಃ ಸಾರತರೋಚ್ಚಯಃ ॥೪॥**
**ಕ್ರಿಯತೇಽಷ್ಟಾಂಗಹೃದಯಂ ನಾತಿಸಂಕ್ಷೇಪವಿಸ್ತರಮ್**

ಅರ್ಥ:— ಅಗ್ನಿವೇಶಾದಿಗಳ ಆ ದೊಡ್ಡ ಮತ್ತು ಸಂಕೀರ್ಣ ಗ್ರಂಥಗಳೊಳಗಿಂದ ಸಾರವಾದದ್ದಷ್ಟನ್ನೇ ಒತ್ತಟ್ಟಿಗೆ ತಂದು ಅತಿ ಸಂಕ್ಷೇಪವೂ ಅತಿ ವಿಸ್ತಾರವೂ ಆಗದಂತೆ ಈ **'ಅಷ್ಟಾಂಗ ಹೃದಯ'** ಎಂಬ ಗ್ರಂಥವನ್ನು ರಚಿಸಲಾಗಿದೆ.

ಟಿಪ್ಪಣಿ:— ವಿಷಯಕ್ರಮವು ಸರಿಯಾಗಿರದೆ ಅತಿ ವಿಸ್ತಾರವಾಗಿರುವದರಿಂದ ಅಗ್ನಿವೇಶಾದಿಗಳ ಗ್ರಂಥಗಳ ಸಾರ ತೆಗೆದು ವಿಷಯ ಕ್ರಮವನ್ನು ಹಚ್ಚಿ **'ಅಷ್ಟಾಂಗ ಸಂಗ್ರಹ'** ಎಂಬ ಗ್ರಂಥವನ್ನು ಮೊದಲು ವಾಗ್ಭಟರು ಬರೆದರು. ಅದು ಆಯುರ್ವೇದದ ಸಾರವು. ಸಂಗ್ರಹದ ಕೊನೆಗೆ ಹೀಗೆ ಹೇಳಿದ್ದಾರೆ:

ಆಯುರ್ವೇದೋದಧೇಃ ಪಾರಮಪಾರಸ್ಯ ಪ್ರಯಾತಿ ಕಃ ।
ವಿಶ್ವವ್ಯಾಧ್ಯೌಷಧಜ್ಞಾನಸಾರಸ್ತ್ವೇಷ ಸಮರ್ಥಿತಃ ॥

ಬಳಿಕ ಅದಕ್ಕೂ ಸಂಕ್ಷೇಪವಾಗಿ **'ಅಷ್ಟಾಂಗ ಹೃದಯ'** ಎಂಬ ಗ್ರಂಥವನ್ನು ಬರೆದರು. ಅದ್ದರಿಂದಲೇ ಈ ಗ್ರಂಥಕ್ಕೆ "ಸಾರತರ" ಎಂದು ಬರೆದದ್ದಾಗಿದೆ. ದೇಹಕ್ಕೆ ಹೃದಯವು ಮುಖ್ಯವಿರುವಂತೆ ಅಷ್ಟಾಂಗವಾದ ಆಯುರ್ವೇದಕ್ಕೆ ಈ ಗ್ರಂಥವು ಮುಖ್ಯವಾಗಿರುವದರಿಂದಲೇ ಇದಕ್ಕೆ ಹಾಗೆ ಹೆಸರನ್ನು ಕೊಡಲಾಗಿದೆ. ಗ್ರಂಥದ ಕೊನೆಗೆ ಗ್ರಂಥಕಾರರೇ ಹೀಗೆಂದಿದ್ದಾರೆ.

"ಹೃದಯಮಿವ ಹೃದಯಮೇತತ್ಸರ್ವಾಯುರ್ವೇದವಾಙ್ಮಯಪಯೋಧೇಃ" [೪]

**ಕಾಯಬಾಲಗ್ರಹೋರ್ಧ್ವಾಂಗಶಲ್ಯದಂಷ್ಟ್ರಾಜರಾವೃಷಾನ್ ||೫||**
**ಅಷ್ಟಾವಂಗಾನಿ ತಸ್ಯಾಹುಶ್ಚಿಕಿತ್ಸಾ ಯೇಷು ಸಂಶ್ರಿತಾ ||**

ಅರ್ಥ:— ಕಾಯ, ಬಾಲ, ಗ್ರಹ, ಊರ್ಧ್ವಾಂಗ, ಶಲ್ಯ, ದಂಷ್ಟ್ರಾ, ಜರಾ, ವೃಷ ಎಂದು ಆಯುರ್ವೇದಕ್ಕೆ ಎಂಟು ಅಂಗಗಳು ಇರುತ್ತವೆ. ಚಿಕಿತ್ಸೆಯು ಇವುಗಳನ್ನು ಆಶ್ರಯಿಸಿಕೊಂಡಿದೆ.

## ಟಿ ಪ್ಪ ಣಿ

೧. **ಕಾಯಚಿಕಿತ್ಸೆ:**— ಸರ್ವ ಧಾತುಗಳನ್ನು ಆಶ್ರಯಿಸಿದ ಜ್ವರ, ಅತಿಸಾರ ಮುಂತಾದವುಗಳ ಚಿಕಿತ್ಸೆಯು.

೨. **ಬಾಲಚಿಕಿತ್ಸೆ:**— ಸಣ್ಣ ಹುಡುಗರ ಹಲ್ಲುಬೇನೆ, ದುಷ್ಟಕ್ಷೀರ, ಪೋಷಣ ಮುಂತಾದವುಗಳ ಚಿಕಿತ್ಸೆಯು.

೩. **ಗ್ರಹಚಿಕಿತ್ಸೆ:**— ದೇವ, ಯಕ್ಷ, ಪಿಶಾಚಾದಿಗಳ ಪೀಡೆಯ ಮೇಲಿನ ಚಿಕಿತ್ಸೆಯು.

೪. **ಊರ್ಧ್ವಾಂಗಚಿಕಿತ್ಸೆ:**— ಕುತ್ತಿಗೆಯ ಮೇಲ್ಭಾಗದಲ್ಲಿರುವ ಕಣ್ಣು, ಕಿವಿ, ಮೂಗು, ಬಾಯಿ ಎಂಬೀ ಅವಯವಗಳ ರೋಗವಿಷಯಕವಾದ ಚಿಕಿತ್ಸೆಯು. ಇದಕ್ಕೆ ಶಾಲಾಕ್ಯವೆಂದೂ ಹೆಸರು.

೫. **ಶಲ್ಯಚಿಕಿತ್ಸೆ:**— ಶಸ್ತ್ರಚಿಕಿತ್ಸೆಯು.

೬. **ದಂಷ್ಟ್ರಾಚಿಕಿತ್ಸೆ:**— ಹಾವು, ಚೇಳು, ಇಲಿ ಮುಂತಾದವುಗಳ ವಿಷದ ಚಿಕಿತ್ಸೆಯು.

೭. **ಜರಾಚಿಕಿತ್ಸೆ:**— ಮುಪ್ಪು ಬೇಗನೆ ಬಾರದಂತೆಯೂ, ಬಂದಿದ್ದರೆ ಅದು ತಿರುಗುವಂತೆಯೂ ಮಾಡುವ ಚಿಕಿತ್ಸೆಯು. ಇದಕ್ಕೆ ರಸಾಯನವೆಂತಲೂ ಅನ್ನುವದುಂಟು.

೮. **ವೃಷಚಿಕಿತ್ಸೆ:**—ಶುಕ್ರಧಾತುವನ್ನೂ ಜನನೇಂದ್ರಿಯ ಬಲವನ್ನೂ ಬೆಳೆಯುವಂತೆ ಮಾಡುವ ಚಿಕಿತ್ಸೆಯು. ಇದಕ್ಕೆ ವಾಜೀಕರಣವೆಂತಲೂ ಹೆಸರಿದೆ. [೫||]

ದೋಷ, ಧಾತು, ಮಲ ಈ ಮೂರರಿಂದ ದೇಹವು ಮಾಡಿದ್ದಾಗಿದೆ. ಆದ್ದರಿಂದ ಅವುಗಳ ವಿವರನ್ನು ಕೊಡಲು ಹೊರಟು ದೋಷವು ಎಲ್ಲಕ್ಕೂ ಮುಖ್ಯವಾದುದರಿಂದ ಅದರ ವಿವರವನ್ನು ಮುಂಚೆ ಇಲ್ಲಿ ಕೊಡಲಾಗುತ್ತದೆ.

ವಾಯುಃ ಪಿತ್ತಂ ಕಫಶ್ಚೇತಿ ತ್ರಯೋ ದೋಷಾಃ ಸಮಾಸತಃ ||೬||

ಅರ್ಥ:— ವಾತ, ಪಿತ್ತ, ಕಫಗಳೆಂದು ದೋಷಗಳು ಸಂಕ್ಷೇಪವಾಗಿ ಮೂರು ತೆರನಾಗಿರುತ್ತವೆ.

ಟಿಪ್ಪಣಿ:— ದೋಷಗಳ ಒಳಭೇದಗಳೂ ಅವುಗಳ ಪರಸ್ಪರ ಮಿಶ್ರಣದಿಂದ ಹುಟ್ಟುವ ಪ್ರಭೇದಗಳೂ ಬಹಳವಾಗಿವೆಯಾದ್ದರಿಂದ ಸಂಕ್ಷೇಪವಾಗಿ ಅವು ಮೂರು ಎಂದು ಹೇಳಲಾಗಿದೆ.

ವಾತ, ಪಿತ್ತ, ಕಫಗಳು ಶರೀರವನ್ನು ಧಾರಣಮಾಡುವದರಿಂದ [ಧಾರಣಾತ್ ಧಾತವಃ] ಧಾತುಗಳೆಂದೂ [ಉದಾ:—ಸಮಧಾತುಃ ಸಮಸ್ತಾಸು ಶ್ರೇಷ್ಠಾ], ಮಲಿನ ಮಾಡುವದರಿಂದಲೂ ರಸಾದಿಗಳ ಮಲರೂಪವಾಗಿ ಉಂಟಾಗಿರುವದರಿಂದಲೂ ಅವು ಮಲಗಳೆಂದೂ [ಉದಾ:-ವಿಕಾರೈಃ ಕುಪಿತಾ ಮಲಾಃ], ರಸ,-ರಕ್ತ ಮುಂತಾದವುಗಳನ್ನು ದೂಷಿಸುವದರಿಂದ [ದೂಷಯಂತೀತಿ ದೋಷಾಃ] ದೋಷಗಳೆಂದೂ ಕರೆಯಲ್ಪಡುವವು. ಆದರೆ ಧಾತು-ಮಲ ಶಬ್ದಗಳು ರಸಾದಿಧಾತುಗಳಲ್ಲಿಯೂ ಮೂತ್ರಾದಿಗಳಲ್ಲಿಯೂ ಕ್ರಮವಾಗಿ ರೂಢವಾಗಿರುವದರಿಂದ ಮೇಲಿನ ವಾತಾದಿ ಮೂರುಗಳಿಗೇ ದೋಷಗಳೆಂದು ಕರೆಯುವದು ಹೆಚ್ಚು ವಾಡಿಕೆಯಾಗಿದೆ. ಚರಕಾಚಾರ್ಯರೂ ಕೂಡ- 'ವಾಯುಃ ಪಿತ್ತಂ ಕಫಶ್ಚೋಕ್ತಃ ಶರೀರೇ ದೋಷಸಂಗ್ರಹಃ I' ಎಂದು ದೋಷಗಳೆಂದೇ ಅವನ್ನು ಕರೆದಿದ್ದಾರೆ.

ವಾತ, ಪಿತ್ತ, ಕಫ, ಎಂದಿಷ್ಟೇ ಅನ್ನುವದರಿಂದಲೇ ಅವು ಮೂರೆಂದು ತಿಳಿಯುತ್ತಿರಲು ಮತ್ತೆ "ತ್ರಯಃ" ಅನ್ನುವದರ ಉದ್ದೇಶವೇನಂದರೆ ಕೆಲವರು ರಕ್ತವನ್ನೂ ದೋಷದಲ್ಲಿ ಎಣಿಸುವರು. ಇದರ ಸಮರ್ಥನವನ್ನು ಅವರು ಕೆಳಗಿನಂತೆ ಮಾಡಿಕೊಳ್ಳುತ್ತಾರೆ. ರಕ್ತಕ್ಕೂ ಪ್ಲೀಹ—ಯಕೃತಗಳೆಂಬ ಸ್ಥಾನವೂ, ಪದ್ಮ—ಇಂದ್ರಗೋಪಸದೃಶಗಳೆಂಬ ಲಕ್ಷಣವೂ, ದೇಹದ ಉತ್ಪತ್ತಿ ಸ್ಥಿತಿಗಳೆಂಬ ಕಾರ್ಯವೂ, ವಿಸರ್ಪ—ಪ್ಲೀಹವೃದ್ಧಿಯೆಂಬ ವಿಕಾರವೂ, ಶಿರಾವ್ಯಧವೆಂಬ ಚಿಕಿತ್ಸೆಯೂ ವಾತಾದಿಗಳಂತೆ ಉಂಟೆಂದು. ಇದು ತಪ್ಪು. ಯಾಕಂದರೆ ವಾತಾದಿಗಳಂತೆ ಅದು ಸ್ವಂತವಾಗಿ ಯಾವದನ್ನೂ ದೂಷಿಸಲರಿಯದು. ಕೆಲವು ಕಡೆಗೆ ರಕ್ತಜ ರಕ್ತದುಷ್ಟ ಎಂಬ ಪ್ರಯೋಗಗಳು ಕಾಣುತ್ತವೆ. ಆದರೆ ಅಲ್ಲಿ ಅವಕ್ಕೆ ಘೃತದಗ್ಧನ್ಯಾಯದಿಂದ ಅರ್ಥವನ್ನು ಹೇಳಬೇಕು. ಹೇಗೆಂದರೆ ದಗ್ಧವಾದದ್ದು ಅಗ್ನಿಯಿಂದಲ್ಲದೇ ಘೃತದಿಂದಲ್ಲ ಎಂಬುದು ಹೇಗೋ ಹಾಗೆ ರಕ್ತದುಷ್ಟವೆಂಬಲ್ಲಿ ದುಷ್ಟವಾದದ್ದು ರಕ್ತದಲ್ಲಿರುವ ವಾತಾದಿಗಳಿಂದಲ್ಲದೇ ರಕ್ತದಿಂದಲ್ಲ. ಆ ಕಾರಣವೇ ವಾತಜ, ಪಿತ್ತಜ, ಕಫಜ, ಎಂದು ಮೂರು ವಿಧವಾಗಿ ಪ್ರಕೃತಿಯಲ್ಲಿ ಭೇದವಿರುವಂತೆ "ರಕ್ತಜ" ಎಂದು ಭೇದವಿರುವದಿಲ್ಲ. ಆದ್ದರಿಂದ ರಕ್ತವು ದೋಷವಾಗಲಾರದು. ಇದನ್ನೆಲ್ಲ ಸೂಚಿಸಲೆಂದೇ "ತ್ರಯಃ" [ಮೂರೇ, ನಾಲ್ಕಲ್ಲ.] ಎಂದು ಮತ್ತೆ ಕೊಡಲಾಗಿದೆಯೆಂದು ತಿಳಿಯಬೇಕು.

ವಿಭುತ್ವಾದಾಶುಕಾರಿತ್ವಾದ್ಬಲಿತ್ವಾದನ್ಯಕೋಪನಾತ್
ಸ್ವಾತಂತ್ರ್ಯಾದ್ಬಹುರೋಗತ್ವಾದ್ಧಾತೂನಾಂ ಪ್ರಬಲೋಽನಿಲಃ ||

ಅರ್ಥ:— ದೋಷಗಳಲ್ಲೆಲ್ಲ ವಾಯುವೇ ಪ್ರಬಲವಾದದ್ದು. ಯಾಕೆಂದರೆ ಅದು ಹೆಚ್ಚು [೧] ವ್ಯಾಪಕವೂ, [೨] ಶೀಘ್ರಕಾರಿಯೂ, [೩] ಬಲಿಷ್ಠವೂ, [೪] ಉಳಿದವುಗಳನ್ನು ಅತ್ತಿತ್ತ ಹೊತ್ತೊಯ್ಯುವ ಶಕ್ತಿಯುಳ್ಳದ್ದೂ, [೫] ಸ್ವತಂತ್ರವಾದದ್ದೂ, [೬] ಹೆಚ್ಚು ವಿಕಾರಗಳನ್ನು ಉಂಟು ಮಾಡಬಲ್ಲದ್ದೂ ಇರುತ್ತದೆ.

[೧] ವಾಯುವು ಅತ್ಯಂತ ಸೂಕ್ಷ್ಮವಾಗಿರುವದರಿಂದ ಪ್ರತಿಯೊಂದು ಅಣುರೇಣುಗಳಲ್ಲಿಯೂ ಅದು ಹಬ್ಬಿರುವದು.

[೨] ವಾತ ವಿಕಾರಗಳು ಮನುಷ್ಯನನ್ನು ಸಾವಿನ ಕಡೆಗೆ ಬೇಗನೆ ಸೆಳೆದೊಯ್ಯುತ್ತವೆ.

[೩] ವಾತವು ಕುಪಿತವಾಯಿತೆಂದರೆ ಅದು ಪಿತ್ತ—ಕಫಗಳ ಸ್ಥಾನಗಳನ್ನು ತಪ್ಪಿಸಿ ಬಿಡುವಷ್ಟು ಪ್ರಬಲವಾಗಿರುವದು.

[೪] "ಪಿತ್ತಂ ಪಂಗು ಕಫಃ ಪಂಗುಃ ಪಂಗವೋ ಮಲಧಾತವಃ |
ವಾಯುನಾ ಯತ್ರ ನೀಯಂತೇ ತತ್ರ ಗಚ್ಛಂತಿ ಮೇಘವತ್ ||"

ಪಿತ್ತ ಕಫ ಮಲ ಧಾತುಗಳೆಲ್ಲ ಕುಂಟಾದುವೇ ಇವೆ. ಯಾಕೆಂದರೆ ಗಾಳಿಯಿಂದ ಕಂಡಕಡೆಗೆ ಚದರಿಸಲ್ಪಡುವ ಮೋಡದಂತೆ ಇವು ವಾತದಿಂದ ಹೊತ್ತೊಯ್ಯಲ್ಪಡುತ್ತವೆ. ಈ ಶ್ಲೋಕವು ಮೇಲಿನ ಅರ್ಥವನ್ನೂ ಸಮರ್ಥಿಸುತ್ತದೆ.

[೫] ಅಲ್ಲದೆ ವಾತವು ಬೇರೆ ಯಾವದೋಷಗಳಿಂದಲೂ ಪ್ರಕುಪಿತವಾಗಲಾರದು; ಅದ್ದರಿಂದಲೇ ವಾತವು ಸ್ವತಂತ್ರವು.

[೬] ವಾತದ ರೋಗಗಳು ೮೦, ಪಿತ್ತದ ರೋಗಗಳು ೪೦, ಕಫದ ರೋಗಗಳು ೨೦ ಆಗಿರುವವು. ಅದಕಾರಣವೇ ದೋಷಗಳ ಗಣಿಕೆಯಲ್ಲಿ ಅದಕ್ಕೆ ಪ್ರಥಮ ಸ್ಥಾನವನ್ನಿತ್ತುದಾಗಿದೆ.

ವಿಕೃತಾವಿಕೃತಾ ದೇಹಂ ಘ್ನಂತಿ ತೇ *ವರ್ತಯಂತಿ ಚ ||

ಅರ್ಥ:— ಈ ದೋಷಗಳು ವಿಕೃತವಾದರೆ ದೇಹವನ್ನು ಕೊಲ್ಲುವವು, ಅವಿಕೃತವಾಗಿದ್ದರೆ ಅದನ್ನು ಸಾಗಿಸಲಿಕ್ಕೆ ಸಮರ್ಥವಾಗುತ್ತವೆ.

ಟಿಪ್ಪಣಿ:— ಇಲ್ಲಿ ವಿಕೃತಿಯೆಂದರೆ ದೋಷಗಳಲ್ಲಿಯ ಪ್ರಮಾಣವು ಹೆಚ್ಚುಕಡಿಮೆಯಾಗೋಣವೆಂತಲೂ ದೋಷಗಳು ತಮ್ಮ ನಿಯಮಿತ ಸ್ಥಾನಗಳಿಂದ ಕದಲೋಣವೆಂತಲೂ ಅರ್ಥವು. [೬]

* "ವರ್ಧಯಂತಿ" ಎಂಬ ಪಾಠವೂ ಇದೆ.

**ತೇ ವ್ಯಾಪಿನೋಽಪಿ ಹೃನ್ನಾಭ್ಯೋರಧೋಮಧ್ಯೋರ್ಧ್ವ
ಸಂಶ್ರಯಾಃ ॥ ೭ ॥**

ಅರ್ಥ:— ಈ ದೋಷಗಳು ದೇಹವೆಲ್ಲೆಲ್ಲ ವ್ಯಾಪಿಸಿದ್ದರೂ ಅವು ಪ್ರಾಮುಖ್ಯವಾಗಿ ಇರುವ ಸ್ಥಾನಗಳನ್ನು ಹೇಳುವದಾದರೆ (೧) ವಾತವು ಹೊಕ್ಕಳದ ಕೆಳಗೆ, (೨) ಪಿತ್ತವು ಹೊಕ್ಕಳ ಎದೆ ಇವುಗಳ ನಡುವೆ, (೩) ಕಫವು ಎದೆಯ ಮೇಲೆ. (೭)

**ವಯೋಽಹೋರಾತ್ರಿಭುಕ್ತಾನಾಂ ತೇಽಂತಮಧ್ಯಾದಿಗಾಃ ಕ್ರಮಾತ್॥**

ಅರ್ಥ:— ಅವು ವಯಸ್ಸು, ಹಗಲು, ರಾತ್ರಿ, ಊಟ ಇವುಗಳ ಕಡೆ ನಡು ಮೊದಲು ಭಾಗಗಳಲ್ಲಿ ಅನುಕ್ರಮವಾಗಿ ವಾಸಮಾಡಿರುತ್ತವೆ.

**ಟಿಪ್ಪಣಿ:**— ವಯಸ್ಸಿನ ಕಡೆಯಲ್ಲಿ [ಮುಪ್ಪಿನಲ್ಲಿ] ವಾತವೂ, ನಡುವಿನಲ್ಲಿ [ಹರೆಯದಲ್ಲಿ] ಪಿತ್ತವೂ, ಮೊದಲಿನಲ್ಲಿ [ಚಿಕ್ಕಂದಿನಲ್ಲಿ] ಕಫವೂ ಪ್ರಬಲವಾಗಿರುತ್ತವೆ. ಇದರಂತೆ ಹಗಲು ರಾತ್ರಿ ಊಟಗಳ ಕಡೆ ನಡು ಮೊದಲು ಭಾಗಗಳಲ್ಲಿ ವಾತಾದಿ ದೋಷಗಳ ಪ್ರಾಬಲ್ಯವಿರುತ್ತದೆ. [೭॥]

**ತೈರ್ಭವೇದ್ವಿಷಮಸ್ತೀಕ್ಷ್ಣೋ ಮಂದಶ್ಚಾಗ್ನಿಃ ಸಮೈಃ ಸಮಃ ॥೮॥**

ಅರ್ಥ:— ಅಗ್ನಿಯು, ವಾತವು ಬೆಳೆದಾಗ್ಗೆ ವಿಷಮವಾಗಿಯೂ, ಪಿತ್ತವು ಪ್ರಬಲಿಸಿದಾಗ್ಗೆ ತೀಕ್ಷ್ಣವಾಗಿಯೂ, ಕಫವು ಹೆಚ್ಚಾದಾಗ್ಗೆ ಮಂದವಾಗಿಯೂ ಎಲ್ಲವೂ ಸಮವಿದ್ದಾಗ್ಗೆ ಸಮವೂ ಇರುತ್ತದೆ.

**ಟಿಪ್ಪಣಿ:**— ಇದರಂತೆ ವಾತ-ಪಿತ್ತಗಳ ಹೆಚ್ಚುವಿಕೆಯಿಂದ ತೀಕ್ಷ್ಣ, ವಾತ-ಕಫಾಧಿಕ್ಯದಿಂದ ಮೃದು, ಕಫ-ಪಿತ್ತಾಧಿಕ್ಯದಿಂದ ಒಮ್ಮೆ ಮಂದ ಒಮ್ಮೆ ತೀಕ್ಷ್ಣ ಆಗುವದು. ಸತ್ವ ರಜ ತಮ ಗುಣಗಳು ಪರಸ್ಪರ ವಿರುದ್ಧವಿದ್ದರೂ ಅವು ಹೇಗೆ ಜಗತ್ತನ್ನುಂಟುಮಾಡುತ್ತವೆಯೋ ಹಾಗೆಯೇ ಈ ದೋಷಗಳು ಪರಸ್ಪರ ವಿರುದ್ಧವಿದ್ದರೂ ತಮ್ಮ ಕಾರ್ಯಗಳನ್ನು ಮಾಡುತ್ತವೆ ಎಂದು ಸಂಗ್ರಹದಲ್ಲಿ ಹೇಳಿದೆ.

ಆರಂಭಕಂ ವಿರೋಧೇಽಪಿ ಮಿಥೋ ಯದ್ವದ್ಗುಣತ್ರಯಂ ।
ವಿಶ್ವಸ್ಯ ದೃಷ್ಟಂ ಯುಗಪದ್ ವ್ಯಾಧೇರ್ದೋಷತ್ರಯಂ ತಥಾ ।

ಸರಿಯಾಗಿ ಮಾಡಿದ ಊಟವನ್ನು ಒಮ್ಮೊಮ್ಮೆ ಪಚನಮಾಡುವದೂ ಒಮ್ಮೊಮ್ಮೆ ಮಾಡದಿರುವದೂ ವಿಷಮಾಗ್ನಿಯ ಕಾರ್ಯವು, ಶೀಘ್ರವಾಗಿ ಮಾಡುವದು ತೀಕ್ಷ್ಣಾಗ್ನಿಯ ಕಾರ್ಯವು, ಸಾವಕಾಶವಾಗಿ ಮಾಡುವದು ಮಂದಾಗ್ನಿಯದು, ಸರಿಯಾದ ವೇಳೆಯಲ್ಲಿ ನಿಯಮದಿಂದ ಮಾಡುವದು ಸಮಾಗ್ನಿಯ ಕೆಲಸವು. ( ೮ )

**ಕೋಷ್ಠಃ ಕ್ರೂರೋ ಮೃದುರ್ಮಧ್ಯೋ ಮಧ್ಯಃ ಸ್ಯಾತ್ತೈಃ ಸಮೈರಪಿ||**

ಅರ್ಥ:— ಕೋಷ್ಠವು (೧) ವಾತಾಧಿಕ್ಯದಿಂದ ಬಿರುಸೂ, (೨) ಪಿತ್ತಾಧಿಕ್ಯದಿಂದ ಮೃದುವೂ, (೩) ಕಫಾಧಿಕ್ಯದಿಂದ ಮಧ್ಯಮವೂ ಆಗುತ್ತದೆ. (೪) ಅಲ್ಲದೇ ಈ ಮೂರೂ ಸಮವಾಗಿದ್ದರೂ ಕೋಷ್ಠವು ಮಧ್ಯಮವೇ ಆಗಿರುತ್ತದೆ.

**ಟಿಪ್ಪಣೀ**— ೪ನೆಯದಕ್ಕೆ ಕಾರಣವೇನಂದರೆ ವಾತ-ಪಿತ್ತಗಳ ಧರ್ಮಗಳು ಪರಸ್ಪರ ವಿರುದ್ಧವಾಗಿರುವದರಿಂದ ಅವು ಈ ಸಮಸ್ಥಿತಿಯಲ್ಲಿ ತಮ್ಮ ಕಾರ್ಯಗಳಾದ ಬಿರುಸು ಮಿದುವುತನಗಳನ್ನು ಕೋಷ್ಠಕ್ಕೆ ತರಲು ಅಸಮರ್ಥವಾಗಿ ಬಿಡುತ್ತವೆ. ಕಫವು ಮಾತ್ರ ತನ್ನ ಮಧ್ಯತ್ವವನ್ನು ಕಾಯ್ದುಕೊಳ್ಳಲು ಸಮರ್ಥವಾಗುತ್ತದೆ. ಇದರಿಂದ ೩ನೆಯ, ೪ನೆಯ ತರಹಗಳು ಮಧ್ಯಕೋಷ್ಠದಲ್ಲಿಯ ಎರಡು ಭೇದಗಳೆಂದು ಅಂದಂತಾಗುವದು. ಆದ್ದರಿಂದಲೇ ಅವುಗಳಲ್ಲಿ ತುಸು ಭೇದವೂ ಉಂಟು. ೧ನೆಯದರಲ್ಲಿ ವಿರೇಚನವು ಸ್ವಲ್ಪ ಕಷ್ಟದಾಯಕವಾದರೆ ೨ನೆಯದರಲ್ಲಿ ಸರಿಯಾಗಿ ಆಗುವದೆಂಬುದೇ ಆ ಭೇದವು. (೮||)

ಈ ಕೋಷ್ಠವು ವಾತ-ಕಫದಿಂದ ಕ್ರೂರ, ವಾತ ಪಿತ್ತದಿಂದ ಮತ್ತೂ ಕಫ-ಪಿತ್ತದಿಂದ ಮತ್ತು ಸನ್ನಿಪಾತದಿಂದ ಮೃದುವಾಗುವದು.

**ಶುಕ್ರಾರ್ತವಸ್ಥೈರ್ಜನ್ಮಾದೌ ವಿಷೇಣೇವ ವಿಷಕೃಮೇಃ || ೯ ||**
**ತೈಶ್ಚ ತಿಸ್ರಃ ಪ್ರಕೃತಯೋ ಹೀನಮಧ್ಯೋತ್ತಮಾಃ ಪೃಥಕ್ ||**
**ಸಮಧಾತುಃ ಸಮಸ್ತಾಸು ಶ್ರೇಷ್ಠಾ ನಿಂದ್ಯಾ ದ್ವಿದೋಷಜಾಃ ||೧೦||**

ಅರ್ಥ:— ಗರ್ಭಾಧಾನಕಾಲದಲ್ಲಿ ಶುಕ್ರ ಆರ್ತವಗಳಲ್ಲಿರುವ ವಾತ ಪಿತ್ತ ಕಫಾಧಿಕ್ಯದಿಂದ, ವಿಷದಿಂದ ವಿಷಕ್ರಿಮಿಗಳು ಉಂಟಾಗುವಂತೆ ಹೀನ ಮಧ್ಯಮ ಉತ್ತಮಗಳೆಂಬ ಮೂರು ತರಹದ ಪ್ರಕೃತಿಗಳು ಉಂಟಾಗುವವು. ಮೂರೂ ಸಮನಾಗಿದ್ದರೆ ಎಲ್ಲಕ್ಕೂ ಉತ್ತಮವಾದ ಪ್ರಕೃತಿಯು. ಎರಡೆರಡು ದೋಷಗಳ ಆಧಿಕ್ಯದಿಂದ ಉತ್ಪನ್ನವಾಗುವ ಪ್ರಕೃತಿಯು ನಿಂದ್ಯವಾದದ್ದು.

ಟಿಪ್ಪಣಿ:— ವಿಕೃತ ದೋಷಗಳಿಂದ ಶರೀರವೇ ನಾಶವಾಗುತ್ತದೆಂದಿರಲು [ ವಿಕೃತಾ ದೇಹಂ ಘ್ನಂತಿ ] ಅವುಗಳಿಂದ ಹೊಸ ಶರೀರವು ಹುಟ್ಟುವದು ಹೇಗೆ ಎಂಬ ಸಂಶಯವನ್ನು ಕಳೆಯುವದಕ್ಕಾಗಿ ವಿಷಕ್ರಿಮಿಯ ದೃಷ್ಟಾಂತವನ್ನಿಲ್ಲಿ ಕೊಡಲಾಗಿದೆ. ಬಚನಾಗ ಮುಂತಾದ ವಿಷಗಳು ಪ್ರಾಣಿಗಳನ್ನು ನಾಶಮಾಡಿ ಬಿಡುತ್ತಿದ್ದರೂ ಅವುಗಳಲ್ಲಿಯೇ ಹೇಗೆ ಕ್ರಿಮಿಗಳು ಹುಟ್ಟುವದು ಕಂಡಿದುದಾಗಿದೆಯೋ ಹಾಗೆಯೇ ವಿಕೃತ ದೋಷಗಳಿಂದ ವಿಕೃತ ಶರೀರಗಳು ಉಂಟಾಗುವವು.

ವಿಯೋನಿ ವಿಕೃತಾಕಾರಾ ಜಾಯಂತೇ ವಿಕೃತೈರ್ಮಲೈಃ । ೧೦)

ಶುಕ್ರ ಆರ್ತವಗಳಲ್ಲಿಯ ವಾತಾದಿ ದೋಷಗಳ ಆಧಿಕ್ಯದಿಂದ ವಿರುದ್ಧವಾದ ಯೋನಿಯುಳ್ಳವೂ ವಿಕಾರವಾದ ಆಕಾರವುಳ್ಳವೂ ಆದ ಪ್ರಾಣಿಗಳು ಹುಟ್ಟುತ್ತವೆ ಎಂದೂ ಮುಂದೆ ಹೇಳಿದ್ದಾಗಿದೆ.

**ತತ್ರ ರುಕ್ಷೋ ಲಘುಃ ಶೀತಃ ಖರಃ ಸೂಕ್ಷ್ಮಶ್ಚಲೋಽನಿಲಃ ||**

ಅರ್ಥಃ— ಅವುಗಳಲ್ಲಿ ವಾತವು ರುಕ್ಷ, ಹಗುರು, ಶೀತ, ಬಿರುಸು, ಸೂಕ್ಷ್ಮ (ಸಣ್ಣ ಸಣ್ಣ ಅಣುಗಳಲ್ಲಿಯೂ ಸೇರಬಲ್ಲದ್ದು), ಮತ್ತು ಚಂಚಲ ಆಗಿರುವದು.

**ಟಿಪ್ಪಣಿ:—** ಸ್ವಾಭಾವಿಕವಾಗಿ ವಾಯುವು ಶೀತವೂ ಅಲ್ಲ, ಉಷ್ಣವೂ ಅಲ್ಲ **[ಅನುಷ್ಣಾಶೀತೋ ವಾಯುಃ]** ಎಂದು ನೈಯ್ಯಾಯಿಕರನ್ನುವದುಂಟು. ವೈದ್ಯಕದಲ್ಲಿಯೂ ಅದು "ಯೋಗವಾಹಿ" ಅಂದರೆ ಶೀತದಲ್ಲಿ ಸೇರಿ ಶೀತವೂ, ಉಷ್ಣದಲ್ಲಿ ಸೇರಿ ಉಷ್ಣವೂ ಆಗಿರುವದೆಂದು ಹೇಳಿದೆ.

'ಯೋಗವಾಹಃ ಪರಂ ವಾಯುಃ ಸಂಯೋಗಾದುಭಯಾರ್ಥಕೃತ್ ।
ಉಷ್ಣಕೃತ್ತೇಜಸಾ ಯುಕ್ತಃ ಶೀತಕೃತ್ ಸೋಮಸಂಶ್ರಯಾತ್ ॥ '

ವಾಯುವು ನಿಜವಾಗಿಯೂ ಯೋಗವಾಹಿಯು. ಅಂದರೆ ಉಷ್ಣ ಶೀತಗಳಲ್ಲಿ ಸೇರಿಕೊಂಡು ಉಷ್ಣ ಶೀತ ಮಾಡುವಂತಹದು. ಹೀಗಿದ್ದ ಮೇಲೆ ವಾಯುವು ಶೀತವೆಂತು ? ಈ ಶಂಕೆಯ ನಿವಾರಣೆಯನ್ನು ಹೀಗೆ ಮಾಡಲಾಗುತ್ತದೆ.— ಶೀತದಿಂದ ವಾಯುವಿನ ವೃದ್ಧಿಯೂ, ಉಷ್ಣದಿಂದ ಶಮನವೂ, ಆಗುವದರಿಂದ "ವೃದ್ಧಿಃ ಸಮಾನೈಃ ಸರ್ವೇಷಾಂ ವಿಪರೀತೈರ್ವಿಪರ್ಯಯಃ" ಎಂಬ ನ್ಯಾಯದಿಂದಲೂ, ಮತ್ತು ಕೇವಲ ವಾತರೋಗಗಳಲ್ಲಿ ಶೈತ್ಯದ ಅನುಭವವಾಗುವದರಿಂದಲೂ ಅದನ್ನು ಹೇಳಬೇಕೆಂದು ಹಲವು ಟೀಕಾಕಾರರು ಅಭಿಪ್ರಾಯಪಡುತ್ತಾರೆ. [೧೦॥]

**ಪಿತ್ತಂ ಸಸ್ನೇಹತೀಕ್ಷ್ಣೋಷ್ಣಂ ಲಘು ವಿಸ್ರಂ ಸರಂ ದ್ರವಂ ||೧೧||**

ಅರ್ಥ:— ಪಿತ್ತವು ಸ್ವಲ್ಪ ಸ್ನಿಗ್ಧ, ತೀಕ್ಷ್ಣ, ಉಷ್ಣ, ಹಗುರು, ದುರ್ಗಂಧಿ,(ಮಲ) ಸಾರಕ, ಮತ್ತು ದ್ರವವಾದದ್ದು ಆಗಿರುವದು. (೧೧)

**ಸ್ನಿಗ್ಧಃ ಶಿತೋ ಗುರುರ್ಮಂದಃ ಶ್ಲಕ್ಷ್ಣೋ ಮೃತ್ಸ್ನಃ ಸ್ಥಿರಃ ಕಫಃ ||**

ಅರ್ಥ:— ಕಫವು, ಸ್ನಿಗ್ಧ, ಶೀತ, ಜಡ, ಮಂದವಾಗಿ ಕಾರ್ಯ ಮಾಡುವದು, ನುಣುಪು, ಜಿಗಟು, ಒತ್ತಟ್ಟಿಗೇ ನಿಲ್ಲುವ ಸ್ವಭಾವದ್ದು ಇದೆ. (೧೧||)

**ಸಂಸರ್ಗಃ ಸನ್ನಿಪಾತಶ್ಚ ತದ್ದ್ವಿತ್ರಿಕ್ಷಯಕೋಪತಃ || ೧೨ ||**

ಅರ್ಥ:— ಇವುಗಳಲ್ಲಿ ಎರಡರ ಕ್ಷಯ, ಅಥವಾ ಕೋಪವು ಸಂಸರ್ಗ ವೆಂದೂ, ಮೂರರ ಕ್ಷಯ ಅಥವಾ ಕೋಪವು, ಸನ್ನಿಪಾತವೆಂದೂ ಕರೆ ಯಲ್ಪಡುವವು. (೧೨)

ದೋಷಗಳನ್ನೂ, ಅವುಗಳ ಸ್ವರೂಪವನ್ನೂ, ಕಾರ್ಯ-ಸ್ಥಾನ-ಕಾಲಗಳನ್ನೂ, ಅವುಗಳಿಂದ ಹುಟ್ಟುವ ಅಗ್ನಿ ಕೋಷ್ಠ ಪ್ರಕೃತಿಗಳ ಭೇದಗಳನ್ನೂ ಈ ಹಿಂದೆ ಹೇಳಿ ದ್ದಾಯಿತು. ಇನ್ನು ಶರೀರ ಘಟಕಗಳಾದ ಧಾತುವನ್ನು ಹೇಳಲಾಗುತ್ತದೆ.

**ರಸಾಸೃಙ್ಮಾಂಸಮೇದೋಽಸ್ಥಿಮಜ್ಜಾಶುಕ್ರಾಣಿ ಧಾತವಃ ||**
**ಸಪ್ತ ದೂಷ್ಯಾಃ,..........................................................**

ಅರ್ಥ:— ರಸ, ರಕ್ತ, ಮಾಂಸ, ಮೇದ, ಎಲಬು, ಮಜ್ಜೆ, ಶುಕ್ರ ಎಂಬಿವು ಏಳು ಧಾತುಗಳು. ಇವು ದೂಷ್ಯಗಳೆಂದೂ ಕರೆಯಲ್ಪ ಡುವವು. ಯಾಕೆಂದರೆ ಹಿಂದೆ ಹೇಳಿದ ತ್ರಿದೋಷಗಳಿಂದ ಇವು ದೂಷಿ ಸಲ್ಪಡುತ್ತವೆ.

**....................ಮಲಾ ಮೂತ್ರಶಕೃತ್ ಸ್ವೇದಾದಯೋಽಪಿ ಚ ||೧೩||**

ಅರ್ಥ:— ಮೂತ್ರ, ಮಲ, ಬೆವರು ಮುಂತಾದವುಗಳು ಮಲ ಗಳೆಂದು ಕರೆಯಲ್ಪಡುತ್ತವೆ. ದೋಷಗಳಿಂದ ದೂಷಿತವಾಗುವದರಿಂದ ಇವಕ್ಕೂ ದೂಷ್ಯಗಳೆಂದೆನ್ನುವರು. (೧೩)

ವೃದ್ಧಿಃ ಸಮಾನೈಃ ಸರ್ವೇಷಾಂ ವಿಪರೀತೈರ್ವಿಪರ್ಯಯಃ ||

ಅರ್ಥ:— ಸಮಾನವಾದ ದ್ರವ್ಯ-ಗುಣ-ಕರ್ಮಗಳಿಂದ ಎಲ್ಲ ವಸ್ತುಗಳ ವೃದ್ಧಿಯಾಗುತ್ತದೆ. ಆದರೆ ಇದಕ್ಕೆ ವಿಪರೀತವಾದ ದ್ರವ್ಯ-ಗುಣ-ಕರ್ಮಗಳಿಂದ ಹ್ರಾಸವು ಆಗುತ್ತದೆ.

## ಟಿಪ್ಪಣಿ

ಸಮಾನ-ದ್ರವ್ಯ:— ರಕ್ತವು ರಕ್ತದಿಂದ, ಮಾಂಸವು ಮಾಂಸದಿಂದ, ಗರ್ಭವು ಅಮಗರ್ಭದಿಂದ ಬೆಳೆಯುತ್ತದೆ.

ಸಮಾನ-ಗುಣ:— ಮಾವಿನಹಣ್ಣು ಖರ್ಜೂರ ಮುಂತಾದವುಗಳು ತಮ್ಮಲ್ಲಿಯ ಸ್ನಿಗ್ಧ, ಸೀತ, ಮೊದಲಾದ ಗುಣಗಳಿಂದ ಕಫವನ್ನು ಹೆಚ್ಚಿಸುತ್ತವೆ.

ಸಮಾನ-ಕರ್ಮ.— [ಕಾಯಿಕ, ವಾಚಿಕ, ಮಾನಸಿಕ ಎಂದು ಕರ್ಮವು ಮೂರು ಬಗೆಯಾಗಿರುತ್ತದೆ.]

ಸಮಾನ-ಕಾಯಿಕ-ಕರ್ಮ:— ಓಡೋಣ, ಜಿಗಿಯೋಣ, ಮುಂತಾದ ಕರ್ಮಗಳು, ಚಲತ್ವಗುಣದಿಂದ ವಾಯುವನ್ನು ಹೆಚ್ಚಿಸುತ್ತವೆ.

ಸಮಾನ-ವಾಚಿಕ-ಕರ್ಮ— ಓದೋಣ, ಹಾಡೋಣ ಮುಂತಾದವು ವಾತವನ್ನು ಹೆಚ್ಚಿಸುತ್ತವೆ.

ಸಮಾನ-ಮಾನಸಿಕ-ಕರ್ಮ:— ಚಿಂತೆ, ಕಾಮ, ಶೋಕ ಮುಂತಾದವು ಮನವನ್ನು ಕಲಕಿಸುವದರಿಂದ ವಾಯುವು ಹೆಚ್ಚಾಗಲಿಕ್ಕೆ ಕಾರಣವಾಗುತ್ತವೆ.

ಇದರಂತೆ ವಿಪರೀತ ದ್ರವ್ಯ-ಗುಣ-ಕರ್ಮಗಳು ವಸ್ತುವನ್ನು ಕ್ಷಯಿಸುತ್ತವೆ.

ವಿಪರೀತ-ದ್ರವ್ಯ:— ಗವೇಧುಕವು, ( ಕಾಡುಗೋಧಿಯು ) ವಿರುದ್ಧ ಮಾಂಸಗಳನ್ನು ನಾಶಮಾಡುತ್ತದೆ.

ವಿಪರೀತ-ಗುಣ:— ಆರನಾಲವು [ಹುಳಿಗಂಜಿಯು] ಉಷ್ಣ-ತೀಕ್ಷ್ಣ-ಗುಣಗಳಿಂದ ಕಫವನ್ನು ಕಡಿದು ಹಾಕುವದು.

ವಿಪರೀತ-ಕರ್ಮ:— ನಿದ್ರಾ, ಆಲಸ್ಯ, ಮುಂತಾದವು ಅಚಲತ್ವಗುಣದಿಂದ ಚಲವಾದ ವಾಯುವನ್ನು ಕಡಿಮೆಮಾಡುತ್ತವೆ.

ಹೇಮಾದ್ರಿಯೆಂಬ ಟೀಕಾಕಾರನು, ಸಮಾನ= ಸಮಾನ ಧರ್ಮವುಳ್ಳ, ವಿಪರೀತ= ವಿಪರೀತ ಧರ್ಮವುಳ್ಳ ಎಂದು ಅರ್ಥ ಮಾಡಿದ್ದಾನೆ. ಸಮಾನಧರ್ಮವುಳ್ಳ ವಸ್ತುಗಳಿಂದ

ಎಲ್ಲ ಪದಾರ್ಥಗಳ ವೃದ್ಧಿಯೂ ವಿಪರೀತ ಧರ್ಮವುಳ್ಳ ವಸ್ತುಗಳಿಂದ ಕ್ಷಯವೂ ಉಂಟಾಗುವವೆಂದು ಆತನು ವ್ಯಾಪಕವಾದ ಅರ್ಥವನ್ನು ಮಾಡಿದ್ದಾನೆ. ಇದು ಹೆಚ್ಚು ಸಮರ್ಪಕವಾಗಿದೆ. [೧೩||]

ಈ ದೋಷಾದಿಗಳ ವೃದ್ಧಿ ಕ್ಷಯಗಳಿಗೆ ಕಾರಣವಾದ ಪದಾರ್ಥಗಳಲ್ಲಿರುವ ಸಮಾನ ವಿಪರೀತ ಧರ್ಮಗಳನ್ನು ತಿಳಿಸುವದಕ್ಕಾಗಿ ಅವುಗಳಲ್ಲಿರುವ ರಸ-ಪ್ರಭಾವ-ವೀರ್ಯ ವಿಪಾಕ-ಗುಣಗಳನ್ನು ಇಲ್ಲಿ ಹೇಳಲಾಗುತ್ತದೆ.

**ರಸಾಃ ಸ್ವಾದ್ವಮ್ಲಲವಣತಿಕ್ತೋಽಷಣಕಷಾಯಕಾಃ ||೧೪||**
**ಷಡ್ದ್ರವ್ಯಮಾಶ್ರಿತಾಸ್ತೇ ತು ಯಥಾಪೂರ್ವಂ ಬಲಾವಹಾಃ ||**

ಅರ್ಥ:— ದ್ರವ್ಯಗಳಲ್ಲಿ ಸಿಹಿ, ಹುಳಿ, ಉಪ್ಪು, ಕಹಿ, ಕಾರ, ಒಗರು ಎಂದು ಆರು ರಸಗಳಿರುತ್ತವೆ. ಮುಂಚಿ-ಮುಂಚಿನದು ಮುಂದಿನ ದಕ್ಕಿಂತ ಬಲದಾಯಕವಾಗಿರುತ್ತದೆ. (೧೪||)

**ತತ್ರಾದ್ಯಾ ಮಾರುತಂ ಘ್ನಂತಿ ತ್ರಯಸ್ತಿಕ್ತಾದಯಃ ಕಫಮ್ ||೧೫||**
**ಕಷಾಯತಿಕ್ತಮಧುರಾಃ ಪಿತ್ತಮನ್ಯೇ ತು ಕುರ್ವತೇ ||**

ಅರ್ಥ:— ಅವುಗಳಲ್ಲಿ ಮುಂಚಿನ ಮೂರು (ಸಿಹಿ, ಹುಳಿ, ಉಪ್ಪು) ವಾತವನ್ನು ಕಳೆಯುತ್ತವೆ. ಮುಂದಿನ ಮೂರು (ಕಹಿ, ಕಾರ, ಒಗರು) ವಾತವನ್ನುಂಟುಮಾಡುತ್ತವೆ; ಮತ್ತು ಕಫವನ್ನು ಕಡಿದು ಹಾಕುತ್ತವೆ. ಮೊದಲಿನ ಮೂರು ಕಫಕಾರಕವಾಗುತ್ತವೆ. ಒಗರು, ಕಹಿ, ಸಿಹಿ ರಸಗಳು ಪಿತ್ತವನ್ನು ಕಳೆಯುತ್ತವೆ. ಹುಳಿ, ಉಪ್ಪು, ಕಾರ ರಸಗಳು ಪಿತ್ತವನ್ನುಂಟುಮಾಡುತ್ತವೆ.

**ಟಿಪ್ಪಣಿ:—** ಕಹಿ, ಕಾರ, ಒಗರು ವಾತವನ್ನೂ; ಸಿಹಿ, ಹುಳಿ, ಉಪ್ಪು ಕಫವನ್ನೂ; ಹುಳಿ, ಉಪ್ಪು, ಕಾರ ಪಿತ್ತವನ್ನೂ ಉಂಟುಮಾಡುವವು. ಆದ್ದರಿಂದ ಈ ರಸಗಳು ಆಯಾ ದೋಷಗಳಲ್ಲಿ ಇರುವವೆಂದು ಸಿದ್ಧವಾಗುವದು. ಆ ಕಾರಣವೇ ಕಪಿಲಾಚಾರ್ಯರು, 'ಕಟ್ವಮ್ಲಲವಣಂ ಪಿತ್ತಂ, ಸ್ವಾದ್ವಮ್ಲಲವಣಃ ಕಫಃ ಕಷಾಯತಿಕ್ತಕಟುಕೋ ವಾಯುರ್ದೃಷ್ಟೋಽನುಮಾನತಃ' ಎಂದು ಹೇಳಿರುವರು. ಒಟ್ಟಾರೆಯಾಗಿ ಇದರಿಂದ ಕೆಳಗಿನಂತೆ ತಿಳಿದು ಬರುವದು.

**೧. ಸಿಹಿ:— ವಾತ ಪಿತ್ತಗಳ ನಾಶಕ—ಕಫಕಾರಕ**
**೨. ಹುಳಿ:— ಕಫ ಪಿತ್ತ ಜನಕ—ವಾತನಾಶಕ**

೩. ಉಪ್ಪು:— ಕಫ ಪಿತ್ತ ಕಾರಕ—ವಾತನಾಶಕ

೪. ಕಹಿ:— ಕಫ ಪಿತ್ತ ನಾಶಕ—ವಾತಕಾರಕ

೫. ಕಾರ:— ವಾತ ಪಿತ್ತ ಕಾರಕ—ಕಫನಾಶಕ

೬. ಒಗರು:— ಕಫ ಪಿತ್ತ ನಾಶಕ—ವಾತಕಾರಕ　　　(೧೫॥)

**ಶಮನಂ ಕೋಪನಂ ಸ್ವಸ್ಥಹಿತಂ ದ್ರವ್ಯಮಿತಿ ತ್ರಿಧಾ　　॥೧೬॥**

ಅರ್ಥ:— ದ್ರವ್ಯವು (೧) ಶಮನ, (೨) ಕೋಪನ, (೩) ಸ್ವಸ್ಥ ಹಿತವೆಂದು ಮೂರು ಬಗೆಯದಾಗಿರುವದು.

## ಟಿಪ್ಪಣಿ:

೧. ಶಮನ:— ದೋಷಗಳನ್ನು ಹೊರದೂಡದೇ ವಿಷಮತೆಯನ್ನು ಕಳೆದು ಅವುಗಳ ಸಮತೆಯುಂಟಾಗುವಂತೆ ಮಾಡುವದು ಶಮನವು. ಉದಾ:— ವಾತ, ಪಿತ್ತ, ಕಫಗಳಿಗೆ ಕ್ರಮವಾಗಿ ಎಣ್ಣೆ, ತುಪ್ಪ, ಜೇನತುಪ್ಪಗಳು.

೨. ಕೋಪನ:— ದೋಷಗಳನ್ನೆಲ್ಲ ಅಡ್ಡ ಹಾದಿಗೆ ಒಯ್ಯುವದು ಕೋಪನವು. ಉದಾ:— ಗಿಣ್ಣ, ವಿರುದ್ಧ ಆಹಾರ ( ಹಾಲು, ಹುಳಿ ಮುಂತಾದ್ದನ್ನು ಕೂಡಿಸಿ ತಿನ್ನೋಣ ಮುಂತಾದವು .

೩. ಸ್ವಸ್ಥಹಿತ:— ದೋಷ, ಧಾತು, ಮಲಗಳ ಸಮತೆಯನ್ನು ಕಾಯ್ದುಕೊಳ್ಳುವಂತಹದು ಸ್ವಸ್ಥಹಿತವು (ಆರೋಗ್ಯವನ್ನು ಕಾಯುವದು . ಉದಾ:— ಕೆಂಪು ಅಕ್ಕಿ, ಗೋದಿ, ಹಾಲು, ರಸಾಯನ, ವಾಜೀಕರಣ ಮುಂತಾದವು.

ಹೇಮಾದ್ರಿಯ ಅಭಿಪ್ರಾಯ:— ದ್ರವ್ಯಗಳ ಧರ್ಮಗಳನ್ನು ಹೇಳುವ ಪ್ರಸಂಗದಲ್ಲಿ ದ್ರವ್ಯದ ಪ್ರಕಾರಗಳನ್ನು ಹೇಳುವದು ಅಸಂಗತವಾಗುವದರಿಂದ ಶಮನಾದಿಗಳಿಗೆ ಕೊಟ್ಟಿರುವ ಮೇಲಿನ ಅರ್ಥವು ಸರಿಯಾದದ್ದಲ್ಲ. ಇಲ್ಲಿ ದ್ರವ್ಯ ಶಬ್ದದಿಂದ "ಪ್ರಭಾವ"ವೆಂಬುದೇ ವಿವಕ್ಷಿತಾರ್ಥವು.

೧. ಶಮನವೆಂದರೆ ಸಮಾನ ಅಥವಾ ವಿಪರೀತ ರಸಾದಿಗಳಿಂದ ಕೂಡಿದ್ದರೂ ವಾತಾದಿಗಳನ್ನು ಸಮತೆಗೆ ತರುವ ದ್ರವ್ಯಶಕ್ತಿಯು. ಉದಾ:— ಜೀವಂತಿ (ಕರೆಹಾಲೇಬಳ್ಳಿ)ಯು ಮಧುರವೂ, ಶೀತವೂ ಆಗಿದ್ದರೂ ಅದಕ್ಕೆ ಸಮಾನಧರ್ಮವುಳ್ಳ ಕಫವನ್ನು ಶಮನಮಾಡುವದು. ಬಳ್ಳೊಳ್ಳಿಯ ರಸ-ವಿಪಾಕಗಳು ಕಾರ, ಗುರು ಮತ್ತು ಸ್ನಿಗ್ಧವಾದವುಗಳಾದರೂ ಕಫ ವಾತಗಳನ್ನು ಕಳೆಯುವವು.

೨. ಕೋಪವನ್ನೆಂದರೆ ಸಮ-ವಿಪರೀತ ರಸಾದಿಗಳಿಂದ ವಾತಾದಿಗಳನ್ನು ಪ್ರಕೋಪಗೊಳಿಸುವ ದ್ರವ್ಯಪ್ರಭಾವವು. ಉದಾ:— ಜಡ, ಉಷ್ಣ, ಸ್ನಿಗ್ಧ, ಮಧುರವಾಗಿದ್ದರೂ ಕಾಕೆಂಬೆಯು ವಾತವನ್ನು ಕೋಪಿಸುವದು. ಇದರಂತೆ ಇವೇ ಗುಣಗಳಿದ್ದ ಉದ್ದು ಪಿತ್ತ-ಕಫಗಳನ್ನು ಕೋಪಿಸುವದು.

೩. ಸ್ವಸ್ಥಹಿತನೆಂದರೆ ವಾತಾದಿಗಳ ಕ್ಷಯ ವೃದ್ಧಿಗೆ ಕಾರಣವಿದ್ದರೂ ನಿರೋಗಿಯಲ್ಲಿ ಆ ಕಾರ್ಯವನ್ನು ಮಾಡಗೊಡದಂತಹ ಶಕ್ತಿಯು. ಉದಾ:— ಜವೆಗೋಧಿಯು ಜಡ, ರೂಕ್ಷ, ಮಧುರ, ಶೀತವಾಗಿದ್ದರೂ ನಿರೋಗಿಯ ಪಿತ್ತವನ್ನು ಕಳೆಯಲು ಸಮರ್ಥವಾಗುವದಿಲ್ಲ. ಅದೇ ಗುಣಗಳಿಂದ ಕೂಡಿದ ಹಾಲು ಆರೋಗ್ಯವುಳ್ಳವನ ಕಫವನ್ನು ಬೆಳೆಸುವದಿಲ್ಲ. ಹೀಗೆಲ್ಲ ಆಗುವದಕ್ಕೆ ಕಾರಣವು ಆಯಾ ದ್ರವ್ಯಗಳಲ್ಲಿರುವ ಪ್ರಭಾವವು. ಅಂದರೆ ರಸ, ವೀರ್ಯ, ವಿಪಾಕಗಳು ಒಂದೇ ಆಗಿದ್ದರೂ ಬೇರೆ ಕರ್ಮವನ್ನು ಮಾಡಿಸುವ ದ್ರವ್ಯಗತವಾದ ಒಂದು ಬಗೆಯ ಶಕ್ತಿಯು. [ರಸಾದಿಸಾಮ್ಯೇ ಯತ್ಕರ್ಮ ವಿಶಿಷ್ಟಂ ತತ್ ಪ್ರಭಾವಜಂ] ಹೀಗೆ ರಸಾದಿ ವಿಭಾಗವುಳ್ಳದ್ದು ದ್ರವ್ಯವಲ್ಲ, ತದ್ಗತವಾದ ಪ್ರಭಾವವು. [೧೬]

**ಉಷ್ಣಶೀತಗುಣೋತ್ಕರ್ಷಾತ್ ತತ್ರ ವೀರ್ಯಂ ದ್ವಿಧಾ ಸ್ಮೃತಂ ||**

ಅರ್ಥ:— ದ್ರವ್ಯದಲ್ಲಿರುವ ೨೦ ಗುಣಗಳೊಳಗೆ ಉಷ್ಣ ಶೀತಗಳ ಶಕ್ತಿಯೇ ಹೆಚ್ಚು. ಆದ್ದರಿಂದಲೇ ಉಷ್ಣ-ಶೀತ ಇವೆರಡು ವೀರ್ಯವೆಂದು ಕರೆಯಲ್ಪಡುತ್ತವೆ. (೧೬||)

**ತ್ರಿಧಾ ವಿಪಾಕೋ ದ್ರವ್ಯಸ್ಯ ಸ್ವಾದ್ವಮ್ಲಕಟುಕಾತ್ಮಕಃ ||೧೭||**

ಅರ್ಥ:— ದ್ರವ್ಯದ ವಿಪಾಕವು ಮಧುರ, ಹುಳಿ, ಕಾರವೆಂದು ಮೂರು ವಿಧವಾಗಿದೆ.

**ಟಿಪ್ಪಣಿ:—** ಜಠರಾಗ್ನಿಯಿಂದುಂಟಾದ ಅನ್ನರಸದ ರೂಪಾಂತರವಾದ ರಸವು ವಿಪಾಕವೆನಿಸುವದು. ಆರು ರಸಗಳಿದ್ದರೂ ಅಗ್ನಿಯಿಂದ ಅವುಗಳ ವಿಪಾಕವು ಮೂರೇ ಆಗುತ್ತದೆ. ಆದರೆ ಮುಂದೆ [ಶಾರೀರ, ೩ನೇ ಅಧ್ಯಾಯದಲ್ಲಿ] ಜಠರಾಗ್ನಿಯಿಂದ ಒಂದೇ ರಸವು ಮೊದಲು ಮಧುರ, ಹುಳಿ, ಕಾರ ಹೀಗೆ ಮೂರು ರೂಪಾಂತರಗಳನ್ನು ಹೊಂದುವದೆಂದು ಹೇಳಿದ್ದಾಗಿದೆ. ಅದು ವಿಪಾಕವಲ್ಲ; ವಿಪಾಕಭೂತವಾದ ಮಧುರ, ಹುಳಿ, ಕಾರಗಳು [illegible]ಯವಾಗಿವೆ. [೧೭]

**ಗುರುಮಂದಹಿಮಸ್ನಿಗ್ಧಶ್ಲಕ್ಷ್ಣಸಾಂದ್ರಮೃದುಸ್ಥಿರಾಃ ||**
**ಗುಣಾಃ ಸಸೂಕ್ಷ್ಮವಿಶದಾಃ ವಿಂಶತಿಃ ಸವಿಪರ್ಯಯಾಃ ||೧೮||**

ಅರ್ಥ:— ಜಡ, ಮಂದ, ಶೀತ, ಸ್ನಿಗ್ಧ, ನುಣುಪು, ದಟ್ಟ, ಮಿದುವು, ಸ್ಥಿರ, ಸೂಕ್ಷ್ಮ, ಜಿಗಟಿಲ್ಲದ್ದು ( ವಿಶದ ) ಈ ಹತ್ತು ಗುಣಗಳಲ್ಲದೆ ಇವಕ್ಕೆ ವಿಪರೀತವಾಗಿರುವ ಹಗುರು, ತೀಕ್ಷ್ಣ, ಉಷ್ಣ, ರುಕ್ಷ, ಬಿರುಸು, ದ್ರವ, ಕಠಿಣ, ಚಂಚಲ, ಸ್ಥೂಲ, ಜಿಗುಟು ( ಪಿಚ್ಛಿಲ ) ಎಂಬೀ ಹತ್ತು ಕೂಡಿ ದ್ರವ್ಯದ ಗುಣಗಳು ಇಪ್ಪತ್ತು.

**ಟಿಪ್ಪಣಿ:—** ಪೋಷಣದಲ್ಲಿ ಗುರುವೂ, ಕೊರಗಿಸುವಲ್ಲಿ ಲಘುವೂ, ಶಮನದಲ್ಲಿ ಮಂದವೂ, ಶೋಧನದಲ್ಲಿ ತೀಕ್ಷ್ಣವೂ, ಸ್ತಂಭನದಲ್ಲಿ ಶೀತವೂ, ಸ್ವೇದನದಲ್ಲಿ ಉಷ್ಣವೂ, ಕ್ಲೇದನ ತೊಯಿಸೋಣ]ದಲ್ಲಿ ಸ್ನಿಗ್ಧವೂ, ಶೋಷಣದಲ್ಲಿ ರುಕ್ಷವೂ, ಮಾಯಿಸುವಲ್ಲಿ ನುಣುಪೂ, ಕೆರೆಯುವದರಲ್ಲಿ ಬಿರುಸೂ, ಸ್ವಚ್ಛಮಾಡುವಲ್ಲಿ ಸಾಂದ್ರವೂ, ಕಲೆಯಿಸುವಲ್ಲಿ ದ್ರವವೂ, ಸಡಿಲಿಸುವಲ್ಲಿ ಮೃದುವೂ, ಗಟ್ಟಿಮಾಡುವಲ್ಲಿ ಕಠಿಣವೂ, ಗಟ್ಟಿ ಹಿಡಿಯುವಲ್ಲಿ ಸ್ಥಿರವೂ, ಪ್ರೇರಣೆಯಲ್ಲಿ ಚಂಚಲವೂ, ವ್ಯಾಪಿಸುವಲ್ಲಿ ಸೂಕ್ಷ್ಮವೂ, ಮುಚ್ಚಿಹಾಕುವಲ್ಲಿ ಸ್ಥೂಲವೂ, ಕ್ಷಾಲನದಲ್ಲಿ ವಿಶದವೂ, ಲೇಪನದಲ್ಲಿ ಜಿಗಟೂ ಶಕ್ತಿಯುಳ್ಳವುಗಳಾಗಿರುತ್ತವೆ. [೧೮]

ಇನ್ನು ರೋಗದ ಮತ್ತು ಆರೋಗ್ಯದ ಕಾರಣಗಳಾವವೆಂಬುದನ್ನು ಮುಂದೆ ಹೇಳುತ್ತಾರೆ.

**ಕಾಲಾರ್ಥಕರ್ಮಣಾಂ ಯೋಗೋ ಹೀನಮಿಥ್ಯಾತಿಮಾತ್ರಕಃ ||**
**ಸಮ್ಯಗ್ಯೋಗಶ್ಚ ವಿಜ್ಞೇಯೋ ರೋಗಾರೋಗ್ಯೈಕಕಾರಣಮ್ ||೧೯||**

ಅರ್ಥ:— ಕಾಲ, ಅರ್ಥ, ಕರ್ಮ ಈ ಮೂರರ ಹೀನ, ಮಿಥ್ಯಾ, ಅತಿಯೋಗಗಳೇ ರೋಗಕ್ಕೆ ಕಾರಣಗಳು. ಮತ್ತು ಇವುಗಳ ಸಮ್ಯಗ್ (ಸರಿಯಾದ) ಯೋಗವೇ ಆರೋಗ್ಯದ ಬೀಜವು.

## ಟಿಪ್ಪಣಿ

**ಕಾಲ:—** ಚಳಿ, ಮಳೆ, ಬೇಸಿಗೆಗಳು.

**ಅರ್ಥ:—** ಪಂಚಮಹಾಭೂತಗಳ ಗುಣಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು.

ಕರ್ಮ:— ಕಾಯಿಕ, ವಾಚಿಕ, ಮಾನಸಿಕ.

ಯೋಗ:— ಇವೆಲ್ಲವುಗಳ ಸಂಬಂಧ.

ಹೀನ:— ಆರೋಗ್ಯಕ್ಕೆ ಬೇಕಾದಷ್ಟಕ್ಕಿಂತ ಕಡಿಮೆ.

ಅತಿ:— ಸಾಕಷ್ಟಕ್ಕಿಂತ ಹೆಚ್ಚು.

ಮಿಥ್ಯಾ:— ರೀತಿಯನ್ನು ಬಿಟ್ಟಿದ್ದು, ದಿಕ್ಕು ತಪ್ಪಿದ್ದು.

ಸಮ್ಯಗ್:— ಸಮಪ್ರಮಾಣವಿದ್ದದ್ದು.

ಉದಾ:— ಚಳಿಗಾಲದಲ್ಲಿ ಕಡಿಮೆ ಚಳಿಯು = ಹೀನಯೋಗ, ಅತಿ ಚಳಿಯು= ಅತಿಯೋಗವು, ಚಳಿಯು ಬೀಳದೆ ಉಷ್ಣತೆಯು ಹೆಚ್ಚಾದರೆ = ಮಿಥ್ಯಾಯೋಗವು, ಬೀಳುವಂತೆ ಬೀಳುವಷ್ಟೇ ಚಳಿಯು = ಸಮ್ಯಗ್‌ಯೋಗವು. ಇದರಂತೆ ಉಳಿದ ಕಾಲಗಳ ಯೋಗವನ್ನು ತಿಳಿಯಬೇಕು.

ಆರೋಗ್ಯಕ್ಕೆ ಸಾಕಷ್ಟಕ್ಕಿಂತ ಮೆಲ್ಲಗೆ ಕೇಳುವ ಶಬ್ದ = ಹೀನಯೋಗ, ಸಾಕಷ್ಟಕ್ಕಿಂತ ಹೆಚ್ಚು ಕೇಳುವ ಶಬ್ದ= ಅತಿಯೋಗ, ಅಪ್ರಿಯ-ವಿಕಾರವಾಗಿ ಕೇಳುವ ಶಬ್ದ =ಮಿಥ್ಯಾಯೋಗ, ಸಾಕಷ್ಟೇ ಕೇಳುವ ಶಬ್ದವು= ಸಮ್ಯಗ್‌ಯೋಗ. ಇದರಂತೆ ಉಳಿದ ಅರ್ಥಗಳ ಯೋಗವನ್ನು ತಿಳಿಯಬೇಕು.

ಆರೋಗ್ಯಕ್ಕೆ ತಕ್ಕಷ್ಟಕ್ಕಿಂತ ಕಡಿಮೆ ಕ್ರಿಯೆಯು= ಹೀನಯೋಗ, ಸಾಕಷ್ಟಕ್ಕಿಂತ ಹೆಚ್ಚು ಕ್ರಿಯೆಯು= ಅತಿಯೋಗ, ಅಡ್ಡತಿಡ್ಡವಾಗಿ ಮನಬಂದಂತೆ ಮಾಡಿದ ಕ್ರಿಯೆಯು = ಮಿಥ್ಯಾಯೋಗ, ಸಾಕಷ್ಟೇ ಸರಿಯಾಗಿ ಮಾಡಿದ ಕ್ರಿಯೆಯು= ಸಮ್ಯಗ್‌ಯೋಗ. ಇದರಂತೆ ಉಳಿದ ಕ್ರಿಯೆಗಳ ಯೋಗವನ್ನು ತಿಳಿಯಬೇಕು. [೧೯]

ರೋಗ-ಆರೋಗ್ಯಗಳ ಲಕ್ಷಣಗಳನ್ನು ಹೇಳಲಾಗುತ್ತದೆ:—

**ರೋಗಸ್ತು ದೋಷವೈಷಮ್ಯಂ ದೋಷಸಾಮ್ಯಮರೋಗತಾ ॥**

ಅರ್ಥ:— ವಾತಾದಿ ದೋಷಗಳ ಪ್ರಮಾಣ ತಪ್ಪುವದೇ ರೋಗವು; ಇರತಕ್ಕಷ್ಟೇ ಇರುವದೇ ಆರೋಗ್ಯವು. (೧೯॥)

ಇನ್ನು ರೋಗ-ಭೇದಗಳ ವಿವರವು:—

**ನಿಜಾಗಂತುವಿಭಾಗೇನ ತತ್ರ ರೋಗಾ ದ್ವಿಧಾ ಸ್ಮೃತಾಃ ॥ ೨೦ ॥**

ಅರ್ಥ:— ನಿಜ ಮತ್ತು ಆಗಂತುಗಳೆಂದು ರೋಗಗಳಲ್ಲಿ ಎರಡು ಪ್ರಕಾರಗಳು.

ಟಿಪ್ಪಣೀ:— ದೋಷಗಳು ಮುಂಚೆ ವಿಕಾರವನ್ನು ಹೊಂದಿ ಬಳಿಕ ದುಃಖವನ್ನುಂಟು ಮಾಡಿದರೆ ಅವು ನಿಜರೋಗಗಳು. ಶಸ್ತ್ರ—ಶಾಪಾದಿಗಳಿಂದ ಉಂಟಾಗುವ ರೋಗಗಳು ಆಗಂತುಗಳು. ಇವುಗಳಲ್ಲಿ ನಿಜಗಳಲ್ಲಿಯಂತೆ ದೋಷವಿಕೃತಿಯು ಮುಂಚೆ ಆಗಿರುವದಿಲ್ಲ. ಶಸ್ತ್ರಾದಿಗಳಿಂದ ಗಾಯವಾಗಿ ನೋವು ಉಂಟಾಗಿ ಹಿಂದಿನಿಂದ ದೋಷಗಳ ವಿಕೃತಿಗೆ ಆರಂಭವಾಗುತ್ತದೆ. (೨೦)

**ತೇಷಾಂ ಕಾಯಮನೋಭೇದಾದಧಿಷ್ಠಾನಮಪಿ ದ್ವಿಧಾ ||**

ಅರ್ಥ:— ಆ ರೋಗಗಳಿರುವ ಸ್ಥಾನವೂ ಶರೀರ, ಮನಸ್ಸು ಎಂದು ಎರಡು ಪ್ರಕಾರದ್ದಿರುತ್ತದೆ. (೨೦||)

ಶರೀರ-ರೋಗಕ್ಕೆ ವಾತಾದಿ ದೋಷಗಳು ಕಾರಣವೆಂದು ಹೇಳಿದ್ದಾಗಿದೆ. ಈಗ ಮನೋರೋಗಕ್ಕೆ ಕಾರಣವನ್ನು ಹೇಳುತ್ತಾರೆ:—

**ರಜಸ್ತಮಶ್ಚ ಮನಸೋ ದ್ವೌ ಚ ದೋಷಾವುದಾಹೃತೌ || ೨೧ ||**

ಅರ್ಥ:— ರಜಸ್ಸು, ತಮಸ್ಸು ಎಂಬ ಎರಡು ಗುಣಗಳು ಮನದ ದೋಷಗಳೆಂದು ಹೇಳಲ್ಪಡುತ್ತವೆ.

ಟಿಪ್ಪಣೀ:— ಪದಾರ್ಥಚಂದ್ರಿಕಾಕಾರರು "ಚ" ಶಬ್ದದಿಂದ ವಾತ-ಪಿತ್ತ-ಕಫಗಳನ್ನೂ ಸಂಗ್ರಹಿಸಿ, ಅವನ್ನೂ ಮನೋರೋಗಕ್ಕೆ ಕಾರಣವೆಂದು ಹೇಳುವರು. ಯಾಕೆಂದರೆ ಉನ್ಮಾದಾದಿ ಮಾನಸರೋಗಗಳಿಗೂ ವಾತಾದಿಗಳು ಕಾರಣವಾಗಿವೆ. (ಉನ್ಮಾದಾಃ ಷಟ್‌ಪೃಥಗ್ದೋಷನಿಚಯಾದಿವಿಷೋದ್ಭವಾಃ) (೨೧)

ರೋಗ ಜ್ಞಾನವನ್ನು ಮಾಡಿಕೊಳ್ಳುವ ಉಪಾಯಗಳನ್ನು ಕೊಡಲಾಗುತ್ತದೆ:—

**ದರ್ಶನಸ್ಪರ್ಶನಪ್ರಶ್ನೈಃ ಪರೀಕ್ಷೇತಾಥ ರೋಗಿಣಮ್ ||**

ಅರ್ಥ:— ದರ್ಶನ, ಸ್ಪರ್ಶ, ಪ್ರಶ್ನೆಗಳಿಂದ ರೋಗಿಯ ಪರೀಕ್ಷೆಯನ್ನು ಮಾಡಬೇಕು.

**ಟಿಪ್ಪಣೀ**— (ಶರೀರ, ಮಲ, ಮೂತ್ರ, ವ್ರಣಾದಿಗಳ) ಬಣ್ಣ, ಆಕಾರ, ಪ್ರಮಾಣಗಳನ್ನು ನೋಡಿ (ದರ್ಶನದಿಂದ ತಿಳಿಯಬೇಕು. (ಜ್ವರ, ಗುಲ್ಮ, ಕುರುವು ಮುಂತಾದವುಗಳ) ಉಷ್ಣತೆ, ಕಠಿಣತೆ, ಆಕಾರಗಳನ್ನು ಮುಟ್ಟಿ (ಸ್ಪರ್ಶನದಿಂದ ಕಂಡುಕೊಳ್ಳಬೇಕು. ಶೂಲ, ಅರುಚಿ, ಮುಂತಾದವುಗಳನ್ನು ಕೇಳಿ (ಪ್ರಶ್ನೆಯಿಂದ) ಗೊತ್ತು ಮಾಡಿಕೊಳ್ಳಬೇಕು. ["ಪಂಚೇಂದ್ರಿಯೈಃ ಪ್ರಶ್ನೇನ ಚೇತಿ" ಎಂದು ಸುಶ್ರುತಾಚಾರ್ಯರು ಪಂಚೇಂದ್ರಿಯಗಳಿಂದಲೂ ಅರಿಯಬೇಕೆಂದು ಹೇಳಿದ್ದಾರೆ.]

ಶ್ರವಣದಿಂದ—ಶ್ರವಣಯಂತ್ರ (Stethoscope) ದ್ವಾರದಿಂದ ಆಗಲೀ ಹಾಗೆಯೇ ಆಗಲೀ, ಕೆಮ್ಮಿನ ಮತ್ತು ಫುಪ್ಪುಸ-ರಕ್ತಾಶಯಗಳ ದನಿಯನ್ನು ತಿಳಿದುಕೊಳ್ಳಬೇಕು. ಘ್ರಾಣೇಂದ್ರಿಯದಿಂದ— ಶ್ವಾಸ-ಕಫಗಳ ಗಂಧವನ್ನೂ, ರಸನೇಂದ್ರಿಯದಿಂದ—ರಸವನ್ನೂ ಗುರುತಿಸಿಕೊಳ್ಳಬೇಕು. ಇಷ್ಟೆಲ್ಲವನ್ನು ತಿಳಿದುಕೊಂಡ ಮೇಲೆಯೇ ರೋಗ ಪರೀಕ್ಷೆಯನ್ನು ಮಾಡಬೇಕು. (೨೧॥)

ಇನ್ನು ರೋಗ-ವಿಶೇಷ ಜ್ಞಾನೋಪಾಯಗಳನ್ನು ಹೇಳುತ್ತಾರೆ:—

**ರೋಗಂ ನಿದಾನ-ಪ್ರಾಗ್ರೂಪ-ಲಕ್ಷಣೋಪಶಯಾಪ್ತಿಭಿಃ ॥೨೨॥**

ಅರ್ಥ:— (೧) ಮೂಲಕಾರಣ, (೨) ಪೂರ್ವರೂಪ, (೩) ಲಕ್ಷಣ, (೪) ಉಪಶಯ, (೫) ಸಂಪ್ರಾಪ್ತಿಗಳಿಂದ ರೋಗವನ್ನು ಪರೀಕ್ಷಿಸಬೇಕು.

**ಟಿಪ್ಪಣೀ**— ವೈದ್ಯ ಶಾಸ್ತ್ರದಲ್ಲಿ 'ನಿದಾನ' ಶಬ್ದವನ್ನು ಎರಡು ಅರ್ಥದಲ್ಲಿ ಉಪಯೋಗಿಸಿದ್ದಾರೆ. (೧) "ನಿರ್ದಿಶ್ಯತೇ ವ್ಯಾಧಿರನೇನೇತಿ ನಿದಾನಮ್"= ಇದರಿಂದ ಬೇನೆಯು ನಿಶ್ಚಯಿಸಲ್ಪಡುತ್ತದೆ. ಈ ಅರ್ಥದಂತೆ ಮೇಲಿನ ಐದೂ ನಿದಾನಗಳೇ. "ನಿದಾನಸ್ಥಾನ" ಮುಂತಾದಲ್ಲಿ ಇದೇ ಅರ್ಥದಿಂದ ಇದರ ಉಪಯೋಗವಾಗಿದೆ. ಎರಡನೇ ಅರ್ಥವು ಮೂಲಕಾರಣ. ಮೇಲೆ ಈ ಅರ್ಥದಲ್ಲಿಯೇ ಆ ಶಬ್ದವನ್ನು ಕೊಟ್ಟಿದೆ. (೨) 'ಪೂರ್ವರೂಪ'—ಬೇನೆ ಬರುವ ಮುಂಚೆ ಉಂಟಾಗಿದ್ದ ವಿಕಾರಗಳು ಅಥವಾ ಅಸ್ಪಷ್ಟವಾಗಿ ಕಾಣುವ ರೋಗ ಲಕ್ಷಣಗಳು. ಲಕ್ಷಣ= ರೋಗದ ಕಾಲದಲ್ಲಿಯ ಚಿನ್ಹಗಳು. 'ಉಪಶಯ'—ವಿಶಿಷ್ಟವಾದ ಆಹಾರ-ವಿಹಾರಗಳಿಂದ ರೋಗವು ಗುಣವಾಗುವಿಕೆ. 'ಸಂಪ್ರಾಪ್ತಿ'—ರೋಗವುಂಟಾಗುವ ರೀತಿಯು, (Pathology) ಇದರ ವಿಶೇಷವಾದ ವಿವರವನ್ನು ಮುಂದೆ "ನಿದಾನಸ್ಥಾನ"ದ ಆರಂಭದಲ್ಲಿಯ "ಸರ್ವರೋಗನಿದಾನಾಧ್ಯಾಯ"ದಲ್ಲಿ ಕೊಟ್ಟಿದೆ. (೨೨)

ಔಷಧವನ್ನು ಕೊಡಲಿಕ್ಕೆ ಅವಶ್ಯ ತಿಳಿಯಬೇಕಾದ ದೇಶ-ಕಾಲಗಳನ್ನು ಹೇಳುತ್ತಾರೆ:—

**ಭೂಮಿದೇಹಪ್ರಭೇದೇನ ದೇಶಮಾಹುರಿಹ ದ್ವಿಧಾ॥**

ಅರ್ಥ:— ಆಯುರ್ವೇದ ಶಾಸ್ತ್ರದಲ್ಲಿ ರೋಗಕ್ಕೆ ಆಧಾರವಾದ ಶರೀರವೂ ರೋಗಿಗೆ ಸ್ಥಾನವಾದ ಭೂಮಿಯೂ ದೇಶಗಳೆಂದೆನಿಸುವವು. (೨೨॥)

**ಜಾಂಗಲಂ ವಾತಭೂಯಿಷ್ಠಮನೂಪಂ ತು ಕಫೋಲ್ಬಣಮ್ ॥೨೩॥**
**ಸಾಧಾರಣಂ ಸಮಮಲಂ ತ್ರಿಧಾ ಭೂದೇಶಮಾದಿಶೇತ್ ॥**

ಅರ್ಥ:— ಜಾಂಗಲ ದೇಶದಲ್ಲಿ ವಾತವೂ, ಅನೂಪ ದೇಶದಲ್ಲಿ ಕಫವೂ ಹೆಚ್ಚಿರುತ್ತದೆ. ಆದರೆ ಸಾಧಾರಣ ದೇಶದಲ್ಲಿ ಎಲ್ಲ ದೋಷಗಳು ಸಮವಾಗಿರುತ್ತವೆ. ಈ ಪ್ರಕಾರ ಭೂದೇಶವು ೩ ವಿಧವಾದದ್ದು ಇರುತ್ತದೆ.

**ಟಿಪ್ಪಣಿ:—** ನೀರು–ಗಿಡಗಳು ಕಡಿಮೆಯಾಗಿರುವದರಿಂದ ಜಾಂಗಲವು ರುಕ್ಷ ದೇಶವು; ಆದ್ದರಿಂದಲೇ ವಾತ-ಪ್ರಚುರವಾದದ್ದು. ಅನೂಪದಲ್ಲಿ ಅವು ಹೆಚ್ಚಿರುವದರಿಂದಲೇ ಅದು ಕಫ-ಪ್ರಾಧಾನ್ಯವಿದ್ದದ್ದು. ಸಾಧಾರಣದಲ್ಲಿ ಅವು ಸರಿಯಾಗಿರುವದರಿಂದಲೇ ದೋಷಗಳೆಲ್ಲ ಸಮಪ್ರಮಾಣದಲ್ಲಿರುತ್ತವೆ. (೨೩॥)

**ಕ್ಷಣಾದಿರ್ವ್ಯಾಧ್ಯವಸ್ಥಾ ಚ ಕಾಲೋ ಭೇಷಜಯೋಗಕೃತ್ ॥ ೨೪ ॥**

ಅರ್ಥ:— ಕ್ಷಣ, ಹಗಲು, ರಾತ್ರಿ, ಮಾಸ, ವರ್ಷ ಮುಂತಾದವೂ, ಬೇನೆಯ ಆಮ, ಪಚ್ಯಮಾನ, ನವ, ಪುರಾಣ, ತೀಕ್ಷ್ಣ, ಮೃದು ಮುಂತಾದ ಅವಸ್ಥೆಗಳೂ ಕಾಲ ಶಬ್ದದಿಂದ ಕರೆಯಲ್ಪಡುತ್ತವೆ. ಇದು ( ಇದರ ಜ್ಞಾನವು ) ಔಷಧಕ್ಕೆ ಒಳ್ಳೇ ಪ್ರಯೋಜನಕಾರಿಯಾಗಿದೆ.

**ಟಿಪ್ಪಣಿ:—** 'ಅಷ್ಟಾಂಗ-ಸಂಗ್ರಹ'ದಲ್ಲಿ ಬೇನೆಯವನ ದೇಶ, ಅವನಿಗೆ ಹಿತಕರವಾಗುವ ಆಹಾರ, ಅವನು ತಿಳುವಾದವನೋ ದಪ್ಪನೋ ಬಲವಿಲ್ಲದವನೋ ಅಲ್ಪಾಗ್ನಿಯೋ ಮುಂತಾದ್ದನ್ನು ವಿಚಾರಿಸಿಯೇ ತೀರಬೇಕೆಂದು ಹೇಳಿದೆ. ಔಷಧಗಳಲ್ಲಿ ಕೆಲವನ್ನು ಬೇರೆ ಬೇರೆ ಋತುಗಳಲ್ಲಿಯೂ, ಕೆಲವನ್ನು ಹಗಲಲ್ಲಿಯೂ, ಕೆಲವನ್ನು ರಾತ್ರಿಯಲ್ಲಿಯೂ, ಕೆಲವನ್ನು ತ್ರೈಮಾಸಿಕವಾಗಿಯೂ, ಕೆಲವನ್ನು ರೋಗ-ರೋಗಿಗಳ ಅವಸ್ಥೆಯನ್ನು ನೋಡಿಕೊಂಡೂ ಕೊಡಬೇಕಾಗುವದು. ರೋಗವಿದ್ದಾಗ್ಗೆ ಕೆಲವನ್ನು, ಇಲ್ಲದಾಗ್ಗೆ ಕೆಲವನ್ನು, ಆಮಾವಸ್ಥೆಯಲ್ಲಿ ಅಥವಾ ಪಕ್ವಾವಸ್ಥೆಯಲ್ಲಿ

ಕೆಲಪನ್ನು ಕೊಡಬೇಕಾಗುವದು, ಆದ್ದರಿಂದಲೇ ಔಷಧವನ್ನು ಕೊಡತಕ್ಕವನಿಗೆ ಈ ದೇಶ-ಕಾಲಗಳ ಜ್ಞಾನವು ಚೆನ್ನಾಗಿರಲಿಕ್ಕೆಬೇಕು. (೨೪)

**ಶೋಧನಂ ಶಮನಂ ಚೇತಿ ಸಮಾಸಾದೌಷಧಂ ದ್ವಿಧಾ ||**

ಅರ್ಥಃ— ಶೋಧನ-ಶಮನವೆಂದು ಔಷಧವು ಸಂಕ್ಷೇಪವಾಗಿ ಎರಡು ಪ್ರಕಾರವಿದ್ದಿರುತ್ತದೆ.

**ಟಿಪ್ಪಣೀಃ—** ವಸ್ತುತಃ "ದ್ವಿವಿಧೋಪಕ್ರಮಣೀಯ"ವೆಂಬ ಅಧ್ಯಾಯದಲ್ಲಿ ಹೇಳಿದಂತೆ ಔಷಧವು ಬೃಂಹಣ, ಲಂಘನವೆಂದು ಎರಡು ಬಗೆಯಾದದ್ದು. ಚರಕ ದಲ್ಲಿ ಕೂಡ ( ಚರಕಚಿಕಿತ್ಸಾ. ೧ನೆಯ ಅಧ್ಯಾಯ ) "ಸ್ವಸ್ಥಸ್ಯೋರ್ಜಸ್ಕರಂ ಕಿಂಚಿತ್ ಕಿಂಚಿದಾರ್ತಸ್ಯ ರೋಗನುತ್" ಎಂದು ಇವೇ ಎರಡು ವಿಭಾಗಗಳನ್ನು ಹೇಳ ಲಾಗಿದೆ. ಆದರೆ ಇಲ್ಲಿ ಹೇಳಿದ ಶೋಧನ-ಶಮನಗಳು ("ಶೋಧನಂ ಶಮನಂ ಚೇತಿ ದ್ವಿಧಾ ತತ್ರಾಪಿ ಲಂಘನಂ" ಎಂಬಂತೆ) ಲಂಘನದ ಭಾಗಗಳಾಗಿರುತ್ತವೆ. ಅಂದ ಮೇಲೆ ಬೃಂಹಣವು ಲೋಪವಾದಂತಾಯಿತಲ್ಲ ? ಹೇಮಾದ್ರಿಯು ಇದಕ್ಕೆ, ಸಂಕ್ಷೇಪ ವಾಗಿ - ಬೃಂಹಣವು ಶಮನದಲ್ಲಿ ಅಂತರ್ಭಾವವಾಗಿದೆಯೆಂಬ ಸಮಾಧಾನವನ್ನು ಕೊಟ್ಟಿರುವನು. (೨೪||)

ಶಾರೀರ-ದೋಷಗಳಿಗೆ ಶೋಧನ-ಶಮನಗಳನ್ನು ಹೇಳುತ್ತಾರೆಃ—

**ಶರೀರಜಾನಾಂ ದೋಷಾಣಾಂ ಕ್ರಮೇಣ ಪರಮೌಷಧಮ್ ||೨೫||**
**ಬಸ್ತಿರ್ವಿರೇಕೋ ವಮನಂ ತಥಾ ತೈಲಂ ಘೃತಂ ಮಧು ||**

ಅರ್ಥಃ— ಶರೀರದಲ್ಲಿಯ (ರೋಗ ರೂಪವಾಗಿ ಪರಿಣಮಿಸಿದ ವಾತ, ಪಿತ್ತ, ಕಫ) ದೋಷಗಳಿಗೆ ಕ್ರಮವಾಗಿ ಬಸ್ತಿ, ವಿರೇಚನ, ವಾಂತಿ ಎಂಬಿವುಗಳೇ ಅತಿ ಮುಖ್ಯವಾದ ಶೋಧನ ಔಷಧಗಳು. ಮತ್ತು ಎಣ್ಣೆ, ತುಪ್ಪ, ಜೇನುತುಪ್ಪ ಎಂಬವೇ ಮುಖ್ಯ ಶಮನೌಷಧಗಳು.

**ಟಿಪ್ಪಣೀ—** ಹೇಮಾದ್ರಿಯು 'ಶರೀರಜಾನಾಂ ಪರಂ ಔಷಧಂ' ಎಂಬ ಶಬ್ದಗಳ ಸ್ವಾರಸ್ಯವನ್ನು ಕೆಳಗಿನಂತೆ ಹೇಳಿರುವನುಃ—

೧. ಬಸ್ತಿಯು ಎಲ್ಲ ದೊಷಗಳಿಗೆ ಶೋಧನವು—ವಾತಕ್ಕೆ ವಿಶೇಷವಾಗಿ,
ಎಲ್ಲ ಶೋಧನಗಳೂ ವಾತದ ಔಷಧಗಳು—ಬಸ್ತಿಯು ಹೆಚ್ಚಾಗಿ,
ಬಸ್ತಿಯು ಮನ-ಶರೀರಗಳ ಎಲ್ಲ ದೋಷಗಳಿಗೂ ಔಷಧವು —
ಶರೀರಜ ದೋಷಕ್ಕೆ ಅಧಿಕವಾಗಿ,

೨. ವಿರೇಚನವು ಎಲ್ಲ ದೋಷಗಳಿಗೆ ಶೋಧನವು—ಪಿತ್ತಕ್ಕೆ ಬಹಳವಾಗಿ, ಎಲ್ಲ ಶೋಧನಗಳೂ ಪಿತ್ತಕ್ಕೆ ಔಷಧಗಳು—ರೇಚನವು ಮುಖ್ಯವಾಗಿ, ರೇಚನವು ಮನ-ಕಾಯಗಳ ಎಲ್ಲ ದೋಷಗಳಿಗೂ ಔಷಧವು—ಕಾಯಜಗಳಿಗೆ ವಿಶಿಷ್ಟವಾಗಿ.

೩. ವಮನವು ಎಲ್ಲ ದೋಷಗಳಿಗೆ ಶೋಧನವು—ಕಫಕ್ಕೆ ಅತ್ಯವಶ್ಯವಾಗಿ, ಎಲ್ಲ ಶೋಧನಗಳೂ ಕಫದ ಔಷಧಗಳು—ವಮನವು ಪ್ರಾಮುಖ್ಯವಾಗಿ, ವಮನವು ಎಲ್ಲ ದೇಹ-ಮನಗಳ ದೋಷಗಳಿಗೂ ಔಷಧವು—ಶಾರೀರ ದೋಷಗಳಿಗೆ ಹೆಚ್ಚಾಗಿ.

ಇದರಂತೆ ಶಮನ ಔಷಧಗಳಲ್ಲಿಯೂ ಹೇಳಬೇಕು. (೨೫||)

ಇನ್ನು ಮಾನಸದೋಷಗಳ ಔಷಧವನ್ನು ಹೇಳುತ್ತಾರೆ:—

**ಧೀಧೈರ್ಯಾತ್ಮಾದಿವಿಜ್ಞಾನಂ ಮನೋದೋಷೌಷಧಂ ಪರಮ್ ||೨೬||**

ಅರ್ಥ:— ಬುದ್ಧಿ, ನಿಗ್ರಹ, ತನ್ನ ಮತ್ತು ದೇಶಗಳ ಕಾಲಗಳ ವಿಷಯಕವಾದ ನಿಜಜ್ಞಾನ ಎಂಬವು ಮನಸ್ಸಿನ ದೋಷ (ರಜ-ತಮ-ಗುಣ) ಗಳಿಗೆ ಮುಖ್ಯವಾದ ಔಷಧಗಳು.

**ಟಿಪ್ಪಣಿ:**— ಕಾಯಿಕ-ಮಾನಸಿಕ ದೋಷಗಳಿಗೆಲ್ಲ ಬುದ್ಧಿ ಧೈರ್ಯಾದಿಗಳು ಔಷಧರೂಪವಾಗಿದ್ದರೂ ಮಾನಸಿಕಗಳಿಗೆ ಹೆಚ್ಚಾಗಿವೆಯೆಂದೂ ಎಲ್ಲವೂ ಮಾನಸಿಕಗಳಿಗೆ ಔಷಧಗಳಾಗುತ್ತಿದ್ದರೂ ಬುದ್ಧಿ-ಧೈರ್ಯಾದಿಗಳು ಪ್ರಾಮುಖ್ಯವಾಗಿ ಹಾಗಾಗುತ್ತವೆ ಯೆಂದೂ ಹೇಮಾದ್ರಿಯು ಅಭಿಪ್ರಾಯಪಡುತ್ತಾನೆ. (೨೬)

ಚಿಕಿತ್ಸೆಯು ಸರಿಯಾಗಿ ಸಾಗಬೇಕಾದರೆ ಆವಶ್ಯವಾಗಿರುವ ನಾಲ್ಕು ಪಾದ (ಅಂಗ) ಗಳನ್ನು ಮುಂದೆ ಕೊಟ್ಟಿದೆ:—

**ಭಿಷಗ್‌ದ್ರವ್ಯಾಣ್ಯುಪಸ್ಥಾತಾ ರೋಗೀ ಪಾದಚತುಷ್ಟಯಮ್ ||**
**ಚಿಕಿತ್ಸಿತಸ್ಯ ನಿರ್ದಿಷ್ಟಂ ಪ್ರತ್ಯೇಕಂ ತಚ್ಚತುರ್ಗುಣಮ್ ||೨೭||**

ಅರ್ಥ:— ವೈದ್ಯ, ಔಷಧ, ಪರಿಚಾರಕ, ರೋಗಿ ಎಂಬುದಾಗಿ ಚಿಕಿತ್ಸೆಗೆ ೪ ಅಂಗಗಳು (ಪಾದಗಳು). ಈ ಪ್ರತಿಯೊಂದರಲ್ಲೂ ನಾಲ್ಕು ನಾಲ್ಕು ಗುಣಗಳಿರತಕ್ಕದ್ದೆಂದು ಹೇಳಲಾಗಿದೆ.

**ಟಿಪ್ಪಣಿ:**— ನಾಲ್ಕು ಗುಣಗಳಿಂದ ಕೂಡಿದ್ದರೆ ಮಾತ್ರ ಪ್ರತಿಯೊಂದ ಪಾದವು ಚಿಕಿತ್ಸೆಗೆ ಸರಿಯಾಗಿ ಅನುಕೂಲವಾಗುತ್ತದೆ; ಇಲ್ಲವಾದರೆ ಇಲ್ಲ. ಉಳಿ ಮೂರು ಪಾದಗಳು ಸರಿಯಾಗಿದ್ದೂ ಮೊದಲನೇ ಪಾದವಾದ ವೈದ್ಯನು ಗುಣವಂ ಸಲ್ಲದಿದ್ದರೆ ಏನೂ ಉಪಯೋಗವಾಗಲಾರದು. ಆದ್ದರಿಂದಲೇ ಮೊದಲನೇ ಪಾದವ ಮುಖ್ಯವು. ಆ ಕಾರಣವೇ ಚಿಕಿತ್ಸಾಂಗಗಳ ಗಣನೆಯಲ್ಲಿ ಅದಕ್ಕೆ ಮೊದಲನೆಯ ಸ್ಥಾನವನ್ನು ಕೊಟ್ಟಿದೆ. [೨೭]

ಇನ್ನು ಆ ನಾಲ್ಕು ಪಾದಗಳಲ್ಲಿರಬೇಕಾದ ಗುಣಗಳು ಯಾವವೆಂದರೆ:—

**ದಕ್ಷಸ್ತೀರ್ಥಾತ್ತಶಾಸ್ತ್ರಾರ್ಥೋ ದೃಷ್ಟಕರ್ಮಾ ಶುಚಿರ್ಭಿಷಕ್ ॥**

ಅರ್ಥ:— ವೈದ್ಯನು (೧) ಕರ್ತವ್ಯತತ್ಪರನೂ, ಚತುರನೂ, (೨) ಯೋಗ್ಯ ಗುರುಗಳಿಂದ ಸರಿಯಾದ ರೀತಿಯಲ್ಲಿ ಶಾಸ್ತ್ರವನ್ನು ಪಡೆದುಕೊಂಡವನೂ, (೩) ಗುರುಗಳಲ್ಲಿ ಶಾಸ್ತ್ರ-ಪ್ರಯೋಗಗಳ ಅನುಭವವನ್ನು ಸ್ವತಃ ಎಷ್ಟೋ ಸಲ ಕಂಡುಕೊಂಡವನೂ (೪) ಅಂತರ್ಬಾಹ್ಯ ಪಾವಿತ್ರ್ಯವುಳ್ಳವನೂ (ಧಾರ್ಮಿಕನು-ದುಡ್ಡಿನಾಶೆ ಮುಂತಾದುದರಿಂದ ಕಾಯಿಕ-ವಾಚಿಕ-ಮಾನಸಿಕ ಪಾಪಗಳಾವುದನ್ನೂ ಮಾಡಲೆಳಸದವನು) ಆಗಿರಬೇಕು.

**ಟಿಪ್ಪಣಿ:**— ಇದಕ್ಕೂ ಹೆಚ್ಚು ವಿಷಯವನ್ನು 'ಅಷ್ಟಾಂಗ ಸಂಗ್ರಹ'ದಲ್ಲಿ ಮುಂದಿನಂತೆ ಕೊಟ್ಟಿದೆ:— “ದುಡ್ಡಿಗೆ ಬಾಯ್ಬಿಡದವನೂ ವಿನಯಶಾಲಿಯೂ ಸಮಾಧಾನಿಯೂ ದಯಾಳುವೂ ಬಹುಶ್ರುತನೂ ಆದವನೇ ಒಳ್ಳೇ ವೈದ್ಯನು. ಆತನು ರೋಗಿಗಳ ಕರೆಗೆ ಕೂಡಲೇ ಕೂಗನ್ನು ಕೊಟ್ಟು ಆಗಲೇ ಬರುವವನಿರಬೇಕು. ರೋಗಿಯ ಕಡೆಗಲ್ಲದೆ ಬೇರೆಯದರ ಕಡೆಗೆ ಅವನ ಲಕ್ಷವು ಹೋಗಬಾರದು. ಸ್ತ್ರೀಯರ ವಿಷಯವಾಗಿ ಹೆಚ್ಚು ಪವಿತ್ರಮನವನ್ನಿಡುವದು ತನ್ನ ಕರ್ತವ್ಯವೆಂದು ಅವನ ಮನದಲ್ಲಿ ಕಟಿಯುತ್ತಿರಬೇಕು. ಗುಟ್ಟಿನ ಮಾತುಗಳನ್ನು ಬಯಲಿಗೆಳೆಯುವ ಸ್ವಭಾವವು ಅವನಲ್ಲಿರಕೂಡದು. ಬುದ್ಧಿಯು ಕಣ್ಣಿದ್ದಂತೆ, ಶಾಸ್ತ್ರವು ಪ್ರಕಾಶವಿದ್ದಂತೆ, ಇವೆರಡೂ ಒಂದನ್ನೊಂದು ಸಹಕರಿಸುತ್ತಿರುವವನಿಗೇ ರೋಗಜ್ಞಾನವು ನಿಚ್ಚಳವಾಗುವದು. ಆದ್ದರಿಂದಲೇ ಅವನು ಶಾಸ್ತ್ರದ ಕಡೆಗೆ ಹೆಚ್ಚು ಗಮನವನ್ನು ಕೊಟ್ಟಿರಬೇಕು. ಪ್ರಯೋಗಗಳ ಅನುಭವವಿಲ್ಲದವನು ಕಾಳಗವನ್ನು ಕಂಡು ಕಾಲ್ದೆಗೆಯುವ ಪುಕ್ಕನಂತೆ ರೋಗಿಯನ್ನು ನೋಡಿದೊಡನೆಯೇ ಹಿಂದಕ್ಕೇ ಸರಿಯಬೇಕಾಗುತ್ತದೆ. ಆದರೆ ಶಾಸ್ತ್ರದ ಜ್ಞಾನವಿಲ್ಲದೆ ಬರಿ ಪ್ರಯೋಗಜ್ಞನೆಂಬ ಹೆಮ್ಮೆಯಿಂದ ಔಷಧಯೋಜನೆಗೆ ಕೈ ಹಾಕಿದರೆ ರೋಗಿಯ ಧನ_ಪ್ರಾಣಗಳ ಹಾನಿ, ತನಗೆ ಇಹದಲ್ಲಿ

ರಾಜದಂಡ, ಪರಪಲ್ಲಿ ಮಹಾಪಾಪ ಘಟನೆ! ಆದ್ದರಿಂದ ಶಾಸ್ತ್ರ ಪ್ರಯೋಗಗಳ ಜ್ಞಾನವೆರಡೂ ಅವನಲ್ಲಿ ಯೋಗ್ಯವಾಗಿ ಒಂದುಗೂಡಿರಬೇಕು. (೨೭||)

ಔಷಧದ ನಾಲ್ಕು ಗುಣಗಳನ್ನು ಹೇಳುತ್ತಾರೆ:—

**ಬಹುಕಲ್ಪಂ ಬಹುಗುಣಂ ಸಂಪನ್ನಂ ಯೋಗ್ಯಮೌಷಧಮ್ ||೨೮||**

ಅರ್ಥ:— ಔಷಧವು (೧) ಸ್ವರಸ-ಕಷಾಯ ಮುಂತಾಗಿ ಬಹು ಬಗೆಯಿಂದ ಉಪಯುಕ್ತವಾದದ್ದೂ, (೨) ಅನೇಕ ರೋಗಗಳಲ್ಲಿ ಯೋಜಿಸಲು ತಕ್ಕಂತಹದೂ, (೩) ತುಂಬಾ ಬೆಳೆದು ರಸಾದಿಗಳಿಂದ ಕೂಡಿದುದೂ, (೪) ಆಯಾಯ ದೇಶ-ಕಾಲಗಳಿಗೆ ಅನುಗುಣವಾದಂತಹದೂ ಆಗಿರಬೇಕು. (೨೮)

ರೋಗಿಯ ಶುಶ್ರೂಷೆಗಿದ್ದ ಪರಿಚಾರಕನ ಗುಣಗಳನ್ನು ಹೇಳುತ್ತಾರೆ:—

**ಅನುರಕ್ತಃ ಶುಚಿರ್ದಕ್ಷೋ ಬುದ್ಧಿಮಾನ್ ಪರಿಚಾರಕಃ ||**

ಅರ್ಥ:— ಪರಿಚಾರಕನು ರೋಗಿಯಲ್ಲಿ ಅನುರಾಗವುಳ್ಳವನೂ ಸದಾಚಾರಿಯೂ (ಧಾರ್ಮಿಕನೂ) ಚತುರನೂ ಬುದ್ಧಿವಂತನೂ ಆಗಿರಬೇಕು. (೨೮||)

**ಆಢ್ಯೋ ರೋಗೀ ಭಿಷಗ್ವಶ್ಯೋ ಜ್ಞಾಪಕಃ ಸತ್ವವಾನಪಿ ||೨೯||**

ಅರ್ಥ:— ರೋಗಿಯು ಧನಾಢ್ಯನೂ ವಿಧೇಯನೂ ತನ್ನ ವಿಕಾರಗಳನ್ನು ನೆನಪಿನಿಂದ ತಿಳಿಸಬಲ್ಲಾತನೂ ಧೈರ್ಯಶಾಲಿಯೂ ಆಗಿರಬೇಕು. (೨೯)

ಸುಖಸಾಧ್ಯ, ಕಷ್ಟಸಾಧ್ಯ, ಅಸಾಧ್ಯ ಎಂಬ ರೋಗಗಳ ಭೇದಗಳನ್ನು ಹೇಳುತ್ತಾರೆ:—

**ಸರ್ವೌಷಧಕ್ಷಮೇ ದೇಹೇ ಯೂನಃ ಪುಂಸೋ ಜಿತಾತ್ಮನಃ ||**
**ಅಮರ್ಮಗೋಽಲ್ಪಹೇತ್ವಗ್ರರೂಪರೂಪೋಽನುಪದ್ರವಃ ||೩೦||**

ಅತುಲ್ಯದೂಷ್ಯದೇಶರ್ತುಪ್ರಕೃತಿಃ ಪಾದಸಂಪದಿ ||
ಗ್ರಹೇಷ್ವನುಗುಣೇಷ್ವೇಕದೋಷಮಾರ್ಗೋ ನವಃ ಸುಖಃ ||೩೧||

ಅರ್ಥಃ— ಎಲ್ಲ ಬಗೆಯ ಔಷಧವನ್ನೂ ಸಹಿಸಲಾಗುವ ದೇಹದಲ್ಲಿರುವ, ಹರೆಯದವನ, ಗಂಡಸಿನ, ಜಿತೇಂದ್ರಿಯನ, ಹೊಸದಾಗಿ ಬಂದುದೂ, ಸರಲದಾರಿಯಲ್ಲಿದ್ದುದೂ, ಒಂದೇ ದೋಷದಿಂದುಂಟಾದುದೂ, ಸಕಲ ಗ್ರಹ ಬಲವುಳ್ಳದುದೂ, ಪಾದ-ಚತುಷ್ಟಗಳೂ ಸರಿಯಾಗಿದ್ದಂತಹದೂ, ದೂಷ್ಯ ದೇಶ ಋತು ಪ್ರಕೃತಿಗಳು ಭಿನ್ನವಾಗಿದ್ದುದೂ, ನಿರುಪದ್ರವಿಯಾದುದೂ, ನಿದಾನ-ಪೂರ್ವರೂಪ-ಲಕ್ಷಣಗಳು ತುಸುವಾಗಿದ್ದುದೂ, ಮರ್ಮಸ್ಥಾನದಲ್ಲಿರದುದೂ ಆಗಿದ್ದರೆ ಬೇನೆಯು (ಚಿಕಿತ್ಸೆಗೆ) ಸುಖಸಾಧ್ಯವಾದದ್ದು.

**ಟಿಪ್ಪಣಿ:—** ಶರೀರವು ಕೋಮಲವಾಗಿದ್ದರೆ ತೀಕ್ಷ್ಣ ಔಷಧಗಳನ್ನವನಿಗೆ ಕೊಡಲಿಕ್ಕೆ ಆಗದು. ಕೂಸುಗಳಿಗೂ ಮುದುಕರಿಗೂ ಬಲವು ಕಡಿಮೆಯಿರುವದು. ಹೆಂಗಸರು ಸ್ವಾಭಾವಿಕವಾಗಿಯೇ ಕೋಮಲರಾಗಿರುತ್ತಾರೆ. ವಿಷಯಾಸಕ್ತನ ಮನವು ದುರ್ಬಲವಾಗಿರುತ್ತದೆ. ಮರ್ಮಸ್ಥಾನದಲ್ಲಿ ರೋಗವಿದ್ದುದಾದರೆ ಚಿಕಿತ್ಸೆಗೆ ಅದು ಕಠಿಣವೇ ಸರಿ. ನಿದಾನಾದಿರೂಪ-ಲಕ್ಷಣಗಳು ಹೆಚ್ಚಾಗಿದ್ದರೆ, ರೋಗವು ಉಪದ್ರವಿಯಾಗಿದ್ದರೆ ಅದು ಬಲಿತುದುದೇ ಆಗಿರುತ್ತದೆ. ದೂಷ್ಯ ದೇಶ ಋತು ಪ್ರಕೃತಿಗಳು ಸಮವಾಗಿದ್ದರೆ, ಚಿಕಿತ್ಸೆಗೆ ಬಲು ಜಡಹೋಗುತ್ತದೆ. ಪ್ರತಿಕೂಲ ಗ್ರಹಗಳು ಚಿಕಿತ್ಸೆಗೆ ವಿರೋಧಿಗಳು. ೨-೩ ದೋಷಗಳುಳ್ಳದ್ದೂ, ಅಂತರ್-ಮಧ್ಯ-ಬಹಿರ್ ಮಾರ್ಗಗಳಲ್ಲೆಲ್ಲಕಡೆಗೂ ಹಬ್ಬಿದುದೂ ಆದ ಬೇನೆಯು ಬಲು ಬೆಳೆದದ್ದಿರುವದು. ಬಹುಕಾಲ ದೇಹದಲ್ಲಿ ಮನೆಮಾಡಿರುವ ಬೇನೆಯು ಇಂದ್ರಿಯವನ್ನೆಲ್ಲ ಸಡಲಿಸಿ ಬಿಟ್ಟಿರುತ್ತದೆ. ಇವೆಲ್ಲ ಕಾರಣಗಳ ಮೂಲಕ ಅಂತಹ ಬೇನೆಯು ಸುಲಭಸಾಧ್ಯವಲ್ಲವೆಂಬುದು ನಿಶ್ಚಯ. ಹೇಮಾದ್ರಿಯು ಸುಖಸಾಧ್ಯ, ಕಷ್ಟಸಾಧ್ಯ, ಅಸಾಧ್ಯ ಬೇನೆಗಳ ಪಟ್ಟಿಯನ್ನೇ ಕೊಟ್ಟಿರುವನು. ಅದು ಕೆಳಗಿನಂತೆ ಇದೆ.

**೧. ಸುಖಸಾಧ್ಯಃ—** ಎಲ್ಲ ಔಷಧಗಳನ್ನೂ ತಡೆಯಬಲ್ಲ ದೇಹದಲ್ಲಿ ಹುಟ್ಟಿದ್ದು

**ಕಷ್ಟಸಾಧ್ಯ:—** ಕೆಲವು ಮಾತ್ರ ಔಷಧಗಳನ್ನು ತಡೆಯುವ ದೇಹದಲ್ಲಿದ್ದದ್ದು.

**ಅಸಾಧ್ಯ:—** ಯಾವ ಔಷಧವನ್ನೂ ತಡೆಯಲಾರದ ದೇಹದಲ್ಲಿದ್ದದ್ದು.

**೨. ಸುಖಸಾಧ್ಯಃ—** ತರುಣ ದೇಹದಲ್ಲಿ ಹುಟ್ಟಿದ್ದು.

ಕಷ್ಟಸಾಧ್ಯ:— ಬಾಲ ವೃದ್ಧ ದೇಹದಲ್ಲಿ ಹುಟ್ಟಿದ್ದು.

ಅಸಾಧ್ಯ:— ಅತಿ-ಬಾಲ ಅತಿ-ವೃದ್ಧರದು.

೩. ಸುಖಸಾಧ್ಯ:— ಗಂಡಸಿಗೆ ಬಂದದ್ದು.

ಕಷ್ಟಸಾಧ್ಯ:— ಸ್ತ್ರೀ ನಪುಂಸಕರದು.

ಅಸಾಧ್ಯ:— ಬಸಿರು_ಬಾಣಂತಿಗಳದು.

೪. ಸುಖಸಾಧ್ಯ:— ಜಿತೇಂದ್ರಿಯನದು.

ಕಷ್ಟಸಾಧ್ಯ:— ವಿಷಯಾಸಕ್ತನದು.

ಅಸಾಧ್ಯ:— ದುಷ್ಟವಿಷಯಾಸಕ್ತನದು.

೫. ಸುಖಸಾಧ್ಯ:— ಮರ್ಮಸ್ಥಾನದಲ್ಲಿರದ್ದು.

ಕಷ್ಟಸಾಧ್ಯ:— ಮರ್ಮಸ್ಥಾನದಲ್ಲಿದ್ದದ್ದು.

ಅಸಾಧ್ಯ:— ಪ್ರಾಣಹರಮರ್ಮಸ್ಥಾನದಲ್ಲಿದ್ದದ್ದು.

೬. ಸುಖಸಾಧ್ಯ:— ಅಲ್ಪಕಾರಣದಿಂದ ಹುಟ್ಟಿದ್ದು

ಕಷ್ಟಸಾಧ್ಯ:— ಬಹುಕಾರಣದಿಂದ ಬಂದದ್ದು.

ಅಸಾಧ್ಯ:— ಹೇಳಿದೆಲ್ಲ ಕಾರಣದಿಂದ ಬಂದದ್ದು.

೭. ಸುಖಸಾಧ್ಯ:— ಅಲ್ಪಸಂಪ್ರಾಪ್ತಿಯುಳ್ಳದ್ದು.

ಕಷ್ಟಸಾಧ್ಯ:— ಬಹುಸಂಪ್ರಾಪ್ತಿಯುಳ್ಳದ್ದು.

ಅಸಾಧ್ಯ:— ಎಲ್ಲ ಸಂಪ್ರಾಪ್ತಿಯುಳ್ಳದ್ದು.

೮. ಸುಖಸಾಧ್ಯ:— ತುಸು ಪೂರ್ವರೂಪವುಳ್ಳದ್ದು.

ಕಷ್ಟಸಾಧ್ಯ:— ಬಹು ಪೂರ್ವರೂಪವುಳ್ಳದ್ದು.

ಅಸಾಧ್ಯ:— ಎಲ್ಲ ಪೂರ್ವರೂಪವುಳ್ಳದ್ದು.

೯. ಸುಖಸಾಧ್ಯ:— ಸ್ವಲ್ಪ ಲಕ್ಷಣವುಳ್ಳದ್ದು.

ಕಷ್ಟಸಾಧ್ಯ:— ಬಹಳ ಲಕ್ಷಣಗಳುಳ್ಳದ್ದು.

ಅಸಾಧ್ಯ:— ಎಲ್ಲ ಲಕ್ಷಣಗಳುಳ್ಳದ್ದು.

೧೦. ಸುಖಸಾಧ್ಯ:— ನಿರುಪದ್ರವಿಯಾದದ್ದು.

ಕಷ್ಟಸಾಧ್ಯ:— ಸ್ವಲ್ಪ ಉಪದ್ರವವುಳ್ಳದ್ದು.

ಅಸಾಧ್ಯ:— ಎಲ್ಲ ಉಪದ್ರವಗಳುಳ್ಳದ್ದು.

೧೧. ಸುಖಸಾಧ್ಯ:— ಉತ್ಪಾದಕ ದೋಷದ ವಿಪರೀತ ದೂಷ್ಯವಿದ್ದದ್ದು.
ಉದಾ:— ರಸಗತವಾದ ಪಿತ್ತಜರೋಗ.

ಕಷ್ಟಸಾಧ್ಯ:— ಉತ್ಪಾದಕ ದೋಷಕ್ಕೆ ಸಮವಾದ ದೂಷ್ಯವಿದ್ದದ್ದು.
ಉದಾ:— ರಕ್ತಗತವಾದ ಪಿತ್ತಜರೋಗ

ಅಸಾಧ್ಯ:— ದೋಷಸಮವಾದ ಅನೇಕ ದೂಷ್ಯಗಳಿದ್ದದ್ದು.
ಉದಾ:— ರಕ್ತ-ಸ್ವೇದಗತ ಪಿತ್ತಜರೋಗ.

೧೨. ಸುಖಸಾಧ್ಯ:— ವಿಪರೀತ ದೇಶದಲ್ಲಿನದು. ಉದಾ:— ಜಾಂಗಲದಲ್ಲಿಯ ಕಫ.

ಕಷ್ಟಸಾಧ್ಯ:— ಸಮದೇಶದಲ್ಲಿ ಬಂದದ್ದು. ಉದಾ:-ಅನೂಪದೇಶದಲ್ಲಿಯ ಕಫ

ಅಸಾಧ್ಯ:— ಸಮದೇಶದಲ್ಲಿ ಜನ್ಮವಾದ ರೋಗಿಯದು.
ಉದಾ:— ಅನೂಪದೇಶಜನ ಕಫರೋಗವು.

೧೩. ಸುಖಸಾಧ್ಯ:— ವಿಪರೀತ ಋತುವಿದ್ದಾಗಿನದು.
ಉದಾ:— ಶರದೃತುವಿನಲ್ಲಿ ವಾತವು.

ಕಷ್ಟಸಾಧ್ಯ:— ಸಮಋತುವಾಗಿದ್ದಾಗಿನದು.
ಉದಾ:— ಗ್ರೀಷ್ಮದಲ್ಲಿಯ ವಾತರೋಗವು.

ಅಸಾಧ್ಯ: - ಸಮಪ್ರಕೋಪ ಋತುವಿದ್ದಾಗಿನದು.
ಉದಾ:— ವರ್ಷಾಋತುವಿನಲ್ಲಿಯ ವಾತರೋಗವು.

೧೪. ಸುಖಸಾಧ್ಯ:— ವಿಪರೀತ ಪ್ರಕೃತಿಯವನದು.
ಉದಾ:— ಕಫ ಪ್ರಕೃತಿಯವನ ಪಿತ್ತವು.

ಕಷ್ಟಸಾಧ್ಯ:— ಸಮಪ್ರಕೃತಿಯವನದು.
ಉದಾ:— ಪಿತ್ತ ಪ್ರಕೃತಿಯವನ ಪಿತ್ತರೋಗವು

ಅಸಾಧ್ಯ:— ಸಮನಿಂದ್ಯ ಪ್ರಕೃತಿಯವನದು.
ಉದಾ:— ವಾತ_ಪಿತ್ತ ಪ್ರಕೃತಿಯವನ ಪಿತ್ತರೋಗವು.

೧೫. ಸುಖಸಾಧ್ಯ:— ನಾಲ್ಕೂ ಪಾದಗಳು ಸರಿಯಿದ್ದದ್ದು.

ಕಷ್ಟಸಾಧ್ಯ:— ಕೆಲವು ಪಾದಗಳು ವಿಕೃತವಿದ್ದದ್ದು.

ಅಸಾಧ್ಯ:— ಎಲ್ಲ ಪಾದಗಳೂ ವಿಕೃತವಾದದ್ದು.

೧೬. ಸುಖಸಾಧ್ಯ:— ಸಕಲ ಗ್ರಹಾನುಕೂಲ್ಯವುಳ್ಳದ್ದು.

ಕಷ್ಟಸಾಧ್ಯ:— ಕೆಲವು ಗ್ರಹಗಳ ಅನುಕೂಲ್ಯವುಳ್ಳದ್ದು.

ಅಸಾಧ್ಯ:— ಸಕಲ ಗ್ರಹಗಳು ಪ್ರತಿಕೂಲವುಳ್ಳದ್ದು.

೧೭. ಸುಖಸಾಧ್ಯ:— ಒಂದೇ ದೋಷದಿಂದುಂಟಾದದ್ದು.

ಕಷ್ಟಸಾಧ್ಯ:— ಎರಡು ದೋಷಗಳಿಂದುಂಟಾದದ್ದು.

ಅಸಾಧ್ಯ:— ಎಲ್ಲ ದೋಷಗಳಿಂದುಂಟಾದದ್ದು.

೧೮. ಸುಖಸಾಧ್ಯ:— ಒಂದೇ ರೋಗಮಾರ್ಗದಲ್ಲಿದ್ದುದು.

ಕಷ್ಟಸಾಧ್ಯ:— ಎರಡು ರೋಗಮಾರ್ಗದಲ್ಲಿದ್ದುದು.

ಅಸಾಧ್ಯ:— ಎಲ್ಲ ರೋಗಮಾರ್ಗದಲ್ಲಿದ್ದುದು.

೧೯. ಸುಖಸಾಧ್ಯ:— ವರ್ಷದೊಳಗಿನದು.

ಕಷ್ಟಸಾಧ್ಯ:— ವರ್ಷ ಮೀರಿದ್ದು.

ಅಸಾಧ್ಯ:— ಬಹಳ ವರ್ಷದ್ದು. [೩೧]

**ಶಸ್ತ್ರಾದಿಸಾಧನಃ ಕೃಚ್ಛ್ರಃ ಸಂಕರೇ ಚ ತತೋ ಗದಃ ||**

ಅರ್ಥ:— ಶಸ್ತ್ರ, ಕ್ಷಾರ, ಅಗ್ನಿ ಕರ್ಮ ಮುಂತಾದವುಗಳಿಂದ ಸಾಧ್ಯ ರೋಗಗಳೂ, ಸುಖಸಾಧ್ಯ ಲಕ್ಷಣಗಳೊಡನೆ ಇತರ ಲಕ್ಷಣಗಳೂ ಕೂಡಿದ್ದರೆ ಆ ರೋಗಗಳೂ ಕಷ್ಟಸಾಧ್ಯಗಳು.

ಟಿಪ್ಪಣಿ:— ರೋಗಿಯು ತರುಣನಿದ್ದು ಹೆಂಗುಸಾಗಿದ್ದರೆ, ಅಥವಾ ರೋಗವು ಮರ್ಮದಲ್ಲಿ ಆಗಿದ್ದರೆ–ಹೀಗೆ ಸಂಕರವಾದರೆ ಕಷ್ಟಸಾಧ್ಯ. ಇದರಲ್ಲಿಯೂ ಅಲ್ಪ ವಿಪರೀತ ಲಕ್ಷಣಗಳು ಕೂಡಿದ್ದರೆ ಕಷ್ಟವು, ಹೆಚ್ಚು ವಿಪರೀತ ಲಕ್ಷಣಗಳು ಕೂಡಿದ್ದರೆ ಕಷ್ಟತರವು, ಬಹಳೇ ವಿಪರೀತ ಲಕ್ಷಣಗಳು ಕೂಡಿದ್ದರೆ ಕಷ್ಟತಮವು. (೩೦॥)

**ಶೇಷತ್ವಾದಾಯುಷೋ ಯಾಪ್ಯಃ ಪಥ್ಯಾಭ್ಯಾಸಾದ್ವಿಪರ್ಯಯೇ ॥೩೧॥**

ಅರ್ಥ:— ಸಾಧ್ಯವಿಪರೀತ ಲಕ್ಷಣಗಳಿದ್ದರೂ ಇನ್ನೂ ಆಯುರ್ಮರ್ಯಾದೆಯಿರುವದರಿಂದ (ವಿಶಿಷ್ಟವಾದ ರೋಗವು) ಹಿತವಾದ ಆಹಾರ ವಿಹಾರಗಳ ಮೂಲಕ ತನ್ನ ತಲೆಯನ್ನೆತ್ತುವದಿಲ್ಲ. ಇಂತಹ ರೋಗಕ್ಕೆ "ಯಾಪ್ಯ"ವೆಂದು ಹೆಸರು. (೩೨)

**ಅನುಪಕ್ರಮ ಏವ ಸ್ಯಾತ್ ಸ್ಥಿತೋಽತ್ಯಂತವಿಪರ್ಯಯೇ ॥**
**ಔತ್ಸುಕ್ಯಮೋಹಾರತಿಕೃದ್ದೃಷ್ಟರಿಷ್ಟೋಽಕ್ಷನಾಶನಃ ॥೩೩॥**

ಅರ್ಥ:— ಸಾಧ್ಯದ ಅತ್ಯಂತ ವಿಪರೀತ ಲಕ್ಷಣಗಳಿದ್ದು, ವಿಷಯಾಸಕ್ತಿ, ಮೋಹ, ಸತತ ದುಃಖ (ಚಡಪಡಿಸುತ್ತಿರೋಣ), ಇಂದ್ರಿಯಗಳ ನಾಶಮಾಡುವ ರಿಷ್ಟ (ಮರಣದ) ಲಕ್ಷಣಗಳುಳ್ಳ ರೋಗವು ಅಸಾಧ್ಯವಾದದ್ದೆಂದು ತಿಳಿದು ಅದರ ಚಿಕಿತ್ಸೆಗೆ ಕೈಹಾಕಲೇಬಾರದು.

ಟಿಪ್ಪಣಿ:— "ಯಾವತ್ಕಂಠಗತಾಃ ಪ್ರಾಣಾಸ್ತಾವತ್ಕಾರ್ಯಾ ಪ್ರತಿಕ್ರಿಯಾ। ಕದಾಚಿದ್ದೈವಯೋಗೇನ ದೃಷ್ಟರಿಷ್ಟೋಽಪಿ ಜೀವತಿ॥" ಹೀಗೆ ಅಸಾಧ್ಯವಿದ್ದರೂ ಮನುಷ್ಯನ ಕಡೆಯ ಉಸುರಿನ ತನಕ ಔಷಧವು ನಡೆದಿರಬೇಕೆಂಬ ವಿಧಾನವಿರಲು ಇಲ್ಲಿ ಔಷಧ ಕೊಡಬಾರದೆಂದು ಹೇಳುವ ಕಾರಣವೇನೆಂದು ಶಂಕಿಸಬಹುದು. ಉತ್ತರ:— ವೈದ್ಯನಿಗೆ ಅಪಕೀರ್ತಿ ಬಂದು ಅವನ ಹೆಸರು ಕೆಡಬಾರದೆಂಬ ದೃಷ್ಟಿಯಿಂದ ಹೀಗೆ ಹೇಳಿದ್ದು. ಆದರೆ ರೋಗಿಯ ಮನೆಯವರಿಗೆ ರೋಗದ ತೀವ್ರತೆಯನ್ನು ತಿಳಿಸಿ ಆಮೇಲೆ ಕಡೆತನಕ ಚಿಕಿತ್ಸೆಮಾಡುವಲ್ಲಿ ಯಾರಿಗೂ ಬಾಧಕವಿಲ್ಲ. (೩೪)

ತ್ಯಜೇದಾರ್ತಂ ಭಿಷಗ್ಭೂಪೈರ್ದ್ವಿಷ್ಟಂ ತೇಷಾಂ ದ್ವಿಷಂ ದ್ವಿಷಮ್ ||
ಹೀನೋಪಕರಣಂ ವ್ಯಗ್ರಮವಿಧೇಯಂ ಗತಾಯುಷಮ್ ||೩೪||
ಚಂಡಂ ಶೋಕಾತುರಂ ಭೀರುಂ ಕೃತಘ್ನಂ ವೈದ್ಯಮಾನಿನಮ್ ||

ಅರ್ಥ:— ವೈದ್ಯ ಮತ್ತು ರಾಜರ ದ್ವೇಷಕ್ಕೆ ಒಳಗಾದವನನ್ನೂ, ವೈದ್ಯ-ರಾಜರನ್ನು ದ್ವೇಷಿಸುವಂತಹನನ್ನೂ, ತನ್ನನ್ನು ದ್ವೇಷಿಸುವಾತನನ್ನೂ, ಔಷಧದ ಸಲಕರಣೆಗಳಿಲ್ಲದವನನ್ನೂ, ತನ್ನ ಶರೀರದ ಕಡೆಗೆ ಲಕ್ಷ್ಯಕೊಡದೆ ಬೇರೆ ಕಡೆಗೆ ವ್ಯಗ್ರನಿರುವವನನ್ನೂ, ಹೇಳಿದ್ದನ್ನು ಕೇಳದವನನ್ನೂ, ಸಾಯಲಿಕ್ಕಾದವನನ್ನೂ, ಸಿಟ್ಟನವನನ್ನೂ, ಇಷ್ಟವಿಯೋಗ ಮುಂತಾದವುಗಳಿಂದ ದುಃಖಿತನನ್ನೂ, ಅಂಜುಬುರುಕನನ್ನೂ, ಕೃತಘ್ನನನ್ನೂ, ತಾನೂ ವೈದ್ಯನೆಂಬ ತಪ್ಪು ತಿಳುವಳಿಕೆಯುಳ್ಳವನನ್ನೂ, ವೈದ್ಯನು ಎಂದಿಗೂ ಚಿಕಿತ್ಸೆಗೆ ಹಿಡಿಯಬಾರದು.

**ಟಿಪ್ಪಣಿ:—** "ಭಿಷಗ್ಭೂಪೈಃ" ಎಂಬುದು ಸಮಾಸಪದವೆಂದಿಟ್ಟುಕೊಂಡು ಎಲ್ಲ ಟಿಪ್ಪಣಿಕಾರರು ಅರ್ಥವನ್ನು ಕೊಟ್ಟಿದ್ದಾರೆ. ಆದರೆ "ಭಿಷಗ್" ಎಂದು ಬೇರೆ ಪದವನ್ನು ಒಡೆದು ತೆಗೆದು, ಅದಕ್ಕೆ ವೈದ್ಯನು ಎಂಬ ಕರ್ತೃಪದದರ್ಥ ಹೇಳುವದು ಸರಲವಾಗುವದೆಂದು ತೋರುತ್ತದೆ. ಇದರಿಂದ 'ಕರ್ತೃಹೀನತಾ' ದೋಷವೂ ವಾಕ್ಯಕ್ಕೆ ತಟ್ಟಲಾರದು.

ತಂತ್ರಸ್ಯಾಸ್ಯ ಪರಂ ಚಾತೋ ವಕ್ಷ್ಯತೇಽಧ್ಯಾಯಸಂಗ್ರಹಃ ||೩೫||

ಅರ್ಥ:— ಇನ್ನು ಮೇಲೆ ಈ ಗ್ರಂಥದ ಅಧ್ಯಾಯಗಳ ಸಂಗ್ರಹವನ್ನು (ಅನುಕ್ರಮಣಿಕೆಯನ್ನು) ಕೊಡುತ್ತಾರೆ. (೩೫)

ಆಯುಷ್ಕಾಮದಿನರ್ತ್ವೀಹಾರೋಗಾನುತ್ಪಾದನದ್ರವಾಃ
ಅನ್ನಜ್ಞಾನಾನ್ನಸಂರಕ್ಷಾ ಮಾತ್ರಾದ್ರವ್ಯರಸಾಶ್ರಯಾಃ ||೩೬||

ದೋಷಾದಿಜ್ಞಾನತದ್ಭೇದತಚ್ಚಿಕಿತ್ಸಾದ್ಯುಪಕ್ರಮಾಃ ||
ಶುದ್ಧ್ಯಾದಿಸ್ನೇಹನಸ್ವೇದರೇಕಾಸ್ಥಾಪನನಾವನಮ್ ||೩೭||

ಧೂಮಗಂಡೂಷದೃಕ್ ಸೇಕತೃಪ್ತಿಯಂತ್ರಕಶಸ್ತ್ರಕಮ್ ||

*ಸಿರಾವಿಧಿಃ ಶಲ್ಯವಿಧಿಃ ಶಸ್ತ್ರಕ್ಷಾರಾಗ್ನಿಕರ್ಮಿಕೌ ||೪೮
ಸೂತ್ರಸ್ಥಾನೇಽಮೀಽಧ್ಯಾಯಾಸ್ತ್ರಿಂಶತ್..........

೧. ಆಯುಷ್ಕಾಮೀಯ
೨. [illegible]
೩. ಋತುಚರ್ಯೆ
೪. ರೋಗಾನುತ್ಪಾದನೀಯ
೫. ದ್ರವದ್ರವ್ಯವಿಜ್ಞಾನೀಯ
೬. ಅನ್ನಸ್ವರೂಪವಿಜ್ಞಾನೀಯ
೭. ಅನ್ನಸಂರಕ್ಷಾ
೮. ಮಾತ್ರಾಶಿತೀಯ
೯. ದ್ರವ್ಯಾದಿವಿಜ್ಞಾನೀಯ
೧೦. ರಸಭೇದೀಯ
೧೧. ದೋಷಾದಿವಿಜ್ಞಾನೀಯ
೧೨. ದೋಷಭೇದೀಯ
೧೩. ದೋಷೋಪಕ್ರಮಣೀಯ
೧೪. ದ್ವಿವಿಧೋಪಕ್ರಮಣೀಯ
೧೫. ಶೋಧನಾದಿಗಣಸಂಗ್ರಹ
೧೬. ಸ್ನೇಹವಿಧಿ
೧೭. ಸ್[illegible]
೧೮. ವಮನವಿರೇಚನವಿಧಿ
೧೯. ಬಸ್ತಿವಿಧಿ
೨೦. ನಸ್ಯವಿಧಿ
೨೧. ಧೂಮವಿಧಿ
೨೨. ಗಂಡೂಷಾದಿವಿಧಿ
೨೩. ಆಶ್ಚ್ಯೋತನಾಂಜನವಿಧಿ
೨೪. ತರ್ಪಣಪುಟಪಾಕವಿಧಿ
೨೫. ಯಂತ್ರವಿಧಿ
೨೬. ಶಸ್ತ್ರವಿಧಿ
೨೭. ಸಿರಾವ್ಯಧವಿಧಿ
೨೮. ಶಲ್ಯಾಹರಣವಿಧಿ
೨೯. ಶಸ್ತ್ರಕರ್ಮವಿಧಿ
೩೦. ಕ್ಷಾರಾಗ್ನಿಕರ್ಮವಿಧಿ

ಹೀಗೆ ೩೦ ಅಧ್ಯಾಯಗಳು ಸೂತ್ರಸ್ಥಾನದಲ್ಲಿವೆ.

* 'ಶಿರಾವ್ಯಧಃ' ಎಂದು ಪಾಠಾಂತರವಿದೆ.

ಟಿಪ್ಪಣೀ— ಸೂತ್ರವೆಂದರೆ ಸೂಚನೆ ( ಸಂಕ್ಷೇಪದಿಂದ ಹೇಳೋಣ. ) ಇಲ್ಲಿ ಶಾಸ್ತ್ರದ ಎಲ್ಲ ಅರ್ಥವನ್ನೂ ಸೂಚಿಸಿರುವದರಿಂದ ಇದಕ್ಕೆ "ಸೂತ್ರಸ್ಥಾನ" ವೆಂಬ ಹೆಸರು. ಇದರ ಕೊನೆಗೆ— "ಅತ್ರಾರ್ಥಾಃ ಸೂತ್ರಿತಾಃ ಸೂಕ್ಷ್ಮಾಃ ಪ್ರತನ್ಯಂತೇ ಹಿ ಸರ್ವತಃ" ಸೂಕ್ಷ್ಮ ಬುದ್ಧಿಯುಳ್ಳವರಿಂದಲೇ ಗ್ರಹಿಸಲಿಕ್ಕೆ ಸಾಧ್ಯವಾಗುವಂಥ ಸೂಕ್ಷ್ಮ ಅರ್ಥತತ್ವಗಳನ್ನು ಇಲ್ಲಿ ಸೂಚಿಸಲಾಗಿದೆಯೆಂದೂ ಅವನ್ನೇ ಮುಂದೆ ಆಯಾಯ ಸ್ಥಾನಗಳಲ್ಲಿ ಬಿಡಿಸಿ ಹೇಳಿದ್ದಾಗಿದೆಯೆಂದೂ ಹೇಳಿದ್ದಾರೆ. (೩೮॥)

...................................ಶಾರೀರಮುಚ್ಯತೇ ॥
ಗರ್ಭಾವಕ್ರಾಂತಿತದ್ವ್ಯಾಪದಂಗಮರ್ಮವಿಭಾಗಿಕಮ್ ॥೩೯॥
ವಿಕೃತಿರ್ದೂತಜಂ ಷಷ್ಠಂ.

ಅರ್ಥ:—

| | |
|---|---|
| ೧. ಗರ್ಭಾವಕ್ರಾಂತಿ | ೪. ಮರ್ಮವಿಭಾಗ |
| ೨. ಗರ್ಭವ್ಯಾಪತ್ | ೫. ವಿಕೃತಿವಿಜ್ಞಾನ |
| ೩. ಅಂಗವಿಭಾಗ | ೬. ದೂತಾದಿವಿಜ್ಞಾನ |

ಇವು ಆರು ಶಾರೀರಸ್ಥಾನದಲ್ಲಿ ಬರುತ್ತವೆ. (೩೯॥)

...............................ನಿದಾನಂ ಸಾರ್ವರೋಗಿಕಮ್ ॥
ಜ್ವರಾಸೃಕ್‌ಶ್ವಾಸಯಕ್ಷ್ಮಾದಿಮದಾದ್ಯರ್ಶೋಽತಿಸಾರಿಣಾಮ್ ॥೪೦॥
ಮೂತ್ರಾಘಾತಪ್ರಮೇಹಾಣಾಂ ವಿದ್ರಧ್ಯಾದ್ಯುದರಸ್ಯ ಚ ॥
ಪಾಂಡುಕುಷ್ಠಾನಿಲಾರ್ತಾನಾಂ ವಾತಾಸ್ರಸ್ಯ ಚ ಷೋಡಶ ॥೪೧॥

ಅರ್ಥ:—

| | |
|---|---|
| ೧. ಸರ್ವರೋಗ ನಿದಾನ | ೪. ಶ್ವಾಸಹಿಕ್ಕಾ ನಿದಾನ |
| ೨. ಜ್ವರನಿದಾನ | ೫. ರಾಜಯಕ್ಷ್ಮಾದಿ ನಿದಾನ |
| ೩. ರಕ್ತಪಿತ್ತಕಾಸ ನಿದಾನ | ೬. ಮದಾತ್ಯಯಾದಿ ನಿದಾನ |

೭. ಅರ್ಶೋ ನಿದಾನ
೮. ಅತಿಸಾರಗ್ರಹಣೀ ದೋಷ ನಿದಾನ
೯. ಮೂತ್ರಾಘಾತ ನಿದಾನ
೧೦. ಪ್ರಮೇಹ ನಿದಾನ
೧೧. ವಿದ್ರಧಿವೃದ್ಧಿಗುಲ್ಮ ನಿದಾನ
೧೨. ಉದರ ನಿದಾನ
೧೩. ಪಾಂಡುಶೋಫವಿಸರ್ಪ ನಿದಾನ
೧೪. ಕುಷ್ಠಶ್ವಿತ್ರಕೃಮಿ ನಿದಾನ
೧೫. ವಾತವ್ಯಾಧಿ ನಿದಾನ
೧೬. ವಾತಶೋಣಿತ ನಿದಾನ

ಈ ಹದಿನಾರು ಅಧ್ಯಾಯಗಳು ನಿದಾನಸ್ಥಾನದಲ್ಲಿಯುವು. (೪೧)

**ಚಿಕಿತ್ಸಿತಂ ಜ್ವರೇ ರಕ್ತೇ ಶ್ವಾಸೇ ಕಾಸೇ ಚ ಯಕ್ಷ್ಮಣಿ ||**
**ವಮೌ ಮದಾತ್ಯಯೇಽರ್ಶಸ್ಸ್ವತಿ ದ್ವ್ಯಾದ್ವ್ಯೌ ಚ ಮೂತ್ರಿತೇ ||೨||**

**ವಿದ್ರಧೌ ಗುಲ್ಮಜಠರಪಾಂಡುಶೋಫವಿಸರ್ಪಿಷು ||**
**ಕುಷ್ಠಶ್ವಿತ್ರಾನಿಲವ್ಯಾಧಿವಾತಾಸ್ರೇಷು ಚಿಕಿತ್ಸಿತಮ್ ||೪೩||**

**ದ್ವಾವಿಂಶತಿರಿಮೇಽಧ್ಯಾಯಾಃ..........................**

ಅರ್ಥ:—

೧. ಜ್ವರ ಚಿಕಿತ್ಸೆ
೨. ರಕ್ತಪಿತ್ತ ಚಿಕಿತ್ಸೆ
೩. ಕಾಸ ಚಿಕಿತ್ಸೆ
೪. ಶ್ವಾಸಹಿಕ್ಕಾ ಚಿಕಿತ್ಸೆ
೫. ರಾಜಯಕ್ಷ್ಮ ಚಿಕಿತ್ಸೆ
೬. ಛರ್ದಿಹೃದ್ರೋಗತೃಷ್ಣಾ ಚಿಕಿತ್ಸೆ
೭. ಮದಾತ್ಯಯ ಚಿಕಿತ್ಸೆ
೮. ಅರ್ಶಶ್ಚಿಕಿತ್ಸೆ
೯. ಅತಿಸಾರ ಚಿಕಿತ್ಸೆ
೧೦. ಗ್ರಹಣೀದೋಷ ಚಿಕಿತ್ಸೆ
೧೧. ಮೂತ್ರಾಘಾತ ಚಿಕಿತ್ಸೆ
೧೨. ಪ್ರಮೇಹ ಚಿಕಿತ್ಸೆ

೧೩. ವಿದ್ರಧಿವೃದ್ಧಿ ಚಿಕಿತ್ಸೆ  ೧೮. ವಿಸರ್ಪಚಿಕಿತ್ಸೆ

೧೪. ಗುಲ್ಮ ಚಿಕಿತ್ಸೆ  ೧೯. ಕುಷ್ಠ ಚಿಕಿತ್ಸೆ

೧೫. ಉದರಚಿಕಿತ್ಸೆ  ೨೦. ಶ್ವಿತ್ರಕೃಮಿಚಿಕಿತ್ಸೆ

೧೬. ಪಾಂಡುರೋಗಚಿಕಿತ್ಸೆ  ೨೧. ವಾತವ್ಯಾಧಿಚಿಕಿತ್ಸೆ

೧೭. ಶ್ವಯಥುಚಿಕಿತ್ಸೆ  ೨೨. ವಾತರಕ್ತ ಚಿಕಿತ್ಸೆ

ಎಂಬ ೨೨ ಅಧ್ಯಾಯಗಳು ಚಿಕಿತ್ಸಾಸ್ಥಾನದವು (೪೩||)

.ಕಲ್ಪಸಿದ್ಧಿರತಃ ಪರಮ್

ಕಲ್ಪೋ ವಮೇರ್ವಿರೇಕಸ್ಯ ತತ್ ಸಿದ್ಧಿರ್ಬಸ್ತಿಕಲ್ಪನಾ ||೪೪||

ಸಿದ್ಧಿರ್ಬಸ್ತ್ಯಾಪದಾಂ ಷಷ್ಠೋ ದ್ರವ್ಯಕಲ್ಪೋ........

ಅರ್ಥಃ— ಆಮೇಲೆ ಕಲ್ಪಸ್ಥಾನವು.

೧. ವಮನಕಲ್ಪ  ೪. ಬಸ್ತಿಕಲ್ಪ

೨. ವಿರೇಚನಕಲ್ಪ  ೫. ಬಸ್ತಿವ್ಯಾಪತ್ಸಿದ್ಧಿ

೩. ವಮನವಿರೇಚನವ್ಯಾಪತ್ಸಿದ್ಧಿ  ೬. ಭೇಷಜಕಲ್ಪ

ಎಂಬ ಆರು ಅಧ್ಯಾಯಗಳು ಅದರಲ್ಲಿ ಬರುವವು. (೪೪||)

......................................ಅಥ ಉತ್ತರಮ್ ||

ಬಾಲೋಪಚಾರೇ ತದ್ವ್ಯಾಧೌ ತದ್ಗ್ರಹೇ, ದ್ವೌ ಚ ಭೂತಗೇ||೪೫||

ಉನ್ಮಾದೇಽಥ ಸ್ಮೃತಿಭ್ರಂಶೇ, ದ್ವೌ ದ್ವೌ ವರ್ತ್ಮಸು ಸಂಧಿಷು ||
ದೃಕ್ತಮೋ ಲಿಂಗನಾಶೇಷು ತ್ರಯೋ, ದ್ವೌ ದ್ವೌ ಚ ಸರ್ವಗೇ ||೪೬||

ಕರ್ಣನಾಸಾಮುಖಶಿರೋವ್ರಣೇ, ಭಂಗೇ ಭಗಂದರೇ ||
ಗ್ರಂಥ್ಯಾದೌ ಕ್ಷುದ್ರರೋಗೇಷು ಗುಹ್ಯರೋಗೇ ಪೃಥಕ್ ದ್ವಯಂ||೪೭||

ವಿಷೇ ಭುಜಂಗೇ ಕೀಟೇಷು ಮೂಷಕೇಷು ರಸಾಯನೇ ||
ಚತ್ವಾರಿಂಶೋಽನಸಪತ್ಯಾನಾಮಧ್ಯಾಯೋ ಬೀಜಪೋಷಣಃ ||೨೮||

ಅರ್ಥ:—

೧. ಬಾಲೋಪಚರಣೀಯ
೨. ಬಾಲಾಮಯ ಪ್ರತಿಷೇಧ
೩. ಬಾಲಗ್ರಹ ಪ್ರತಿಷೇಧ
೪. ಭೂತ ವಿಜ್ಞಾನೀಯ
೫. ಭೂತ ಪ್ರತಿಷೇಧ
೬. ಉನ್ಮಾದ ಪ್ರತಿಷೇಧ
೭. ಅಪಸ್ಮಾರ ಪ್ರತಿಷೇಧ
೮. ವರ್ತ್ಮರೋಗ ವಿಜ್ಞಾನೀಯ
೯. ವರ್ತ್ಮರೋಗ ಪ್ರತಿಷೇಧ
೧೦. ಸಂಧಿಸಿತಾಸಿತರೋಗ ವಿಜ್ಞಾನೀಯ
೧೧. ಸಂಧಿಸಿತಾಸಿತರೋಗಪ್ರತಿಷೇಧ
೧೨. ದೃಷ್ಟಿರೋಗ ವಿಜ್ಞಾನೀಯ
೧೩. ತಿಮಿರ ಪ್ರತಿಷೇಧ
೧೪. ಲಿಂಗನಾಶ ಪ್ರತಿಷೇಧ
೧೫. ಸರ್ವಾಕ್ಷಿರೋಗ ವಿಜ್ಞಾನೀಯ
೧೬. ಸರ್ವಾಕ್ಷಿರೋಗ ಪ್ರತಿಷೇಧ
೧೭. ಕರ್ಣರೋಗ ವಿಜ್ಞಾನೀಯ
೧೮. ಕರ್ಣರೋಗ ಪ್ರತಿಷೇಧ
೧೯. ನಾಸಾರೋಗ ವಿಜ್ಞಾನೀಯ
೨೦. ನಾಸಾರೋಗ ಪ್ರತಿಷೇಧ
೨೧. ಮುಖರೋಗ ವಿಜ್ಞಾನೀಯ
೨೨. ಮುಖರೋಗ ಪ್ರತಿಷೇಧ
೨೩. ಶಿರೋರೋಗ ವಿಜ್ಞಾನೀಯ
೨೪. ಶಿರೋರೋಗ ಪ್ರತಿಷೇಧ
೨೫. ವ್ರಣ ವಿಜ್ಞಾನೀಯ
೨೬. ಸದ್ಯೋವ್ರಣ ಪ್ರತಿಷೇಧ
೨೭. ಭಂಗ ಪ್ರತಿಷೇಧ
೨೮. ಭಗಂದರ ಪ್ರತಿಷೇಧ
೨೯. ಗ್ರಂಥ್ಯರ್ಬುದಶ್ಲೀಪದಾದಿ ವಿಜ್ಞಾನೀಯ
೩೦. ಗ್ರಂಥ್ಯರ್ಬುದಶ್ಲೀಪದಾದಿ ಪ್ರತಿಷೇಧ

ಮಾರೆಛಿಯಾ (Marecchia) ನದಿ ಸಮುದ್ರಕ್ಕೆ ಸೇರುವಲ್ಲಿ ಇದೆ. ಇದು ಈ ನಗರದ ಅತ್ಯಂತ ಪ್ರಾಚೀನ ಭಾಗ. ಸಮುದ್ರ ದಂಡೆಯಿಂದ 2 ಕಿಲೋಮೀಟರ್ ಒಳಗೆ ಇದೆ. ಇದಕ್ಕೆ ಕ್ರಿ. ಪೂ. 268 ರಿಂದ ಐತಿಹಾಸಿಕ ಮಹತ್ವವಿದೆ. ಇದು ಮೊದಲು ರೋಮನ್ ಆಧಿಪತ್ಯಕ್ಕೆ ಸೇರಿತ್ತು. ಈಗ ಇಟಲಿಯ ಉಮ್ಬ್ರೀರಿಯಾ ಪ್ರಾಂತದಲ್ಲಿ ಇದೆ. ಮಾರೆಛಿಯಾ ನದಿಗೆ ರೋಮನ್ ದೊರೆ ಅಗಸ್ಟಸ್ ಸೇತುವೆ ಕಟ್ಟಿಸಿದ. ಅದು ಈಗಲೂ ಇರುವ ಪ್ರಾಚೀನ ಸೇತುವೆ. ರಿಮಿನಿ ಊರಿನ ಹೆಸರು ಇಟಲಿಯ 13ನೆಯ ಶತಮಾನದ ಸುಂದರ ಶ್ರೀಮಂತ ಮಹಿಳೆಯ ಹೆಸರಿನೊಂದಿಗೂ ಚಿರಸ್ಥಾಯಿಯಾಗಿದೆ. ಆಕೆಯ ಪೂರ್ತಿ ಹೆಸರು ಫ್ರಾನ್ಸೆಸ್ಕಾ ಡ ರಿಮಿನಿ (Francesca da Rimini) ಎಂದು. ಆಕೆಯ ದುರಂತ ಪ್ರಣಯ ಕಥೆ, ಸಾಹಿತಿಗಳ ಬಳಕೆಗೆ ಬಹುರೂಪದಲ್ಲಿ ಒದಗಿ ಬಂದಿದೆಯಂತೆ.

ಅಲ್ಲಿಂದ ಮುಂದೆ ಫ್ಯಾನೋ (Fano) ಗೆ ಬಂದೆವು. ಇದು ಆಡ್ರಿಯಾಟಿಕ್ ಸಮುದ್ರದ ಒಂದು ರೇವು. ಇದೂ ಸಹ ಪ್ರಾಚೀನವಾದ ಊರು. ಇಲ್ಲಿನ ಪ್ರಾಚೀನ ಅವಶೇಷಗಳಲ್ಲಿ ರೋಮನರ ಕಾಲದಲ್ಲಿ ಅಗಸ್ಟಸ್ ದೊರೆಯ ಗೌರವಾರ್ಥವಾಗಿ ಕ್ರಿ. ಶ. 9 ರಲ್ಲಿ ಕಟ್ಟಿಸಿದ ಮೂರು ಕಮಾನಿನ ದಿಡ್ಡಿ ಮುಖ್ಯವಾದುದು. 1299ರಲ್ಲಿ ಕಟ್ಟಿಸಿದ ಗೊಥಿಕ್ ವಾಸ್ತುಶಿಲ್ಪದ ಅರಮನೆಯನ್ನು ಈಗ ರಂಗಮಂದಿರ ಮಾಡಿದ್ದಾರೆ.

ಫ್ಯಾನೋದಿಂದ ಮುಂದೆ ರೋಮ್ ನಗರದ ಹೆದ್ದಾರಿಯ ಮೂಲಕ ತುಂಬ ಶಾಂತಮಯವಾದ ಅಸ್ಸಿಸಿಗೆ ಬಂದೆವು. ಇದು ಸೆಯಿಂಟ್ ಫ್ರಾನ್ಸಿಸ್‌ರ ಜನ್ಮಸ್ಥಳ. ಇಲ್ಲಿ ಗೋಥಿಕ್ ವಾಸ್ತುಶಿಲ್ಪದ ಸ್ಯಾನ್‌ಫ್ರಾನ್‌ಸಿಸ್ಕೊ ಚರ್ಚ್ ಇದೆ. ಇದನ್ನು 1253ರಲ್ಲಿ ಪೂರ್ಣಗೊಳಿಸಲಾಯಿತು. ಇದರ ಒಳಗೆ ಸೆಯಿಂಟ್ ಫ್ರಾನ್ಸಿಸ್‌ರ ಜೀವನ ರೂಪಿಸುವ ಚಿತ್ರಗಳು ಇವೆ. ಇದನ್ನು ಫ್ಲಾರೆನ್ಸ್‌ನ ಕಲಾವಿದರಾದ ಗಯೋಟೊ ಮೊದಲಾದವರು ರೂಪಿಸಿದ್ದಾರೆ. ಅಲ್ಲಿಂದ ಮುಂದೆ ಉಮ್‌ಬ್ರಿಯನ್ ಬೆಟ್ಟಗುಂಟ ಸಾಗಿ ಟಿಬರ್ ನದಿ ದಾಟಿ ಮುಂದೆ ಸ್ಪೊಲೆಟೊ (Spoleto) ಊರಿನ ಮುಖಾಂತರ ರೋಂ ನಗರ ಮುಟ್ಟಿದೆವು.

ರೋಂ ನಗರ ಇಟಲಿಯ ಅತ್ಯಂತ ದೊಡ್ಡ ಪಟ್ಟಣ ಮತ್ತು ಇಟಲಿಯ ರಾಜಧಾನಿ. ಇದು ಟಿಬರ್ ನದಿಯ ಎರಡೂ ದಂಡೆಯ ಮೇಲೆ ಹಬ್ಬಿನಿಂತಿದೆ, ಇದನ್ನು ಸಪ್ತಗಿರಿ ನಗರವೆಂದು ಈಗಲೂ ಕರೆಯುತ್ತಾರೆ. ರೋಮನ್ ಕ್ಯಾಥೊಲಿಕ್ ಜನಾಂಗದ ಏಕೈಕ ಸರ್ವಶ್ರೇಷ್ಠ ಗುರು ಪೋಪರ ಪರಮಾಡಳಿತಾಧಿಕಾರಕ್ಕೆ ಒಳಪಟ್ಟು ಸರ್ವಸ್ವತಂತ್ರವಾದ ವ್ಯಾಟಿಕನ್ ನಗರ ಸಹ ಇದರಲ್ಲಿ ಸೇರಿಕೊಂಡಿದೆ. ಧರ್ಮಾಧಿಕಾರಿಯ ಈ ಕ್ಷೇತ್ರದ ಧರ್ಮ, ವಿಶ್ವದ ಅಗ್ರಮಾನ್ಯ ಧರ್ಮಗಳಲ್ಲಿ ಒಂದು. ಇದನ್ನು ಸಪ್ತಗಿರಿನಗರ ಎಂದು ಕರೆವುದನ್ನು ಕೇಳಿ ನಮಗೆ ಏಳು ಮಲೆಗಳ ತಿರುಪತಿಯ ನೆನಪಾಯಿತು. ಧರ್ಮಕ್ಕೂ ಏಳು ಮಲೆಗಳಿಗೂ ಏನೋ ನಂಟು ಇದೆ ಎನ್ನಿಸಿತು.

# ೨ನೆಯ ಅಧ್ಯಾಯ

ಹಿಂದಿನ ( ಆಯುಷ್ಕಾಮೀಯ ) ಅಧ್ಯಾಯದಲ್ಲಿ ಸಾಮಾನ್ಯವಾಗಿ ಮತ್ತು ಸಂಕ್ಷೇಪವಾಗಿ ಹೇಳಿದ್ದನ್ನು ಇನ್ನು ಮೇಲೆ ವಿಶೇಷ ಮತ್ತು ವಿಸ್ತಾರವಾಗಿ ಹೇಳುತ್ತಾರೆ. ಆಯುಷ್ಯ ರಕ್ಷಣೆಗೆ ಆಚಾರವೇ ಮುಖ್ಯವು. ಆದ್ದರಿಂದ ದೈನಂದಿನ ಆಚಾರವನ್ನು ಈ ಅಧ್ಯಾಯದಲ್ಲಿಯೂ ಋತು ವಿಶೇಷಗಳಲ್ಲಿಯ ಆಚಾರವನ್ನು ಮುಂದಿನ ಅಧ್ಯಾಯದಲ್ಲಿಯೂ ಹೇಳುತ್ತಾರೆ.

**ಅಥಾತೋ * ದಿನಚರ್ಯಾಧ್ಯಾಯಂ ವ್ಯಾಖ್ಯಾಸ್ಯಾಮಃ ||**

ಅರ್ಥ:— ಇನ್ನು ಮೇಲೆ ದಿನಚರ್ಯೆ (ದಿನಾಲು ಮುಂಜಾವಿನಿಂದ ಮಲಗುವ ವರೆಗೆ ಮಾಡಬೇಕಾದ ಆಚಾರವನ್ನು ಹೇಳಿದ) ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

ವೈದ್ಯ ಶಾಸ್ತ್ರದ ಮುಖ್ಯ ಪ್ರಯೋಜನಗಳಾದ ಆರೋಗ್ಯಾನುವೃತ್ತಿ, ರೋಗ ನಿವೃತ್ತಿಗಳಲ್ಲಿ ಮೊದಲನೆಯದು ಮಹತ್ವದ್ದಾಗಿದೆ. ಆದ್ದರಿಂದ ಅದಕ್ಕೆ ಅನುಕೂಲವಾದ ಆಚಾರಗಳನ್ನು [ಸ್ವಸ್ಥವೃತ್ತ] ಇಲ್ಲಿ ಹೇಳುತ್ತಾರೆ.

**ಬ್ರಾಹ್ಮೇ ಮೂಹೂರ್ತ ಉತ್ತಿಷ್ಠೇತ್ಸ್ವಸ್ಥೋ ರಕ್ಷಾರ್ಥಮಾಯುಷಃ ||**

ಅರ್ಥ:— ಆಯುಷ್ಯ ರಕ್ಷಣೆಯಾಗಬೇಕಾಗಿದ್ದರೆ ನಿರೋಗಿಯಾದವನು ಬ್ರಾಹ್ಮ ಮುಹೂರ್ತದಲ್ಲಿ (ನಾಲ್ಕು ಗಳಿಗೆ ರಾತ್ರಿ ಇರಲು ) ಏಳಬೇಕು.

**ಟಿಪ್ಪಣಿ:**— ಬ್ರಹ್ಮ ಎಂದರೆ ಜ್ಞಾನ; ಅದಕ್ಕಾಗಿ ಏಳಬೇಕಾದ ಕಾಲಕ್ಕೆ "ಬ್ರಾಹ್ಮ" ಎಂಬ ಹೆಸರು. ನಿರೋಗಿಯಾದವರೂ ವಿದ್ಯಾರ್ಥಿಗಳೂ ಈ ಕಾಲಕ್ಕೆ ಏಳಬೇಕು. ( ೧ )

---

* ಈ ದಿನಚರ್ಯಾಧ್ಯಾಯವು ಚರಕದ ಸೂ. ೫-೭-೮ ನೇ ಅಧ್ಯಾಯಗಳಲ್ಲಿಯೂ ಸುಶ್ರುತದ ಚಿಕಿತ್ಸಾ. ಸ್ಥಾ.ನ ೨೪ನೇ. ಅಷ್ಟಾಂಗ ಸಂಗ್ರಹದ ಸೂ. ೩ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

ಶರೀರ ಚಿಂತಾಂ ನಿರ್ವರ್ತ್ಯ ಕೃತಶೌಚವಿಧಿಸ್ತತಃ ||೧||

ಅರ್ಕನ್ಯಗ್ರೋಧಖದಿರಕರಂಜಕಕುಭಾದಿಕಮ್ ||
ಪ್ರಾತರ್ಭುಕ್ತ್ವಾ ಚ ಮೃದ್ವಗ್ರಂ ಕಷಾಯಕಟುತಿಕ್ತಕಮ್ ||೨||

"*ಕನೀನ್ಯಗ್ರಸಮಸ್ಥೌಲ್ಯಂ ಪ್ರಗುಣಂ ದ್ವಾದಶಾಂಗುಲಮ್ ||
ಭಕ್ಷಯೇದ್ದಂತ†ಧವನಂ ದಂತಮಾಂಸಾನ್ಯಬಾಧಯನ್" ||೩||

ಅರ್ಥಃ— ಆಹಾರವು ಜೀರ್ಣವಾಗಿದೆಯೋ ಇಲ್ಲವೋ ಎಂಬದನ್ನು ಆಲೋಚಿಸಿ ಮಲ-ಮೂತ್ರ ವಿಸರ್ಜನಮಾಡಿ ನೋರೆ ತೊಳೆದುಕೊಂಡು ಹಲ್ಲು ಸ್ವಚ್ಛವಾಗುವದಕ್ಕೆ ಎಕ್ಕೆ, ಆಲ, ಹುಲಗಲಿ, ಮತ್ತಿ ಮುಂತಾದ ಒಗರು ಕಹಿ ಕಾರ ರಸಗಳುಳ್ಳ ಮೃದುವಾದ ಕಡ್ಡಿಗಳ ತುದಿಯನ್ನು ಜಗಿದು ಅದರಿಂದ ಕುಂಚು ಮಾಡಿ ಒಸಡಿಗಳಿಗೆ ಅಪಾಯವಾಗದಂತೆ ತಿಕ್ಕಬೇಕು. ಹೀಗೆ ಮುಂಜಾನೆ ಮತ್ತು ಊಟವಾದ ನಂತರ ಮಾಡಬೇಕು.

**ಟಿಪ್ಪಣಿ—** ಹಲ್ಲುಜ್ಜುವ ಕಡ್ಡಿಯು ೧೨ ಅಂಗುಲ ಉದ್ದವಾಗಿಯೂ ಕಿರುಬೆರಳಷ್ಟು ದಪ್ಪವಾಗಿಯೂ ಇರಬೇಕು. ಹುಳುಕು ಇರಬಾರದು. ಹಲ್ಲಿನಂತೆ ನಾಲಿಗೆಯನ್ನಾದರೂ ಸ್ವಚ್ಛಮಾಡಬೇಕು. ಒಗರು ಕಹಿ ಕಾರಗಳು ಬಾಯಿಯ ಜಿಗಟನ್ನು ಕಳೆಯುವವು. ಆದ್ದರಿಂದ ಅಂಥ ರಸದ ವನಸ್ಪತಿ ತಕ್ಕೊಳ್ಳಲು ಹೇಳಿರುವರು. (೩)

ನಾದ್ಯಾದಜೀರ್ಣವಮಥುಶ್ವಾಸಕಾಸಜ್ವರಾರ್ದಿತೀ ||
ತೃಷ್ಣಾಸ್ಯಪಾಕಹೃನ್ನೇತ್ರಶಿರಃಕರ್ಣಾಮಯೀ ಚ ತತ್ ||೪||

ರ್ಥ:— ಅಜೀರ್ಣ, ವಾಂತಿ, ದಮ್ಮು, ಕೆಮ್ಮು, ಜ್ವರ, ಅರ್ದಿತ (ವಾತವ್ಯಾಧಿ ವಿಶೇಷ) ತೃಷ್ಣಾ, ಮುಖಪಾಕ, ಎದೆ, ತಲೆ, ಕಣ್ಣು ಮತ್ತು ಕಿವಿಗಳ ರೋಗಗಳಿದ್ದವನು ದಂತ ಧಾವನ ಕಾಷ್ಠವನ್ನು ಉಪಯೋಗಿಸಬಾರದು. (೪)

* ಹೇಮಾದ್ರಿಯ ಪಾಠವು.

† 'ಪವನಂ' ಎಂಬ ಪಾಠವೂ ಇರುತ್ತದೆ. ಅದರ ಅರ್ಥವೂ ಸಹ ಹಲ್ಲು ಸ್ವಚ್ಛಮಾಡುವದು ಎಂದೇ ಆಗುತ್ತದೆ.

ಸೌವೀರ ಮಂಜನಂ ನಿತ್ಯಂ ಹಿತಮಕ್ಷ್ಣೋಸ್ತತೋ ಭಜೇತ್ ||

ಅರ್ಥ:— ಕಣ್ಣುಗಳಿಗೆ ಸೌವೀರಾಂಜನವು ( ಸುರಮಾ ) ಹಿತ ಕರವು. ಆದ್ದರಿಂದ ಅದನ್ನು ನಿತ್ಯ ಹಾಕಬೇಕು.

ಟಿಪ್ಪಣಿ:— ಇಲ್ಲಿ ಸೌವೀರಾಂಜನವನ್ನು ಹಾಕಬೇಕೆಂದು ಹೇಳಿದೆ. ಸುಶ್ರುತಾಚಾರ್ಯರು ಸ್ರೋತೋಂಜನವನ್ನು ಹಾಕಬೇಕೆಂದು ಹೇಳುವರು. ಯಾವದನ್ನಾದರೂ ಹಾಕಬಹುದು. (೪||)

**ಚಕ್ಷುಸ್ತೇಜೋಮಯಂ ತಸ್ಯ ವಿಶೇಷಾತ್ ಶ್ಲೇಷ್ಮಣೋ ಭಯಮ್||೫||**
**ಯೋಜಯೇತ್ಸಪ್ತರಾತ್ರೇಽಸ್ಮಾತ್ಸ್ರಾವಣಾರ್ಥಂ ರಸಾಂಜನಮ್ ||**

ಅರ್ಥ:— ಕಣ್ಣು ತೇಜೋಮಯವು. ಆದ್ದರಿಂದ ಅದಕ್ಕೆ ಹೆಚ್ಚಾಗಿ ( ಅದಕ್ಕೆ ವಿರುದ್ಧವಾದ ) ಕಫದಿಂದ ಅಪಾಯವು. ಕಾರಣ ಆ ಕಫ ಸ್ರಾವಕ್ಕಾಗಿ ಏಳು ದಿವಸಕ್ಕೊಮ್ಮೆ ರಸಾಂಜನವನ್ನು ಉಪ ಯೋಗಿಸಬೇಕು.

ಟಿಪ್ಪಣಿ:— ಮೊದಲು ಹೇಳಿದ ಅಂಜನವನ್ನು ನಿತ್ಯ ಹಾಕಬೇಕು. ಇದನ್ನು ಕಫನಾಶಕ್ಕಾಗಿ ಏಳು ದಿವಸಕ್ಕೊಮ್ಮೆ ಹಾಕಬೇಕು. ಮರ ಅರಿಷಣದ ಕಷಾಯ ಮಾಡಿ ಅದರ ನಾಲ್ಕನೇ ಭಾಗ ಆಡಿನ ಹಾಲು ಹಾಕಿ ಕುದಿಸಿ ಮೇಣ ದಂತೆ ಗಟ್ಟಿಯಾಗಲು ತೆಗೆಯಬೇಕು. ಅದೇ 'ರಸಾಂಜನವು' (೫||)

**ತತೋ ನಾವನ-ಗಂಡೂಷ-ಧೂಮ-ತಾಂಬೂಲಭಾಗ್ಭವೇತ್ ||೬||**

ಅರ್ಥ:— ಆ ಮೇಲೆ ನಸ್ಯ, ಗಂಡೂಷ ( ಬಾಯಲ್ಲಿ ಕಷಾಯದ ನೀರು ಹಿಡಿಯೋಣ), ಧೂಮ (ತಂಬಾಕದಂತೆ ಔಷಧದ ಹೊಗೆ ಸೇದೋಣ), ತಾಂಬೂಲಗಳನ್ನು ಸೇವಿಸಬೇಕು.

ಟಿಪ್ಪಣಿ:— ಮುಂದೆ ನಸ್ಯ, ಗಂಡೂಷ, ಧೂಮಗಳ ಸವಿಸ್ತರ ವಿಧಿ ಯನ್ನು ಸ್ವತಂತ್ರ ಅಧ್ಯಾಯಗಳಿಂದಲೇ ಹೇಳುತ್ತಾರೆ. ತಾಂಬೂಲದಿಂದ ಬಾಯಿಯು ಸ್ವಚ್ಛ ಮತ್ತು ಸುಗಂಧಿಯಾಗುವದು. ತಾಂಬೂಲವೆಂದರೆ:— ಕರ್ಪೂರ, ಜಾಜೀಕಾಯಿ, ಕಂಕೋಳ, ಲವಂಗ, ಲತಾಕಸ್ತೂರೀ ಫಲ, ಕಾಚು ಸುಣ್ಣ, ಅಡಿಕೆಗಳಿಂದ ಕೂಡಿದ ವೀಳ್ಯದೆಲೆಯು. ಮಲಗಿ ಎದ್ದ ನಂತರವೂ ತಾಂ ಬೂಲ ಹಾಕಬೇಕೆಂದು ಸಂಗ್ರಹದಲ್ಲಿ ಹೇಳಿದ್ದಾರೆ.

ಪಥ್ಯಂ ಸುಪ್ತೋತ್ಥಿತೇ ಭುಕ್ತೇ ಸ್ನಾತೇ ವಾಂತೇ ಚ ಮಾನವೇ ।
ದ್ವಿಪತ್ರಮೇಕಂ ಪೂಗಂ ಚ ಸಚೂರ್ಣಖದಿರಂ ಚ ತತ್ ॥ (೬)

ತಾಂಬೂಲಂ ಕ್ಷತಪಿತ್ತಾಸ್ರರುಕ್ಷೋತ್ಕುಪಿತಚಕ್ಷುಷಾಮ್ ॥
ವಿಷಮೂರ್ಛಾಮದಾರ್ತಾನಾಮಪಥ್ಯಂ ಶೋಷಿಣಾಮಪಿ ॥೭॥

ಅರ್ಥ:— ತಾಂಬೂಲವು ಉರಃಕ್ಷತ, ರಕ್ತಪಿತ್ತ, ಕಣ್ಣುಬೇನೆ, ವಿಷ, ಮೂರ್ಛೆ, ಮದ್ಯದ ಮದ, ಕ್ಷಯರೋಗ ಆದವರಿಗೂ ರುಕ್ಷಶರೀರ ಪವರಿಗೂ ಹಿತಕರವಲ್ಲ.

ಅಭ್ಯಂಗಮಾಚರೇನ್ನಿತ್ಯಂ ಸ ಜರಾಶ್ರಮವಾತಹಾ ॥
ದೃಷ್ಟಿಪ್ರಸಾದಪುಷ್ಟ್ಯಾಯುಃಸ್ವಪ್ನಸುತ್ವಕ್ತ್ವದಾರ್ಢ್ಯಕೃತ್ ॥೮॥

ಅರ್ಥಃ— ದಿನಾಲು ಅಭ್ಯಂಗವನ್ನು (ಮೈಗೆ ಎಣ್ಣೆ ಹಚ್ಚಿ ತಿಕ್ಕುವದನ್ನು) ಮಾಡಬೇಕು. ಅದು ಮುಪ್ಪು, ಶ್ರಮ, ವಾತಗಳನ್ನು ಕಳೆಯುವದು. ದೃಷ್ಟಿಯನ್ನು ಸ್ವಚ್ಛ ಮಾಡುವದು; ಪುಷ್ಟಿ, ನಿದ್ದೆ, ಆಯುಸ್ಸು, ತ್ವಚೆಗೆ ಮೃದುತ್ವ ಇವುಗಳನ್ನು ಕೊಡುವದು.

ಟಿಪ್ಪಣಿ:— ಸಂಗ್ರಹದಲ್ಲಿ 'ಹಸಿವೆ ನೀರಡಿಕೆಯಾದ ಕಾಲದಲ್ಲಿ ಅಭ್ಯಂಗವನ್ನು ಮಾಡಬೇಕು. ಆಗ್ಗೆ ಸ್ರೋತಸ್ಸುಗಳು ಶುದ್ಧವಾಗಿರುವದರಿಂದ ಸ್ನೇಹವು ರೋಮ ರಂಧ್ರಗಳಲ್ಲಿ ಸೇರಿ ಅಗ್ನಿಯಿಂದ ಪಚನಹೊಂದಿ ಮೇಲೆ ಹೇಳಿದ ಕಾರ್ಯ ಮಾಡುವದು' ಎಂದು ಹೇಳಿದ್ದಾರೆ.

ಶಿರಃಶ್ರವಣಪಾದೇಷು ತಂ ವಿಶೇಷೇಣ ಶೀಲಯೇತ್ ॥

ಅರ್ಥಃ— ತಲೆ, ಕಿವಿ, ಅಂಗಾಲುಗಳಲ್ಲಿ ಅಭ್ಯಂಗವನ್ನು ಹೆಚ್ಚಾಗಿ ಮತ್ತು ಮೇಲಿಂದ ಮೇಲೆ ಮಾಡಬೇಕು.

ಟಿಪ್ಪಣಿಃ— ತಲೆಗೆ ಅಭ್ಯಂಗ ಮಾಡುವದರಿಂದ ಕೂದಲಿಗೆ ಮತ್ತು ಮಿದುಳಿಗೆ ಹಿತವು; ಕಿವಿಯಲ್ಲಿ ಎಣ್ಣೆ ಹಾಕುವದರಿಂದ ಗದ್ದ, ಹೆಡಕು, ತಲೆ, ಕಿವಿಗಳ ಶೂಲವು ನಾಶವಾಗುವದು; ಮತ್ತು ವಾತರೋಗಗಳು ಹೋಗುವವು. ಅಂಗಾಲಿಗೆ ಅಭ್ಯಂಗ ಮಾಡುವದರಿಂದ ನಿದ್ದೆ ಬರುವದು, ಕಣ್ಣುಗಳು ಸ್ವಚ್ಛವಾಗುವವು, ಕಾಲುಗಳು ಒಡೆಯುವದಿಲ್ಲ. (೮॥)

**ವರ್ಜ್ಯೋಽಭ್ಯಂಗಃ ಕಫಗ್ರಸ್ತಕೃತಸಂಶುದ್ಧ್ಯಜೀರ್ಣಿಭಿಃ ॥೯॥**

ಅರ್ಥ:— ಕಫಪೀಡಿತರೂ, ಶೋಧನ ತಕ್ಕೊಂಡವರೂ, ಅಜೀರ್ಣ ವಾದವರೂ ಅಭ್ಯಂಗ ಮಾಡಬಾರದು.

**ಟಿಪ್ಪಣಿ:**—ಸುಶ್ರುತಾಚಾರ್ಯರು ತರುಣ ಜ್ವರದಲ್ಲಿಯೂ ಬೇಡವೆನ್ನುವರು. ಏಕೆಂದರೆ ಅಭ್ಯಂಗದಿಂದ ಅಗ್ನಿಯು ಮಂದವಾಗುವದು. ಶೋಧನವೆಂದರೆ ವಮನ, ವಿರೇಚನ, ಬಸ್ತಿ, ಶಿರೋವಿರೇಚನ, ರಕ್ತಸ್ರಾವಗಳು. (೯)

**ಲಾಘವಂ ಕರ್ಮಸಾಮರ್ಥ್ಯಂ ದೀಪ್ತೋಽಗ್ನಿರ್ಮೇದಸಃ ಕ್ಷಯಃ ॥**
**ವಿಭಕ್ತಘನಗಾತ್ರತ್ವಂ ವ್ಯಾಯಾಮಾದುಪಜಾಯತೇ ॥೧೦॥**

ಅರ್ಥ:— ವ್ಯಾಯಾಮದಿಂದ ದೇಹವು ಹಗುರೂ, ಕೆಲಸದಲ್ಲಿ ಸಮರ್ಥವೂ ಆಗುವದು; ಮೇದವು ಹೋಗುವದು; ಅಗ್ನಿಯು ಪ್ರಜ್ವಲಿತ ವಾಗುವದು; ಎಲ್ಲ ಅವಯವಗಳು (ಆಗಬೇಕಾದಂತೆ) ಆಕಾರಗೊಂಡು ವಿಭಕ್ತವಾಗಿ ಪುಷ್ಟವಾಗುವವು.

**ಟಿಪ್ಪಣಿ:**— ಶೀತೋಷ್ಣ-ಶ್ರಮಸಹಿಷ್ಣುತೆ, ಆರೋಗ್ಯ ಉಂಟಾಗುವದು, ಮುಪ್ಪು ದೂರ ಸರಿಯುವದು, ಮಾಂಸವು ಗಟ್ಟಿಯಾಗುವದು, ಎಂಥ ಅನ್ನವಾದರೂ ಪಚನವಾಗುವದು, ಆಲಸ್ಯ ಬಾರದು ಮುಂತಾದ ಅನೇಕ ಗುಣಗಳನ್ನು ಸುಶ್ರುತಾ ಚಾರ್ಯರು ಹೇಳಿದ್ದಾರೆ. (೧೦)

**ವಾತಪಿತ್ತಾಮಯೀ ಬಾಲೋ ವೃದ್ಧೋಽಜೀರ್ಣೀ ಚ ತಂ ತ್ಯಜೇತ್॥**

ಅರ್ಥ:— ವಾತರೋಗಿಯೂ, ಪಿತ್ತರೋಗಿಯೂ, ಬಾಲ, ವೃದ್ಧ ಮತ್ತು ಅಜೀರ್ಣವಾದವನೂ, ವ್ಯಾಯಾಮವನ್ನು ಮಾಡಬಾರದು.

**ಟಿಪ್ಪಣಿ:**— ೧೬ ವರ್ಷಗಳ ವರೆಗೆ ಬಾಲನು, ೭೦ ವರ್ಷಗಳ ಮೇಲೆ ವೃದ್ಧನು, ಎಂದು ಪ್ರಾಚೀನರು ಹೇಳಿರುವರು. (೧೦॥)

**ಅರ್ಧಶಕ್ತ್ಯಾ ನಿಷೇವ್ಯಸ್ತು ಬಲಿಭಿಃ ಸ್ನಿಗ್ಧಭೋಜಿಭಿಃ ॥೧೧॥**
**ಶೀತಕಾಲೇ ವಸಂತೇ ಚ ಮಂದಮೇವ ತತೋಽನ್ಯದಾ ॥**

ಅರ್ಥ:— ಬಲಿಷ್ಠರಾದವರು ಸ್ನಿಗ್ಧ ಆಹಾರ ಮಾಡುತ್ತ ಶೀತ ಕಾಲದಲ್ಲಿಯೂ ವಸಂತ ಕಾಲದಲ್ಲಿಯೂ ತಮ್ಮ ಶಕ್ತಿಯ ಅರ್ಧದಷ್ಟು

ಮಾತ್ರ ವ್ಯಾಯಾಮವನ್ನು ಮಾಡಬೇಕು. ಉಳಿದ ಕಾಲದಲ್ಲಿ ಅದಕ್ಕೂ ಕಡಿಮೆ ಮಾಡಬೇಕು.

ಟಿಪ್ಪಣೀ:— ಅರ್ಧಶಕ್ತಿ ಎಂದರೆ ಬಾಯಿಂದ ಶ್ವಾಸವು ಬರಹತ್ತಿ ಬೆವರು ಬರುವವರೆಗೆ. ಹೇಮಾದ್ರಿಯು "ಅನ್ಯದಾ" ಇದರ ಅರ್ಥವನ್ನು "ಬೇರೆ ಕಾಲದಲ್ಲಿ" ಮತ್ತು "ಬೇರೆ ಅವಸ್ಥೆಯಲ್ಲಿ" ಎಂದು ಮಾಡಿ ದುರ್ಬಲರೂ ಸ್ನಿಗ್ಧ ಆಹಾರ ಸಿಗದವರೂ ಶೀತ ಕಾಲದಲ್ಲಿ ಮತ್ತು ವಸಂತ ಋತುವಿನಲ್ಲಿ ಕೂಡ ಸ್ವಲ್ಪ ವ್ಯಾಯಾಮವನ್ನು ಮಾಡಬೇಕೆಂದು ಹೇಳುವನು. (೧೧॥)

**ತಂ ಕೃತ್ವಾನುಸುಖಂ ದೇಹಂ ಮರ್ದಯೇಚ್ಚ ಸಮಂತತಃ ॥೧೨॥**

ಅರ್ಥ:— ವ್ಯಾಯಾಮವನ್ನು ಮಾಡಿದ ನಂತರ ಸುಖವಾಗುವಷ್ಟು ಎಲ್ಲ ಕಡೆಗೆ ಮೈಯನ್ನು ಒತ್ತಿಸಿಕೊಳ್ಳಬೇಕು. (೧೨)

**ತೃಷ್ಣಾ ಕ್ಷಯಃ ಪ್ರತಮಕೋ ರಕ್ತಪಿತ್ತಂ ಶ್ರಮಃ ಕ್ಲಮಃ**
**ಅತಿವ್ಯಾಯಾಮತಃ ಕಾಸೋ ಜ್ವರಶ್ಛರ್ದಿಶ್ಚ ಜಾಯತೇ ॥೧೩॥**

ಅರ್ಥ:— ಅತಿ ವ್ಯಾಯಾಮದಿಂದ ನೀರಡಿಕೆ, ಕ್ಷಯ, ಪ್ರತಮಕ (ಶ್ವಾಸಭೇದ), ರಕ್ತ-ಪಿತ್ತ, ಶರೀರ-ಮನಗಳಿಗೆ ದಣುವು, ಕೆಮ್ಮು, ಜ್ವರ, ವಾಂತಿಗಳು ಉಂಟಾಗುವವು. (೧೩)

**ವ್ಯಾಯಾಮಜಾಗರಾಧ್ವಸ್ತ್ರೀಹಾಸ್ಯಭಾಷ್ಯಾದಿಸಾಹಸಮ್ ॥**
**ಗಜಂ ಸಿಂಹ ಇವಾಕರ್ಷನ್ ಭಜನ್ನತಿ ವಿನಶ್ಯತಿ ॥೧೪॥**

ಅರ್ಥ:— ವ್ಯಾಯಾಮ, ಜಾಗರಣೆ, ಹಾದಿ ನಡಿಯೋಣ, ಸ್ತ್ರೀ-ಸಂಗ, ನಗೆ, ಭಾಷಣಗಳನ್ನು ಶಕ್ತಿ ಮೀರಿ ಮಾಡಿದರೆ ಆನೆಯೊಡನೆ ಯುದ್ಧ ಮಾಡಿದ ಸಿಂಹದಂತೆ ಸಾಯುವನು.

ಟಿಪ್ಪಣೀ:— ಸಿಂಹವು ಪರಾಕ್ರಮಿ ಇದ್ದರೂ ಬಲಿಷ್ಠವಾದ ಆನೆಯೊಡನೆ ಯುದ್ಧ ಮಾಡಿ ಅದನ್ನು ಕೊಂದರೂ ಹಿಂದುಗಡೆಯಲ್ಲಿ ಆ ಶ್ರಮದಿಂದ ತಾನೇ ಸಾಯುತ್ತದೆ. ಅದರಂತೆ ಸಾಹಸ ಮಾಡುವಂಥವನ ಅವಸ್ಥೆಯಾಗುವದು, ಎಂದು ಭಾವವು. (೧೪)

ಉದ್ವರ್ತನಂ ಕಫಹರಂ ಮೇದಸಃ ಪ್ರವಿಲಾಯನಮ್ ||
ಸ್ಥಿರೀಕರಣಮಂಗಾನಾಂ ತ್ವಕ್ಪ್ರಸಾದಕರಂ ಪರಮ್ ||೧೫||

ಅರ್ಥ:— ಉದ್ವರ್ತನವು ( ಸುಗಂಧಿ ದ್ರವ್ಯ ಲೇಪವು ) ಕಫನಾಶಕವೂ, ಕೊಬ್ಬನ್ನು ಕರಗಿಸುವದೂ, ಅವಯವಗಳ ಶಕ್ತಿವರ್ಧಕವೂ, ವಿಶೇಷವಾಗಿ ತ್ವಚೆಯನ್ನು ನಿರ್ಮಲಗೊಳಿಸುವದೂ ಆಗಿರುವದು. (೧೫

ದೀಪನಂ ವೃಷ್ಯಮಾಯುಷ್ಯಂ ಸ್ನಾನಮೂರ್ಜಾಬಲಪ್ರದಮ್ ||
ಕಂಡೂಮಲಶ್ರಮಸ್ವೇದತಂದ್ರಾತೃಡ್ದಾಹಪಾಪ್ಮಜಿತ್ ||೧೬|

ಅರ್ಥ:— ಸ್ನಾನವು ಅಗ್ನಿದೀಪಕ, ಧಾತು ಮತ್ತು ಆಯುಷ್ಯವರ್ಧಕ, ಕಾಂತಿ ಬಲದಾಯಕವಾಗಿದ್ದು, ತುರಿಕೆ, ಮಲ, ಶ್ರಮ, ಬೆವರು ಆಲಸ್ಯ, ನೀರಡಿಕೆ, ದಾಹ, ಪಾಪಗಳ ನಾಶವನ್ನು ಮಾಡುತ್ತದೆ. (೧೬

ಉಷ್ಣಾಂಬುನಾಽಧಃ ಕಾಯಸ್ಯ ಪರಿಷೇಕೋ ಬಲಾವಹಃ ||
ತೇನೈವ ಚೋತ್ತಮಾಂಗಸ್ಯ ಬಲಹೃತ್ ಕೇಶಚಕ್ಷುಷಾಮ್ ||೧೭||

ಅರ್ಥ:— ಬಿಸಿ ನೀರಿನ ಸ್ನಾನವು ತಲೆಯ ಕೆಳಗಿನ ಭಾಗಕ್ಕೆ ಬಲಕರವು. ಆದರೆ ಅದೇ ಬಿಸಿನೀರು ತಲೆಯ ಮೇಲೆ ಹಾಕುವದರಿಂದ ಕಣ್ಣು-ಕೂದಲುಗಳ ಬಲವನ್ನು ಕಳೆಯುತ್ತದೆ.

**ಟಿಪ್ಪಣೀ**— 'ಇದರ ಮೇಲಿಂದ ಒಂದೇ ಕಾಲಕ್ಕೆ ತಲೆಯ ಮೇಲೆ ತಣ್ಣೀರನ್ನೂ, ಮೈಮೇಲೆ ಬಿಸಿ ನೀರನ್ನೂ ಹಾಕಿಕೊಳ್ಳಬೇಕೆಂಬ ಅರ್ಥವಲ್ಲ. ಕೂದಲು, ಕಣ್ಣುಗಳಿಗೆ ಬಲ ಬಯಸುವವರು ತಣ್ಣೀರಿನಿಂದಲೂ, ಶರೀರ ಬಲವನ್ನು ಅಪೇಕ್ಷೆ ಮಾಡುವವರು ಬಿಸಿನೀರಿನಿಂದಲೂ ಸ್ನಾನ ಮಾಡಬೇಕೆಂಬ ಭಾವವು. ಇಲ್ಲವಾದರೆ ಒಂದೇ ದೇಹದಲ್ಲಿ ವಿರುದ್ಧಕ್ರಿಯೆಗಳ ಸಂಕರವಾಗುವದು' ಎಂದು ಹೇಮಾದ್ರಿಯು ಹೇಳುತ್ತಾನೆ. ( ೧೭ )

ಸ್ನಾನಮರ್ದಿತನೇತ್ರಾಸ್ಯಕರ್ಣರೋಗಾತಿಸಾರಿಷು ||
ಆಧ್ಮಾನಪೀನಸಾಜೀರ್ಣಭುಕ್ತವತ್ಸು ಚ ಗರ್ಹಿತಮ್ || ||೧೮||

ಅರ್ಥಃ— ಅರ್ದಿತ (ವಾತರೋಗಭೇದ), ಕಣ್ಣು, ಬಾಯಿ, ಕಿವಿಗಳ ರೋಗ: ಅತಿಸಾರ, ಹೊಟ್ಟೆಯುಬ್ಬರ, ನೆಗಡಿ, ಅಜೀರ್ಣ ರೋಗಿಗಳೂ ಮತ್ತು ಆಗ ಉಂಡವನೂ ಸ್ನಾನವನ್ನು ಮಾಡಬಾರದು (೧೮)

ಜೀರ್ಣೇ ಹಿತಂ ಮಿತಂ ಚಾದ್ಯಾನ್ನ ವೇಗಾನ್ಈರಯೇದ್ಬಲಾತ್ ||
ನ ವೇಗಿತೋಽನ್ಯಕಾರ್ಯಃ ಸ್ಯಾನ್ನಾಜಿತ್ವಾ ಸಾಧ್ಯಮಾಮಯಮ್ ||೧೯||

ಅರ್ಥಃ— ತಿಂದ ಅನ್ನವು ಜೀರ್ಣವಾದನಂತರ ಹಿತಕರವಾದ ಅನ್ನವನ್ನು ಮಿತಿಯಿಂದ ತಿನ್ನಬೇಕು. ಬಲುಮೆಯಿಂದ (ಮಲಮೂತ್ರಾದಿ) ವೇಗಗಳನ್ನು ಪ್ರವರ್ತಿಸಬಾರದು. ಮತ್ತು ಪ್ರವೃತ್ತವಾದಾಗ್ಗೆ ಎರಡನೇ ಕೆಲಸದಲ್ಲಿ ತೊಡಗಿ ತಡೆಯಬಾರದು. ಸಾಧ್ಯವಾದ ಬೇನೆಯನ್ನು ವಾಸಿ ಮಾಡಿಕೊಳ್ಳದೆ ಎರಡನೇ ಕೆಲಸದಲ್ಲಿ ತೊಡಗಬಾರದು. (೧೯)

ಸುಖಾರ್ಥಾಃ ಸರ್ವಭೂತಾನಾಂ ಮತಾಃ ಸರ್ವಾಃ ಪ್ರವೃತ್ತಯಃ ||
ಸುಖಂ ಚ ನ ವಿನಾ ಧರ್ಮಾತ್ತಸ್ಮಾದ್ಧರ್ಮಪರೋ ಭವೇತ್ ||೨೦||

ಅರ್ಥಃ— ಎಲ್ಲ ಪ್ರಾಣಿಗಳ ಪ್ರವೃತ್ತಿಗಳೆಲ್ಲ ಸುಖಕ್ಕಾಗಿಯೇ ಇರುತ್ತವೆ. ಸುಖವಂತೂ ಧರ್ಮದ ಹೊರತಾಗಿ ಸಿಗದು. ಕಾರಣ ಧರ್ಮಿಷ್ಠನಾಗಬೇಕು. ಚರಕಾಚಾರ್ಯರು ಸುಖವೆಂದರೆ ಆರೋಗ್ಯವೆಂದು ಅರ್ಥ ಮಾಡಿರುವರು. (೨೦)

ಭಕ್ತ್ಯಾ ಕಲ್ಯಾಣಮಿತ್ರಾಣಿ ಸೇವೇತೇತರದೂರಗಃ ||

ಅರ್ಥಃ— ಕೆಟ್ಟಮಿತ್ರರಿಂದ ದೂರವಿದ್ದುಕೊಂಡು ಚಲೋ ಮಿತ್ರರನ್ನು ಭಕ್ತಿಯಿಂದ ಸೇವಿಸಬೇಕು. (೨೦||)

ಹಿಂಸಾಸ್ತೇಯಾನ್ಯಥಾಕಾಮಂ ಪೈಶುನ್ಯಂ ಪರುಷಾನೃತೇ ||೨೧||

ಸಂಭಿನ್ನಾಲಾಪಂ ವ್ಯಾಪಾದಮಭಿಧ್ಯಾಂ ದೃಗ್ವಿಪರ್ಯಯಮ್ ||
ಪಾಪಂ ಕರ್ಮೇತಿ ದಶಧಾ ಕಾಯವಾಙ್ಮಾನಸೈಸ್ತ್ಯಜೇತ್ ||೨೨||

ಅರ್ಥ:--

(೧) ಪರಪೀಡೆ, ಕಳವು, ಹಾದರ, ಈ ಮೂರು ಕಾಯಿಕ ಪಾಪಗಳು.

(೨) ಚಾಡಿ, ಕಠೋರ ಭಾಷಣ, ಅಸತ್ಯ ಭಾಷಣ, ಅಸಂಬದ್ಧ ಪ್ರಲಾಪ ಎಂಬ ನಾಲ್ಕು ವಾಚಿಕ ಪಾಪಗಳು.

(೩) ಪರರಿಗೆ ಕೆಡಕು ಬಗೆಯೋಣ, ಅಸೂಯೆ, ನಾಸ್ತಿಕತೆ, ( ಶಾಸ್ತ್ರದಲ್ಲಿ ಅವಿಶ್ವಾಸ ), ಈ ಮೂರು ಮಾನಸಿಕ ಪಾಪಗಳು. ಈ ಹತ್ತು ಪಾಪ ಕೆಲಸಗಳನ್ನು ಬಿಡಬೇಕು. (೨೨)

**ಅವೃತ್ತಿವ್ಯಾಧಿಶೋಕಾರ್ತಾನನುವರ್ತೇತ ಶಕ್ತಿತಃ ||**

ಅರ್ಥ:— ಉಪಜೀವಿಕೆಯ ಸಾಧನವಿಲ್ಲದವರಿಗೂ, ಬೇನೆ, ದುಃಖಗಳಿಂದ ಪೀಡಿತರಿಗೂ ಶಕ್ತ್ಯನುಸಾರ ಸಹಾಯ ಮಾಡಬೇಕು. (೨೨||)

**ಆತ್ಮವತ್ಸತತಂ ಪಶ್ಯೇದಪಿ ಕೀಟಪಿಪೀಲಿಕಂ ||೨೩||**

ಅರ್ಥಃ— ಯಾವಾಗಲೂ ಹುಳ, ಇರುವೆಗಳನ್ನು ಕೂಡಾ ತನ್ನಂತೆ ಬಗೆಯಬೇಕು. (೨೩)

**ಅರ್ಚಯೇದ್ದೇವಗೋವಿಪ್ರವೃದ್ಧವೈದ್ಯನೃಪಾತಿಥೀನ್ ||**

ಅರ್ಥಃ— ದೇವರು, ಆಕಳು, ಬ್ರಾಹ್ಮಣ, ವೃದ್ಧ, ವೈದ್ಯ, ಅರಸು, ಅತಿಥಿಗಳನ್ನು ಪೂಜಿಸಬೇಕು. (೨೩||)

**ವಿಮುಖಾನ್ನಾರ್ಥಿನಃ ಕುರ್ಯಾನ್ನಾವಮನ್ಯೇತ ನಾಕ್ಷಿಪೇತ್ || ೨೪ ||**

ಅರ್ಥಃ— ಭಿಕ್ಷುಕರಿಗೆ ಇಲ್ಲವೆಂದು ತಿರುಗಿ ಕಳಿಸಬಾರದು. ಅವರಿಗೆ ಅಪಮಾನ ಮಾಡಬಾರದು. ಅವರ ನಿಂದೆ ಮಾಡಬಾರದು. (೨೪)

**ಉಪಕಾರಪ್ರಧಾನಃ ಸ್ಯಾದಪಕಾರಪರೇಽಪ್ಯರೌ ||**

ಅರ್ಥಃ— ಅಪಕಾರ ಮಾಡುವ ಶತ್ರುವಿಗೆ ಕೂಡ ಉಪಕಾರ ಮಾಡುತ್ತಿರಬೇಕು. (||೩೪||)

**ಸಂಪದ್ವಿಪತ್ಸ್ವೇಕಮನಾ ಹೇತಾವೀರ್ಷ್ಯೇತ್ಫಲೇ ನ ತು ||೩೫||**

ಅರ್ಥ:— ಊರ್ಜಿತ-ಕಾಲದಲ್ಲಿಯೂ ಸಂಕಟ-ಸಮಯದಲ್ಲಿಯೂ ಒಂದೇ ರೀತಿ ಇರಬೇಕು. ಫಲದಲ್ಲಿ ಈರ್ಷ್ಯೆ ಹಿಡಿಯದೆ ಅದರ ಕಾರಣ ದಲ್ಲಿ ಸ್ಪರ್ಧೆ ಮಾಡಬೇಕು.

**ಟಿಪ್ಪಣಿಃ—** ಧನವಂತನ ಹಣಕ್ಕಾಗಿ ಅಸೂಯೆ ಪಡದೆ ಅವನು ಧನಾರ್ಜನಕ್ಕಾಗಿ ಮಾಡಿದ ಉದ್ಯೋಗದಲ್ಲಿ ಸ್ಪರ್ಧೆ ಮಾಡಬೇಕೆಂದು ಭಾವವು. (೩೫)

**ಕಾಲೇ ಹಿತಂ ಮಿತಂ ಬ್ರೂಯಾದವಿಸಂವಾದಿ ಪೇಶಲಮ್ ||**

ಅರ್ಥ:— ಪ್ರಸಂಗ ನೋಡಿ ಹಿತವಾದ, ಮಿತವಾದ, ಸತ್ಯವಾದ, ಸರಳವಾದ ಭಾಷಣವನ್ನು ಮಾಡಬೇಕು. (೩೫||)

**ಪೂರ್ವಾಭಿಭಾಷೀ ಸುಮುಖಃ ಸುಶೀಲಃ ಕರುಣಾಮೃದುಃ ||೩೬||**
**ನೈಕಃ ಸುಖೀ ನ ಸರ್ವತ್ರ ವಿಶ್ರಬ್ಧೋ ನ ಚ ಶಂಕಿತಃ ||**

ಅರ್ಥ:— ( ಪರಿಚಿತರು ಬಂದರೆ ) ತಾನೇ ಮೊದಲು ಮಾತನಾಡಿಸಬೇಕು. ಪ್ರಸನ್ನಮುಖನೂ, ಸುಸ್ವಭಾವಿಯೂ, ದಯಾರ್ದ್ರನೂ ಆಗಿರಬೇಕು. ಒಂಟಿಗನೂ ಎಲ್ಲ ಕಡೆಯಲ್ಲಿ ವಿಶ್ವಾಸವಿಡುವವನೂ ಅಥವಾ ಎಲ್ಲ ಕಡೆಯಲ್ಲಿ ಸಂಶಯವುಳ್ಳವನೂ ಸುಖಿಯಾಗಲಾರನು. (೩೬||)

**ನ ಕಂಚಿದಾತ್ಮನಃ ಶತ್ರುಂ ನಾತ್ಮಾನಂ ಕಸ್ಯಚಿದ್ರಿಪುಮ್ ||೩೭||**
**ಪ್ರಕಾಶಯೇನ್ನಾಪಮಾನಂ ನ ಚ ನಿಸ್ನೇಹತಾಂ ಪ್ರಭೋಃ ||**

ಅರ್ಥ:— ಇವನು ತನ್ನ ಶತ್ರುವೆಂದೂ, ಅಥವಾ ತಾನು ಇಂಥವನ ಶತ್ರುವೆಂದೂ ಮತ್ತು ತನಗಾದ ಅಪಮಾನವನ್ನೂ, ಯಜಮಾನನ ಅಪ್ರೀತಿಯನ್ನೂ ಪ್ರಕಟಮಾಡಬಾರದು. (೩೭||)

**ಜನಸ್ಯಾಶಯಮಾಲಕ್ಷ್ಯ ಯೋ ಯಥಾ ಪರಿತುಷ್ಯತಿ ||೩೮||**
**ತಂ ತಥೈವಾನುವರ್ತೇತ ಪರಾರಾಧನಪಂಡಿತಃ ||**

ಅರ್ಥ:— ಪರರನ್ನು ಸಂತೋಷಗೊಳಿಸುವದರಲ್ಲಿ ಪಾಂಡಿತ್ಯವನ್ನು ಪಡೆದು ಆಯಾ ಅಭಿಪ್ರಾಯವನ್ನು ನೋಡಿ ಯಾವನು ಹೇಗೆ ಸಂತೋಷ ಪಡುವನೋ ಅವನನ್ನು ಹಾಗೆಯೇ ಅನುಸರಿಸಬೇಕು. (೨೮||)

**ನ ಪೀಡಯೇದಿಂದ್ರಿಯಾಣಿ ನಚೈತಾನ್ಯತಿ ಲಾಲಯೇತ್ ||೨೯||**

ಅರ್ಥ:— ಇಂದ್ರಿಯಗಳನ್ನು ಬಹಳ ಪೀಡಿಸಲೂ ಬಾರದು; ಬಹಳ ಸುಖಿಸಲೂ ಬಾರದು.

**ತ್ರಿವರ್ಗಶೂನ್ಯಂ ನಾರಂಭಂ ಭಜೇತ್ತಂ ಚಾವಿರೋಧಯನ್ ||**

ಅರ್ಥ:— ಧರ್ಮಾರ್ಥಕಾಮಗಳಲ್ಲಿ ಒಂದನ್ನಾದರೂ ಸಾಧಿಸದ ಕೆಲಸವನ್ನು ಮಾಡಬಾರದು, ಮತ್ತು ಅವು ಪರಸ್ಪರ ವಿರುದ್ಧವಾಗದಂತೆ ಅಂದರೆ ಧರ್ಮಸಾಧಿಸುವಾಗ್ಗೆ ಅರ್ಥ ಕಾಮಗಳೂ, ಅರ್ಥಸಾಧಿಸುವಾಗ್ಗೆ ಧರ್ಮಕಾಮಗಳೂ ಕೆಡದಂತೆ ಕೆಲಸವನ್ನು ಮಾಡಬೇಕು.

**ಟಿಪ್ಪಣಿ:—** ಮೋಕ್ಷವು ಧರ್ಮದಿಂದಲೇ ದೊರೆಯುವದರಿಂದ ತ್ರಿವರ್ಗ ವೆಂದು ಹೇಳಿರುವರು.

**ಅನುಯಾಯಾತ್ಪ್ರತಿಪದಂ ಸರ್ವಧರ್ಮೇಷು ಮಧ್ಯಮಾಮ್||೩೦||**

ಅರ್ಥ:— ಎಲ್ಲ ಆಚಾರಗಳಲ್ಲಿ ನಡುವಿನ ಮಾರ್ಗವನ್ನು ಹಿಡಿಯಬೇಕು.

**ಟಿಪ್ಪಣಿ:—** ಅತಿ ಆಸಕ್ತಿಯನ್ನು ಮಾಡಬಾರದೆಂಬ ಭಾವವು. ಹೇಮಾದ್ರಿಯು ರಾಗದ್ವೇಷರಹಿತಬುದ್ಧಿಯನ್ನು ಹಿಡಿಯಬೇಕೆಂದು ಹೇಳುವನು. ( ೩೦ )

**ನೀಚರೋಮನಖಶ್ಮಶ್ರುರ್ನಿರ್ಮಲಾಂಘ್ರಿಮಲಾಯನಃ ||**

ಅರ್ಥ:— ಕೂದಲು, ಉಗುರು, ಮೀಸೆಗಳನ್ನು ಸಣ್ಣಾಗಿ ಇಡಬೇಕು. ಕಾಲು, ಕಣ್ಣು, ಕಿವಿ, ಮೂಗು, ಬಾಯಿ, ಗುದ, ಮೂತ್ರ-ಮಾರ್ಗ ಮುಂತಾದ ಮಲಮಾರ್ಗಗಳು ಸ್ವಚ್ಛವಾಗಿರಬೇಕು.

ಟಿಪ್ಪಣೆ:— ಚರಕಾಚಾರ್ಯರು ೫ ದಿನಕ್ಕೊಮ್ಮೆ ಕ್ಷೌರಮಾಡಿಕೊಳ್ಳಲು ಹೇಳುವರು. (೩೦॥)

**ಸ್ನಾನಶೀಲಃ ಸುಸುರಭಿಃ ಸುವೇಷೋಽನುಲ್ಬಣೋಜ್ಜ್ವಲಃ ॥೩೧॥**
**ಧಾರಯೇತ್ಸತತಂ ರತ್ನಸಿದ್ಧಮಂತ್ರಮಹೌಷಧೀಃ ॥**

ಅರ್ಥ:— ದಿನಾಲು ಸ್ನಾನಮಾಡಬೇಕು. ಸುಗಂಧವನ್ನು ಹಚ್ಚಿಕೊಳ್ಳಬೇಕು. ಸುವೇಷವನ್ನು ಧರಿಸಬೇಕು. ಆದರೆ ಬಹಳ ಶೃಂಗಾರ ಮಾಡಬಾರದು. ಯಾವಾಗಲು ರತ್ನ, ಮಂತ್ರಸಿದ್ಧವಾದ ತಾಯಿತ, ಸಹದೇವಿ ಮುಂತಾದ ಔಷಧಿಗಳನ್ನು ಧರಿಸುತ್ತಿರಬೇಕು. (೩೧॥)

**ಸಾತಪತ್ರಪದತ್ರಾಣೋ ವಿಚರೇದ್ಯುಗಮಾತ್ರದೃಕ್ ॥೩೨॥**

ಅರ್ಥಃ— ಕೊಡೆ ಕಾಲಮರಿಗಳನ್ನು ಧರಿಸಬೇಕು. ಮತ್ತು ಮುಂದಿರುವ ಪದಾರ್ಥ ತಿಳಿಯುವದಕ್ಕಾಗಿ ಒಂದು ಮಾರಿನ ಮೇಲೆ ದೃಷ್ಟಿ ಇಟ್ಟು ನಡೆಯಬೇಕು.

ಟಿಪ್ಪಣೆಃ— ಕೊಡೆಯು ಕಣ್ಣಿಗೆ ಹಿತಕರವು, ಶರೀರಕ್ಕೆ ತೇಜವನ್ನು ಕೊಡುವದು, ಗಾಳಿ ಮಳೆ ಬಿಸಲುಗಳನ್ನು ನಿವಾರಿಸುವದು; ಕಾಲಮರಿಯು ಶ್ರಮಹಾರಕವಿದ್ದು ಬಲ, ದೃಷ್ಟಿ, ಶುಕ್ರಗಳನ್ನು ರಕ್ಷಿಸುವದು. (೩೨)

**ನಿಶಿ ಚಾತ್ಯಯಿಕೇ ಕಾರ್ಯೇ ದಂಡೀ ಮೌಲೀ ಸಹಾಯವಾನ್ ॥**

ಅರ್ಥ.— ರಾತ್ರಿಯಲ್ಲಿ ಅವಶ್ಯ ಕೆಲಸವಿದ್ದರೆ ಕೈಯಲ್ಲಿ ಬಡಿಗೆಯನ್ನು ತಕ್ಕೊಂಡು, ತಲೆಯ ಮೇಲೆ ರುಮಾಲವನ್ನು ಹಾಕಿಕೊಂಡು, ಸಂಗಡ ಒಬ್ಬರನ್ನು ಕರಕೊಂಡು ಹೋಗಬೇಕು. (೩೨॥)

**ಚೈತ್ಯಪೂಜ್ಯಧ್ವಜಾಶಸ್ತಚ್ಛಾಯಾಭಸ್ಮತುಷಾಶುಚೀನ್ ॥೩೩॥**
**ನಾಕ್ರಾಮೇಚ್ಛರ್ಕರಾಲೋಷ್ಠಬಲಿಸ್ನಾನಭುವೋ ನ ಚ ॥**

ಅರ್ಥಃ— ದೇವರನ್ನು ಕೂಡಿಸಿದ ಗಿಡವನ್ನೂ, ಪೂಜ್ಯರನ್ನೂ, ಧ್ವಜ ( ನಿಶಾನೆ ) ಗಳನ್ನೂ, ಅಪವಿತ್ರರ ನೆರಳನ್ನೂ, ಬೂದಿಯನ್ನೂ,

ಹೊಟ್ಟನ್ನೂ, ಹೊಲಸು ಪದಾರ್ಥಗಳನ್ನೂ, ಉಸುಕನ್ನೂ, ಹೆಂಟೆಯನ್ನೂ, ಬಲಿಕೊಡುವ ಸ್ನಾನಮಾಡುವ ಭೂಮಿಗಳನ್ನೂ ತುಳಿಯಬಾರದು. (೩೩||)

**ನದೀಂ ತರೇನ್ನ ಬಾಹುಭ್ಯಾಂ, ನಾಗ್ನಿಸ್ಕಂಧಮಭಿವ್ರಜೇತ್ ||೩೪||**
**ಸಂದಿಗ್ಧನಾವಂ ವೃಕ್ಷಂ ಚ ನಾರೋಹೇದ್ದುಷ್ಟಯಾನವತ್ ||**

ಅರ್ಥಃ— ತೋಳುಗಳಿಂದ ನದಿಯನ್ನು ಈಸಬಾರದು, ಬೆಂಕಿಯ ರಾಶಿಯ ಎದುರು ಹೋಗಬಾರದು, ದುಷ್ಟ ವಾಹನವನ್ನೂ, ಉರುಳುವ ಸಂಶಯವುಳ್ಳ ನಾವನ್ನೂ ಮತ್ತು ಗಿಡವನ್ನೂ ಏರಬಾರದು. (೩೪||)

**ನಾಸಂವೃತಮುಖಃ ಕುರ್ಯಾತ್ ಕ್ಷುತಿಹಾಸ್ಯವಿಜೃಂಭಣಮ್ ||೩೫||**

ಅರ್ಥಃ— ಬಾಯಿಯನ್ನು ಮುಚ್ಚಿಕೊಳ್ಳದೆ ಶೀನಬಾರದು, ನಗಬಾರದು, ಆಕಳಿಸಬಾರದು. (೩೫)

**ನಾಸಿಕಾಂ ನ ವಿಕುಷ್ಣೀಯಾನ್ನಾಕಸ್ಮಾದ್ವಿಲಿಖೇದ್ಭುವಮ್ ||**
**ನಾಂಗೈಶ್ಚೇಷ್ಟೇತ ವಿಗುಣಂ, ನಾಸೀತೋತ್ಕಟಕಶ್ಚಿರಮ್ ||೩೬||**

ಅರ್ಥಃ— ಮೂಗನ್ನು ಕೆರಿಯಬಾರದು. ಕಾರಣವಿಲ್ಲದೆ ನೆಲ ಕೆದರಬಾರದು. ಅವಯವಗಳನ್ನು ಅಡ್ಡತಿಡ್ಡಾಗಿ ಉಪಯೋಗಿಸಬಾರದು. ತುದಿಗುಂಡಿಯಿಂದ ಬಹಳ ಹೊತ್ತು ಕೂಡ್ರಬಾರದು, (ಮೂಲವ್ಯಾಧಿಯಾಗುವದು.)

**ಟಿಪ್ಪಣಿ:—** ಸುಶ್ರುತದಲ್ಲಿ ಕಂಠ, ಕಿವಿ, ಮೂಗು, ಕಣ್ಣು, ಹಲ್ಲುಗಳನ್ನೂ ಸುಮ್ಮನೆ ಕೆದರಬಾರದೆಂದು ಹೇಳಿದೆ. (೩೬)

**ದೇಹವಾಕ್ಚೇತಸಾಂ ಚೇಷ್ಟಾಃ ಪ್ರಾಕ್ ಶ್ರಮಾದ್ವಿನಿವರ್ತಯೇತ್||**
**ನೋರ್ಧ್ವಜಾನುಶ್ಚಿರಂ ತಿಷ್ಠೇತ್ ನಕ್ತಂ ಸೇವೇತ ನ ದ್ರುಮಮ್||೩೭||**

ಅರ್ಥಃ— ಕಾಯಿಕ, ವಾಚಿಕ, ಮಾನಸಿಕ ಕರ್ಮಗಳನ್ನು ಶ್ರಮವಾಗುವ ಮೊದಲೇ ನಿಲ್ಲಿಸಬೇಕು. ಮೊಳಕಾಲು ಮೇಲೆ ಮಾಡಿ ಬಹಳ ಹೊತ್ತು ಮಲಗಬಾರದು. ರಾತ್ರಿಯಲ್ಲಿ ಗಿಡವನ್ನು ಆಶ್ರಯಿಸಬಾರದು. (೩೭)

ತಥಾ ಚತ್ವರಚೈತ್ಯಾಂತಶ್ಚತುಷ್ಪಥಸುರಾಲಯಾನ್ ||
ಸೂನಾಟವೀಶೂನ್ಯಗೃಹಶ್ಮಶಾನಾನಿ ದಿವಾಽಪಿ ನ ||೩೮||

ಅರ್ಥಃ— ಅದರಂತೆ ಹರಟೆಕೊಚ್ಚುವ ಅಡ್ಡೆ (ಸ್ಥಳ) ಗಳಿಗೂ, ದೇವರನ್ನು ಕೂಡ್ರಿಸಿದ ಗಿಡದ ಸಮೀಪಕ್ಕೂ, ನಾಲ್ಕು ಹಾದಿ ಕೂಡುವಲ್ಲಿಯೂ, ದೇವಾಲಯಕ್ಕೂ ರಾತ್ರಿ ಹೋಗಬಾರದು. ವಧಸ್ಥಾನ, ನಿರ್ಜನ ಪ್ರದೇಶ, ಹಾಳುಮನೆ, ಸ್ಮಶಾನಗಳಿಗೆ ಹಗಲು ಕೂಡಾ ಹೋಗಬಾರದು. (೩೮)

ಸರ್ವಥೇಕ್ಷೇತ ನಾದಿತ್ಯಂ, ನ ಭಾರಂ ಶಿರಸಾ ವಹೇತ್ ||
ನೇಕ್ಷೇತ ಪ್ರತತಂ ಸೂಕ್ಷ್ಮಂ ದೀಪ್ತಾಮೇಧ್ಯಾಪ್ರಿಯಾಣಿ ಚ ||೩೯||

ಅರ್ಥಃ— ಸೂರ್ಯನನ್ನು (ಬರಿಗಣ್ಣಿನಿಂದ) ಎಂದಿಗೂ ನೋಡಕೂಡದು. ತಲೆಯ ಮೇಲೆ ಒಜ್ಜೆ ಹೊರಬಾರದು. ಬಹಳ ಸಣ್ಣ, ಹೊಳೆಯುವ, ಅಪವಿತ್ರ, ಅಪ್ರಿಯವಾಹ ವಸ್ತುಗಳನ್ನು (ಒಂದೇ ಸವನೆ) ನೋಡಬಾರದು. (೩೯)

ಮದ್ಯವಿಕ್ರಯಸಂಧಾನದಾನಾದಾನಾನಿ ನಾಚರೇತ್ ||

ಅರ್ಥ:— ಸೆರೆಯನ್ನು ಮಾರುವದು, ಮಾಡುವದು ಮತ್ತು ಕೊಡತಕ್ಕೊಳ್ಳುವದು ಮುಂತಾದುದನ್ನು ಮಾಡಬಾರದು.

ಟಿಪ್ಪಣಿ:— ಆಸವಾರಿಷ್ಟಗಳು ಔಷಧಗಳಾದ್ದರಿಂದ ಅವುಗಳಿಗೆ ಈ ನಿಯಮವಿಲ್ಲ. (೩೯||)

ಪುರೋವಾತಾತಪರಜಸ್ತುಷಾರಪರುಷಾನಿಲಾನ್ ||೪೦||

ಅನೃಜುಃ ಕ್ಷವಥೂದ್ಗಾರಕಾಸಸ್ವಪ್ನಾನ್ನಮೈಥುನಮ್ ||
ಕೂಲಚ್ಛಾಯಾಂ ನೃಪದ್ವಿಷ್ಟಂ ವ್ಯಾಲದಂಷ್ಟ್ರಿವಿಷಾಣಿನಃ ||೪೧||

ಹೀನಾನಾರ್ಯಾತಿನಿಪುಣಸೇವಾಂ ವಿಗ್ರಹಮುತ್ತಮೈಃ ||
ಸಂಧ್ಯಾಸ್ವಭ್ಯವಹಾರಸ್ತ್ರೀಸ್ವಪ್ನಾಧ್ಯಯನಚಿಂತನಮ್ ||೪೨||

ಶತ್ರುಸತ್ರಗಣಾಕೀರ್ಣಗಣಿಕಾಪಣಿಕಾಶನಮ್ ||
ಗಾತ್ರವಕ್ತ್ರನಖೈರ್ವಾದ್ಯಂ ಹಸ್ತಕೇಶಾವಧೂನನಮ್ ||೪೬||

ತೋಯಾಗ್ನಿಪೂಜ್ಯಮಧ್ಯೇನ ಯಾನಂ ಧೂಮಂ ಶವಾಶ್ರಯಮ್ ||
ಮದ್ಯಾತಿಸಕ್ತಿಂ ವಿಶ್ರಂಭಸ್ವಾತಂತ್ರ್ಯೇ ಸ್ತ್ರೀಷು ಚ ತ್ಯಜೇತ್ ||೪೭||

ಅರ್ಥಃ— ಪೂರ್ವದ ಗಾಳಿ ಮತ್ತು ಬಿಸಿಲು, ಧೂಳು, ತುಂತುರ ಹನಿ, ಬಿರುಗಾಳಿಗಳನ್ನು ತ್ಯಜಿಸಬೇಕು. ಸರಳವಾಗಿ ಇರದೆ ಶೀನು, ತೇಗು, ಕೆಮ್ಮು, ಮಲಗುವದು, ಉಣ್ಣುವದು ಮತ್ತು ಸಂಭೋಗಗಳನ್ನು ಮಾಡ ಬಾರದು. ನದಿಯ ದಂಡೆಯು ನೆರಳನ್ನು, ಅರಸನ ಶತ್ರುವನ್ನು ಸೇವಿಸಬಾರದು. ಆನೆ, ಕಚ್ಚುವ ಮತ್ತು ಕೋಡುಳ್ಳ ಪ್ರಾಣಿಗಳ ಹತ್ತರ ಹೋಗಬಾರದು. ನೀಚ ದುಷ್ಟ ಬಹುಜಾಣ (ಯಾವದಾದರೊಂದು ಕೆಲಸವನ್ನು ಕೆಡುವಂತೆ ಅತಿಯಾಗಿ ಮಾಡುವವ)ರ ಸೇವೆಯನ್ನೂ, ಸಜ್ಜನರೊಡನೆ ಜಗಳವನ್ನೂ, ಸಂಧ್ಯಾಕಾಲದಲ್ಲಿ ಊಟ ಸಂಭೋಗ ಮಲಗೋಣ ಅಭ್ಯಾಸ ಧ್ಯಾನ ಗಳನ್ನೂ, ಶತ್ರುಗಳ ಅಥವಾ ಯಜ್ಞದ, ನಾಲ್ಕು ಜನರು ಪಟ್ಟೀ ಹಾಕಿ ಮಾಡಿದ, ಸಿಕ್ಕವರು (ಚಲೋ, ಕೆಟ್ಟ) ಬಂದು ಉಣ್ಣುವ, ವೇಶ್ಯೆಯರ, ( ಅಪ್ರಾಮಾಣಿಕ ) ಅಂಗಡಿಕಾರರ ಅನ್ನವನ್ನು ತ್ಯಜಿಸಬೇಕು. ಕೈ ಬಡಿ ಯೋಣ, ಬಾಯಿಂದ ಫುರ್ ಫುರ್ ಶಬ್ದ ಮಾಡೋಣ ಮುಂತಾದ ವಿಕೃತ ವಾದನ ಮಾಡಬಾರದು. (ಸುಮ್ಮನೆ) ಕೈ, ಕೂದಲು ಬೀಸಬಾರದು. ನೀರು, ಬೆಂಕಿ ಮತ್ತು ಪೂಜ್ಯ ಜನರ ನಡುವೆ ಹಾಯಬಾರದು. ಹೆಣದ ಹೊಗೆಯನ್ನು ತಕ್ಕೊಳ್ಳಬಾರದು. ಮದ್ಯದ ಅತಿ ಸೇವನೆಯನ್ನು ಮಾಡ ಬಾರದು. ಹೆಂಗಸರಲ್ಲಿ ವಿಶ್ವಾಸವಿಡಬಾರದು ಮತ್ತು ಅವರಿಗೆ ಸ್ವಾತಂತ್ರ್ಯ ಕೊಡಬಾರದು. (೪೭)

ಆಚಾರ್ಯಃ ಸರ್ವಚೇಷ್ಟಾಸು ಲೋಕ ಏವ ಹಿ ಧೀಮತಃ ||
ಅನುಕುರ್ಯಾತ್ತಮೇವಾತೋ ಲೌಕಿಕೇಽರ್ಥೇ ಪರೀಕ್ಷಕಃ ||೪೮||

ಅರ್ಥಃ— ಪಂಡಿತನಿಗೆ ಎಲ್ಲ ಕೆಲಸಗಳಲ್ಲಿ ಜನವೇ ಗುರುವು. ಆದ್ದರಿಂದ ವಿಚಾರವಂತ ಮನುಷ್ಯನು ಲೌಕಿಕ ವಿಷಯದಲ್ಲಿ ಲೋಕವನ್ನೇ ಅನುಸರಿಸಬೇಕು. (೪೮)

**ಆರ್ದ್ರಸಂತಾನತಾ ತ್ಯಾಗಃ ಕಾಯವಾಕ್ಚೇತಸಾಂ ದಮಃ ||**
**ಸ್ವಾರ್ಥಬುದ್ಧಿಃ ಪರಾರ್ಥೇಷು ಪರ್ಯಾಪ್ತಮಿತಿ ಸದ್ವ್ರತಮ್ ||೪೬||**

ಅರ್ಥ:— ದಯೊಳುತ್ವ, ದಾನ, ಶರೀರ-ವಾಣಿ-ಮನಸ್ಸುಗಳ ನಿಗ್ರಹ, ಪರಾರ್ಥದಲ್ಲಿಯೇ ಸ್ವಾರ್ಥಬುದ್ಧಿ ಇಷ್ಟು ಸದಾಚಾರಗಳು (ಇದ್ದರೆ) ಸಾಕು. (೪೬)

**ನಕ್ತಂದಿನಾನಿ ಮೇ ಯಾಂತಿ ಕಥಂಭೂತಸ್ಯ ಸಂಪ್ರತಿ ||**
**ದುಃಖಭಾಙ್ನ ಭವತ್ಯೇವಂ ನಿತ್ಯಂ ಸನ್ನಿಹಿತಸ್ಮೃತಿಃ ||೪೭||**

ಅರ್ಥಃ— ಹಗಲು ರಾತ್ರಿಗಳಲ್ಲಿ ಎಂಥ ಕೆಲಸಮಾಡುತ್ತ ನಾನು ದಿನವನ್ನು ಕಳೆಯುತ್ತಿರುವೆನು ಎಂಬದನ್ನು ಯಾವಾಗಲೂ ನೆನಪಿನಲ್ಲಿಟ್ಟು ವರ್ತಿಸುತ್ತಿದ್ದರೆ ದುಃಖಿಯಾಗಲಾರನು. (೪೭)

**ಇತ್ಯಾಚಾರಃ ಸಮಾಸೇನ, ಯಂ ಪ್ರಾಪ್ನೋತಿ ಸಮಾಚರನ್ ||**
**ಆಯುರಾರೋಗ್ಯಮೈಶ್ವರ್ಯಂ ಯಶೋ ಲೋಕಾಂಶ್ಚ**
**ಶಾಶ್ವತಾನ್ ||೪೮||**

ಅರ್ಥಃ— ಸಂಕ್ಷೇಪವಾಗಿ ಇಷ್ಟು ಸದಾಚಾರವು ( ಹೇಳಿದೆ ). ಇದನ್ನು ಆಚರಿಸುವದರಿಂದ ಆಯುಷ್ಯ, ಆರೋಗ್ಯ, ಧನ, ಕೀರ್ತಿ ಮತ್ತು ಶಾಶ್ವತವಾದ ಲೋಕಗಳನ್ನು ಹೊಂದುವನು.

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ದಿನಚರ್ಯಾ ನಾಮ ದ್ವಿತೀಯೋಽಧ್ಯಾಯಃ ಸಮಾಪ್ತಃ ||**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ ‘ ರಹಸ್ಯಪ್ರಕಾಶಿನೀ ’ ಎಂಬ ‘ ಅಷ್ಟಾಂಗಹೃದಯ ’ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ ದಿನಚರ್ಯೆ ಎಂಬ ೨ನೆಯ ಅಧ್ಯಾಯವು ಮುಗಿದುದು.



# ೩ನೆಯ ಅಧ್ಯಾಯ

ಹಿಂದಿನ ಅಧ್ಯಾಯದಲ್ಲಿ ದಿನಾಲು ಮಾಡತಕ್ಕ ಸಾಮಾನ್ಯ ಆಹಾರ-ವಿಹಾರಗಳನ್ನು ಹೇಳಿದರು. ಇನ್ನು ಮೇಲೆ ಋತು ವಿಶೇಷಗಳಲ್ಲಿ ಮಾಡಬೇಕಾದ ಅವುಗಳನ್ನು ಹೇಳುತ್ತಾರೆ.

**ಅಥಾತ * ಋತುಚರ್ಯಾಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥಃ— ಇನ್ನು ಮೇಲೆ ಋತುಚರ್ಯೆ (ಋತುಗಳಲ್ಲಿ ಮಾಡಬೇಕಾದವನ್ನು ಹೇಳಿದ) ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ।**

ಅರ್ಥಃ— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದರು.

**ಮಾಸೈರ್ದ್ವಿಸಂಖ್ಯೈರ್ಮಾಘಾದ್ಯೈಃ ಕ್ರಮಾತ್ ಷಡೃತವಃ ಸ್ಮೃತಾಃ ।।**
**ಶಿಶಿರೋಽಥ ವಸಂತಶ್ಚ ಗ್ರೀಷ್ಮವರ್ಷಾಶರದ್ಧಿಮಾಃ ।।೧।।**

**ಶಿಶಿರಾದ್ಯಾಸ್ತ್ರಿಭಿಸ್ತೈಸ್ತು ವಿದ್ಯಾದಯನಮುತ್ತರಮ್ ।।**
**ಆದಾನಂ ಚ, ತದಾದತ್ತೇ ನೃಣಾಂ ಪ್ರತಿದಿನಂ ಬಲಮ್ ।।೨।।**

ಅರ್ಥಃ— ಮಾಘದಿಂದ ಮೊದಲುಮಾಡಿ ಎರಡೆರಡು ತಿಂಗಳಿಗೆ ಒಂದರಂತೆ ಕ್ರಮವಾಗಿ ಶಿಶಿರ, ವಸಂತ, ಗ್ರೀಷ್ಮ, ವರ್ಷಾ, ಶರದ್ ಮತ್ತು ಹೇಮಂತ ಎಂದು ಆರು ಋತುಗಳು. ಅವುಗಳಲ್ಲಿ ಶಿಶಿರ, ವಸಂತ, ಗ್ರೀಷ್ಮಗಳಿಂದ ಉತ್ತರಾಯಣವು ಆಗುವದು. ಅದಕ್ಕೆ 'ಆದಾನ' (ಬಲಂ ಆದದಾತೀತಿ) ಎಂಬ ಹೆಸರು. ಯಾಕೆಂದರೆ ಅದು ದಿನಾಲು ಮನುಷ್ಯನ ಬಲವನ್ನು ತೆಗೆದುಕೊಳ್ಳುತ್ತದೆ.

ಬಲತಕ್ಕೊಳ್ಳುವ ರೀತಿಯನ್ನು ಹೇಳುತ್ತಾರೆ.

---

* ಈ ಋತುಚರ್ಯೆಯು ಚರಕದ ಸೂತ್ರ ಸ್ಥಾನ ೬ ನೇ, ವಿಮಾನಸ್ಥಾನ ೮ ನೇ, ಸುಶ್ರುತದ ಸೂತ್ರ ಸ್ಥಾನ ೬ ನೇ ಮತ್ತು ಚಿ. ಸ್ಥಾನ ೨೪ ನೇ, ಅಷ್ಟಾಂಗ ಸಂಗ್ರಹದ ಸೂತ್ರ. ೪ ನೇ ಅಧ್ಯಾಯಗಳಲ್ಲಿ ಹೇಳಿದೆ.

ತಸ್ಮಿನ್ ಹ್ಯತ್ಯರ್ಥತೀಕ್ಷ್ಣೋಷ್ಣರೂಕ್ಷಾ ಮಾರ್ಗಸ್ವಭಾವತಃ ||
ಆದಿತ್ಯಪವನಾಃ ಸೌಮ್ಯಾನ್ ಕ್ಷಪಯಂತಿ ಗುಣಾನ್ ಭುವಃ ||೩||

ತಿಕ್ತಃ ಕಷಾಯಃ ಕಟುಕೋ ಬಲಿನೋಽತ್ರ ರಸಾಃ ಕ್ರಮಾತ್ ||
ತಸ್ಮಾದಾದಾನಮಾಗ್ನೇಯಮ್........................

ಅರ್ಥಃ— ಆ ಕಾಲದಲ್ಲಿ ಸೂರ್ಯ ಮತ್ತು ಗಾಳಿಗಳು (ಉತ್ತರಾಯಣ) ಮಾರ್ಗದ ಸ್ವಭಾವದಿಂದ ಅತ್ಯಂತ ತೀಕ್ಷ್ಣ ಉಷ್ಣ ರುಕ್ಷ ಇರುವದರಿಂದ ಭೂಮಿಯ ಸೌಮ್ಯ ಗುಣಗಳನ್ನು ನಾಶಪಡಿಸುತ್ತವೆ. ಆದ್ದರಿಂದ ಈ ಉತ್ತರಾಯಣದಲ್ಲಿ, ಶಿಶಿರ ಋತುವಿನಲ್ಲಿ ಕಹಿ ರಸವೂ, ವಸಂತ ಋತುವಿನಲ್ಲಿ ಒಗರು ರಸವೂ, ಗ್ರೀಷ್ಮ ಋತುವಿನಲ್ಲಿ ಕಾರ ರಸವೂ ಬಲಿಷ್ಠವಾಗಿರುತ್ತವೆ. ಆದ್ದರಿಂದ ಆದಾನ ಕಾಲವು ಆಗ್ನೇಯವಾಗಿದೆ. (೩||)

.ಋತವೋ ದಕ್ಷಿಣಾಯನಮ್ ||೪||

ವರ್ಷಾದಯೋ ವಿಸರ್ಗಶ್ಚ ಯದ್ಬಲಂ ವಿಸೃಜತ್ಯಯಮ್ ||
ಸೌಮ್ಯತ್ವಾದತ್ರ ಸೋಮೋ ಹಿ ಬಲವಾನ್ ಹೀಯತೇ ರವಿಃ ||೫||

ಅರ್ಥ:— ವರ್ಷಾ, ಶರದ್, ಹೇಮಂತ ಋತುಗಳು ದಕ್ಷಿಣಾಯನವು. ಅದಕ್ಕೆ ವಿಸರ್ಗವೆಂಬ ಹೆಸರೂ ಉಂಟು. ಏಕೆಂದರೆ ಅದು ಬಲವನ್ನು ಕೊಡುವದು. (ವಿಸೃಜತಿ ಬಲಂ ಇತಿ ವಿಸರ್ಗಃ) ಈ ಕಾಲವು ಸೌಮ್ಯವಾದದ್ದರಿಂದ ಈಗ್ಗೆ ಸೋಮನು (ಶೈತ್ಯಾದಿ ಗುಣಗಳು) ಬಲಿಷ್ಠನೂ ಸೂರ್ಯನು ದುರ್ಬಲನೂ ಆಗುತ್ತಾನೆ.

ಮೇಘವೃಷ್ಟ್ಯನಿಲೈಃ ಶೀತೈಃ ಶಾಂತತಾಪೇ ಮಹೀತಲೇ ||
ಸ್ನಿಗ್ಧಾಶ್ಚೇಹಾಮ್ಲಲವಣಮಧುರಾ ಬಲಿನೋ ರಸಾಃ ||೬||

ಅರ್ಥಃ— ತಣ್ಣನ್ನ ಮೋಡ ಮಳೆ ಗಾಳಿಗಳಿಂದ ಭೂತಲದ ತಾಪವು ಶಾಂತವಾಗಲು ಈ ಕಾಲದಲ್ಲಿ ಸ್ನಿಗ್ಧವಾದ ಹುಳಿ, ಉಪ್ಪು, ಸಿಹಿ ರಸಗಳು ಕ್ರಮವಾಗಿ ವರ್ಷಾ, ಶರದ್, ಹೇಮಂತ ಋತುಗಳಲ್ಲಿ ಹೆಚ್ಚು ಬಲಿಷ್ಠಗಳಾಗುತ್ತವೆ. (೬)

**ಶೀತೇಽಗ್ರ್ಯಂ ವೃಷ್ಟಿಘರ್ಮೇಽಲ್ಪಂ ಬಲಂ ಮಧ್ಯಂ ತು ಶೇಷಯೋಃ||**

ಅರ್ಥಃ— ಹೇಮಂತ, ಶಿಶಿರ ಋತುಗಳಲ್ಲಿ ಮನುಷ್ಯನಿಗೆ ಬಲವು ಹೆಚ್ಚು ಇರುತ್ತದೆ. ಮಳೆಗಾಲ ಬೇಸಿಗೆಗಳಲ್ಲಿ ಅದು ಕಡಿಮೆ ಇರುತ್ತದೆ. ಉಳಿದ (ಶರದ್ ಮತ್ತು ವಸಂತ) ಋತುಗಳಲ್ಲಿ ಮಧ್ಯಮವಿರುತ್ತದೆ. (೬||)

ಇನ್ನುಮೇಲೆ ಆಯಾ ಋತುಗಳಲ್ಲಿಯ ಆಹಾರ-ವಿಹಾರಗಳನ್ನು ಹೇಳುತ್ತಾರೆ.

**ಬಲಿನಃ ಶೀತಸಂರೋಧಾದ್ಧೇಮಂತೇ ಪ್ರಬಲೋಽನಲಃ ||೭||**

**ಭವತ್ಯಲ್ಪೇಂಧನೋ ಧಾತೂನ್ ಸ ಪಚೇದ್ವಾಯುನೇರಿತಃ ||**

ಅರ್ಥಃ— ಹೇಮಂತಋತುವಿನಲ್ಲಿ ಬಲಿಷ್ಠಮನುಷ್ಯನ ರೋಮ ರಂಧ್ರಗಳು ಶೀತದಿಂದ ಮುಚ್ಚುವದರಿಂದ ಜಾಠರಾಗ್ನಿಯು ತೀಕ್ಷ್ಣ ವಾಗುವದು. ವಾಯುವಿನಿಂದ ಪ್ರದೀಪ್ತವಾದ ಆ ಅಗ್ನಿಯು ಸಾಕಷ್ಟು ಆಹಾರ ಸಿಗದಿರಲು ಶರೀರದ ಧಾತುವನ್ನೇ ಸುಡುವದು. (೭||)

**ಅತೋ ಹಿಮೇಽಸ್ಮಿನ್ನೇವೇತ ಸ್ವಾದ್ವಮ್ಲಲವಣಾನ್‌ರಸಾನ್ ||೮||**

ಅರ್ಥಃ— ಆ ಕಾರಣ ಈ ಚಳಿಗಾಲದಲ್ಲಿ ಸಿಹಿ, ಹುಳಿ, ಉಪ್ಪು ರಸಗಳನ್ನು ತಿನ್ನಬೇಕು.

**ಟಿಪ್ಪಣೀ**— ಹೆಚ್ಚಾದ ಕಫವನ್ನು ನಾಶಗೊಳಿಸಲು ಕಹಿ ಕಾರಗಳನ್ನು ತಿನ್ನಬೇಕೆಂದು ಸುಶ್ರುತಾಚಾರ್ಯರು ಹೇಳಿರುವರು. (೮)

**ದೈರ್ಘ್ಯಾನ್ನಿಶಾನಾಮೇತರ್ಹಿ ಪ್ರಾತರೇವ ಬುಭುಕ್ಷಿತಃ ||**
**ಅವಶ್ಯಕಾರ್ಯಂ ಸಂಭಾವ್ಯ ಯಥೋಕ್ತಂ ಶೀಲಯೇದನು ||೯||**

ಅರ್ಥಃ— ಈ ಕಾಲದಲ್ಲಿ ರಾತ್ರಿಗಳು ದೊಡ್ಡವಾದ್ದರಿಂದ ಬೆಳಿಗ್ಗೆಯೇ ಹಸಿವೆಯಾಗುವದು. ಕಾರಣ ಅವಶ್ಯವಾದ (ಪ್ರಾತಃ) ಕಾರ್ಯ ಗಳನ್ನು ಮುಗಿಸಿ ಮುಂದೆ ಹೇಳಿದ್ದನ್ನು ಮಾಡಬೇಕು. (೯)

**ವಾತಘ್ನತೈಲೈರಭ್ಯಂಗಂ ಮೂರ್ಧ್ನಿ ತೈಲಂ ವಿಮರ್ದನಮ್ ||**
**ನಿಯುದ್ಧಂ ಕುಶಲೈಃ ಸಾರ್ಧಂ ಪಾದಾಘಾತಂ ಚ ಯುಕ್ತಿತಃ ||೧೦||**

ಅರ್ಥ:— ವಾತನಾಶಕ ತೈಲಗಳನ್ನು ಮೈಗೆ ಹಚ್ಚಿಕೊಂಡು ಎರ ಕೊಳ್ಳುವದನ್ನೂ ತಲೆಗೆ ಎಣ್ಣೆ-ಉಣಿಸುವದನ್ನೂ ಮೈ-ಕೈಗಳನ್ನು ಒತ್ತಿಸಿ ಕೊಳ್ಳುವದನ್ನೂ ಬಲ್ಲಿದರೊಡನೆ ಕುಸ್ತಿಯನ್ನೂ ಮೈ ತುಳಿಸಿಕೊಳ್ಳುವ ದನ್ನೂ ಸರಿಯಾದ ರೀತಿಯಲ್ಲಿ ಮಾಡಬೇಕು. (೧೦)

**ಕಷಾಯಾಪಹೃತಸ್ನೇಹಸ್ತತಃ ಸ್ನಾತೋ ಯಥಾವಿಧಿ ||**
**ಕುಂಕುಮೇನ ಸದರ್ಪೇಣ ಪ್ರದಿಗ್ಧೋಽಗುರುಧೂಪಿತಃ ||೧೧||**

**ರಸಾನ್ ಸ್ನಿಗ್ಧಾನ್ ಪಲಂ ಪುಷ್ಟಂ ಗೌಡಮಚ್ಛಸುರಾಂ ಸುರಾಮ್ ||**
**ಗೋಧೂಮಪಿಷ್ಟಮಾಷೇಕ್ಷುಕ್ಷೀರೋತ್ಥವಿಕೃತೀಃ ಶುಭಾಃ ||೧೨||**

**ನವಮನ್ನಂ ವಸಾಂ ತೈಲಂ, ಶೌಚಕಾರ್ಯೇ ಸುಖೋದಕಮ್ ||**
**ಪ್ರಾವಾರಾಜಿನಕೌಶೇಯಪ್ರವೇಣೀ*ಕೌಚವಾಸ್ತೃತಮ್ ||೧೩||**

**ಉಷ್ಣಸ್ವಭಾವೈರ್ಲಘುಭಿಃ ಪ್ರಾವೃತಃ ಶಯನಂ ಭಜೇತ್ ||**
**ಯುಕ್ತ್ಯಾಽರ್ಕಕಿರಣಾನ್ ಸ್ವೇದಂ ಪಾದತ್ರಾಣಂ ಚ ಸರ್ವದಾ ||೧೪||**

ಅರ್ಥ:— ಆ ಮೇಲೆ ಒಗರು ರಸದಿಂದ ಮೈ ಹೆಡಸನ್ನು ಕಳೆದುಕೊಂಡು ವಿಧಿಯಂತೆ, ಸ್ನಾನ ಮಾಡಿ ಕೇಸರ ಕಸ್ತೂರಿಗಳನ್ನು ಮೈಗೆ ತೊಡಕೊಂಡು ಅಗುರುವಿನ (ಕರೇಚಂದನದ) ಧೂಪ ತಕ್ಕೊಳ್ಳಬೇಕು. ಆ ಮೇಲೆ ಸ್ನಿಗ್ಧವಾದ ಮಾಂಸ ರಸವನ್ನೂ, ಪುಷ್ಟಪ್ರಾಣಿಯ ಮಾಂಸ ವನ್ನೂ, ಬೆಲ್ಲದ ಶೆರೆಯನ್ನೂ, ಶೆರೆಯ ಮೇಲಿನ ತಿಳಿಯನ್ನೂ, ಮದ್ಯ ವನ್ನೂ, ಗೋದಿಯ-ಹಿಟ್ಟು ಉದ್ದು ಕಬ್ಬು ಹಾಲುಗಳಿಂದ ಮಾಡಿದ ಚಲೋ ಪದಾರ್ಥಗಳನ್ನೂ, ಹೊಸಧಾನ್ಯದ ಅನ್ನವನ್ನೂ, ನೆಣವನ್ನೂ, ತೈಲವನ್ನೂ ಸೇವಿಸಬೇಕು. ಶರೀರದ ಶುದ್ಧಿಗಾಗಿ ಬಿಸಿನೀರನ್ನು ಉಪ ಯೋಗಿಸಬೇಕು. ನೂಲು ತೊಗಲು ರೇಶಿಮೆ ಉಣ್ಣೆ ಮುಂತಾದವುಗಳಿಂದ ಮಾಡಿದ ವಸ್ತ್ರವನ್ನು ಮೇಲೆ ಹಾಸಿದ ಹಾಸಿಗೆಯಲ್ಲಿ ಬೆಚ್ಚಗಿನ ಹಗುರಾದ ಹೊದಿಕೆಗಳನ್ನು ಹೊತ್ತುಕೊಂಡು ಮಲಗಬೇಕು. ಯೋಗ್ಯ ರೀತಿಯಿಂದ ಬಿಸಿಲನ್ನು ಕಾಸಿಕೊಳ್ಳುವದನ್ನು ಮಾಡಬೇಕು. ಯಾವಾಗಲೂ ಕಾಲು ಗಳಲ್ಲಿ ಮೊಚ್ಚೆ ಹಾಕಿಕೊಳ್ಳಬೇಕು. (೧೪)

* 'ಕುಥಕ' ಎಂದು ಹೇಮಾದ್ರಿಯ ಪಾಠವು.

ಪೀವರೋರುಸ್ತನಶ್ರೋಣ್ಯಃ ಸಮದಾಃ ಪ್ರಮದಾಃ ಪ್ರಿಯಾಃ ||
ಹರಂತಿ ಶೀತಮುಷ್ಣಾಂಗ್ಯೋ ಧೂಪಕುಂಕುಮಯೌವನೈಃ ||೧೫||

ಅರ್ಥಃ— ಪುಷ್ಟವಾದ ತೊಡೆ, ಸ್ತನ, ತಿಗಗಳುಳ್ಳ ಮತ್ತರಾದ ಪ್ರಿಯ ತರುಣಿಯರು ಯೌವನದಿಂದಲೂ, ಧೂಪ ಕೇಶರಗಳಿಂದಲೂ ಉಷ್ಣವಾದ ತಮ್ಮ ಅವಯವಗಳಿಂದ ಚಳಿಯನ್ನು ಕಳೆಯುವರು. (೧೫)

ಅಂಗಾರತಾಪಸಂತಪ್ತಗರ್ಭಭೂವೇಶ್ಮಚಾರಿಣಃ ||
ಶೀತಪಾರುಷ್ಯಜನಿತೋ ನ ದೋಷೋ ಜಾತು ಜಾಯತೇ ||೧೬||

ಅರ್ಥಃ— ಬೆಂಕಿಯ ಜಳದಿಂದ ಕಾಯ್ದು ಮನೆಯಲ್ಲಿ ಅಥವಾ ನಡುಮನೆಯಲ್ಲಿ ಇರಬೇಕು. ಅಂದರೆ ಚಳಿ, ರುಕ್ಷತೆಗಳಿಂದಾಗುವ ಪೀಡೆಯು ಎಂದಿಗೂ ಆಗದು. (೧೬)

ಶಿಶಿರಋತುವಿನಲ್ಲಿಯ ಆಚಾರವನ್ನು ಹೇಳುತ್ತಾರೆ.

ಅಯಮೇವ ವಿಧಿಃ ಕಾರ್ಯಃ ಶಿಶಿರೇಽಪಿ ವಿಶೇಷತಃ ||
ತದಾ ಹಿ ಶೀತಮಧಿಕಂ ರೌಕ್ಷ್ಯಂ ಚಾದಾನಕಾಲಜಮ್ ||೧೭||

ಅರ್ಥ:— ಶಿಶಿರ ಋತುವಿನಲ್ಲಿಯೂ ಕೂಡ ಇದೇ ಆಚರಣೆಯನ್ನು ವಿಶೇಷವಾಗಿ ಮಾಡಬೇಕು. ಯಾಕೆಂದರೆ ಆಗ್ಗೆ ಶೀತವು ಬಹಳವಿರುವದಲ್ಲದೆ, ಆದಾನ ಕಾಲದಿಂದ ರುಕ್ಷತೆಯೂ ಉಂಟಾಗಿರುತ್ತದೆ. (೧೭)

ವಸಂತಋತುವಿನಲ್ಲಿಯ ಆಚಾರವನ್ನು ಹೇಳುತ್ತಾರೆ.

ಕಫಶ್ಚಿತೋ ಹಿ ಶಿಶಿರೇ ವಸಂತೇಽರ್ಕಾಂಶುತಾಪಿತಃ ||
ಹತ್ವಾಽಗ್ನಿಂ ಕುರುತೇ ರೋಗಾನತಸ್ತಂ ತ್ವರಯಾ ಜಯೇತ್ ||೧೮||

ಅರ್ಥಃ— ಶಿಶಿರ ಋತುವಿನಲ್ಲಿ ಸಂಚಿತವಾದ ಕಫವು ವಸಂತ ಋತುವಿನಲ್ಲಿ ಸೂರ್ಯನ ಕಿರಣಗಳಿಂದ ಕಾಯ್ದು ನೀರಾಗಿ ಅಗ್ನಿಯನ್ನು ನಾಶಮಾಡಿ ರೋಗಗಳನ್ನುಂಟುಮಾಡುತ್ತದೆ. ಆದ್ದರಿಂದ ಅದನ್ನು ತೀವ್ರವಾಗಿ ಗೆಲ್ಲಬೇಕು, (೧೮)

ತೀಕ್ಷ್ಣೈರ್ವಮನನಸ್ಯಾದ್ಯೈರ್ಲಘುರೂಕ್ಷೈಶ್ಚ ಭೋಜನೈಃ ||
ವ್ಯಾಯಾಮೋದ್ವರ್ತನಾಘಾತೈರ್ಜಿತ್ವಾ ಶ್ಲೇಷ್ಮಾಣಮುಲ್ಬಣಮ್ ||೧೯||

ಸ್ನಾತೋಽನುಲಿಪ್ತಃ ಕರ್ಪೂರಚಂದನಾಗುರುಕುಂಕುಮೈಃ ||
ಪುರಾಣಯವಗೋಧೂಮಕ್ಷೌದ್ರಜಾಂಗಲಶೂಲ್ಯಭುಕ್ ||೨೦||

ಅರ್ಥ:— ಹೀಗೆ ಹೆಚ್ಚಾಗಿರುವ ಕಫವನ್ನು ತೀಕ್ಷ್ಣವಾದ ವಮನ ನಸ್ಯಾದಿಗಳಿಂದಲೂ, ಲಘು, ರುಕ್ಷ ಆಹಾರದಿಂದಲೂ, ವ್ಯಾಯಾಮ ಸುಗಂಧ-ದ್ರವ್ಯ-ಲೇಪ ಮೈ ಒತ್ತಿಸಿಕೊಳ್ಳೋಣಗಳಿಂದಲೂ ಕಡಿಮೆ ಮಾಡಿಕೊಂಡು ಆ ಮೇಲೆ ಸ್ನಾನ ಮಾಡಿ ಕರ್ಪೂರ ಚಂದನ ಅಗುರು ಕೇಶರಗಳನ್ನು ಮೈಗೆ ಹಚ್ಚಿಕೊಂಡು ಹಳೆಯ ಜವೆ, ಗೋದಿ, ಜೇನು, ಸಳಾಕೆಯ ಮೇಲೆ ಬೇಯಿಸಿದ ಜಾಂಗಲ ಮಾಂಸಗಳನ್ನು ತಿನ್ನಬೇಕು. (೨೦)

ಸಹಕಾರರಸೋನ್ಮಿಶ್ರಾನಾಸ್ವಾದ್ಯ ಪ್ರಿಯಯಾರ್ಪಿತಾನ್ ||
ಪ್ರಿಯಾಸ್ಯಸಂಗಸುರಭೀನ್ ಪ್ರಿಯಾನೇತ್ರೋತ್ಪಲಾಂಕಿತಾನ್||೨೧||

ಸೌಮನಸ್ಯಕೃತೋ ಹೃದ್ಯಾನ್ವಯಸ್ಯೈಃ ಸಹಿತಃ ಪಿಬೇತ್ ||
ನಿರ್ಗದಾನಾಸವಾರಿಷ್ಟಸೀಧುಮಾರ್ದ್ವೀಕಮಾಧವಾನ್ ||೨೨||

ಶೃಂಗಬೇರಾಂಬು ಸಾರಾಂಬು ಮಧ್ವಂಬು ಜಲದಾಂಬು ಚ ||

ಅರ್ಥ:— ಪ್ರಿಯಳ ಮುಖ-ಸಂಪರ್ಕದಿಂದ ಸುಗಂಧವಾದ, ಪ್ರಿಯಳ ನೇತ್ರಕಮಲದ ಪ್ರತಿಬಿಂಬ ಮೂಡಿದ, ಮನಸ್ಸಿಗೆ ಆನಂದ ಕೊಡುವ ಪ್ರಿಯಳು ತಿಂದುಕೊಟ್ಟ ಮನೋಹರವಾದ ನಿರ್ದುಷ್ಟವಾದ ಮಾವಿನ ರಸ ಬೆರೆತ ಆಸವ ಅರಿಷ್ಟಗಳನ್ನೂ, ಕಬ್ಬಿನ ರಸ ದ್ರಾಕ್ಷೆ ಜೇನುಗಳಿಂದ ಮಾಡಿದ ಮದ್ಯಗಳನ್ನೂ, ಗೆಳೆಯರೊಡನೆ ಕುಡಿಯಬೇಕು. ಶುಂಠಿ, ಚಂದನ ಗಳ ಕಷಾಯ, ನೀರು ಬೆರೆಸಿದ ಜೇನು, ಜೇಕಿನಗಡ್ಡೆಯ ಕಷಾಯಗಳನ್ನು (ತನ್ನ ಪ್ರಕೃತಿಗೆ ಯೋಗ್ಯವಾದದ್ದನ್ನು ಆರಿಸಿ) ಕುಡಿಯಬೇಕು. (೨೨)

ದಕ್ಷಿಣಾನಿಲಶೀತೇಷು ಪರಿತೋ ಜಲವಾಹಿಷು ||೨೩||
ಅದೃಷ್ಟನಷ್ಟಸೂರ್ಯೇಷು ಮಣಿಕುಟ್ಟಿಮಕಾಂತಿಷು ||

ಪರಪುಷ್ಟವಿಘುಷ್ಟೇಷು ಕಾಮಕರ್ಮಾಂತಭೂಮಿಷು ||೨೪||

ವಿಚಿತ್ರಪುಷ್ಪವೃಕ್ಷೇಷು ಕಾನನೇಷು ಸುಗಂಧಿಷು ||
ಗೋಷ್ಠೀಕಥಾಭಿಶ್ಚಿತ್ರಾಭಿರ್ಮಧ್ಯಾಹ್ನಂ ಗಮಯೇತ್ಸುಖೀ ||೨೫||

ಅರ್ಥಃ— ದಕ್ಷಿಣ ದಿಕ್ಕಿನ ಗಾಳಿಯಿಂದ ತಣ್ಣಗಾದ, ಸುತ್ತಲೂ ಕಾಲುವೆಗಳುಳ್ಳ, ಸೂರ್ಯನು ಕಾಣುತ್ತಾನೋ ಇಲ್ಲವೋ ಎಂಬಂತೆ ಗಿಡಗಳಿಂದ ನಿಬಿಡವಾಗಿರುವ, ರತ್ನದ ನೆಲಗಟ್ಟಿನ ಕಾಂತಿಯುಳ್ಳ, ಕೋಗಿಲೆಗಳು ಕೂಗುತ್ತಿರುವ, ಕಾಮವಿಲಾಸದ ಸ್ಥಳಗಳಾದ, ತರತರದ ಹೂವಿನ ಗಿಡಗಳುಳ್ಳ, ಸುಗಂಧಮಯವಾದ ಅಡವಿಗಳಲ್ಲಿ ವಿವಿಧ ಮಾತು ಕಥೆಗಳಿಂದ ಮಧ್ಯಾಹ್ನವನ್ನು ಸುಖವಾಗಿ ಕಳೆಯಬೇಕು. (೨೫)

ಗುರುಶೀತದಿವಾಸ್ವಪ್ನಸ್ನಿಗ್ಧಾಮ್ಲಮಧುರಾಂಸ್ತ್ಯಜೇತ್ ||

ಅರ್ಥಃ— ಜಡ ಶೀತ ಪದಾರ್ಥಗಳನ್ನೂ, ಹಗಲು ನಿದ್ರೆಯನ್ನೂ, ಸ್ನಿಗ್ಧ ಹುಳಿ ಸಿಹಿ ಪದಾರ್ಥಗಳನ್ನೂ ಬಿಡಬೇಕು. (೨೫||)

ಗ್ರೀಷ್ಮಋತುವಿನಲ್ಲಿಯ ಆಚಾರವನ್ನು ಹೇಳುತ್ತಾರೆ.

ತೀಕ್ಷ್ಣಾಂಶುರತಿತೀಕ್ಷ್ಣಾಂಶುರ್ಗ್ರೀಷ್ಮೇ ಸಂಕ್ಷಿಪತೀವ ಯತ್ ||೨೬||

ಪ್ರತ್ಯಹಂ ಕ್ಷೀಯತೇ ಶ್ಲೇಷ್ಮಾ ತೇನ ವಾಯುಶ್ಚ ವರ್ಧತೇ ||
ಅತೋಽಸ್ಮಿನ್ ಪಟುಕಟ್ವಮ್ಲವ್ಯಾಯಾಮಾರ್ಕಕರಾಂಸ್ತ್ಯಜೇತ್ ||೨೭||

ಅರ್ಥಃ— ಗ್ರೀಷ್ಮಋತುವಿನಲ್ಲಿ ಸೂರ್ಯನು ಅತಿ ತೀಕ್ಷ್ಣವಾದ ಕಿರಣಗಳಿಂದ ಭೂಮಿಯ ರಸವನ್ನು ಹೀರುತ್ತಾನೋ ಏನೋ ಎನ್ನುವಂತಾಗುವದು. ಆದ್ದರಿಂದ ಆಗ್ಗೆ ಕಫವು ದಿನಾಲು ಕಡಿಮೆಯಾಗುವದು. ಅದರಿಂದ ವಾತವು ಬೆಳೆಯುವದು. ಆದಕಾರಣ ಆಗ್ಗೆ ಉಪ್ಪು ಕಾರ ಹುಳಿ ರಸಗಳನ್ನೂ, ವ್ಯಾಯಾಮವನ್ನೂ, ಸೂರ್ಯನ ಕಿರಣವನ್ನೂ ಸೇವಿಸಬಾರದು (ಇವುಗಳಿಂದ ಮತ್ತಿಷ್ಟು ಗ್ಲಾನಿಯುಂಟಾಗುವದು). (೨೭)

ಭಜೇನ್ಮಧುರಮೇವಾನ್ನಂ ಲಘು ಸ್ನಿಗ್ಧಂ ಹಿಮಂ ದ್ರವಮ್ ||
ಸುಶೀತತೋಯಸಿಕ್ತಾಂಗೋ ಲಿಹ್ಯಾತ್ಸಕ್ತೂನ್ ಸಶರ್ಕರಾನ್ ||೨೮||

ಅರ್ಥ:— ಹಗುರು ಸ್ನಿಗ್ಧ ಶೀತ ದ್ರವರೂಪವಾದ ಮಧುರ ಆಹಾರವನ್ನೇ ತಕ್ಕೊಳ್ಳಬೇಕು. ಒಳ್ಳೇ ತಂಪಾದ ನೀರಿನಿಂದ ಸ್ನಾನಮಾಡಿ ಸಕ್ಕರೆ ಕೂಡಿದ ಸತುವಿನ (ಮುಳ್ಳು ಜವೆಯ) ಹಿಟ್ಟಿನ ಪದಾರ್ಥಗಳನ್ನು ತಿನ್ನಬೇಕು. (ಇವು ಶ್ರಮಹಾರಕವಾಗಿವೆ). (೨೮)

ಮದ್ಯಂ ನ ಪೇಯಂ, ಪೇಯಂ ವಾ ಸ್ವಲ್ಪಂ, ಸುಬಹುವಾರಿ ವಾ||
ಅನ್ಯಥಾ †ಶೋಫಶೈಥಿಲ್ಯದಾಹಮೋಹಾನ್ ಕರೋತಿ ತತ್ ||೨೯||

ಅರ್ಥ:— ಈ ಕಾಲದಲ್ಲಿ ಮದ್ಯವನ್ನು ಕುಡಿಯಬಾರದು; ಅಥವಾ ಸ್ವಲ್ಪು ಕುಡಿಯಬೇಕು; ಅಥವಾ ಬಹಳ ನೀರು ಕೂಡಿಸಿ ಕುಡಿಯಬೇಕು. ಇಲ್ಲವಾದರೆ ಅದು ಬಾವು, ಅವಯವಗಳಿಗೆ ಶೈಥಿಲ್ಯ, ದಾಹ, ಮೂರ್ಛೆಗಳನ್ನುಂಟುಮಾಡುತ್ತದೆ.

ಟಿಪ್ಪಣಿ:— ಹೇಮಾದ್ರಿಯು ಶೋಷವೆಂದು ಪಾಠವನ್ನಿಟ್ಟುಕೊಂಡು 'ಬಾಯಿ ಒಣಗೋಣ' ಎಂಬ ಅರ್ಥವನ್ನು ಹೇಳಿದ್ದಾನೆ. (೨೯)

ಕುಂದೇಂದುಧವಲಂ ಶಾಲಿಮಶ್ನೀಯಾಜ್ಜಾಂಗಲೈಃ ಪಲೈಃ ||

ಅರ್ಥ:— ಕುಂದ ಪುಷ್ಪ ಅಥವಾ ಚಂದ್ರನಂತೆ ಬೆಳ್ಳಗಾದ ಬಿಳೇ ಅಕ್ಕಿಯ ಅನ್ನವನ್ನು ಜಾಂಗಲ ಪ್ರಾಣಿಯ ಮಾಂಸದೊಡನೆ ತಿನ್ನಬೇಕು. (೨೯||)

ಪಿಬೇದ್ರಸಂ ನಾತಿಘನಂ ರಸಾಲಾಂ ರಾಗಖಾಂಡವೌ ||೩೦||

ಪಾನಕಂ ಪಂಚಸಾರಂ ವಾ ನವಮೃದ್ಭಾಜನೇ ಸ್ಥಿತಮ್ ||
ಮೋಚಚೋಚದಲೈರ್ಯುಕ್ತಂ ಸಾಮ್ಲಂ ಮೃನ್ಮಯಶುಕ್ತಿಭಿಃ ||೩೧||

ಪಾಟಲಾವಾಸಿತಂ ಚಾಂಭಃ ಸಕರ್ಪೂರಂ ಸುಶೀತಲಮ್ ||

†"ಶೋಷ" ಎಂದು ಹೇಮಾದ್ರಿಯ ಪಾಠವು.

ಅರ್ಥ:— ಬಹಳ ಗಟ್ಟಿ ಇರದ ಮಾಂಸ-ರಸವನ್ನೂ, ಶ್ರೀಖಂಡ, ರಾಗ, ಷಾಂಡವಗಳನ್ನೂ, ಬಾಳೆ, ಹಲಸು ಹಣ್ಣುಗಳ ಚೂರುಗಳನ್ನು ಹಾಕಿ ಹುಳಿ ಪದಾರ್ಥಗಳನ್ನು ಕೂಡಿಸಿ ಹೊಸ ಮಣ್ಣಿನ ಪಾತ್ರೆಗಳಲ್ಲಿ ಇಟ್ಟ ಪಂಚಸಾರವೆಂಬ ಪಾನಕವನ್ನೂ ಮಣ್ಣಿನ ಶಿಂಪೆಗಳಿಂದ ಕುಡಿಯಬೇಕು. ಮತ್ತು ಪಾಟಲ ಹೂಗಳಿಂದ ಸುಗಂಧವಾದ ಕರ್ಪೂರ ಹಾಕಿದ ಒಳ್ಳೇ ತಣ್ಣನ್ನ ನೀರನ್ನು ಕುಡಿಯಬೇಕು.

ಟಿಪ್ಪಣಿ:— ರಾಗವೆಂದರೆ ಸಿಹಿ ಹುಳಿ ಉಪ್ಪುಗಳಿಂದ ಮಾಡಿದ ಪಾನಕವು. ಷಾಂಡವವೆಂದರೆ ಸಿಹಿ ಹುಳಿ ಉಪ್ಪು ಕಾರ ಒಗರುಗಳಿಂದ ಮಾಡಿದ ಪಾನಕವು. ಪಂಚಸಾರವೆಂದರೆ ಜೇನು ಉತ್ತತ್ತಿ ದ್ರಾಕ್ಷೆ ದಡಸಲಹಣ್ಣು ಕಲ್ಲುಸಕ್ಕರೆಗಳಿಂದ ಮಾಡಿದ ಪಾನಕವು. (೩೦॥)

**ಶಶಾಂಕಕಿರಣಾನ್ ಭಕ್ಷ್ಯಾನ್ ರಜನ್ಯಾಂ ಭಕ್ಷಯನ್ ಪಿಬೇತ್ ||೩೧||**
**ಸಸಿತಂ ಮಾಹಿಷಂ ಕ್ಷೀರಂ ಚಂದ್ರನಕ್ಷತ್ರಶೀತಲಮ್ ||**

ಅರ್ಥ:— ರಾತ್ರಿಯಲ್ಲಿ ಶಶಾಂಕ ಕಿರಣ (ಶೇವಿಗೆ?) ತಿಂದು ಮೇಲೆ ಚಂದ್ರ ಅಥವಾ ನಕ್ಷತ್ರಗಳಿಂದ ತಣ್ಣಗಾದ ಎಮ್ಮೆಯ ಹಾಲನ್ನು ಕುಡಿಯಬೇಕು. [೩೧||]

**ಅಭ್ರಂಕಷಮಹಾಶಾಲತಾಲರುದ್ಧೋಷ್ಣರಶ್ಮಿಷು ||೩೨||**

**ವನೇಷು ಮಾಧವೀಶ್ಲಿಷ್ಟದ್ರಾಕ್ಷಾಸ್ತಬಕಶಾಲಿಷು ||**
**ಸುಗಂಧಿಹಿಮಪಾನೀಯಸಿಚ್ಯಮಾನಪಟಾಲಿಕೇ ||೩೩||**

**ಕಾಯಮಾನೇ ಚಿತೇ ಚೂತಪ್ರವಾಲಫಲಲುಂಬಿಭಿಃ ||**
**ಕದಲೀದಲಕಹ್ಲಾರಮೃಣಾಲಕಮಲೋತ್ಪಲೈಃ ||೩೪||**

**ಕೋಮಲೈಃ ಕಲ್ಪಿತೇ ತಲ್ಪೇ ಹಸತ್ಕುಸುಮಪಲ್ಲವೇ ||**
**ಮಧ್ಯಂದಿನೇಽರ್ಕತಾಪಾರ್ತಃ ಸ್ವಪ್ಯಾದ್ಧಾರಾಗೃಹೇಽಥವಾ ||೩೫||**

**ಪುಸ್ತಸ್ತ್ರೀಸ್ತನಹಸ್ತಾಸ್ಯಪ್ರವೃತ್ತೋಶೀರವಾರಿಣಿ ||**

ಅರ್ಥ:— ಮಧ್ಯಾಹ್ನದಲ್ಲಿ ಸೂರ್ಯನ ತಾಪದಿಂದ ಪೀಡಿತನಾಗಲು, ಗಗನ ಚುಂಬಿತವಾದ ದೊಡ್ಡ ದೊಡ್ಡ ಸಾಗು ತಾಡವೃಕ್ಷಗಳಿಂದ ಸೂರ್ಯನ ಕಿರಣಗಳು ಬಾರದಿರುವ, ಮಾಧವೀ ಬಳ್ಳಿಯಿಂದ ಯುಕ್ತವಾದ, ದ್ರಾಕ್ಷೆಯ ಗೊಂಚಲುಗಳುಳ್ಳ ವನಗಳಲ್ಲಿ ಸುಗಂಧವಾದ ತಣ್ಣೀರಿನಿಂದ ಸಿಂಪಡಿಸಲ್ಪಟ್ಟ ಪರದೆಗಳುಳ್ಳ, ಮಾವಿನ ಚಿಗುರೆಲೆ ಹಣ್ಣುಗಳ ಗೊಂಚಲುಗಳಿಂದ ತುಂಬಿದ ಗುಡಿಸಲಿನಲ್ಲಿ ಎಳೆ ಬಾಳೆಯ ಎಲೆ, ಕಲ್ಹಾರ (ಸಂಧ್ಯಾಕಾಲದಲ್ಲಿ ಅರಳುವ ಕಮಲ) ದ ದೇಟು, (ಹಗಲು ಅರಳುವ) ಕಮಲ, (ರಾತ್ರಿ ಅರಳುವ) ಕುಮುದಗಳಿಂದಲೂ ಮಾಡಿದ ಮತ್ತು ಅರಳಿದ ಹೂ ಚಿಗುರೆಲೆಗಳುಳ್ಳ ಹಾಸಿಗೆಯ ಮೇಲೆ ಅಥವಾ ಹೆಣ್ಣು ಗೊಂಬೆಗಳ ಸ್ತನ ಕೈ ಬಾಯಿಗಳಿಂದ ಬಾಳದ ಬೇರಿನ ನೀರುಗಳನ್ನು ಸಿಂಪಡಿಸುವ ಕಾರಂಜಿಯ ಮನೆಯಲ್ಲಿ ಮಲಗಬೇಕು. (೩೬||)

ನಿಶಾಕರಕರಾಕೀರ್ಣೇ ಸೌಧಪೃಷ್ಠೇ ನಿಶಾಸು ಚ ||೩೭||
ಆಸನಾ...............................................

ಅರ್ಥ:— ರಾತ್ರಿಗಳಲ್ಲಿ ಚಂದ್ರನ ಕಿರಣಗಳಿಂದ ವ್ಯಾಪ್ತವಾದ ಗಚ್ಚಿನ ಮಾಳಿಗೆಯ ಮೇಲೆ ಕೂಡ್ರಬೇಕು. (೩೭)

............ಸ್ವಸ್ಥಚಿತ್ತಸ್ಯ ಚಂದನಾರ್ದ್ರಸ್ಯ ಮಾಲಿನಃ ||
ನಿವೃತ್ತಕಾಮತಂತ್ರಸ್ಯ ಸುಸೂಕ್ಷ್ಮ ತನುವಾಸಸಃ ||೩೮||

ಜಲಾರ್ದ್ರಾಸ್ತಾಲವೃಂತಾನಿ ವಿಸ್ತೃತಾಃ ಪದ್ಮಿನೀಪುಟಾಃ ||
ಉತ್ಕ್ಷೇಪಾಶ್ಚ ಮೃದೂತ್ಕ್ಷೇಪಾ ಜಲವರ್ಷಿಹಿಮಾನಿಲಾಃ ||೩೯||

ಕರ್ಪೂರಮಲ್ಲಿಕಾಮಾಲಾ ಹಾರಾಃ ಸಹರಿಚಂದನಾಃ ||
ಮನೋಹರಕಲಾಲಾಪಾಃ ಶಿಶವಃ ಸಾರಿಕಾಃ ಶುಕಾಃ ||೪೦||

ಮೃಣಾಲವಲಯಾಃ ಕಾಂತಾಃ ಪ್ರೋತ್ಫುಲ್ಲಕಮಲೋಜ್ಜ್ವಲಾಃ ||
ಜಂಗಮಾ ಇವ ಪದ್ಮಿನ್ಯೋ ಹರಂತಿ ದಯಿತಾಃ ಕ್ಲಮಮ್ ||೪೧||

ಅರ್ಥ:— ಶಾಂತಚಿತ್ತನಾಗಿ ಗಂಧವನ್ನು ತೊಡೆದುಕೊಂಡು ಹೂಮಾಲೆಗಳನ್ನು ಹಾಕಿಕೊಳ್ಳಬೇಕು. ಕಾಮ ವಿಕಾರದಿಂದ ನಿವೃತ್ತನಾಗ

ಬೇಕು. ಸೂಕ್ಷ್ಮ ತೆಳ್ಳಗಿನ ವಸ್ತ್ರಗಳನ್ನುಟ್ಟುಕೊಳ್ಳಬೇಕು. ಈ ರೀತಿಯಾಗಿ ಇದ್ದುಕೊಂಡು, ನೀರಿನಿಂದ ತೊಯ್ದ ವಸ್ತ್ರಗಳಿಂದಲೂ ಮತ್ತು ವಿಸ್ತಾರವಾದ ಕಮಲದ ಎಲೆಗಳಿಂದಲೂ, ಸಾವಕಾಶವಾಗಿ ಬೀಸುವ, ತುಂತುರು ಹನಿಗಳನ್ನು ಚೆಲ್ಲುವ ತಣ್ಣಗಿನ ಗಾಳಿಗಳನ್ನು ಹಾಕುವ ಬೀಸಣಿಗೆಗಳಿಂದಲೂ, ಕರ್ಪೂರದ ಮಾಲೆ, ಮಲ್ಲಿಗೆಯ ಸರ, ಹರಿಚಂದನದಿಂದ ತೊಡೆದ ಮುತ್ತಿನ ಹಾರಗಳಿಂದಲೂ, ಸುಂದರ ಮುದ್ದು ಮಾತಾಡುವ ಹುಡುಗರು ಸಾರಿಕೆ-ಗಿಳಿಗಳಿಂದಲೂ, ಅರಳಿದ ಕಮಲದಂತೆ ಥಳಥಳಿಸುವ ಕಮಲದ ದೇಟಿನ ಬಳೆಗಳನ್ನು ಹಾಕಿಕೊಂಡು ಅಲೆದಾಡುವ ಕಮಲದ ಬಳ್ಳಿಗಳಂತೆ ಇರುವ ಸುಂದರ ಪ್ರಿಯ ಸ್ತ್ರೀಯರಿಂದಲೂ ದಣುವನ್ನು ಕಳೆದುಕೊಳ್ಳಬೇಕು. [ಇವರೊಡನೆ ಕಾಲ ಕಳೆಯಬೇಕೆಂಬ ಭಾವವು.] [೪೧]

ಇದರ ಮೇಲೆ ವರ್ಷಾಋತುವಿನಲ್ಲಿಯ ಆಚಾರವನ್ನು ಹೇಳುತ್ತಾರೆ.

**ಆದಾನಗ್ಲಾನವಪುಷಾಮಗ್ನಿಃ ಸನ್ನೋಽಪಿ ಸೀದತಿ ||**
**ವರ್ಷಾಸು ದೋಷೈರ್ದುಷ್ಯಂತಿ ತೇಽಂಬುಲಂಬಾಂಬುದೇಽಂಬರೇ ||೪೨||**

**ಸತುಷಾರೇಣ ಮರುತಾ ಸಹಸಾ ಶೀತಲೇನ ಚ**
**ಭೂಬಾಷ್ಪೇಣಾಮ್ಲಪಾಕೇನ ಮಲಿನೇನ ಚ ವಾರಿಣಾ ||೪೩||**

**ವಹ್ನಿನೈವ ಚ ಮಂದೇನ, ತೇಷ್ವಿತ್ಯನ್ಯೋಽನ್ಯದೂಷಿಷು ||**
**ಭಜೇತ್ಸಾಧಾರಣಂ ಸರ್ವಮೂಷ್ಮಣಸ್ತೇಜನಂ ಚ ಯತ್ ||೪೪||**

ಅರ್ಥಃ— ಆದಾನಕಾಲದಿಂದ ಶಕ್ತಿಹೀನರಾದ ಜನರ ಮೊದಲೇ ಮಂದವಾದ ಅಗ್ನಿಯು ವರ್ಷಾಕಾಲದಲ್ಲಿ ದೋಷಗಳಿಂದ ಮತ್ತಿಷ್ಟು ಮಂದವಾಗುತ್ತದೆ. ಆಕಾಶದಲ್ಲಿ ಮೋಡಗಳು ನೀರನ್ನು ತುಂಬಿಕೊಂಡು ಜೋತಾಡಹತ್ತಲು ತುಂತುರ ಹನಿಗಳುಳ್ಳ ಮತ್ತು ಒಮ್ಮೆಲೇ ಶೀತವಾದ ಗಾಳಿಯಿಂದ ವಾತವೂ, ಭೂಮಿಯ ಉಗಿಯಿಂದ ಮತ್ತು ಆಮ್ಲಪಾಕವುಳ್ಳ ನೀರಿನಿಂದ ಪಿತ್ತವೂ, ಅದರಂತೆ ಹೊಲಸು ನೀರಿನಿಂದ ಮತ್ತು ಅಗ್ನಿಮಾಂದ್ಯದಿಂದ ಕಫವೂ ದುಷ್ಟವಾಗುತ್ತವೆ. ಹೀಗೆ ಅಗ್ನಿಯಿಂದ ದೋಷಗಳೂ ದೋಷಗಳಿಂದ ಅಗ್ನಿಯೂ ದುಷ್ಟವಾಗುವದರಿಂದ ಎಲ್ಲ ದೋಷಗಳಿಗೂ ಸಾಮಾನ್ಯವಾದ ಮತ್ತು ಅಗ್ನಿಯನ್ನು ಪ್ರದೀಪ್ತಮಾಡುವ ಎಲ್ಲ (ಉಪಚಾರ) ವನ್ನು ಮಾಡಬೇಕು. (೪೪)

ಸಾಧಾರಣ ಕರ್ಮವನ್ನು ಹೇಳುತ್ತಾರೆ.

**ಆಸ್ಥಾಪನಂ ಶುದ್ಧತನುರ್ಜೀರ್ಣಂ ಧಾನ್ಯಂ ರಸಾನ್ ಕೃತಾನ್ ||**
**ಜಾಂಗಲಂ ಪಿಶಿತಂ ಯೂಷಾನ್ ಮಧ್ವರಿಷ್ಟಂ ಚಿರಂತನಮ್ ||೪೫||**

**ಮಸ್ತು ಸೌವರ್ಚಲಾಢ್ಯಂ ವಾ ಪಂಚಕೋಲಾವಚೂರ್ಣಿತಮ್ ||**
**ದಿವ್ಯಂ ಕೌಪಂ ಶೃತಂ ಚಾಂಭೋ ಭೋಜನಂ ತ್ವತಿದುರ್ದಿನೇ ||೪೬||**

**ವ್ಯಕ್ತಾಮ್ಲಲವಣಸ್ನೇಹಂ ಸಂಶುಷ್ಕಂ ಕ್ಷೌದ್ರವಲ್ಲಘು ||**

ಅರ್ಥ:— ವಮನ ವಿರೇಚನಗಳಿಂದ ದೇಹವನ್ನು ಶುದ್ಧಮಾಡಿ ನಿರೂಹ ಬಸ್ತಿಯನ್ನು ಕೊಟ್ಟು ಹಳೆಯ ಧಾನ್ಯವನ್ನೂ, (ತುಪ್ಪ ಶುಂಠಿ ಗಳಿಂದ) ರುಚಿಮಾಡಿದ ಮಾಂಸ-ರಸವನ್ನೂ, ಜಾಂಗಲ ಮಾಂಸವನ್ನೂ, ಹೆಸರು ಮುಂತಾದವುಗಳ ಕಟ್ಟನ್ನೂ, ಹಳೆಯ ದ್ರಾಕ್ಷಾಸವ ಅರಿಷ್ಟಗಳನ್ನೂ, ಪಾದಾಲವಣ ಮತ್ತು ಪಂಚಕೋಲ (ಹಿಪ್ಪಲಿ, ಮೋಡಿ, ಚವಕ, ಚಿತ್ರಕ, ಶುಂಠಿ) ಚೂರ್ಣ ಹಾಕಿದ ಮೊಸರಿನ ಮೇಲಿನ ನೀರನ್ನೂ, ಮಳೆಯ ನೀರನ್ನೂ, ಇಲ್ಲವಾದರೆ ಕುದಿಸಿದ ಬಾವಿಯ ನೀರನ್ನೂ ಸೇವಿಸಬೇಕು. ಆಕಾಶವು ಮೋಡಗಳಿಂದ ತೀರ ಮುಚ್ಚಿದ್ದರೆ ಹುಳಿ ಉಪ್ಪು ಸ್ನೇಹಗಳು ವಿಶೇಷವಾಗಿರುವ ಮತ್ತು ಜೇನತುಪ್ಪ ಹಾಕಿದ ಶುಷ್ಕ ಹಗುರು ಆಹಾರ ವನ್ನು ಮಾಡಬೇಕು.

**ಟಿಪ್ಪಣಿ:—** ಜೇನು ವಾತಕರವಾಗಿದ್ದರೂ ವರ್ಷಾಕಾಲದಲ್ಲಿಯ ಕ್ಲೇದ ವನ್ನು ಕಳೆಯುವದರಲ್ಲಿಯೇ ಅದರ ಶಕ್ತಿಯು ಕ್ಷೀಣವಾಗಿರುವದರಿಂದ ವಾತ ವನ್ನುಂಟುಮಾಡುವದಿಲ್ಲ.
**'ವಾತಲಂ ವಾತಕೋಪೇಽಪಿ ವರ್ಷಾಸು ಮಧು ಶಸ್ಯತೇ'** (ಅ. ಸಂ.) (೪೬||)

**ಅಪಾದಚಾರೀ ಸುರಭಿಃ ಸತತಂ ಧೂಪಿತಾಂಬರಃ ||೪೭||**
**ಹರ್ಮ್ಯಪೃಷ್ಠೇ ವಸೇದ್ಬಾಷ್ಪಶೀತಶೀಕರವರ್ಜಿತೇ ||**

ಅರ್ಥಃ— ಈ ಋತುವಿನಲ್ಲಿ ಬರೆಗಾಲಿನಿಂದ ತಿರುಗಬಾರದು. ಸುಗಂಧ ದ್ರವ್ಯಗಳನ್ನು ಹಚ್ಚಿಕೊಳ್ಳಬೇಕು. ಯಾವಾಗಲೂ ಧೂಪ ಕೊಟ್ಟ ವಸ್ತ್ರಗಳನ್ನು ಧರಿಸಬೇಕು. ಭೂಮಿಯ ಬಾಷ್ಪ, ಶೀತ ಮತ್ತು ತುಂತುರ ಹನಿಗಳು ಇಲ್ಲದ ಮೇಲ್ಮಾಳಿಗೆಗಳಲ್ಲಿ ಮಲಗಬೇಕು. (೪೭||)

ನದೀಜಲೋದಮಂಥಾಹಃಸ್ವಪ್ನಾಯಾಸಾತಪಾಂಸ್ತ್ಯಜೇತ್ ||೪೮||

ಅರ್ಥ:— ನದಿಯ ನೀರನ್ನೂ, ಹುರಿದ, ಸತುವಿನ ಹಿಟ್ಟು ಕಲಿಸಿದ ನೀರ(ಉದಮಂಥ)ನ್ನೂ, ಹಗಲು ನಿದ್ರೆಯನ್ನೂ, ವ್ಯಾಯಾಮವನ್ನೂ, ಬಿಸಿಲನ್ನೂ ಸೇವಿಸಬಾರದು. (೪೮)

ಶರದ್‌ಋತುವಿನಲ್ಲಿಯ ಆಚಾರವನ್ನು ಹೇಳುತ್ತಾರೆ.

ವರ್ಷಾಶೀತೋಚಿತಾಂಗಾನಾಂ ಸಹಸೈವಾರ್ಕರಶ್ಮಿಭಿಃ ||
ತಪ್ತಾನಾಂ ಸಂಚಿತಂ ವೃಷ್ಟೌ ಪಿತ್ತಂ ಶರದಿ ಕುಪ್ಯತಿ ||೪೯||

ತಜ್ಜಯಾಯ ಘೃತಂ ತಿಕ್ತಂ ವಿರೇಕೋ ರಕ್ತಮೋಕ್ಷಣಮ್ ||

ಅರ್ಥ:— ವರ್ಷಾಕಾಲದ ಚಳಿಯ ರೂಢಿಯುಳ್ಳ ಜನರ ದೇಹಗಳಿಗೆ ಶರತ್‌ಕಾಲದಲ್ಲಿ ಒಮ್ಮೆಲೇ ಸೂರ್ಯಕಿರಣಗಳ ತಾಪವು ತಾಗಲು ವರ್ಷಾಕಾಲದಲ್ಲಿ ಸಂಚಿತವಾದ ಪಿತ್ತವು ಕುಪಿತವಾಗುತ್ತದೆ. ಅದರ ನಾಶಕ್ಕಾಗಿ ತಿಕ್ತಘೃತ (ಕುಷ್ಠರೋಗೋಕ್ತ) ವಿರೇಚನ, ರಕ್ತ-ಮೋಕ್ಷಗಳನ್ನು ಮಾಡಬೇಕು. (೪೯॥)

ತಿಕ್ತಂ ಸ್ವಾದು ಕಷಾಯಂ ಚ ಕ್ಷುಧಿತೋಽನ್ನಂ ಭಜೇಲ್ಲಘು ||೫೦||

ಶಾಲಿಮುದ್ಗಸಿತಾಧಾತ್ರೀಪಟೋಲಮಧುಜಾಂಗಲಮ್ ||

ಅರ್ಥ:— ಹಸಿವೆಯಾದರೆ ಅಕ್ಕಿ, ಹೆಸರು, ಸಕ್ಕರೆ, ನೆಲ್ಲೀಕಾಯಿ ಪಡುವಲ, ಜೇನು, ಜಾಂಗಲಮಾಂಸ ಮುಂತಾದ ಕಹಿ ಸಿಹಿ ಒಗುರು ರಸದ ಹಗುರು ಆಹಾರವನ್ನು ಮಾಡಬೇಕು. (೫೦॥)

ತಪ್ತಂ ತಪ್ತಾಂಶುಕಿರಣೈಃ ಶೀತಂ ಶೀತಾಂಶುರಶ್ಮಿಭಿಃ ||೫೧||

ಸಮಂತಾದಪ್ಯಹೋರಾತ್ರಮಗಸ್ತ್ಯೋದಯನಿರ್ವಿಷಮ್ ||
ಶುಚಿ ಹಂಸೋದಕಂ ನಾಮ ನಿರ್ಮಲಂ ಮಲಜಿಜ್ಜಲಮ್ ||೫೨||

ನಾಭಿಷ್ಯಂದಿ ನ ವಾ ರೂಕ್ಷಂ ಪಾನಾದಿಷ್ವಮೃತೋಪಮಮ್

ಅರ್ಥ:— ಎಲ್ಲ ಕಡೆಯಲ್ಲಿಯೂ ಹಗಲು ಸೂರ್ಯ ಕಿರಣದಿಂದ ಕಾಯ್ದ, ರಾತ್ರಿಯಲ್ಲಿ ಚಂದ್ರ ಕಿರಣದಿಂದ ತಂಪಾದ, ಅಗಸ್ತ್ಯನ ಉದಯ ದಿಂದ ನಿರ್ವಿಷವಾದ, ಪವಿತ್ರವಾದ ನೀರಿಗೆ 'ಹಂಸೋದಕ' ಎಂಬ ಹೆಸರು ಈ ನೀರು ಸ್ವಚ್ಛವೂ, ತ್ರಿದೋಷನಾಶಕವೂ ಆಗಿದ್ದು ಕಫಕರವು ಅಥವಾ ರುಕ್ಷವು ಆಗಿರುವದಿಲ್ಲ. ಆದ್ದರಿಂದ ಅದು ಕುಡಿಯಲು, ಸ್ನಾನಮಾಡಲು ಅಮೃತತುಲ್ಯವಾಗಿದೆ.

**ಟಿಪ್ಪಣಿ:—** ಈ ಶ್ಲೋಕದಲ್ಲಿ ಕಾದನೀರು ಇಷ್ಟೇ ಅಂದಿದ್ದರೆ ಬೆಂಕಿ ಯಿಂದ ಕಾದನೀರಿಗೂ, ಹಂಸೋದಕ ಅನ್ನಬೇಕಾಗುವದು. ಕಾರಣ ಸೂರ್ಯ ನಿಂದ ಎಂದು ಅನ್ನಬೇಕಾಯಿತು. ಸೂರ್ಯನಿಂದ ಕಾದ, ಇಷ್ಟೇ ಅಂದರೆ ಪರಂ ಪರೆಯಿಂದ ಕಾದನೀರಿಗೂ ಆ ಹೆಸರು ಬರುವದು. ಕಾರಣ ಸೂರ್ಯನ ಕಿರಣ ದಿಂದ ಕಾದ, ಎಂದಿರುವರು. ಇದರಿಂದ ಸೂರ್ಯನ ಕಿರಣ ಸಾಕ್ಷಾತ್ ಬಿದ್ದೇ ಕಾದ ಎಂಬ ಅರ್ಥವು ಹೊರಡುವದು.

ಯಾವಾಗಲೂ ಚಂದ್ರನಿಂದ ಶೀತವು ಆಗುವ ಬಗೆ ಹೇಗೆ ? ಚಂದ್ರನು ಇಡೀ ರಾತ್ರಿ ಇರಬೇಕಾದರೆ ಹುಣ್ಣಿವೆ ಒಂದೇ ದಿವಸ. ಕಾರಣ ಇಲ್ಲಿ 'ಶೀತಾಂಶು' ಪದದಿಂದ ಚಂದ್ರ ನಕ್ಷತ್ರಾದಿಗಳನ್ನು ತಕ್ಕೊಳ್ಳಬೇಕು.

ಅಗಸ್ತ್ಯನು ಆಕಾಶದಲ್ಲಿರುವದರಿಂದ ಅವನಿಂದ ನಿರ್ವಿಷವಾದ ನೀರು ಎಂದರೆ ಸಾಕ್ಷಾತ್ ಆಕಾಶದಿಂದ ಬಂದ ನೀರು ಮತ್ತು ಸರೋವರ ಕೆರೆಗಳ ನೀರು. ಆದರೆ ಬಾವಿಯ ನೀರಲ್ಲ. ಯಾಕೆಂದರೆ ಅದು ಶೆಲೆಗಳಿಂದ ಬಂದಿರುತ್ತದೆ. ('ಸರ್ವಾಂಗಸುಂದರ')　　　　　　(೫೨॥)

**ಚಂದನೋಶೀರಕರ್ಪೂರಮುಕ್ತಾಸ್ರಗ್ವಸನೋಜ್ಜ್ವಲಃ　　　　||೫೩||**

**ಸೌಧೇಷು ಸೌಧಧವಲಾಂ ಚಂದ್ರಿಕಾಂ ರಜನೀಮುಖೇ ||**

ಅರ್ಥ:— ಸಂಧ್ಯಾಕಾಲದಲ್ಲಿ ಗಂಧ, ಬಾಳದಬೇರು, ಕರ್ಪೂರ ಇವುಗಳನ್ನು ತೊಡೆದುಕೊಂಡು ಮುತ್ತಿನಹಾರ, ಹೂಮಾಲೆ, ಮತ್ತು ವಸ್ತ್ರ ಗಳಿಂದ ಶೃಂಗಾರವಾಗಿ ಗಚ್ಚಿನ ಮಾಳಿಗೆಯ ಮೇಲೆ ಕೂತು ಸುಣ್ಣದಂತೆ ಬೆಳ್ಳಗಾದ ಬೆಳದಿಂಗಳನ್ನು ಸೇವಿಸಬೇಕು.　　　　(೫೩||)

**ತುಷಾರಕ್ಷಾರಸೌಹಿತ್ಯದಧಿತೈಲವಸಾತಪಾನ್** ||೫೪||
**ತೀಕ್ಷ್ಣಮದ್ಯದಿವಾಸ್ವಪ್ನಪುರೋವಾತಾನ್ ಪರಿತ್ಯಜೇತ್ ||**

ಅರ್ಥ.— ಮಂಜು, ಕ್ಷಾರ, ಹೊಟ್ಟೆತುಂಬಿ ತಿನ್ನೋಣ, ಮೊಸರು, ಎಣ್ಣೆ, ನೆಣ, ಬಿಸಿಲು, ತೀಕ್ಷ್ಣವಾದ ಮದ್ಯ, ಹಗಲು ನಿದ್ದೆ, ಪೂರ್ವದ ಗಾಳಿಗಳನ್ನು ಸೇವಿಸಬಾರದು. (೫೪||)

ಈ ಪ್ರಕಾರ ಬೇರೆ ಬೇರೆ ಋತುಗಳ ಆಚಾರವನ್ನು ವಿಸ್ತಾರದಿಂದ ಹೇಳಿ ಅದನ್ನು ಈಗ ಸಂಕ್ಷೇಪವಾಗಿ ಹೇಳುತ್ತಾರೆ.

**ಶೀತೇ ವರ್ಷಾಸು ಚಾದ್ಯಾಂಸ್ತ್ರೀನ್ ವಸಂತೇಽಂತ್ಯಾನ್ ರಸಾನ್**
**ಭಜೇತ್** ||೫೧||
**ಸ್ವಾದುಂ ನಿದಾಘೇ, ಶರದಿ ಸ್ವಾದುತಿಕ್ತಕಷಾಯಕಾನ್** ||

ಅರ್ಥ:— ಹೇಮಂತ, ಶಿಶಿರ, ವರ್ಷಾಋತುಗಳಲ್ಲಿ ಮೊದಲಿನ ಮೂರು (ಸಿಹಿ, ಹುಳಿ, ಉಪ್ಪು) ರಸಗಳನ್ನೂ, ವಸಂತದಲ್ಲಿ ಕಡೆಯ ಮೂರು (ಕಹಿ, ಕಾರ, ಒಗರು) ರಸಗಳನ್ನೂ, ಗ್ರೀಷ್ಮದಲ್ಲಿ ಮಧುರ ರಸವನ್ನೂ, ಶರದ್ ಋತುವಿನಲ್ಲಿ ಸಿಹಿ, ಕಹಿ, ಒಗರುಗಳನ್ನೂ ಸೇವಿಸಬೇಕು. (೫೫||)

**ಶರದ್ವಸಂತಯೋಃ ರೂಕ್ಷಂ ಶೀತಂ ಘರ್ಮ ಘನಾಂತಯೋಃ** ||೫೬||
**ಅನ್ನಪಾನಂ ಸಮಾಸೇನ ವಿಪರೀತಮತೋಽನ್ಯದಾ** ||

ಅರ್ಥ.— ಸಾಧಾರಣವಾಗಿ ಶರದ್ ವಸಂತ ಋತುಗಳಲ್ಲಿ ರುಕ್ಷವಾದ ಅನ್ನಪಾನವನ್ನೂ, ಉಳಿದ ( ಹೇಮಂತ, ಶಿಶಿರ, ಗ್ರೀಷ್ಮ, ವರ್ಷಾ ) ಋತುಗಳಲ್ಲಿ ಸ್ನಿಗ್ಧ ಆಹಾರವನ್ನೂ, ಗ್ರೀಷ್ಮ ಶರದ್ ಋತುಗಳಲ್ಲಿ ಶೀತ ಅನ್ನಪಾನವನ್ನೂ, ಉಳಿದ ( ಹೇಮಂತ, ಶಿಶಿರ, ವಸಂತ, ವರ್ಷಾ ) ಋತುಗಳಲ್ಲಿ ಉಷ್ಣ ಅನ್ನಪಾನವನ್ನೂ ಮಾಡಬೇಕು.

**ಟಿಪ್ಪಣಿ:—** ಹೇಮಂತ, ಶಿಶಿರ, ವರ್ಷಾ ಋತುಗಳಲ್ಲಿ ಸಿಹಿ, ಹುಳಿ, ಉಪ್ಪು, ರಸಗಳುಳ್ಳ ಸ್ನಿಗ್ಧ, ಉಷ್ಣ ಅನ್ನಪಾನವನ್ನೂ, ವಸಂತ ಋತುವಿನಲ್ಲಿ ಕಹಿ, ಕಾರ, ಒಗರು ರಸಗಳುಳ್ಳ ರುಕ್ಷ ಉಷ್ಣ ಅನ್ನಪಾನವನ್ನೂ, ಗ್ರೀಷ್ಮ

ಋತುವಿನಲ್ಲಿ ಸಿಹಿ ರಸವುಳ್ಳ ಶೀತ ಸ್ನಿಗ್ಧ ಅನ್ನಪಾನವನ್ನೂ, ಶರದ್ ಋತುವಿನಲ್ಲಿ ಸಿಹಿ, ಕಹಿ, ಒಗರು ರಸಗಳುಳ್ಳ ರುಕ್ಷ ಶೀತ, ಅನ್ನಪಾನವನ್ನೂ ಸೇವಿಸಬೇಕೆಂಬ ತಾತ್ಪರ್ಯವು. (೫೬॥)

**ನಿತ್ಯಂ ಸರ್ವರಸಾಭ್ಯಾಸಃ ಸ್ವಸ್ವಾಧಿಕ್ಯಮೃತಾವೃತೌ ॥೫೭॥**

ಅರ್ಥಃ— ದಿನಾಲು ಎಲ್ಲ ರಸಗಳನ್ನೂ ತಿನ್ನಬೇಕು. ಆದರೆ ಆಯಾ ಋತುಗಳಲ್ಲಿ ಹೇಳಿದ ರಸಗಳನ್ನು ಆಗ್ಗೆ ಹೆಚ್ಚಾಗಿ ತಿನ್ನಬೇಕು. (೫೭)

**ಋತ್ವೋರಂತ್ಯಾದಿಸಪ್ತಾಹಾವೃತುಸಂಧಿರಿತಿ ಸ್ಮೃತಃ ॥**
**ತತ್ರ ಪೂರ್ವೋ ವಿಧಿಸ್ತ್ಯಾಜ್ಯಃ ಸೇವನೀಯೋಽಪರಃ ಕ್ರಮಾತ್॥೫೮॥**
**ಅಸಾತ್ಮ್ಯಜಾ ಹಿ ರೋಗಾಃ ಸ್ಯುಃ ಸಹಸಾ ತ್ಯಾಗಶೀಲನಾತ್ ॥**

ಅರ್ಥ:— ಮೊದಲಿನ ಋತುವಿನ ಕಡೆಯ ಏಳು ದಿವಸ, ಮುಂದಿನ ಋತುವಿನ ಮೊದಲಿನ ಏಳು ದಿನಸ ಹೀಗೆ ಹದಿನಾಲ್ಕು ದಿವಸಗಳು ಋತು ಸಂಧಿಯೆಂದು ಕರೆಯಲ್ಪಡುತ್ತವೆ. ಆಗ್ಗೆ ಮೊದಲಿನ ಋತುವಿನ ಆಚಾರವನ್ನು ಕ್ರಮದಿಂದ ಬಿಡುತ್ತ ಮುಂದಿನ ಋತುವಿನ ಆಚಾರವನ್ನು ಕ್ರಮವಾಗಿ ಸೇವಿಸುತ್ತ ಹೋಗಬೇಕು. ಒಮ್ಮೆಲೇ ಆಚಾರವನ್ನು ಬಿಟ್ಟುಕೊಟ್ಟರೆ ಅಭ್ಯಾಸವಿಲ್ಲದ ವಸ್ತುವನ್ನು ಸೇವಿಸುವದರಿಂದ ಹುಟ್ಟುವ ರೋಗಗಳುಂಟಾಗುವವು. (೫೮॥)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ**
**ಋತುಚರ್ಯಾ ನಾಮ ತೃತೀಯೋಽಧ್ಯಾಯಃ ಸಮಾಪ್ತಃ ॥**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ ಋತುಚರ್ಯೆ ಎಂಬ ೩ನೆಯ ಅಧ್ಯಾಯವು ಮುಗಿದುದು.



# ೪ನೆಯ ಅಧ್ಯಾಯ

ಹಿಂದಿನ ಅಧ್ಯಾಯಗಳಲ್ಲಿ ಹೇಳಿದಂತೆ ದಿನಚರ್ಯೆ, ಋತುಚರ್ಯೆಗಳನ್ನು ಮಾಡಿದರೂ, ವೇಗಗಳನ್ನು ಬಲುಮೆಯಿಂದ ನಿವೃತ್ತಿ (ಧಾರಣ) ಅಥವಾ ಪ್ರವೃತ್ತಿ (ಉದೀರಣ) ಮಾಡೋಣದರಿಂದ ರೋಗಗಳುಂಟಾಗುವವು. ಕಾರಣ ಅವುಗಳನ್ನು ಮಾಡಬಾರದೆಂದು ಅವುಗಳಿಂದ ಆಗುವ ಅಪಾಯ(ರೋಗ)ಗಳನ್ನು ಹೇಳುತ್ತಾರೆ.

**ಅಥಾತೋ *ರೋಗಾನುತ್ಪಾದನೀಯಾಧ್ಯಾಯಂ ವ್ಯಾಖ್ಯಾಸ್ಯಾಮಃ||**

ಅರ್ಥಃ— ಇನ್ನುಮೇಲೆ ರೋಗಾನುತ್ಪಾದನೀಯ ( ರೋಗವೇ ಉಂಟಾಗದಂತೆ ಉಪಾಯವನ್ನು ಹೇಳಿದ) ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಅರ್ಥಃ— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದ್ದಾರೆ.

**ವೇಗಾನ್ನ ಧಾರಯೇದ್ವಾತವಿಣ್ಮೂತ್ರಕ್ಷವತೃಟ್‍ಕ್ಷುಧಾಂ ||**
**ನಿದ್ರಾಕಾಸಶ್ರಮಶ್ವಾಸಜೃಂಭಾಶ್ರುಚ್ಛರ್ದಿರೇತಸಾಮ್ ||೧||**

ಅರ್ಥಃ— ಅಪಾನವಾಯು ( ಅಧೋವಾತ ), ತೇಗು ( ಊರ್ಧ್ವ ವಾತ), ಮಲ, ಮೂತ್ರ, ಶೀನು, ನೀರಡಿಕೆ, ಹಸಿವೆ, ನಿದ್ದೆ, ಕೆಮ್ಮು, ಶ್ರಮದಿಂದುಂಟಾದ ಶ್ವಾಸ, ಆಕಳಿಕೆ, ಕಣ್ಣೀರು, ವಾಂತಿ, ಶುಕ್ರಗಳ ವೇಗ ವನ್ನು ಪ್ರತಿಬಂಧಿಸಬಾರದು.

**ಟಿಪ್ಪಣೀ—** ವೇಗವೆಂದರೆ ಶರೀರದ ನೈಸರ್ಗಿಕ ಪ್ರವೃತ್ತಿಯ ಉನ್ಮುಖ ತೆಯು. (೧)

**ಅಧೋವಾತಸ್ಯ ರೋಧೇನ ಗುಲ್ಮೋದಾವರ್ತರುಕ್‍ಕ್ಲಮಾಃ ||**
**ವಾತಮೂತ್ರಶಕೃತ್ಸಂಗದೃಷ್ಟ್ಯಗ್ನಿವಧಹೃದ್ಗದಾಃ ||೨||**

---

* ಈ ರೋಗಾನುತ್ಪಾದನವು ಚರಕದ ಸೂತ್ರಸ್ಥಾನ ೭ ನೇ, ಚಿ. ಸ್ಥಾನ ೨೬ ನೇ ಮತ್ತು ಸುಶ್ರುತದ ಉ. ಸ್ಥಾನ ೫೫ ನೇ, ಅಷ್ಟಾಂಗಸಂಗ್ರಹದ ಸೂತ್ರಸ್ಥಾನ ೫ ನೇ ಅಧ್ಯಾಯಗಳಲ್ಲಿ ಹೇಳಲಾಗಿದೆ.

ಶಕೃತಃ ಪಿಂಡಿಕೋದ್ವೇಷ್ಟಪ್ರತಿಶ್ಯಾಯಶಿರೋರುಜಃ
ಊರ್ಧ್ವವಾಯುಃ ಪರೀಕರ್ತೋ ಹೃದಯಸ್ಯೋಪರೋಧನಮ್ ||೩||

ಮುಖೇನ ವಿಟ್ಪ್ರವೃತ್ತಿಶ್ಚ ಪೂರ್ವೋಕ್ತಾಶ್ಚಾಮಯಾಃ ಸ್ಮೃತಾಃ ||
ಅಂಗಭಂಗಾಶ್ಮರೀಬಸ್ತಿಮೇಢ್ರವಂಕ್ಷಣವೇದನಾಃ ||೪||

ಮೂತ್ರಸ್ಯ ರೋಧಾತ್ಪೂರ್ವೇ ಚ ಪ್ರಾಯೋ ರೋಗಾಃ........

ಅರ್ಥಃ— ಅಪಾನವಾಯುವಿನ ತಡೆಯಿಂದ ಗುಲ್ಮ, ಉದಾವರ್ತ, ಹೊಟ್ಟೆಯಲ್ಲಿ ಶೂಲಿ, ಗ್ಲಾನಿ, ವಾತ ಮೂತ್ರ ಮಲಗಳಿಗೆ ಪ್ರತಿಬಂಧ, ದೃಷ್ಟಿಮಾಂದ್ಯ, ಅಗ್ನಿಮಾಂದ್ಯ, ಹೃದ್ರೋಗಗಳು ಉಂಟಾಗುತ್ತವೆ. ಮಲವನ್ನು ತಡೆದರೆ ಮೀನಗಂಡಗಳಲ್ಲಿ ಒರಟೆ, ನೆಗಡಿ, ತಲೆನೋವು, ತೇಗು, ಗುದದ್ವಾರದಲ್ಲಿ ಕತ್ತರಿಸಿದಂತೆ ಆಗೋಣ, ಎದೆ ಹಿಡಿಯೋಣ, ಮಲದ ವಾಂತಿ, ಮತ್ತು ಹಿಂದೆ ಹೇಳಿದ ( ಗುಲ್ಮ, ಉದಾವರ್ತ ಮುಂತಾದ ) ವಿಕಾರಗಳು ಆಗುವವು. ಮೂತ್ರವನ್ನು ತಡೆದರೆ ಮೈ - ಮುರಿಯೋಣ, ಮೂತ್ರಾಶ್ಮರಿ, ಮೂತ್ರಾಶಯ ಶಿಶ್ನ ಗೆಜ್ಜೆಗಳಲ್ಲಿ ನೋವು, ಬಹುತರ ಹಿಂದಿನ ( ಮೇಲೆ ಹೇಳಿದ ) ರೋಗಗಳು ಉಂಟಾಗುವವು.

**ಟಿಪ್ಪಣಿ:—** ಅಧೋವಾತ ನಿಗ್ರಹಜ ರೋಗಗಳ ನಂತರ ಊರ್ಧ್ವವಾತ ನಿಗ್ರಹಜ ರೋಗಗಳನ್ನು ಹೇಳಬೇಕಾಗಿತ್ತು. ಏಕೆಂದರೆ ಮೇಲೆ 'ವಾತ' ಶಬ್ದದಿಂದ ಅಧೋವಾತ ಊರ್ಧ್ವವಾತ ಎರಡೂ ತಕ್ಕೊಂಡಿವೆ. ಅದನ್ನು ಬಿಟ್ಟು ನಡುವೆ ಮಲ ಮೂತ್ರ ವೇಗದ ವಿಕಾರವನ್ನು ಹೇಳಿರುವರು. ಕಾರಣವೇನಂದರೆ ಇವುಗಳಿಂದಲೂ ಅಪಾನವಾಯುವಿನ ನಿಗ್ರಹದಿಂದ ಹುಟ್ಟುವ ರೋಗಗಳು ಉಂಟಾಗುವವು. (ಪೂರ್ವೋಕ್ತಾಶ್ಚಾಮಯಾಃ ಸ್ಮೃತಾಃ, ಪೂರ್ವೇಚ ಪ್ರಾಯೋ ರೋಗಾಃ) ಎಂದು ಅತಿದೇಶಕ್ಕೆ ಸುಲಭವಾಗುವದಕ್ಕಾಗಿ. (೪||)

ಈ ಅಧ್ಯಾಯಗಳು ಸ್ವಸ್ಥವೃತ್ತ (ಆರೋಗ್ಯ) ಅಧಿಕಾರದಲ್ಲಿ ಇರುವದರಿಂದ ರೋಗಗಳಿಗೆ ಔಷಧ ಹೇಳುವದು ಅಪ್ರಾಸಂಗಿಕವು. ಆದರೂ ಪ್ರಮಾದದಿಂದ ಅಥವಾ ದೈವ ಯೋಗದಿಂದ ಈ ವೇಗ ನಿರೋಧಾದಿಗಳು ಆರೋಗ್ಯ-ಕಾಮಿಗೆ ಘಟಿಸುವ ಸಂಭವವುಂಟು. ಅದ್ದರಿಂದ ಕೂಡಲೇ ಅಗ್ಗೆ ಮಾಡಬೇಕಾದ ಸುಲಭೋಪಾಯಗಳನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ.

........................................................ತದೌಷಧಮ್ ||
ವರ್ತ್ಯಭ್ಯಂಗಾವಗಾಹಾಶ್ಚ ಸ್ವೇದನಂ ಬಸ್ತಿಕರ್ಮ ಚ ||೫||

**ಅನ್ನಪಾನಂ ಚ ವಿಡ್ಭೇದಿ ವಿಡ್ರೋಧೋತ್ಥೇಷು ಯಕ್ಷ್ಮಸು |**
**ಮೂತ್ರಜೇಷು ತು ಪಾನೇ ಚ ಪ್ರಾಗ್ಭಕ್ತಂ ಶಸ್ಯತೇ ಘೃತಮ್ ||೬|**
**ಜೀರ್ಣಾಂತಿಕಂ ಚೋತ್ತಮಯಾ ಮಾತ್ರಯಾ ಯೋಜನಾದ್ವಯಮ್||**
**ಅವಪೀಡಕಮೇತಚ್ಚ ಸಂಜ್ಞಿತಂ.................................**

ಅರ್ಥ:— ಅವಕ್ಕೆ ( ಅಧೋವಾತ, ಮಲ, ಮೂತ್ರಗಳ ತಡೆಯಿಂದ ಉಂಟಾದ ರೋಗಗಳಿಗೆ ) ಔಷಧಗಳೆಂದರೆ ಫಲವರ್ತಿ, ಅಭ್ಯಂಗ, ವಾತನಾಶಕ ದ್ರವ ಪದಾರ್ಥಗಳಲ್ಲಿ ಕೂಡೋಣ, ಸ್ವೇದ, ಬಸ್ತಿಗಳು ಔಷಧವು.

ಮಲದ ತಡೆಯಿಂದ ಉಂಟಾದ ವಿಕಾರಗಳಲ್ಲಿ (ಇವುಗಳ ಹೊರ್ತು) ಮಲಸಾರಕವಾದ ಅನ್ನಪಾನವನ್ನು ಕೊಡಬೇಕು.

ಮೂತ್ರದ ತಡೆಯಿಂದ ಉಂಟಾದ ರೋಗಗಳಲ್ಲಿ (ಮೇಲಿನ ಉಪಚಾರದ ಹೊರ್ತು) ಊಟಕ್ಕಿಂತ ಮೊದಲು ಸಣ್ಣ ಪ್ರಮಾಣದಿಂದ ( ಪ್ರಾಗ್ಭಕ್ತ ) ಅಥವಾ ಮೊದಲು ದಿನದ ಅನ್ನ ಜೀರ್ಣವಾದ ಮೇಲೆ ( ಸ್ನೇಹವಿಧಿಯಲ್ಲಿ ಹೇಳಿದಂತೆ ೨೪ ತಾಸುಗಳಲ್ಲಿ ಪಚನವಾಗುವಷ್ಟು ) ಪೂರ್ಣ ಪ್ರಮಾಣದಿಂದ ಘೃತವನ್ನು ಕೊಡಬೇಕು. ಇವೆರಡಕ್ಕೂ ಅವಪೀಡಕ ಎಂಬ ಹೆಸರುಂಟು.

**ಟಿಪ್ಪಣೀ:—** ವೇಗ_ಧಾರಣದಿಂದ ವಾತದ ಕೋಪವೇ ವಿಶೇಷವಾಗಿ ಆಗುವದು. ಅಂದಮೇಲೆ ವಾತನಾಶಕವಾದ ತೈಲವನ್ನು ಬಿಟ್ಟು ಘೃತದ ಅವಪೀಡಕವನ್ನು ಏಕೆ ಹೇಳಿದರು ? ಎಂದರೆ ತೈಲವು ಮಲಬಂಧವನ್ನೂ ಮೂತ್ರಾಲ್ಪತ್ವೆಯನ್ನೂ ಉಂಟುಮಾಡುವದು. ( 'ತೈಲಂ............ಬದ್ಧವಿಟ್ಕಂ ಕೃಮಿಘ್ನಂ ಚ' **'ತಿಲೋ ಗುರುಃ ಅಲ್ಪಮೂತ್ರಃ'** ) ಆದಕ್ಕಾಗಿ ಈ ವಿಕಾರಗಳಲ್ಲಿ ತೈಲವು ಯುಕ್ತವಾಗದು ಎಂದು ಘೃತವನ್ನು ಹೇಳಿದ್ದಾರೆ. (೬||)

**ಧಾರಣಾತ್ಪುನಃ ||೭||**
**ಉದ್ಗಾರಸ್ಯಾರುಚಿಃ ಕಂಪೋ ವಿಬಂಧೋ ಹೃದಯೋರಸೋಃ ||**
**ಆಧ್ಮಾನಕಾಸಹಿಧ್ಮಾಶ್ಚ ಹಿಧ್ಮಾವತ್ತತ್ರಭೇಷಜಮ್ ||೮||**

ಅರ್ಥ:— ತೇಗನ್ನು ತಡೆಯುವದರಿಂದ ಅರುಚಿ, ನಡುಗು, ಎದೆ ಮತ್ತು ಅದರ ಕೆಳಗೆ ಹಿಡಿದಂತೆ ಆಗೋಣ, ಹೊಟ್ಟೆಯುಬ್ಬು, ಕೆಮ್ಮು,

ಚಿಕ್ಕುಗಳು ಉಂಟಾಗುವವು. ಇವಕ್ಕೆ ಚಿಕ್ಕಿನಂತೆ (೫. ಹೃ. ಚಿ. ೫. ೪) ಉಪಚಾರ ಮಾಡಬೇಕು. (೮)

ಶಿರೋಽರ್ತೀಂದ್ರಿಯದೌರ್ಬಲ್ಯಮನ್ಯಾಸ್ತಂಭಾರ್ದಿತಂ ಕ್ಷುತೇಃ ||
ತೀಕ್ಷ್ಣಧೂಮಾಂಜನಾಘ್ರಾಣನಾವನಾರ್ಕವಿಲೋಕನೈಃ ||೯||

ಪ್ರವರ್ತಯೇತ್ಕ್ಷುತಿಂ ಸಕ್ತಾಂ ಸ್ನೇಹಸ್ವೇದೌ ಚ ಶೀಲಯೇತ್ ||

ಅರ್ಥಃ— ಶೀನು ತಡೆಯೋಣದರಿಂದ ತಲೆನೋವು, ಕಣ್ಣು, ಮುಂತಾದ ಇಂದ್ರಿಯಗಳ ಬಲಹೀನತೆ, "ಮನ್ಯಾಸ್ತಂಭ" "ಅರ್ದಿತ" (ವಾತರೋಗ ಭೇದ) ಗಳು ಉಂಟಾಗುತ್ತವೆ. ಇವಕ್ಕೆ ತೀಕ್ಷ್ಣ ಪದಾರ್ಥಗಳ ಅಂಜನ, ಧೂಮ, ಮೂಸೋಣ, ನಸ್ಯ, ಸೂರ್ಯದರ್ಶನ ಮಾಡಿ ತಡೆದ ಶೀನನ್ನು ತರಿಸಬೇಕು. ಸ್ನೇಹ, ಸ್ವೇದಗಳನ್ನು ಮೇಲಿಂದ ಮೇಲೆ ಮಾಡಬೇಕು. (೯||)

ಶೋಷಾಂಗಸಾದಬಾಧಿರ್ಯಸಮ್ಮೋಹಭ್ರಮಹೃದ್ಗದಾಃ ||೧೦||
ತೃಷ್ಣಾಯಾ ನಿಗ್ರಹಾತ್ತತ್ರ ಶೀತಃ ಸರ್ವೋ ವಿಧಿರ್ಹಿತಃ ||

ಅರ್ಥಃ— ನೀರಡಿಕೆಯ ತಡೆಯಿಂದ ಬಾಯಾರಿಕೆ, ಮೈ ಲಿಕಿಲಿಕಿಯಾಗೋಣ, ಕಿವುಡುತನ, ಮೂರ್ಛೆ, ಮೈ ತಿರಗೋಣ, ಹೃದ್ರೋಗಗಳುಂಟಾಗುವವು. ಇವುಗಳ ಮೇಲೆ ಎಲ್ಲ ಶೀತ ಉಪಚಾರಗಳನ್ನು ಮಾಡಬೇಕು. (೧೦||)

ಅಂಗಭಂಗಾರುಚಿಗ್ಲಾನಿಕಾರ್ಶ್ಯಶೂಲಭ್ರಮಾಃ ಕ್ಷುಧಃ ||೧೧||
ತತ್ರ ಯೋಜ್ಯಂ ಲಘು ಸ್ನಿಗ್ಧಮುಷ್ಣಮಲ್ಪಂ ಚ ಭೋಜನಮ್ ||

ಅರ್ಥಃ— ಹಸಿವೆಯ ನಿಗ್ರಹದಿಂದ ಮೈ ಮುರಿಯೋಣ, ಅರುಚಿ ಗ್ಲಾನಿ, ಕೃಶತ್ವ, ಶೂಲ, ಭ್ರಮಗಳುಂಟಾಗುತ್ತವೆ. ಅವುಗಳ ಮೇಲೆ ಹಗುರು ಸ್ನಿಗ್ಧ ಉಷ್ಣವಾದ ಸ್ವಲ್ಪ ಊಟ ಮಾಡಬೇಕು. (೧೧||)

**ನಿದ್ರಾಯಾ ಮೋಹ ಮೂರ್ಧಾಕ್ಷಿಗೌರವಾಲಸ್ಯಜೃಂಭಿಕಾಃ ||೧೨||**
**ಅಂಗಮರ್ದಶ್ಚ, ತತ್ರೇಷ್ಟಃ ಸ್ವಪ್ನಃ ಸಂವಾಹನಾನಿ ಚ ||**

ಅರ್ಥಃ— ನಿದ್ರೆಯ ತಡೆಯಿಂದ ಮೋಹ, ತಲೆ ಕಣ್ಣು ಒಜ್ಜೆಯಾಗೋಣ, ಆಲಸ್ಯ, ಆಕಳಿಕೆ, ಮೈನೋವುಗಳುಂಟಾಗುವವು. ಅವಕ್ಕೆ ಮಲಗೋಣ, ಮೈ ಒತ್ತಿಸಿಕೊಳ್ಳೋಣ ಇವು ಹಿತಕರವಾಗಿವೆ. (೧೨||)

**ಕಾಸಸ್ಯ ರೋಧಾತ್ತದ್ವೃದ್ಧಿಃ ಶ್ವಾಸಾರುಚಿಹೃದಾಮಯಾಃ ||೧೩||**
**ಶೋಷೋ ಹಿಧ್ಮಾ ಚ, ಕಾರ್ಯೋಽತ್ರ ಕಾಸಹಾ ಸುತರಾಂ ವಿಧಿಃ||**

ಅರ್ಥಃ— ಕೆಮ್ಮಿನ ತಡೆಯಿಂದ ಕೆಮ್ಮು ಹೆಚ್ಚಾಗುವದು; ದಮ್ಮು ಅರುಚಿ, ಹೃದ್ರೋಗ, ಕ್ಷಯ, ಬಿಕ್ಕುಗಳುಂಟಾಗುವವು. ಇವಕ್ಕೆ ವಿಶೇಷವಾಗಿ ಕೆಮ್ಮಿನ ಉಪಚಾರವನ್ನು ಮಾಡಬೇಕು. (೧೩||)

**ಗುಲ್ಮಹೃದ್ರೋಗಸಮ್ಮೋಹಾಃ ಶ್ರಮಶ್ವಾಸಾದ್ವಿಧಾರಿತಾತ್ ||೧೪||**
**ಹಿತಂ ವಿಶ್ರಮಣಂ ತತ್ರ ವಾತಘ್ನಶ್ಚ ಕ್ರಿಯಾಕ್ರಮಃ ||**

ಅರ್ಥಃ— ಶ್ರಮದಿಂದುಂಟಾದ ಶ್ವಾಸದ ತಡೆಯಿಂದ ಗುಲ್ಮ, ಹೃದ್ರೋಗ, ಮೂರ್ಛೆಗಳುಂಟಾಗುವವು. ಅಲ್ಲಿ ವಿಶ್ರಾಂತಿ ಮತ್ತು ವಾತನಾಶಕ ಚಿಕಿತ್ಸೆಯು ಹಿತಕರವು. (೧೪||)

**ಜೃಂಭಾಯಾಃ ಕ್ಷವವದ್ರೋಗಾಃ, ಸರ್ವಶ್ಚಾನಿಲಜಿದ್ವಿಧಿಃ ||೧೫||**

ಅರ್ಥಃ— ಆಕಳಿಕೆಯ ತಡೆಯಿಂದ ಶೀನಿನಂತೆಯೇ ವಿಕಾರಗಳಾಗುವವು. ಅಲ್ಲಿಯೂ ಎಲ್ಲ ವಾತನಾಶಕ ಚಿಕಿತ್ಸೆಯನ್ನು ಮಾಡಬೇಕು. (೧೫)

**ಪೀನಸಾಕ್ಷಿಶಿರೋಹೃದ್ರುಙ್ಮನ್ಯಾಸ್ತಂಭಾರುಚಿಭ್ರಮಾಃ ||**
**ಸಗುಲ್ಮಾ ಬಾಷ್ಪತಸ್ತತ್ರ ಸ್ವಪ್ನೋ ಮದ್ಯಂ ಪ್ರಿಯಾಃ ಕಥಾಃ ||೧೬||**

ಅರ್ಥಃ— ಕಣ್ಣೀರಿನ ತಡೆಯಿಂದ ನೆಗಡಿ, ಕಣ್ಣು ತಲೆ ಎದೆಗಳಲ್ಲಿ ನೋವು, ಹೆಡಕು ಹಿಡಿಯೋಣ, ಅರುಚಿ, ಭ್ರಮ, ಗುಲ್ಮಗಳುಂಟಾಗು

ವವು. ಇವುಗಳ ಮೇಲೆ ಮಲಗೋಣ, ಮದ್ಯಪಾನ, ರಮ್ಯ ಕಥೆಗಳು ಹಿತಕರವು. (೧೬)

ವಿಸರ್ಪಕೋಠಕುಷ್ಠಾಕ್ಷಿಕಂಡೂಪಾಂಡ್ವಾಮಯಜ್ವರಾಃ ||
ಸಕಾಸಶ್ವಾಸ ಹೃಲ್ಲಾಸವ್ಯಂಗಶ್ವಯಥವೋ ವಮೇಃ ||೧೭||

ಗಂಡೂಷಧೂಮಾನಾಹಾರಾ ರೂಕ್ಷಂ ಭುಕ್ತ್ವಾ ತದುದ್ವಮಃ ||
ವ್ಯಾಯಾಮಃ ಸ್ರುತಿರಸ್ರಸ್ಯ ಶಸ್ತಂ ಚಾತ್ರ ವಿರೇಚನಮ್ ||೧೮||

ಸಕ್ಷಾರಲವಣಂ ತೈಲಮಭ್ಯಂಗಾರ್ಥಂ ಚ ಶಸ್ಯತೇ ||

ಅರ್ಥಃ— ವಾಂತಿಯ ತಡೆಯಿಂದ ಇಸಬು, ಹೈದಿಕ್ಕಿ, ಕುಷ್ಠ, ಕಣ್ಣುಬೇನೆ, ತುರಿಕೆ, ಪಾಂಡುರೋಗ, ಜ್ವರ, ಕೆಮ್ಮು, ದಮ್ಮು, ಮಳಮಳ, ವ್ಯಂಗ ( ಮೋರೆಯ ಮೇಲೆ ಕಪ್ಪು ಕಲೆ ), ಬಾವುಗಳುಂಟಾಗುವವು. ಇಲ್ಲಿ ಗಂಡೂಷ, ಧೂಮಪಾನ, ಉಪವಾಸ, ರುಕ್ಷ ಆಹಾರವನ್ನು ತಿಂದು ಕಾರೋಣ, ವ್ಯಾಯಾಮ, ರಕ್ತಸ್ರಾವ, ರೇಚನ ಮತ್ತು ಕ್ಷಾರಲವಣಗಳಿಂದ ಕೂಡಿದ ಅಭ್ಯಂಗಗಳು ಹಿತಕರವು. (೧೮||)

ಶುಕ್ರಾತ್ತತ್ಸ್ರವಣಂ ಗುಹ್ಯವೇದನಾಶ್ವಯಥುಜ್ವರಾಃ ||೧೯||

ಹೃದ್ವ್ಯಥಾಮೂತ್ರಸಂಗಾಂಗಭಂಗವೃದ್ಧ್ಯಶ್ಮಷಂಢತಾಃ ||
ತಾಮ್ರಚೂಡಸುರಾಶಾಲಿಬಸ್ತ್ಯಭ್ಯಂಗಾವಗಾಹನಮ್ ||೨೦||

ಬಸ್ತಿಶುದ್ಧಿಕರೈಃ ಸಿದ್ಧಂ ಭಜೇತ್ಕ್ಷೀರಂ ಪ್ರಿಯಾಃ ಸ್ತ್ರಿಯಃ ||

ಅರ್ಥ:— ಶುಕ್ರದ ತಡೆಯಿಂದ ಶುಕ್ರಸ್ರಾವ, ಶಿಶ್ನದಲ್ಲಿ ನೋವು, ಬಾವು, ಜ್ವರ, ಎದೆಯಲ್ಲಿ ಶೂಲಿ, ಮೂತ್ರ ಬಂದಾಗೋಣ, ಮೈ ಮುರಿಯೋಣ, ಅಂಡವೃದ್ಧಿ, ಮೂತ್ರಾಶ್ಮರಿ, ನಪುಂಸಕತ್ವಗಳು ಉಂಟಾಗುವವು. ಅವಕ್ಕೆ ಕೋಳಿ, ಶೆರೆ, ಅಕ್ಕಿಗಳನ್ನು ತಿನ್ನಬೇಕು. ಬಸ್ತಿ, ಅಭ್ಯಂಗ (ತೈಲ ಹಚ್ಚೋಣ), ವಾತನಾಶಕ ದ್ರವದಲ್ಲಿ ಕೂಡೋಣ ಇವುಗಳನ್ನು ಮಾಡಬೇಕು. ಮೂತ್ರಾಶಯ ಶೋಧಕ ವಸ್ತುಗಳಿಂದ ಸಿದ್ಧನಾದ ಹಾಲನ್ನೂ ಪ್ರಿಯ ಸ್ತ್ರೀಯರನ್ನೂ ಸೇವಿಸಬೇಕು. (೨೦||)

ಅಸಾಧ್ಯ ಲಕ್ಷಣವನ್ನು ಹೇಳುತ್ತಾರೆ.

**ತೃಟ್ಶೂಲಾರ್ತಂ ತ್ಯಜೇತ್ ಕ್ಷೀಣಂ ವಿಡ್ವಮಂ ವೇಗರೋಧಿನಮ್**
**||೨೧||**

ಅರ್ಥಃ— ವೇಗವನ್ನು ತಡೆದವನು ಕ್ಷೀಣನಾಗಿದ್ದು ನೀರಡಿಕೆ, ಶೂಲ, ಮಲದ ವಾಂತಿಗಳಿಂದ ಪೀಡಿತನಾಗಿದ್ದರೆ ಚಿಕಿತ್ಸೆ ಮಾಡಬಾರದು.
(೨೧)

**ರೋಗಾಃ ಸರ್ವೇಽಪಿ ಜಾಯಂತೇ ವೇಗೋದೀರಣಧಾರಣೈಃ ||**

ಅರ್ಥ:— ಎಲ್ಲ ರೋಗಗಳು ವೇಗಗಳ ತಡೆ ಅಥವಾ ಬಲುವೆಯ ಪ್ರವೃತ್ತಿಗಳಿಂದ ಆಗುತ್ತವೆ.
(೨೧||)

ಎಲ್ಲ ರೋಗಗಳು ಇವುಗಳಿಂದಲೇ ಆಗುತ್ತಿದ್ದರೆ ಗುಲ್ಮ ಮುಂತಾದ ಕೆಲವೇ ರೋಗಗಳನ್ನು ಅವುಗಳ ಚಿಕಿತ್ಸೆಯನ್ನೂ ಆಷ್ಟೇ ಏಕೆ ಹೇಳಿದಿರಿ? ಎಂದರೆ ಹೇಳುತ್ತಾರೆ

**ನಿರ್ದಿಷ್ಟಂ ಸಾಧನಂ ತತ್ರ ಭೂಯಿಷ್ಠಂ ಯೇ ತು ತಾನ್ ಪ್ರತಿ ||೨೨||**

ಅರ್ಥಃ— ಅವುಗಳಲ್ಲಿ ಬಹಳವಾಗಿ ಯಾವ ವಿಕಾರಗಳು ಉಂಟಾಗುವವೋ ಅವಕ್ಕಷ್ಟೇ ಚಿಕಿತ್ಸೆ ಹೇಳಿದೆ.
(೨೨)

ಉಳಿದವುಗಳಿಗೆ ಸಾಮಾನ್ಯ ಚಿಕಿತ್ಸೆಯನ್ನು ಹೇಳುತ್ತಾರೆ.

**ತತಶ್ಚಾನೇಕಧಾ ಪ್ರಾಯಃ ಪವನೋ ಯತ್ಪ್ರಕುಪ್ಯತಿ ||**
**ಅನ್ನಪಾನೌಷಧಂ ತಸ್ಯ ಯುಂಜೀತಾತೋಽನುಲೋಮನಮ್ ||೨೩||**

ಅರ್ಥಃ—ವೇಗ ಧಾರಣ ಉದೀರಣಗಳಿಂದುಂಟಾಗುವ ರೋಗಗಳಲ್ಲಿ ಬಹುಶಃ ವಾತವೇ ಅನೇಕ ರೀತಿಯಾಗಿ ಕುಪಿತವಾಗಿರುವದು. ಆದ್ದರಿಂದ ವಾತದ ಅನುಲೋಮನಗಳಾದ ಅನ್ನ-ಪಾನ-ಔಷಧಗಳನ್ನು ಯೋಜಿಸಬೇಕು.
(೨೩)

ಕೆಳಗಿನ ವಿಕಾರಗಳ ವೇಗಗಳನ್ನು ಮಾತ್ರ ತಡೆಯಬೇಕೆಂದು ಹೇಳುತ್ತಾರೆ.

**ಧಾರಯೇತ್ತು ಸದಾ ವೇಗಾನ್ ಹಿತೈಷೀ ಪ್ರೇತ್ಯ ಚೇಹ ಚ ||**
**ಲೋಭೇರ್ಷ್ಯಾದ್ವೇಷಮಾತ್ಸರ್ಯರಾಗಾದೀನಾಂ ಜಿತೇಂದ್ರಿಯಃ**
**||೨೪||**

ಅರ್ಥಃ— ಇಹ-ಪರಗಳಲ್ಲಿ ಹಿತವನ್ನು ಅಪೇಕ್ಷಿಸುವವನು ಜಿತೇಂದ್ರಿಯನಾಗಿ ಲೋಭ, ಈರ್ಷೆ, ದ್ವೇಷ, ಮತ್ಸರ, ಆಸಕ್ತಿಗಳ ವೇಗವನ್ನು ಯಾವಾಗಲೂ ತಡೆಯಬೇಕು. (೨೪)

**ಯತೇತ ಚ ಯಥಾಕಾಲಂ ಮಲಾನಾಂ ಶೋಧನಂ ಪ್ರತಿ||**
**ಅತ್ಯರ್ಥಸಂಚಿತಾಸ್ತೇ ಹಿ ಕ್ರುದ್ಧಾಃ ಸ್ಯುರ್ಜೀವಿತಚ್ಛಿದಃ ||೨೫||**

ಅರ್ಥಃ— ಯೋಗ್ಯ ಕಾಲಕ್ಕೆ ಆಯಾ ಮಲಗಳ ಶೋಧನವನ್ನು ಮಾಡಬೇಕು. ಏಕೆಂದರೆ ಅವು ಸಂಚಿತವಾದರೆ ಕುಪಿತವಾಗಿ ಜೀವವನ್ನು ನಾಶಮಾಡುವವು.

ಟಿಪ್ಪಣಿಃ— ಸುಶ್ರುತಾಚಾರ್ಯರು ನಿರೋಗಿಗೆ ಶೋಧನವು ಬೇಡೆಂದು ಹೇಳಿದ್ದಾರೆ. ಇಲ್ಲಿ ಶೋಧನ ಮಾಡಬೇಕೆಂದು ಹೇಳಿದ್ದರಿಂದ ವಿರೋಧ ಬಂದಿತು. ಎಂದರೆ ಹಾಗಲ್ಲ. ನಿರೋಗಿಯು ಎರಡು ಪ್ರಕಾರ—ದೋಷಸಂಚಯವುಳ್ಳವನು, ದೋಷಸಂಚಯವಿಲ್ಲದವನು. ದೋಷಸಂಚಯವಿಲ್ಲದವರಿಗೆ ಆಚಾರ್ಯರು ಅದನ್ನು ಬೇಡವೆಂದು ಹೇಳಿದರು. ಇಲ್ಲಿ ದೋಷಸಂಚಯವಿದ್ದವರಿಗೆ ಅದನ್ನು ಹೇಳಿದ್ದಾರೆ. ಇನ್ನು ದೋಷಸಂಚಯವುಳ್ಳವನು ನಿರೋಗಿಯು ಹೇಗೆ? ಸಂಚಯವೆಂದರೆ ವೈಷಮ್ಯವು. ವೈಷಮ್ಯವೇ ರೋಗವು. ಎಂದರೆ ಅ. ಹೃ. ಸೂ. ಅ. ೧೨–೨೨ನೆಯ ಶ್ಲೋಕದಲ್ಲಿ ಹೇಳಿದಂತೆ ಕೋಪದ ಲಕ್ಷಣದಲ್ಲಿಯೇ ಅಸ್ವಸ್ಥತೆಯನ್ನು ಹೇಳಿದ್ದರಿಂದ ಚಯಾವಸ್ಥೆಯಲ್ಲಿ ನಿರೋಗತೆಯು ಇರಲು ಬಾಧಕವಿಲ್ಲ. (೨೫)

ಹಿಂದೆ ಹೇಳಿದ ಶೋಧನದ ಶ್ರೇಷ್ಠತೆಯನ್ನು ಹೇಳುತ್ತಾರೆ.

**ದೋಷಾಃ ಕದಾಚಿತ್ಕುಪ್ಯಂತಿ ಜಿತಾ ಲಂಘನಪಾಚನೈಃ ||**
**ಯೇ ತು ಸಂಶೋಧನೈಃ ಶುದ್ಧಾ ನ ತೇಷಾಂ ಪುನರುದ್ಭವಃ ||೨೬||**

ಅರ್ಥ.— ಉಪವಾಸ ಪಾಚನಗಳಿಂದ ಗೆಲ್ಲಲ್ಪಟ್ಟ ದೋಷಗಳು ಒಮ್ಮೊಮ್ಮೆ ಕುಪಿತವಾಗುವದುಂಟು. ಆದರೆ ಶೋಧನಗಳಿಂದ ಯಾವವು ಹೊರಬಿದ್ದಿರುತ್ತವೆಯೋ ಅವು ಪುನಃ ಉತ್ಪನ್ನವಾಗುವದಿಲ್ಲ. (೨೬)

ಮತ್ತು ಅವನ ರಾಣಿ ಶಾಂತಲಾದೇವಿಯ ನೆನಪಿಗಾಗಿ ಕೇತುಮಲ್ಲನೆಂಬ ಅಧಿಕಾರಿಯು ಕಟ್ಟಿಸಿದನು. ಇದರ ಲಿಂಗಗಳನ್ನು ಹೊಯ್ಸಳೇಶ್ವರ ಮತ್ತು ಶಾಂತಳೇಶ್ವರ ಎಂದು ಕರೆಯಲಾಗುತ್ತಿದೆ. ದೇವಾಲಯದೊಳಗೆ ಕೆತ್ತನೆಕೆಲಸ, ಸೂಕ್ಷ್ಮ ಕುಸುರಿಕೆಲಸ ಕಡಿಮೆ ಇರುವುದಾದರೂ, ದೇವಾಲಯದ ಹೊರಗೋಡೆಯಲ್ಲಿ ಅಪೂರ್ವ ಶಿಲ್ಪಕಲಾ ನೈಪುಣ್ಯತೆಯನ್ನು ಕಾಣಬಹುದು. ಹೊಯ್ಸಳೇಶ್ವರ ದೇವಾಲಯವು ಭವ್ಯವಾದ ಕಟ್ಟಡ. ಇಲ್ಲಿ ನಂದಿಮಂಟಪ ಮತ್ತು ಸೂರ್ಯನಾರಾಯಣ ಗುಡಿ ಇವೆ. ನಾಟ್ಯ ಸರಸ್ವತಿ ವಿಗ್ರಹವು ವಿಶೇಷ ಲಾವಣ್ಯ ಮತ್ತು ಬೆಡಗಿನಿಂದ ಕೂಡಿದೆ. ಇದಲ್ಲದೆ ಕೇದಾರೇಶ್ವರ ದೇವಾಲಯವು ಮಾನವನ ಶಿಲ್ಪಕಲಾಶಕ್ತಿಯ ಅದ್ಭುತಸಾಮರ್ಥ್ಯವನ್ನು ತೋರಿಸುತ್ತದೆ. ಇಲ್ಲಿಯ ಜೈನಬಸದಿಗಳೂ ಸೊಗಸಾಗಿವೆ.

**ಸೋಮನಾಥಪುರ :**

ಮೈಸೂರಿನಿಂದ 24 ಮೈಲು ದೂರದಲ್ಲಿರುವ ಸೋಮನಾಥಪುರದ ಕೇಶವ ದೇವಾಲಯವನ್ನು ಕ್ರಿ.ಶ. 1258ರಲ್ಲಿ ನಿರ್ಮಿಸಲಾಯಿತು. ಇದರಲ್ಲಿ ನಕ್ಷತ್ರಾಕಾರದ ಮೂರು ಗರ್ಭಗೃಹಗಳಿರುವುದರಿಂದ ಇದನ್ನು ತ್ರಿಕೂಟಾಚಲ ಎಂದೂ ಕರೆಯುವರು. ಗರ್ಭಗೃಹಗಳ ಮೇಲೆ ಸುಮಾರು ಮೂವತ್ತು ಅಡಿಯ ಮೂರು ಶಿಖರಗಳಿವೆ. ಇದರ ಮುಖ್ಯ ವಿಗ್ರಹವಾದ ಕೇಶವನ ಮೂರ್ತಿಯು ಕಾಣೆಯಾಗಿರುವುದಾದರೂ, ಉಳಿದ ಎರಡು ಮೂರ್ತಿಗಳಾದ ಜನಾರ್ದನ ಮತ್ತು ವೇಣುಗೋಪಾಲನ ಮೂರ್ತಿಗಳು ಬಹಳ ಸುಂದರವಾಗಿವೆ. ಭುವನೇಶ್ವರಿಯ ಕುಸುರಿಕೆಲಸ, ಒಳಭಾಗದ ಮತ್ತು ಹೊರಭಾಗದ ಸುಂದರವಾದ ಕೆತ್ತನೆಕೆಲಸ ಬಹಳ ನೈಪುಣ್ಯತೆಯಿಂದ ಕೂಡಿದೆ. ಪ್ರಾಣಿಪಕ್ಷಿಗಳೂ, ಪುರಾಣೇತಿಹಾಸದ ವ್ಯಕ್ತಿಗಳೂ, ಶಿಲೆಯಿಂದ ಎದ್ದುಬರುವ ಜೀವಂತಶಕ್ತಿಯಂತೆ ಕಾಣುತ್ತವೆ.

ಈ ಮೂರು ಸ್ಥಳಗಳೇ ಅಲ್ಲದೆ, ಹೊಯ್ಸಳ ದೇವಾಲಯಗಳನ್ನೂ ಬಸದಿಗಳನ್ನೂ ಮೇಲುಕೋಟೆ, ತೊಣ್ಣೂರು, ತಲಕಾಡು, ಶ್ರವಣಬೆಳಗೊಳ, ನಾಗಮಂಗಲ, ಕಿಕ್ಕೇರಿ ಮೊದಲಾದೆಡೆಗಳಲ್ಲಿ ಕಾಣಬಹುದು.

ಕರ್ನಾಟಕದ ವಾಸ್ತುಶಿಲ್ಪದಲ್ಲಿ ಹೊಯ್ಸಳರ ಕಾಲವು ಒಂದು ಸುವರ್ಣಯುಗ. ಪ್ರಪಂಚದಾದ್ಯಂತ ಜನರೆಲ್ಲಾ ಆಶ್ಚರ್ಯಪಡುವ ಹೊಯ್ಸಳ ವಾಸ್ತುಶಿಲ್ಪದ ಕಲಾ ಪ್ರೌಢಿಮೆ, ಹೊಯ್ಸಳರು ಸಾಧಿಸಿದ ಸಾಂಸ್ಕೃತಿಕ ಪ್ರಗತಿಯ ಮೂಕಸಾಕ್ಷಿಗಳಾಗಿವೆ. ಇವುಗಳನ್ನು ನಿರ್ಮಿಸಿದ ಶಿಲ್ಪಿಗಳು ಧನ್ಯರು. ಅವರು ತಮ್ಮ ಕಲಾಸಾಧನೆಯಲ್ಲಿ ಪರಿಪೂರ್ಣತೆಯನ್ನು ಸಾಧಿಸಿರುವುದಲ್ಲದೆ, ಅವರು ಶ್ರೇಷ್ಠ ತತ್ತ್ವಜ್ಞಾನಿಗಳೂ ಸೌಂದರ್ಯೋಪಾಸಕರೂ ಮಹಾತಪಸ್ವಿಗಳೂ ಆಗಿರಬೇಕು. ಆದುದರಿಂದ ಅಂತಹ ಶ್ರೇಷ್ಠ ಕಲಾಸಂಪತ್ತು ಹೊರಹೊಮ್ಮಿತು. ನಾಡಿನ ಸಂಸ್ಕೃತಿಯ ಕನ್ನಡಿಯಂತಿರುವ ಎಲ್ಲ ಕಲೆಗೆ ಹೊಯ್ಸಳರ ಕಾಲದಲ್ಲಿ ಉನ್ನತಸ್ಥಾನ ದೊರಕಿತು. ಕನ್ನಡನಾಡನ್ನು

ಇಲ್ಲಿಯ ವರೆಗೆ ನಿಜರೋಗಗಳನ್ನೂ ಅವುಗಳ ಸಾಮಾನ್ಯ ಚಿಕಿತ್ಸೆಯನ್ನೂ ಹೇಳಿದರು, ಈಗ ಆಗಂತುಕರೋಗಗಳನ್ನು ಅವುಗಳ ಸಾಮಾನ್ಯ ಚಿಕಿತ್ಸೆಯನ್ನು ಹೇಳುತ್ತಾರೆ.

**ಯೇ ಭೂತವಿಷವಾಯ್ವಗ್ನಿಕ್ಷತಭಂಗಾದಿಸಂಭವಾಃ ||**
**ರಾಗದ್ವೇಷಭಯಾದ್ಯಾಶ್ಚ ತೇ ಸ್ಯುರಾಗಂತವೋ ಗದಾಃ ||೩೧||**

ಅರ್ಥ:— ಗ್ರಹ, ವಿಷ, ಬಿರುಗಾಳಿ, ಬೆಂಕಿ, ಗಾಯ, ಅವಯವ ಮುರಿಯೋಣ ಮುಂತಾದವುಗಳಿಂದ ಉಂಟಾದ ರೋಗಗಳೂ, ಆಸಕ್ತಿ, ದ್ವೇಷ, ಭಯ ಮುಂತಾದವುಗಳೂ ಆಗಂತುಕ ರೋಗಗಳು. (೩೧)

ಆಗಂತುಕ ರೋಗ ಚಿಕಿತ್ಸೆಯನ್ನು ಹೇಳುತ್ತಾರೆ.

**ತ್ಯಾಗಃ ಪ್ರಜ್ಞಾಪರಾಧಾನಾಮಿಂದ್ರಿಯೋಪಶಮಃ ಸ್ಮೃತಿಃ ||**
**ದೇಶಕಾಲಾತ್ಮವಿಜ್ಞಾನಂ ಸದ್ವೃತ್ತಸ್ಯಾನುವರ್ತನಮ್ ||೩೨||**

ಅರ್ಥ:— ಇವಕ್ಕೆ ಸದಸದ್ವಿವೇಕ ಬುದ್ಧಿಯ ವಿರುದ್ಧ ಆಚರಣೆಯ ತ್ಯಾಗವೂ, ಇಂದ್ರಿಯಗಳ ವೈರಾಗ್ಯವೂ, ದೇಶಕಾಲಗಳ ಮತ್ತು ತನ್ನ ನಿಜ ಜ್ಞಾನವೂ, ಶಾಸ್ತ್ರಗಳ ಸ್ಮೃತಿಯೂ ಸಜ್ಜನರ ಆಚಾರಗಳನ್ನು ಅನುಸರಿಸುವದೂ ಉಪಾಯಗಳು.

**ಅನುತ್ಪತ್ತ್ಯೈ ಸಮಾಸೇನ ವಿಧಿರೇಷ ಪ್ರದರ್ಶಿತಃ ||**
**ನಿಜಾಗಂತುವಿಕಾರಾಣಾಮುತ್ಪನ್ನಾನಾಂ ಚ ಶಾಂತಯೇ ||೩೩||**

ಅರ್ಥ:— ನಿಜ ಮತ್ತು ಆಗಂತುಕ ವಿಕಾರಗಳು ಉತ್ಪನ್ನವಾಗಬಾರದೆಂದೂ ಆಗಿದ್ದರೆ ಹೋಗಬೇಕೆಂದೂ ಸಂಕ್ಷೇಪವಾಗಿ ಈ ನಿಯಮವು ಹೇಳಲ್ಪಟ್ಟಿತು. (೩೩)

ಮಲಗಳ ಶೋಧನ ಕಾಲಗಳನ್ನು ಹೇಳುತ್ತಾರೆ.

**ಶೀತೋದ್ಭವಂ ದೋಷಚಯಂ ವಸಂತೇ**
**ವಿಶೋಧಯನ್ ಗ್ರೀಷ್ಮಜಮಭ್ರಕಾಲೇ ||**
**ಘನಾತ್ಯಯೇ ವಾರ್ಷಿಕಮಾಶು ಸಮ್ಯಕ್**
**ಪ್ರಾಪ್ನೋತಿ ರೋಗಾನೃತುಜಾನ್ನ ಜಾತು ||೩೪||**

ಅರ್ಥ:— ಹೇಮಂತ ಶಿಶಿರ ಋತುಗಳಲ್ಲಿ ಉಂಟಾದ ದೋಷಸಂಚಯವನ್ನು ವಸಂತಕಾಲದಲ್ಲಿಯೂ, ಗ್ರೀಷ್ಮಕಾಲದಲ್ಲಿ ಉಂಟಾದದ್ದನ್ನು ವರ್ಷಾ

ಋತುವಿನಲ್ಲಿಯೂ, ವರ್ಷಾಋತುವಿನಲ್ಲುಂಟಾದದ್ದನ್ನು ಶರದ್ ಋತುವಿನಲ್ಲಿಯೂ ಚೆನ್ನಾಗಿ ಶೋಧಿಸಬೇಕು. ಅಂದರೆ ಋತು ದೋಷದಿಂದುಂಟಾಗುವ ರೋಗಗಳನ್ನು ಎಂದೂ ಹೊಂದನು.

ಟಿಪ್ಪಣಿ:— ಈ ಋತುಗಳಲ್ಲಿ ಚಳಿ ಮಳೆ ಬಿಸಿಲುಗಳು ಬಹಳವಿರುವ ದಿಲ್ಲಾಪ್ಪರಿಂದ ಶೋಧನಕ್ಕೆ ಅನುಕೂಲವು. ಈ ಮಾತನ್ನು ಮುಂದೆ 'ಶ್ರಾವಣೇ ಕಾರ್ತಿಕೇ ಚೈತ್ರೇ ಮಾಸಿ ಸಾಧಾರಣೇ ಕ್ರಮಾತ್। ಗ್ರೀಷ್ಮವರ್ಷಾಹಿಮಚಿತಾನ್ ವಾಯ್ವಾದೀನಾಶು ನಿರ್ಹರೇತ್ ॥' ಎಂದು ಹೇಳಿದ್ದಾರೆ. (೩೪)

**ನಿತ್ಯಂ ಹಿತಾಹಾರವಿಹಾರಸೇವೀ**
**ಸಮೀಕ್ಷ್ಯಕಾರೀ ವಿಷಯೇಷ್ವಸಕ್ತಃ ॥**

**ದಾತಾ ಸಮಃ ಸತ್ಯಪರಃ ಕ್ಷಮಾವಾ-**
**ನಾಪ್ತೋಪಸೇವೀ ಚ ಭವತ್ಯರೋಗಃ ॥೩೬॥**

ಅರ್ಥಃ— ನಿತ್ಯವೂ ಹಿತಕರವಾದ ಆಹಾರ-ವಿಹಾರಗಳನ್ನು ಸೇವಿಸುವ, ವಿಚಾರದಿಂದ ವರ್ತಿಸುವ, ವಿಷಯಗಳಲ್ಲಿ ಆಸಕ್ತನಾಗದ, ತ್ಯಾಗ, ಸತ್ಯ, ಕ್ಷಮಾಗುಣಗಳುಳ್ಳ, ಸಮದೃಷ್ಟಿಯು, ಆಪ್ತೇಷ್ಟರನ್ನು ಸೇವಿಸುವ ಮನುಷ್ಯನು ನಿರೋಗಿಯಾಗುವನು. (೩೬)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ರೋಗಾನುತ್ಪಾದನೀಯೋ ನಾಮ ಚತುರ್ಥೋಽಧ್ಯಾಯಃ ಸಮಾಪ್ತಃ ॥**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ' ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ ರೋಗಾನುತ್ಪಾದನೀಯ ಎಂಬ ೪ ನೆಯ ಅಧ್ಯಾಯವು ಮುಗಿದುದು.



# ೫ನೆಯ ಅಧ್ಯಾಯ

ಹಿಂದಿನ ಮೂರು ಅಧ್ಯಾಯಗಳಿಂದ ವಿಹಾರವನ್ನು ಹೇಳಿ ಈಗ್ಗೆ ಆಹಾರವನ್ನು ಹೇಳುತ್ತಾರೆ. ಈ ಆಹಾರವು ಎರಡು ಪ್ರಕಾರದ್ದು. ದ್ರವ, ಅದ್ರವ ಎಂದು. ಇವುಗಳಲ್ಲಿ ದ್ರವವರ್ಗವು ಸಣ್ಣದಾದ್ದರಿಂದ ಮೊದಲು ಅದನ್ನು ಈ ಅಧ್ಯಾಯದಲ್ಲಿ ತೋಯವರ್ಗ, ಕ್ಷೀರವರ್ಗ, ಇಕ್ಷುವರ್ಗ, ತೈಲವರ್ಗ, ಮದ್ಯವರ್ಗ ಎಂದು ಐದು ಭಾಗಮಾಡಿ ಕ್ರಮವಾಗಿ ಹೇಳುತ್ತಾರೆ.

**ಅಥಾತೋ * ದ್ರವದ್ರವ್ಯವಿಜ್ಞಾನೀಯಮಧ್ಯಾಯಂ ವ್ಯಾಖ್ಯಾಸ್ಯಾಮಃ |**

ಅರ್ಥಃ— ಇನ್ನು ದ್ರವದ್ರವ್ಯ ವಿಜ್ಞಾನೀಯ ( ದ್ರವದ್ರವ್ಯಗಳ ಗುಣ ದೋಷಗಳನ್ನು ಹೇಳುವ ) ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ |**

ಅರ್ಥಃ— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದ್ದಾರೆ.

## ತೋಯವರ್ಗ

ದಿವ್ಯ, ಭೌಮವೆಂದು ನೀರಿನಲ್ಲಿ ಎರಡು ಪ್ರಕಾರ. ದಿವ್ಯದಲ್ಲಿ ಧಾರ, ಕಾರ, ತೌಷಾರ, ಹೈಮವೆಂದು ನಾಲ್ಕು ಪ್ರಕಾರಗಳು. ಧಾರದಲ್ಲಿ ಗಾಂಗ ಮತ್ತು ಸಾಮುದ್ರವೆಂದು ಎರಡು ಪ್ರಕಾರಗಳು. ಈಗ್ಗೆ ಗಾಂಗ ಗುಣಗಳನ್ನು ಹೇಳುತ್ತಾರೆ.

**ಜೀವನಂ ತರ್ಪಣಂ ಹೃದ್ಯಂ ಹ್ಲಾದಿ ಬುದ್ಧಿ ಪ್ರಬೋಧನಮ್ ||**
**ತನ್ವವ್ಯಕ್ತರಸಂ ಮೃಷ್ಟಂ ಶೀತಂ ಲಘ್ವಮೃತೋಪಮಮ್ ||೧||**

**ಗಂಗಾಂಬು ನಭಸೋ ಭ್ರಷ್ಟಂ ಸ್ಪೃಷ್ಟಂ ತ್ವರ್ಕೇಂದುಮಾರುತೈಃ ||**
**ಹಿತಾಹಿತತ್ವೇ ತದ್ಭೂಯೋ ದೇಶಕಾಲಾವಪೇಕ್ಷತೇ ||೨||**

ಅರ್ಥಃ— ಆಕಾಶದಿಂದ ಬಿದ್ದ ( ಮೇಲಿಂದ ಮೇಲೆ ಹಿಡಿದ ) ಮಳೆನೀರು (ಗಾಂಗನೀರು), ಓಜಸ್ಸನ್ನುಂಟುಮಾಡುವಂತಹದೂ, ಉತ್ಸಾಹ ವರ್ಧಕವೂ, ಹೃದಯಕ್ಕೆ ಹಿತಕರವೂ, ಆನಂದದಾಯಕವೂ, ಬುದ್ಧಿವರ್ಧ

* ಈ ದ್ರವದ್ರವ್ಯವಿಜ್ಞಾನವು ಚರಕದ ಸೂತ್ರಸ್ಥಾನ ೨೭ ನೇ, ಸುಶ್ರುತದ ಸೂತ್ರಸ್ಥಾನ ೪೫ ನೇ, ಅಷ್ಟಾಂಗಸಂಗ್ರಹದ ಸೂತ್ರಸ್ಥಾನ ೬ ನೇ ಅಧ್ಯಾಯಗಳಲ್ಲಿ ಹೇಳಿದೆ.

ವಾಗಿ ನಿಮ್ಮಲ್ಲಿ ಒಬ್ಬರಿಗೆ ಸಂದಾಯಮಾಡುತ್ತೇನೆ" ಎಂದು ಆ ಕಲಾವಿದೆ ಪ್ರೇಕ್ಷಕರ ಗ್ಯಾಲರಿಗೆ ಬಂದು ಮುಂದಿನ ಸಾಲಿನ ಒಬ್ಬಾತನ ಕೆನ್ನೆಗೆ ಮುತ್ತಿಟ್ಟು ಪುಣಕ್ಕನೆ ರಂಗ ವೇದಿಕೆಯೇರಿ ಮಾಯವಾದಳು.

ಎಲ್ಲೂ ಒಂದೇ ಒಂದು ಸೆಕೆಂಡ್ ಸಹ ವಿಳಂಬವಾಗದಂತೆ 90 ನಿಮಿಷಗಳ ಕಾರ್ಯಕ್ರಮ ಜರುಗಿತು. ನಾವು ಕಣ್ಣು ಸಹ ಮಿಟುಕಿಸಿರಲಾರೆವು. ನಡುನಡುವೆ ಜನರನ್ನು ನಗೆಗಡಲಿನಲ್ಲಿ ಮುಳುಗಿಸುವ ಹಾಸ್ಯಪ್ರಕರಣಗಳು ಸಹ ಇದ್ದವು. ಗಂಡಸರು ಹೆಂಗಸರು ಇಬ್ಬರೂ ಈ ಪ್ರದರ್ಶನದಲ್ಲಿ ಪಾಲುಗೊಂಡರು. ನೃತ್ಯಗಳ ನಡೆಯಲ್ಲಿ, ಗತಿ ವಿಶೇಷಗಳಲ್ಲಿ, ಉಡುಗೆ ತೊಡಿಗೆಗಳಲ್ಲಿ ದೃಶ್ಯದೃಶ್ಯಕ್ಕೂ ಬದಲಾವಣೆ ಸ್ಪಷ್ಟವಾಗಿ ಕಂಡು ಬರುತ್ತಿತ್ತು. ದೃಶ್ಯದೃಶ್ಯಕ್ಕೆ ಕಲಾವಿದೆಯರ ಮೈಮೇಲಿದ್ದ ವಸ್ತ್ರಗಳು ಕಡಿಮೆಯಾಗುತ್ತಾ ಹೋದುವು, ಮೈ ಕೈಗಳ ಹಾಗೂ ಶಿರೋಭೂಷಣಗಳು ಸೊಗಸಾದ ಮಣಿಗಳಿಂದ ಕೂಡಿ ಕಲಾವಿದರ ಶರೀರಕ್ಕೆ ಒಂದು ಬಗೆಯ ಆಕರ್ಷಕ ದೀಪವರ್ತುಲವನ್ನು ನಿರ್ಮಿಸಲು ನೆರವಾಗುತ್ತಿದ್ದುವು. ಆರಂಭದ ಕೆಲವು ನೃತ್ಯ ದೃಶ್ಯಗಳನ್ನು ಬಿಟ್ಟರೆ ಉಳಿದ ಬಹುಮಟ್ಟಿನ ದೃಶ್ಯದಲ್ಲಿ ಹೆಂಗಸರ ಶರೀರದ ಮೇಲೆ ಗುಪ್ತಾಂಗದ ಬಳಿ ಮಾತ್ರ ಎರಡು ಬೆಟ್ಟಗಲ ಬಟ್ಟೆಯಿದ್ದು ಇಡೀ ಶರೀರ ನಗ್ನವಾಗಿರುತ್ತಿತ್ತು. ತಾನು ನಗ್ನವಾಗಿ ಜನರೆದುರು ನಿಂತಿದ್ದೇನೆಂಬ ಭಾವನೆಯೇ ಇಲ್ಲವೇನೋ, ತಾನು ನೃತ್ಯ ಪ್ರಕಾರದಲ್ಲಿ ಆದರ ವೈವಿಧ್ಯದಲ್ಲಿ ತಲ್ಲೀನ ವಾಗಿದ್ದೇನೇನೊ ಎನ್ನುವಂತೆ ಆ ಕಲಾವಿದೆಯರು ಕಂಡು ಬಂದರು. ಪ್ರೇಕ್ಷಕರು ಸಹ ಪ್ರದರ್ಶಿತ ಕಲೆಯಲ್ಲಿ ತಲ್ಲೀನರಾಗಿ ಇರುವಂತೆ ಆ ಪ್ರದರ್ಶನವಿತ್ತೇ ವಿನಾ ಅದು ರೋಚಕವೆಂದಾಗಲಿ ಪ್ರಚೋದಕವೆಂದಾಗಲಿ ಅನ್ನಿಸಲಿಲ್ಲ. ಪ್ರತಿಯೊಂದು ನೃತ್ಯವೂ ಸಹಜವೆನ್ನಿಸಿತು. ನಾವು ಅದರ ಬಗೆಗೆ ಕೇಳಿದ್ದಕ್ಕೂ ಕಣ್ಣಾರ ಕಂಡಿದ್ದಕ್ಕೂ ಅಜಗಜಾಂತರ. ಅಥವಾ ಪ್ರತಿಯೊಬ್ಬ ಪ್ರೇಕ್ಷಕನೂ ತನತನಗೆ ಬೇಕಾದ ಬಯಕೆಯನ್ನು ಕಣ್ಣಿನ ಮೂಲಕ ತೀರಿಸಿಕೊಳ್ಳುತ್ತಾನೆಯೇ ಎನ್ನುವುದನ್ನು ಹೇಳುವುದು ನೋಡುವ ಕಣ್ಣನ್ನು ಆಡಿಸುವ ಚಿತ್ತವೃತ್ತಿಯನ್ನು ಸೇರಿದ್ದು ತಾನೆ ? ನಮ್ಮ ಮನಸ್ಸು ಅದರೊಳಗಿನ ಕಲೆಯಲ್ಲಿಯೇ ತಲ್ಲೀನವಾಗಿತ್ತು.

ಪ್ರದರ್ಶನ ಸರಿಯಾಗಿ ನಡು ರಾತ್ರಿಗೆ ಮುಗಿಯಿತು. 15-20 ನಿಮಿಷಗಳಲ್ಲಿ ನಾವು ನಮ್ಮ ಹೋಟೆಲ್‌ಗೆ ಬಂದೆವು. ಮತ್ತೆ 5-10 ನಿಮಿಷಗಳಲ್ಲಿ ನಿದ್ರಿಸಿ ಯಾಗಿತ್ತು.

ಈ ಪ್ರವಾಸದ ಕಡೇ ದಿನ ಇಂದು. ಬೆಳಗ್ಗೆ ಉಪಹಾರವಾದ ಮೇಲೆ ನಾವೆಲ್ಲಾ ಪ್ಯಾರಿಸ್ ಬಿಟ್ಟೆವು. ದಾರಿಯಲ್ಲಿ ಸೊಮ್ಮೆ (Somme) ನದಿ ದಡದಲ್ಲಿ ರುವ "ಅಮೇನ್ಸ್" (Ameins) ನಲ್ಲಿ ಕಾಫಿಗಾಗಿ ಅರ್ಧಗಂಟೆ ಇಳಿದೆವು. ತಂಪಾದ ಹವಾಗುಣದಿಂದ ಮೈನಡುಕದಿಂದಾಗಿ 2 ಕಪ್ ಕಾಫಿ ಕುಡಿದ ನಮಗೆ ತೃಪ್ತಿ ತಂದಿತ್ತು. ನಂತರ ಕೆಲೆ ಬಂದರನ್ನು ಸೇರಿದಾಗ ಮಧ್ಯಾಹ್ನ 12-30. ಡೋವರ್‌ಗೆ

ತದಭಾವೇ ಚ *ಭೂಮಿಷ್ಠಮಂತರಿಕ್ಷಾನುಕಾರಿ ಯತ್ ||
ಶುಚಿಪೃಥ್ವಸಿತಶ್ವೇತೇ ದೇಶೇಽರ್ಕಪವನಾಹತಮ್ ||೫||

ಅರ್ಥಃ— ಮಳೆಯ ನೀರು ಚಲ್ಲೋ ಪಾತ್ರೆಯಲ್ಲಿ ಹಿಡಿದದ್ದೂ, ಸ್ವಚ್ಛವೂ ಇದ್ದರೆ ಅದನ್ನು ಯಾವಾಗಲೂ ಕುಡಿಯಬೇಕು. ಅದು ಸಿಗದಿದ್ದರೆ ಮಳೆಯ ನೀರಿನ ಬಹುಗುಣಗಳುಳ್ಳ ಮತ್ತು ಸ್ವಚ್ಛವಾದ ವಿಸ್ತೃತವಾದ ಕರಿಯ ಅಥವಾ ಬಿಳಿಯ ಪ್ರದೇಶದಲ್ಲಿ ಬಿಸಲು ಗಾಳಿಗಳು ಬಡಿಯುವ ಭೂಮಿಯ ಮೇಲಿನ ನೀರನ್ನು ಕುಡಿಯಬಹುದು. (೫)

ನ ಪಿಬೇತ್ಪಂಕಶೈವಾಲತೃಣಪರ್ಣಾವಿಲಾಸ್ತೃತಮ್ ||
ಸೂರ್ಯೇಂದುಪವನಾದೃಷ್ಟಮಭಿವೃಷ್ಟಂ ಘನಂ ಗುರು ||೬||

ಫೇನಿಲಂ ಜಂತುಮತ್ತಪ್ತಂ ದಂತಗ್ರಾಹ್ಯತಿಶೈತ್ಯತಃ ||
ಅನಾರ್ತವಂ ಚ ಯದ್ದಿವ್ಯಮಾರ್ತವಂ ಪ್ರಥಮಂ ಚ ಯತ್ ||೭||

ಲೂತಾದಿತಂತುವಿಣ್ಮೂತ್ರವಿಷಸಂಶ್ಲೇಷದೂಷಿತಂ ||

ಅರ್ಥಃ— ಕೆಸರಿನಿಂದ ಹೊಲಸಾದ, ಹಾವಸೆ ಹುಲ್ಲು ಎಲೆಗಳಿಂದ ಕೂಡಿದ, ಸೂರ್ಯ-ಚಂದ್ರ ಕಿರಣ ಮತ್ತು ಗಾಳಿಗಳು ಬಡಿಯದ, ಅದೇ ಬಿದ್ದ ಮಳೆಯಿಂದ ರಾಡಿಯಾದ, ಜಡ, ಬುರುಗುಳ್ಳ, ಕ್ರಿಮಿಗಳುಳ್ಳ, ಕಾದ, ಬಹಳ ಶೈತ್ಯದಿಂದ ಹಲ್ಲಿಗೆ ಹತ್ತಗೊಡದ, ಅಕಾಲದಲ್ಲಿ ಬಿದ್ದ ಮಳೆಯ ನೀರನ್ನೂ, ಸಕಾಲದಲ್ಲಿಯೂ ಕೂಡ ಬಿದ್ದ ಮಳೆಯ ಮೊದಲಿನ ಕೆಲವು ಸರವುಗಳ ನೀರನ್ನೂ ಮತ್ತು ಲೂತ (ಆಕಾಶದಲ್ಲಿ ಹಾರಾಡುವ ಒಂದು ತರಹದ ವಿಷಪ್ರಾಣಿ) ಮುಂತಾದ ಪ್ರಾಣಿಗಳ ತಂತು ಮಲ ಮೂತ್ರಗಳ ವಿಷಸಂಪರ್ಕದಿಂದ ದೂಷಿತವಾದ ನೀರನ್ನೂ ಕುಡಿಯಬಾರದು. (೭||)

ದಿವ್ಯದಲ್ಲಿ ಎರಡು ಪ್ರಕಾರಗಳು. ಗಾಂಗ, ಸಾಮುದ್ರವೆಂದು ಅವನ್ನು ಹೇಳಿದೆವು. ಭೌಮವು ಎಂಟು ಪ್ರಕಾರದ್ದು. ಕೌಪ (ಬಾವಿಯ), ಸಾರಸ (ಸರೋವರದ, ತಾಡಾಗ ( ಕೆರೆಯ ), ಚೌಂಡ್ಯ ( ತನ್ನಿಂದ ತಾನೆ ಕಲ್ಲೊಳಗಿಂದ ಬರುವ), ಪ್ರಾಸ್ರವಣ ( ಪರ್ವತ ಝರಿಯ ), ಔದ್ಭಿದ ( ಭೂಮಿಯನ್ನು ಸೀಳಿ ಮೇಲೆ ಬರುವ ಬುಗ್ಗೆಯ ), ವಾಪಿ ( ನಾಲ್ಕು

* "ಭೂಯಿಷ್ಠಮ್" ಇದು ಅರುಣದತ್ತನ ಪಾಠವು.

ಕಡೆಗೆ ಪಾವಟಿಗೆಗಳುಳ್ಳ ಬಾವಿಯು), ನದಿಯ ನೀರು ಎಂದು. ದಿವ್ಯ ನೀರು ಸಿಗದಿದ್ದರೆ ಭೌಮ ನೀರನ್ನು ಕುಡಿಯಬೇಕಾಗುವದು. ಭೌಮ ನೀರುಗಳಲ್ಲಿ ನದಿಯ ನೀರು ಶ್ರೇಷ್ಠವಾದದ್ದರಿಂದ ನದಿಯ ನೀರನ್ನು ಹೇಳುತ್ತಾರೆ.

**ಪಶ್ಚಿಮೋದಧಿಗಾಃ ಶೀಘ್ರವಹಾ ಯಾಶ್ಚಾಮಲೋದಕಾಃ ||೮||**
**ಪಥ್ಯಾಃ ಸಮಾಸಾತ್ತಾ ನದ್ಯೋ ವಿಪರೀತಾ ಸ್ತ್ವತೋಽನ್ಯಥಾ ||**

ಅರ್ಥ:— ಪಶ್ಚಿಮ ಸಮುದ್ರಕ್ಕೆ ಕೂಡುವ, ವೇಗವುಳ್ಳ, ಸ್ವಚ್ಛ ನೀರಿನ ನದಿಗಳು ಬಹಳಮಾಡಿ ಪಥ್ಯಕರವಾಗಿರುತ್ತವೆ. ಇದರ ವಿಪರೀತವಾದಂಥ (ಪೂರ್ವ ಸಮುದ್ರಕ್ಕೆ ಕೂಡುವ, ವೇಗವಿಲ್ಲದ, ಹೊಲಸು ನೀರಿನ) ನದಿಗಳು ಅಪಥ್ಯಗಳು. (೮||)

**ಉಪಲಾಸ್ಫಾಲನಾಕ್ಷೇಪವಿಚ್ಛೇದೈಃ ಖೇದಿತೋದಕಾಃ ||೯||**

**ಹಿಮವನ್ಮಲಯೋದ್ಭೂತಾಃ ಪಥ್ಯಾಸ್ತಾ ಏವ ಚ ಸ್ಥಿರಾಃ ||**
**ಕೃಮಿಶ್ಲೀಪದಹೃತ್ಕಂಠಶಿರೋರೋಗಾನ್ ಪ್ರಕುರ್ವತೇ ||೧೦||**

ಅರ್ಥ:— ಹಿಮಾಲಯ ಅಥವಾ ಮಲಯ ಪರ್ವತದಿಂದ ಹೊರಟಂಥ, ಕಲ್ಲುಗಳ ಮೇಲೆ ಅಪ್ಪಳಿಸೋಣದರಿಂದ ಛಿನ್ನಭಿನ್ನವಾಗಿ ಜರ್ಜರವಾದ ನೀರುಗಳುಳ್ಳ ನದಿಗಳು ಹಿತಕರ. ಆದರೆ ಅವೇ ಪರ್ವತಗಳ ಮಂದವಾಗಿ ಹರಿಯುವ ನದಿಗಳು ಕ್ರಿಮಿ, ಶ್ಲೀಪದ, ಹೃದ್ರೋಗ, ಕಂಠರೋಗ, ಶಿರೋ ರೋಗಗಳನ್ನುಂಟುಮಾಡುತ್ತವೆ.

**ಟಿಪ್ಪಣಿ:—** **ಚರಕಾಚಾರ್ಯರು** ಹಿಮಾಲಯ ಮಲಯಗಳಿಂದ ಹುಟ್ಟಿದ ನದಿಗಳ ನೀರು ಹಿತಕರವೆಂದು ಹೇಳುವರು. ಆದರೆ **ಸುಶ್ರುತಾಚಾರ್ಯರು** ಹಿಮಾಲಯದಿಂದ ಹುಟ್ಟಿದ ನದಿಯ ನೀರು ಹೃದ್ರೋಗಗಳನ್ನೂ ಮಲಯಪರ್ವತದಿಂದ ಹುಟ್ಟಿದ ನದಿಯ ನೀರು ಕ್ರಿಮಿಗಳನ್ನೂ ಉಂಟುಮಾಡುವವೆಂದೂ ಹೇಳುವರು. ಹೀಗೆ ವಿರೋಧ ಬರುವದನ್ನು **ವಾಗ್ಭಟಾಚಾರ್ಯರು** '**ತಾ ಏವ ಚ ಸ್ಥಿರಾಃ**' ಎಂಬ ವಿಶೇಷಣದಿಂದ ವಿಷಯ ವಿಭಾಗಮಾಡಿ ಪರಿಹರಿಸಿರುವರು. (೧೦)

**ಪ್ರಾಚ್ಯಾವಂತ್ಯಪರಾಂತೋತ್ಥಾ ದುರ್ನಾಮಾನಿ, ಮಹೇಂದ್ರಜಾಃ ||**
**ಉದರಶ್ಲೀಪದಾತಂಕಾನ್, ಸಹ್ಯವಿಂಧ್ಯೋದ್ಭವಾಃ ಪುನಃ ||೧೧||**

ಕುಷ್ಠಪಾಂಡುಶಿರೋರೋಗಾನ್, ದೋಷಘ್ನ್ಯಃ ಪಾರಿಯಾತ್ರಜಾಃ||
ಬಲಪೌರುಷಕಾರಿಣ್ಯಃ, ಸಾಗರಾಂಭಸ್ತ್ರಿದೋಷಕೃತ್ ||೧೨||

ಅರ್ಥ— ಪ್ರಾಚ್ಯ (ಬಂಗಾಲ), ಅವಂತೀ (ಮಾಳವಾ), ಅಪರಾಂತ (ಕೊಂಕಣ) ಗಳ ನದಿಗಳು ಮೂಲವ್ಯಾಧಿಯನ್ನೂ, ಮಹೇಂದ್ರ ಪರ್ವತದ ನದಿಗಳು ಉದರ ಶ್ಲೀಪದಗಳನ್ನೂ, ಸಹ್ಯವಿಂಧ್ಯದ ನದಿಗಳು ಕುಷ್ಠ ಪಾಂಡು ಶಿರೋರೋಗಗಳನ್ನೂ ಉಂಟುಮಾಡುತ್ತವೆ. ಪಾರಿಯಾತ್ರ ದೇಶದ ನದಿಗಳು ದೋಷವನ್ನು ನಾಶಮಾಡಿ ಬಲಪೌರುಷಗಳನ್ನುಂಟುಮಾಡುತ್ತವೆ. ಸಮುದ್ರದ ನೀರುಗಳು ತ್ರಿದೋಷಕರವಾಗಿರುತ್ತವೆ. (೧೨)

ವಿದ್ಯಾತ್ಕೂಪತಡಾಗಾದೀನ್ ಜಾಂಗಲಾನೂಪಶೈಲತಃ ||

ಅರ್ಥಃ— ಜಾಂಗಲ ಅನೂಪ ಪರ್ವತ ಪ್ರದೇಶದಲ್ಲಿರುವ ಭಾವಿ ಕೆರೆ ಮುಂತಾದವುಗಳ ನೀರಿನ ಗುಣಗಳು ಆಯಾ ದೇಶದ ಗುಣದಂತೆ ಇರುತ್ತವೆ.

ಟಿಪ್ಪಣಿ:— ಇಲ್ಲಿ "ಆದಿ" ಶಬ್ದದಿಂದ ಹಿಂದೆ ಹೇಳಿದ ಸಾರಸ, ಚೌಂಡ್ಯ, ಪ್ರಾಸ್ರವಣ, ಔದ್ಭಿದ ಬಾವಿ ಮತ್ತು ನದಿಯ ನೀರುಗಳನ್ನು ತಕ್ಕೊಳ್ಳಬೇಕು. ಜಾಂಗಲದೇಶದಲ್ಲಿದ್ದ ಬಾವಿ ಮುಂತಾದವುಗಳ ನೀರು ಅನೂಪದೇಶದ ಬಾವಿ ಮುಂತಾದವುಗಳ ನೀರಿಗಿಂತ ಹಗುರು. ಅನೂಪದೇಶದ ಬಾವಿ ಮುಂತಾದವುಗಳ ನೀರು ಜಡ. ಪರ್ವತದ ಸಮೀಪದಲ್ಲಿರುವ ಇವುಗಳ ನೀರು ಜಾಂಗಲ ದೇಶದವುಗಳಿಗಿಂತ ಹೆಚ್ಚು ಹಗುರು ಇರುವವು. (೧೩)

ನಾಂಬು ಪೇಯಮಶಕ್ತ್ಯಾ ವಾ ಸ್ವಲ್ಪಮಲ್ಪಾಗ್ನಿಗುಲ್ಮಿಭಿಃ ||೧೪||
ಪಾಂಡೂದರಾತಿಸಾರಾರ್ಶೋಗ್ರಹಣೀ†ಶೋಷಶೋಥಿಭಿಃ ||
ಋತೇ ಶರನ್ನಿದಾಘಾಭ್ಯಾಂ ಪಿಬೇತ್‌ಸ್ವಸ್ಥೋಽಪಿ ಚಾಲ್ಪಶಃ ||೧೫||

ಅರ್ಥಃ— ಅಗ್ನಿಮಾಂದ್ಯ, ಗುಲ್ಮ, ಪಾಂಡು, ಉದರ, ಅತಿಸಾರ, ಮೂಲವ್ಯಾಧಿ, ಗ್ರಹಣೀ ಮತ್ತು ಬಾವು ಆದವರು ನೀರನ್ನು ಕುಡಿಯಬಾರದು. ತಡೆಯದಿದ್ದರೆ ಸ್ವಲ್ಪ ಕುಡಿಯಬೇಕು. ನಿರೋಗಿಯೂ ಕೂಡ ಶರದ್ ಗ್ರೀಷ್ಮ ಋತುಗಳ ಹೊರ್ತಾಗಿ ಉಳಿದ ಋತುಗಳಲ್ಲಿ ಸ್ವಲ್ಪ ಸ್ವಲ್ಪ ನೀರನ್ನು ಕುಡಿಯತಕ್ಕದ್ದು.

† "ದೋಷ" ಎಂಬ ಪಾಠವೂ ಇದೆ.

**ಟಿಪ್ಪಣಿ:—** ಮೇಲೆ ಹೇಳಿದ ರೋಗಿಗಳು ನೀರು ಕುಡಿಯಬೇಕಾದರೆ ಔಷಧದಿಂದ ಶುದ್ಧ ಪಡಿಸಿದ, ಕಲ್ಲು ಬೆಳ್ಳಿ ಬಂಗಾರ ಬೆಂಕಿ ಸೂರ್ಯ-ಕಿರಣಗಳಿಂದ ಕಾಸಿದ ನೀರನ್ನು ಅಥವಾ ಕಾದಾರಿದ ನೀರನ್ನು ಕುಡಿಯಬೇಕು. (೧೪)

**ಸಮಸ್ಥೂಲಕೃಶಾ ಭುಕ್ತಮಧ್ಯಾಂತಪ್ರಥಮಾಂಬುಪಾಃ॥**

ಅರ್ಥಃ— ಊಟದ ಮಧ್ಯದಲ್ಲಿ ಅಥವಾ ಕಡೆಗೆ ಅಥವಾ ಮೊದಲು ನೀರು ಕುಡಿಯುವವರು ಕ್ರಮವಾಗಿ ಸಮ, ಸ್ಥೂಲ, ಕೃಶರಾಗುವರು.

**ಟಿಪ್ಪಣಿ:—** ಊಟದ ಮಧ್ಯದಲ್ಲಿ ನೀರು ಕುಡಿಯೋಣದರಿಂದ ಧಾತು ಸಾಮ್ಯವುಂಟಾಗಿ ಮನುಷ್ಯನು ಸಮವಾಗಿ ಇರುವನು. ಊಟದ ನಂತರ ಕುಡಿದವನ ಕಫವು ಹೆಚ್ಚಿ ಸ್ಥೂಲನಾಗುವನು. ಊಟದ ಮೊದಲೇ ಕುಡಿದರೆ ಅಗ್ನಿಯು ಮಂದವಾಗಿ ಅನ್ನಪಚನವಾಗದ್ದರಿಂದ ಕೃಶನಾಗುವನು. (೧೪॥)

**ಶೀತಂ ಮದಾತ್ಯಯಗ್ಲಾನಿಮೂರ್ಛಾಛರ್ದಿಶ್ರಮಭ್ರಮಾನ್ ॥೧೫॥**
**ತೃಷ್ಣೋಷ್ಣದಾಹಪಿತ್ತಾಸ್ರವಿಷಾಣ್ಯಂಬು ನಿಯಚ್ಛತಿ ॥**

ಅರ್ಥಃ— ತಣ್ಣೀರು ಮದಾತ್ಯಯ, ಗ್ಲಾನಿ, ಮೂರ್ಛೆ, ವಾಂತಿ, ಶ್ರಮ, ಭ್ರಮ, ನೀರಡಿಕೆ, ಉಷ್ಣತೆ, ದಾಹ, ರಕ್ತಪಿತ್ತ, ವಿಷಗಳನ್ನು ನಾಶಮಾಡುತ್ತದೆ.

**ಟಿಪ್ಪಣಿ:—** ಹೀಗಿದ್ದರೂ ಯಾವನ ದೋಷಗಳು ಅಥವಾ ಅಗ್ನಿಯು ಸಮವಾಗಿರುವದಿಲ್ಲವೋ ಮತ್ತು ಯಾವನು ಬೇನೆಯಿಂದ ಕ್ಷೀಣನಾಗಿರುವನೋ ಅವನಿಗೆ ಕಾಸದೆ ಇದ್ದ ತಣ್ಣೀರು ಹಿತಕರವಲ್ಲ. (೧೫॥)

**ದೀಪನಂ ಪಾಚನಂ ಕಂಠ್ಯಂ ಲಘೂಷ್ಣಂ ಬಸ್ತಿಶೋಧನಮ್ ॥೧೬॥**
**ಹಿಧ್ಮಾಧ್ಮಾನಾನಿಲಶ್ಲೇಷ್ಮಸದ್ಯಃಶುದ್ಧಿನವಜ್ವರೇ ॥**
**ಕಾಸಾಮಪೀನಸಶ್ವಾಸಪಾರ್ಶ್ವರುಕ್ಷು ಚ ಶಸ್ಯತೇ ॥೧೭॥**

ಅರ್ಥ:— ಬಿಸಿ-ನೀರು ಲಘು, ದೀಪನ, ಪಾಚನ, ಕಂಠಕ್ಕೆ ಹಿತಕರ, ಮೂತ್ರಶೋಧಕ ಇದ್ದು, ಬಿಕ್ಕು ಹೊಟ್ಟೆಯುಬ್ಬು ವಾತ ಕಫ ಕೆಮ್ಮು ಆಮ ನೆಗಡಿ ದಮ್ಮು ಪಾರ್ಶ್ವ ಶೂಲಗಳಲ್ಲಿಯೂ, ಅದೇ ಶೋಧನ ತಕ್ಕೊಂಡಕಾಲದಲ್ಲಿಯೂ, ನವಜ್ವರದಲ್ಲಿಯೂ ಹಿತಕರವು.

ಟಿಪ್ಪಣೀಃ— ಕಾಸಿದ ನೀರು ಆಯಾ ದೇಶ-ಋತು-ರೋಗಗಳಿಗನುಸಾರ ವಾಗಿ ನಾಲ್ಕರಲ್ಲಿ ಮೂರು ಭಾಗ ಅಥವಾ ಎರಡು ಭಾಗ ಅಥವಾ ಒಂದು ಭಾಗ ಆಟ್ಟಿಸಿ ಉಳಿಸಿದ ಅಥವಾ ಬೆಂಕಿ ಬಿಸಿಲು ಮುಂತಾದವುಗಳಿಂದ ಕಾಸಿದ ನೀರು.

ಜಾಂಗಲ ದೇಶದಲ್ಲಿ ನಾಲ್ಕನೆಯ ಭಾಗ, ಸಾಧಾರಣ ದೇಶದಲ್ಲಿ ಮೂರನೆಯ ಭಾಗ, ಅನೂಪ ದೇಶದಲ್ಲಿ ಅರ್ಧ ಭಾಗ ಅಟ್ಟಿಸಿದ ನೀರು ಹಿತಕರವು. ಕಾಲು ಭಾಗ ಉಳಿದ ನೀರು ಕಫ ರೋಗವನ್ನೂ, ಮುಕ್ಕಾಲು ಭಾಗ ಉಳಿದ ನೀರು ಪಿತ್ತವನ್ನೂ, ಅರ್ಧ ಭಾಗ ಉಳಿದ ನೀರು ವಾತವನ್ನೂ ನಾಶಮಾಡುತ್ತದೆ.

["ಸಂಗ್ರಹ"ದಲ್ಲಿ ಹೇಳಿದ ಈ ಕೆಳಗೆ ಬರೆದ ಶ್ಲೋಕಗಳು ಮೇಲಿನ ಶ್ಲೋಕದ ಮುಂದೆ ಮೂಲದಲ್ಲಿಯೇ ಇರುವವೆಂದು ಕೆಲವರ ಅಭಿಪ್ರಾಯವಿರುತ್ತದೆಂದು ಅರುಣದತ್ತನು ಹೇಳುವನು.]

**ಪಾನೀಯಂ ನ ತು ಪಾನೀಯಂ ಪಾನೀಯೇಽನ್ಯ ಪ್ರದೇಶಜೇ ||**
**ಅಜೀರ್ಣೇ ಕ್ವಥಿತಂ ಚಾಮೇ ಪಕ್ವೇ ಜೀರ್ಣೇಽಪಿ ನೇತರತ್ ||**

**ಶೀತೇ ವಿಧಿರಯಂ, ತಪ್ತೇ ತ್ವಜೀರ್ಣೇ ಶಿಶಿರಂ ತ್ಯಜೇತ್ ||**
**ಅತಿಯೋಗೇನ ಸಲಿಲಂ ತೃಷ್ಯತೋಽಪಿ ಪ್ರಯೋಜಿತಮ್ ||**

**ಪ್ರಯಾತಿ ಶ್ಲೇಷ್ಮಪಿತ್ತತ್ವಂ ಜ್ವರಿತಸ್ಯ ವಿಶೇಷತಃ ||**

ಅರ್ಥಃ— ಎಂಟು ಪ್ರಕಾರದ ನೀರುಗಳಲ್ಲಿ ಒಂದು ನೀರು ಕುಡಿದ ನಂತರ ಅದು ಪಚನವಾಗದೆ ಇದ್ದಾಗ್ಗೆ ಬೇರೆ ಜಾತಿಯ ನೀರನ್ನು ಕುಡಿಯಬಾರದು. ಅಂದರೆ ಬಾವಿಯ ನೀರು ಪಚನವಾಗದೆ ಕೆರೆಯ ನೀರನ್ನು ಕುಡಿಯಬಾರದು. ಕೆರೆಯ ನೀರು ಪಚನವಾಗದೆ ಬಾವಿಯ ನೀರನ್ನು ಕುಡಿಯಬಾರದು ಇತ್ಯಾದಿ. ತಣ್ಣೀರು ಪಚನವಾಗದೆ ಇದ್ದಾಗ ಕಾದ ನೀರನ್ನು ಕುಡಿಯಬಾರದು. ಕುದಿಸಿದ ನೀರು ಕುಡಿದನಂತರ ಅದು ಪಚನವಾಗಿದ್ದರೂ ಕೂಡ ಪುನಃ ಊಟ ಮಾಡುವವರೆಗೆ ಸಜಾತೀಯವಾದ ತಣ್ಣೀರನ್ನು ಕುಡಿಯಬಾರದು. ಬರೇ ಕಾಸಿದ ನೀರು ಪಚನವಾದನಂತರ ತಣ್ಣೀರು ಕುಡಿಯಲು ಅಡ್ಡಿಯಿಲ್ಲ. ನೀರಡಿಕೆಯಾದವನು ಕೂಡ ನೀರು ಹೆಚ್ಚು ಕುಡಿದರೆ ಕಫ ಪಿತ್ತವಾಗುವದು. ವಿಶೇಷವಾಗಿ ಜ್ವರದಿಂದವನು ನೀರು ಹೆಚ್ಚು ಕುಡಿದರೆ ಕಫ ಪಿತ್ತವಾಗುವದು.

ನೀರು ಪ್ರಾಣಿಗಳ ಪ್ರಾಣವು. ಬಹಳವೇನು, ಜಗತ್ತೇ ನೀರಿನಿಂದ ತುಂಬಿದೆ. ಆದ್ದರಿಂದ ನೀರು ಬೇಡವೆಂದು ಹೇಳಿದಲ್ಲಿಯೂ ಕೂಡ ಕೊಡಲೇ

ಬೇಕು. ನಿರೋಗಿಯೇ ಇರಲಿ ಅಥವಾ ರೋಗಿಯೇ ಇರಲಿ ನೀರಿಲ್ಲದೆ ಇರುವದು ಶಕ್ಯವಿಲ್ಲ. ಆದಕಾರಣ ಬರೇ ನೀರು ಅಥವಾ ಔಷಧ ಹಾಕಿದ ಇಲ್ಲವೇ ಕುದಿಸಿದ ಬಿಸಿ ಅಥವಾ ತಣ್ಣಗಿನ ನೀರು ಪ್ರಮಾಣದಿಂದ ಕೊಟ್ಟರೆ ಹಿತಕರವಾಗುವದು. ಇಲ್ಲವಾದರೆ ಅಹಿತವಾಗುವದು.

**ಅನಭಿಷ್ಯಂದಿ ಲಘು ಚ ತೋಯಂ ಕ್ವಥಿತಶೀತಲಮ್ ||**
**ಪಿತ್ತಯುಕ್ತೇ ಹಿತಂ ದೋಷೇ, ವ್ಯುಷಿತಂ ತತ್ತ್ರಿದೋಷಕೃತ್||೧೭||**

ಅರ್ಥಃ— ಕುದಿಸಿ ಆರಿಸಿದ ನೀರು ಹಗುರು ಇದ್ದು ಕಫವನ್ನುಂಟು ಮಾಡುವದಿಲ್ಲ. ಪಿತ್ತದೋಷದಲ್ಲಿ ಹಿತಕರವು. ಆದರೆ ಅದು ತಂಗಳವಾದರೆ ತ್ರಿದೋಷವನ್ನುಂಟುಮಾಡುವದು. (೧೮)

**ನಾರಿಕೇಲೋದಕಂ ಸ್ನಿಗ್ಧಂ ಸ್ವಾದು ವೃಷ್ಯಂ ಹಿಮಂ ಲಘು**
**ತೃಷ್ಣಾಪಿತ್ತಾನಿಲಹರಂ ದೀಪನಂ ಬಸ್ತಿಶೋಧನಮ್ ||೧೯||**

ಅರ್ಥ— ಟೆಂಗಿನ ನೀರು ಸ್ನಿಗ್ಧ, ಸವಿ, ವೀರ್ಯವರ್ಧಕ, ಶೀತ, ಹಗುರು ಇದ್ದು ನೀರಡಿಕೆ ಪಿತ್ತ ವಾಯುಗಳನ್ನು ನಾಶ ಮಾಡುವದು, ದೀಪನ ಮತ್ತು ಮೂತ್ರ-ಶೋಧಕವು ಆಗಿದೆ. (೧೯)

**ವರ್ಷಾಸು ದಿವ್ಯನಾದೇಯೇ ಪರಂ ತೋಯೇ ವರಾವರೇ ||**

ಅರ್ಥಃ— ಮಳೆಗಾಲದಲ್ಲಿ ಮಳೆಯ ನೀರು ಬಹಳ ಉತ್ತಮವು. ನದಿಯ ನೀರು ಬಹಳ ಅಪಥ್ಯವು. (೧೯||)

## ಕ್ಷೀರವರ್ಗ

ಉಳಿದ ಎಲ್ಲ ವರ್ಗಗಳಿಗಿಂತ ಬಹು ಜನೋಪಯುಕ್ತವಾದ್ದರಿಂದಲೂ ನೀರಿನಂತೆ ಜೀವನೀಯವಾದ್ದರಿಂದಲೂ ಕ್ಷೀರವರ್ಗವನ್ನು ಹೇಳುತ್ತಾರೆ.

**ಸ್ವಾದುಪಾಕರಸಂ ಸ್ನಿಗ್ಧಮೋಜಸ್ಯಂ ಧಾತುವರ್ಧನಮ್ ||೨೦||**
**ವಾತಪಿತ್ತಹರಂ ವೃಷ್ಯಂ ಶ್ಲೇಷ್ಮಲಂ ಗುರು ಶೀತಲಮ್ ||**
**ಪ್ರಾಯಃ ಪಯಃ.........................**

ಅರ್ಥಃ— ಸಾಮಾನ್ಯವಾಗಿ ಎಲ್ಲ ಹಾಲು ಪಾಕದಲ್ಲಿಯೂ ರಸದಲ್ಲಿಯೂ ಮಧುರ, ಸ್ನಿಗ್ಧ, ಓಜಸ್ಕರ, ಸಪ್ತಧಾತುವರ್ಧಕ, ಶುಕ್ರವರ್ಧಕ ವಾತ-ಪಿತ್ತನಾಶಕವಿದ್ದು ಕಫವನ್ನುಂಟುಮಾಡುವದೂ, ಜಡವೂ, ಶೀತವೂ ಆಗಿದೆ.

ಟಿಪ್ಪಣೆಃ— ಒಂಟೆಯ ಹಾಲು ಉಷ್ಣ ರುಕ್ಷ ಉಪ್ಪು ಮತ್ತು ಆಡಿನ ಹಾಲು ಲಘುವಿದ್ದದರಿಂದ ಹಾಗು ಉಣ್ಣಿಗುರಿಯ ಹಾಲು ಉಷ್ಣ, ಕುದುರೆ ಕತ್ತೆಗಳ ಹಾಲು ಹುಳಿ ಉಪ್ಪು ಇರುವದರಿಂದ "ಸಾಮಾನ್ಯವಾಗಿ" ಎಂಬ ಶಬ್ದವನ್ನು ಹಾಕಿದರು. (೨೦||)

…………ಅತ್ರ ಗವ್ಯಂ ತು ಜೀವನೀಯಂ ರಸಾಯನಮ್ ||೨೦||

ಕ್ಷತಕ್ಷೀಣಹಿತಂ ಮೇಧ್ಯಂ ಬಲ್ಯಂ ಸ್ತನ್ಯಕರಂ ಸರಮ್ ||
ಶ್ರಮಭ್ರಮಮದಾಲಕ್ಷ್ಮೀಶ್ವಾಸಕಾಸಾತಿತೃಟ್‌ಕ್ಷುಧಃ ||೨೨||

ಜೀರ್ಣಜ್ವರಂ ಮೂತ್ರಕೃಚ್ಛ್ರಂ ರಕ್ತಪಿತ್ತಂ ಚ ನಾಶಯೇತ್ ||

ಅರ್ಥ:— ಅದರಲ್ಲಿ ಆಕಳಹಾಲು ಜೀವನೀಯ (ಓಜಸ್ಯ), ರಸಾಯನ (ಧಾತುವರ್ಧಕ) ವಾಗಿದ್ದು ಗಾಯಹೊಂದಿದವರಿಗೂ ಕ್ಷೀಣರಿಗೂ ಹಿತಕರ, ಬುದ್ಧಿ ಬಲವರ್ಧಕವೂ, ಸ್ತನ್ಯವನ್ನುಂಟುಮಾಡುವದೂ, ಸಾರಕವೂ ಆಗಿದ್ದು ಶ್ರಮ ಭ್ರಮ ಮದ ಕಾಂತಿಹೀನತೆ ಕೆಮ್ಮು ದಮ್ಮು ನೀರಡಿಕೆ ಹಸಿವೆ ಜೀರ್ಣಜ್ವರ ಮೂತ್ರಕೃಚ್ಛ್ರ ರಕ್ತಪಿತ್ತಗಳನ್ನು ಕಳೆಯುವದು.

ಟಿಪ್ಪಣೆ:— ಕರೇ ಆಕಳ ಹಾಲು ವಾತನಾಶಕ ಮತ್ತು ಎಲ್ಲವುಗಳಿಗಿಂತಲೂ ಶ್ರೇಷ್ಠ. ಹಳದೀ ಆಕಳ ಹಾಲು ಪಿತ್ತವಾತ ನಾಶಕ. ಬಿಳಿಯ ಆಕಳ ಹಾಲು ಕಫಕಾರಕ ಹಾಗು ಜಡ. ಕೆಂಪು ಮತ್ತು ಹಂಡ_ಬಂಡ ಆಕಳ ಹಾಲು ವಾತನಾಶಕ. ಕರುವಿಲ್ಲದ ಅಥವಾ ಸಣ್ಣ ಕರುವುಳ್ಳ ಆಕಳ ಹಾಲು ದೋಷಕರವು. ಈದು ಬಹಳ ದಿವಸಗಳಾದ ಆಕಳ ಹಾಲು ತ್ರಿದೋಷನಾಶಕ ತೃಪ್ತಿಕಾರಕ ಬಲಕಾರಕವಿರುವವು. ಜಾಂಗಲ ಆನೂಪ ಪರ್ವತಗಳಲ್ಲಿ ತಿರುಗಾಡುವ ಆಕಳ ಹಾಲು ಕ್ರಮದಿಂದ ಹೆಚ್ಚು ಹೆಚ್ಚು ಜಡ. ಹೊಟ್ಟು ಹುಲ್ಲು ಹತ್ತೀಕಾಳು ತಿನ್ನುವ ಆಕಳ ಹಾಲು ನಿರೋಗಿಗಳಿಗೆ ಕಾಂತಿ ಶುಕ್ರವೃದ್ಧಿಯನ್ನುಂಟುಮಾಡುವಂತಹದು; ತರುಣ ಆಕಳ ಹಾಲು ಮಧುರ, ರಸಾಯನ ಮತ್ತು ತ್ರಿದೋಷ ಶಾಮಕವಾಗಿರುವದು. ವೃದ್ಧ ಆಕಳ ಹಾಲು ದುರ್ಬಲ. ಗಬ್ಬಾಗಿ ಮೂರು ತಿಂಗಳಾದ ಆಕಳ ಹಾಲು ಪಿತ್ತಕರ ಕ್ಷಾರ ಮಧುರ ಶೋಷಕರವಿರುವದು. ಚೊಚ್ಚಲ ಆದ ಆಕಳ ಹಾಲು

ನಿಸ್ಸಾರ, ಗುಣಹೀನವಾಗಿರುವದು. ಗಿಣ್ಣದ ಹಾಲು ರುಕ್ಷ ದಾಹಕರ ರಕ್ತದೋಷ-ಜನಕ ಪಿತ್ತಕರವಾಗಿರುವದು. ಈದು ಬಹಳ ದಿವಸವಾದ ಆಕಳ ಹಾಲು ಮಧುರ ಉಪ್ಪು ದಾಹಕ. ಶುಭ್ರ ಬಿಳಿಯ ಅಥವಾ ಕರಿಯ ಆಕಳ ಹಾಲು ಶ್ರೇಷ್ಠವು. ಕಬ್ಬು ಅಡವಿಉದ್ದುಗಳನ್ನು ತಿನ್ನುವ ನೆಟ್ಟನ್ನ ಕೋಡುಳ್ಳ ಆಕಳ ಹಾಲು ಹಿತಕರವು. ನಸುಕಿನಲ್ಲಿ ಹಿಂಡಿದ ಹಾಲು ಜಡ ಶೀತ; ಸೂರ್ಯೋದಯದ ನಂತರ ಅರ್ಧ ಇಲ್ಲವೆ ಒಂದು ಪ್ರಹರದ ನಂತರ ಹಿಂಡಿದ ಹಾಲು ದೀಪಕ ಹಗುರು ಮತ್ತು ಹಿತಕರವಾಗಿರುವದು. (೨೨॥)

**ಹಿತಮತ್ಯಗ್ನ್ಯನಿದ್ರೇಭ್ಯೋ ಗರೀಯೋ ಮಾಹಿಷಂ ಹಿಮಮ್ ॥೨೩॥**

ಅರ್ಥ:— ಎಮ್ಮೆಯ ಹಾಲು ಶೀತವೂ ಜಡವೂ ಆಗಿದ್ದು ಅತ್ಯಗ್ನಿಗಳಿಗೂ ನಿದ್ದೆ ಬಾರದವರಿಗೂ ಹಿತಕರವು. (೨೩)

**ಅಲ್ಪಾಂಬುಪಾನವ್ಯಾಯಾಮಕಟುತಿಕ್ತಾಶನೈರ್ಲಘು ॥**

**ಆಜಂ ಶೋಷಜ್ವರಶ್ವಾಸರಕ್ತಪಿತ್ತಾತಿಸಾರಜಿತ್ ॥೨೪॥**

ಅರ್ಥ:— ಕುರಿಗಳು ಸ್ವಲ್ಪ ನೀರು ಕುಡಿಯೋಣದರಿಂದಲೂ ಬಹಳ ವ್ಯಾಯಾಮ ಮಾಡುವದರಿಂದಲೂ ಕಹಿ ಕಾರ ರಸಗಳನ್ನು ತಿನ್ನುವದರಿಂದಲೂ ಅವುಗಳ ಹಾಲು ಹಗುರು ಇದ್ದು ಕ್ಷಯ ಜ್ವರ ಶ್ವಾಸ ರಕ್ತಪಿತ್ತ ಅತಿಸಾರಗಳನ್ನು ಕಳೆಯುತ್ತದೆ.

**ಟಿಪ್ಪಣಿ:—** ಇದರಲ್ಲಿ ಆಡಿನ ಹಾಲಿನ ಹಗುರು ಮುಂತಾದ ಗುಣಕ್ಕೆ ಕಾರಣಗಳನ್ನು ಹೇಳಿದ್ದಾರೆ. ಉದ್ದೇಶವೇನಂದರೆ, ಆಡಿನಲ್ಲಿ ಮೇಲೆ ಹೇಳಿದ ಸ್ವಲ್ಪ ನೀರು ಕುಡಿಯೋಣ ಮುಂತಾದ ಆಹಾರ-ವಿಹಾರಗಳು ಇಲ್ಲದಿದ್ದರೆ ಆದರ ಹಾಲಿನ ಗುಣವು ವಿಪರೀತವಾಗಬಹುದು. ಇದರಂತೆ ಆಕಳ ಮುಂತಾದವುಗಳ ಹಾಲಿನಲ್ಲಿಯೂ ಇದೇ ತರದ ಆಹಾರ-ವಿಹಾರಗಳಿಂದ ಹಗುರು ಮುಂತಾದವುಗಳು ಬರುವವು; ಇಲ್ಲವಾದರೆ ವಿಪರೀತ ಗುಣಗಳು ಬರುವವು. ಹಗಲು ವ್ಯಾಯಾಮ ಮಾಡುವದರಿಂದ ಸಂಜೆಯ ಹಾಲು ಮುಂಜಾನೆಗಿಂತ ಹಗುರು; ರಾತ್ರಿ ವ್ಯಾಯಾಮವಿಲ್ಲದ್ದರಿಂದ ಮುಂಜಾನೆಯ ಹಾಲು ಸಂಜೆಯಕಿಂತ ಜಡವಾಗಿರುತ್ತದೆ. (೨೪)

**ಈಷದ್ರೂಕ್ಷೋಷ್ಣಲವಣಮೌಷ್ಟ್ರಕಂ ದೀಪನಂ ಲಘು ॥**

**ಶಸ್ತಂ ವಾತಕಫಾನಾಹಕೃಮಿಶೋಫೋದರಾರ್ಶಸಾಮ್ ॥೨೫॥**

ಅರ್ಥಃ— ಒಂಟೆಯ ಹಾಲು ಸ್ವಲ್ಪ ರುಕ್ಷ ಉಷ್ಣ ಉಪ್ಪು ದೀಪಕ ಹಗುರು ಇದ್ದು, ವಾತ ಕಫ ಹೊಟ್ಟೆಯುಬ್ಬು ಕೃಮಿ ಬಾವು ಉದರ ಮೂಲ-ವ್ಯಾಧಿಗಳಿಗೆ ಹಿತವು. (೨೫)

**ಮಾನುಷಂ ವಾತಪಿತ್ತಾಸೃಗಭಿಘಾತಾಕ್ಷಿರೋಗಜಿತ್ ॥**
**ತರ್ಪಣಾಶ್ಚ್ಯೋತನೈರ್ನಸ್ಯೈಃ........................**

ಅರ್ಥಃ— ಹೆಂಗಸರ ಹಾಲು ತರ್ಪಣ ಆಶ್ಚ್ಯೋತನ ನಸ್ಯಗಳಿಂದ, ವಾತ ಪಿತ್ತ ರಕ್ತವಿಕಾರ, ಬಡಿತಗಳಿಂದುಂಟಾದ (ಆಘಾತಗಳಿಂದುಂಟಾದ) ಕಣ್ಣುಬೇನೆಗಳಿಗೆ ಹಿತಕರವು.

**ಟಿಪ್ಪಣೀ**— ತರ್ಪಣವೆಂದರೆ ಕಣ್ಣಿನ ಸುತ್ತಲೂ ಉದ್ದಿನ ಹಿಟ್ಟು ಮೊದಲಾದವುಗಳಿಂದ ಕಟ್ಟೆಯನ್ನು ಕಟ್ಟಿ ಔಷಧ ಹಾಕುವದು. ಆಶ್ಚ್ಯೋತನವೆಂದರೆ ಔಷಧವನ್ನು ಕಣ್ಣಿನಲ್ಲಿ ಹಾಕುವದು. (೨೫॥)

**.......................ಅಹೃದ್ಯಂ ತೂಷ್ಣಮಾವಿಕಮ್ ॥೨೬॥**
**ವಾತವ್ಯಾಧಿಹರಂ ಹಿಧ್ಮಾಶ್ವಾಸಪಿತ್ತಕಫಪ್ರದಮ್ ॥**

ಅರ್ಥಃ— ಉಣ್ಣೆಗುರಿಯ ಹಾಲು ಉಷ್ಣವೂ ಹೃದಯಕ್ಕೆ ಅಹಿತವೂ ಇದ್ದು ವಾತವ್ಯಾಧಿನಾಶಕವೂ, ಬಿಕ್ಕು ಶ್ವಾಸ ಪಿತ್ತ ಕಫಗಳನ್ನುಂಟುಮಾಡುವದೂ ಆಗಿರುವದು.

**ಟಿಪ್ಪಣಿ:**— ಖಾರಣಾದಿಯು ಬಿಕ್ಕು ಶ್ವಾಸಗಳನ್ನು ನಾಶಮಾಡುವದೆಂದು ಹೇಳಿದ್ದಾನೆ. ಇಲ್ಲಿ ಅವುಗಳನ್ನು ಉಂಟುಮಾಡುವದೆಂದು ಹೇಳಿದೆ. ಹೀಗೆ ವಿರೋಧ ಬರುತ್ತದೆ. ಅದಕ್ಕಾಗಿ ಕಫ ಪಿತ್ತಜ ಬಿಕ್ಕು ಶ್ವಾಸಗಳನ್ನುಂಟುಮಾಡುತ್ತದೆಂದೂ, ವಾತಜ ಬಿಕ್ಕು ಶ್ವಾಸಗಳನ್ನು ಕಳೆಯುತ್ತದೆಂದೂ ಅರ್ಥ ಮಾಡಬೇಕು. ಅಂದರೆ ವಿರೋಧ ಪರಿಹಾರವಾಗುವದು. (೨೬॥)

**ಹಸ್ತಿನ್ಯಾಃ ಸ್ಥೈರ್ಯಕೃತ್.............. .....**

ಅರ್ಥಃ— ಆನೆಯ ಹಾಲು ಶರೀರವನ್ನು ಅತಿಶಯ ಗಟ್ಟಿಮಾಡುವದು.

...............ಬಾಢಮುಷ್ಣಂ ತ್ವೈಕಶಫಂ ಲಘು ||೨೭||
**ಶಾಖಾವಾತಹರಂ ಸಾಮ್ಲಲವಣಂ ಜಡತಾಕರಮ್ ||**

ಅರ್ಥ:— (ಕತ್ತೆ ಕುದುರೆ ಮೊದಲಾದ) ಒಂದೇ ಖುರದ ಪ್ರಾಣಿಗಳ ಹಾಲು ಉಷ್ಣ ಲಘು ಇದ್ದು, ರಕ್ತ ಮೊದಲಾದ ಆರು ಧಾತು ಮತ್ತು ತ್ವಕ್ಕಿನಲ್ಲಿದ್ದ ವಾತವನ್ನು ನಾಶಮಾಡುವದೂ ಹುಳಿ ಉಪ್ಪು ರಸವುಳ್ಳದ್ದು ಇದ್ದು ಜಡತ್ವವನ್ನುಂಟುಮಾಡುವದು.

**ಟಿಪ್ಪಣಿ:—** ಜಡತ್ವವೆಂದರೆ ಶರೀರ ಜಡತ್ವವೆಂದು ಅರುಣದತ್ತನೂ ಬುದ್ಧಿಯ ಜಾಡ್ಯವೆಂದು ಹೇಮಾದ್ರಿಯೂ ಹೇಳುವರು. (೨೭||)

**ಪಯೋಽಭಿಷ್ಯಂದಿ ಗುರ್ವಾಮಂ, ಯುಕ್ತ್ಯಾ ಶೃತಮತೋಽನ್ಯಥಾ ||೨೮||**

ಅರ್ಥ:— ಹಸಿ ಹಾಲು ಜಡವೂ ಕಫಕಾರಕವೂ ಆಗಿರುವದು. ಅದನ್ನೇ ಯೋಗ್ಯ ಉಪಾಯದಿಂದ ಕುದಿಸಲು ಲಘುವೂ ಮತ್ತು ಕಫ-ಜನಕ-ವಲ್ಲದ್ದೂ ಆಗುವದು.

**ಟಿಪ್ಪಣಿ:—** ಯೋಗ್ಯ ಉಪಾಯದಿಂದ ಅಂದರೆ 'ಅರ್ಧ ನೀರು ಹಾಕಿ ಅದು ಸುಡುವವರೆಗೆ' ಎಂದು ಅರ್ಥವು. (೨೮)

**ಭವೇದ್ಗರೀಯೋಽತಿಶೃತಂ, ಧಾರೋಷ್ಣಮಮೃತೋಪಮಮ್ ||**

ಅರ್ಥಃ— ಹಾಲು ಬಹಳ ಕುದಿಸಿದರೆ ಜಡವಾಗುವದು. ಧಾರೋಷ್ಣ (ನೊರೆ) ಹಾಲು ಅಮೃತ ಸದೃಶವು.

**ಟಿಪ್ಪಣೀ—** ಕಾದಾರಿದ ಹಾಲು ಪಿತ್ತನಾಶಕ, ಹಾಗೆಯೇ ಬಿಸಿ ಇದ್ದದ್ದು ಕಫವಾತನಾಶಕ. (೨೮||)

**ಅಮ್ಲಪಾಕರಸಂ ಗ್ರಾಹಿ ಗುರೂಷ್ಣಂ ದಧಿ ವಾತಜಿತ್ ||೨೯||**
**ಮೇದಃಶುಕ್ರಬಲಶ್ಲೇಷ್ಮಪಿತ್ತರಕ್ತಾಗ್ನಿ ಶೋಫಕೃತ್ ||**
**ರೋಚಿಷ್ಣು ಶಸ್ತಮರುಚೌ ಶೀತಕೇ ವಿಷಮಜ್ವರೇ ||೩೦||**

**ಪೀನಸೇ ಮೂತ್ರಕೃಚ್ಛ್ರೇ ಚ, ರೂಕ್ಷಂ ತು ಗ್ರಹಣೀಗದೇ ||**

ನೈವಾದ್ಯಾನ್ನಿಶಿ ನೈವೋಷ್ಣಂ ವಸಂತೋಷ್ಣಶರತ್ಸು ನ ||೩೦||
ನಾಮುದ್ಗಸೂಪಂ ನಾಕ್ಷೌದ್ರಂ ತನ್ನಾಘೃತಸಿತೋಪಲಂ ||
ನ ಚಾನಾಮಲಕಂ ನಾಪಿ ನಿತ್ಯಂ ನೋ ಮಂದ್ಯಮನ್ಯಥಾ ||೩೧||
ಜ್ವರಾಸೃಕ್‌ಪಿತ್ತವೀಸರ್ಪಕುಷ್ಠಪಾಂಡುಭ್ರಮಪ್ರದಮ್ ||

ಅರ್ಥ:— ಮೊಸರು ಪಾಕದಲ್ಲಿಯೂ ರಸದಲ್ಲಿಯೂ ಹುಳಿ, ಸ್ತಂಭಕ, ಜಡ, ಉಷ್ಣ, ವಾತನಾಶಕ, ಮೇದಸ್ಸು ಶುಕ್ರ ಬಲ ಕಫ ಪಿತ್ತ ರಕ್ತ ಅಗ್ನಿಬಾವುಗಳನ್ನು ಉಂಟುಮಾಡುವದು, ರುಚಿಕರ; ಅರುಚಿ, ಶೀತವಾದ (ವಾತಾಧಿಕ) ವಿಷಮಜ್ವರ, ಪೀನಸ, ಮೂತ್ರ-ಕೃಚ್ಛ್ರಗಳಿಗೆ ಹಿತಕರವು. ಮೊಸರನ್ನು ರಾತ್ರಿಯಲ್ಲಿ ಎಂದಿಗೂ ತಿನ್ನಬಾರದು. ಬಿಸಿ ಮಾಡಿಯೂ ತಿನ್ನಬಾರದು. ವಸಂತ ಗ್ರೀಷ್ಮ ಶರತ್ಕಾಲದಲ್ಲಿಯೂ, ಹೆಸರಿನ-ತೂವ್ವೆ ಜೇನತುಪ್ಪ ತುಪ್ಪ ಕಲ್ಲುಸಕ್ಕರೆ ನೆಲ್ಲೀಕಾಯಿ ಇವುಗಳಲ್ಲಿ ಯಾವದಾದರೊಂದರೊಡನೆ ಬೆರಿಸದೆ ತಿನ್ನಬಾರದು. ದಿನಾಲೂ ತಿನ್ನಬಾರದು. ಚನ್ನಾಗಿ ಹೆರೆಯದಿದ್ದದ್ದನ್ನು ತಿನ್ನಬಾರದು. ಇಲ್ಲವಾದರೆ ಜ್ವರ ರಕ್ತ-ಪಿತ್ತ ವಿಸರ್ಪ ಕುಷ್ಠ ಪಾಂಡು ಭ್ರಮ ವಿಕಾರಗಳನ್ನು ಉತ್ಪನ್ನಮಾಡುತ್ತದೆ.

ಟಿಪ್ಪಣಿ:— ಶೀತಕರ ವಿಷಮಜ್ವರವು ವಾತ ಕಫ ಮತ್ತು ಅವುಗಳ ಸಂಸರ್ಗದಿಂದ ಆಗುವದು. ಇವುಗಳಲ್ಲಿ ವಾತದ ಅಥವಾ ವಾತಾಧಿಕ ವಿಷಮಜ್ವರದಲ್ಲಿಯೇ ಮೊಸರು ಕೊಡಬೇಕು. ಇದರಂತೆ ವಾತಿಕ ಪೀನಸದಲ್ಲಿಯೇ ಇದು ಹಿತವು. ಅನಭಿವ್ಯಕ್ತಾಮ್ಲ, ಅಭಿವ್ಯಕ್ತಾಮ್ಲ, ಅತ್ಯಮ್ಲವೆಂದು ಮೊಸರು ಮೂರು ಪ್ರಕಾರದ್ದು. ಕ್ಷೀರ ಭಾವ ಬಿಟ್ಟು ಇನ್ನೂ ದಧಿಭಾವವನ್ನು ಹೊಂದದೇ ಇದ್ದುದೇ ಮೊದಲನೇದು. ಅದು ಮಂದಕವೆಂದು ಕರೆಯಲ್ಪಡುವದು. ಇದು ತ್ರಿದೋಷಕರವು. ನಡುವಿನದು ಮೊಸರು. ಆದರ ಗುಣಗಳನ್ನು ಮೇಲೆ ಹೇಳಿದೆ. ಅತ್ಯಮ್ಲವು (ಅತಿ ಹುಳಿಯಾದ ಮೊಸರು) ಕಫ ರಕ್ತ-ಪಿತ್ತಗಳನ್ನುಂಟುಮಾಡುತ್ತದೆ. ಮೊಸರಿನ ಮೇಲಿನ ಭಾಗವು ಸರವೆಂದೂ ಕೆಳಗಿನದು ಮಂಡವೆಂದೂ ಕರೆಯಲ್ಪಡುವದು. ಇವುಗಳಲ್ಲಿ ಸರವು ವಾತಕಫನಾಶಕವು, ಮಂಡವು ಸ್ರೋತಃ ಶೋಧಕವು ಆಗಿದೆ. ಸುಶ್ರುತದಲ್ಲಿ ಎಲ್ಲ ಮೊಸರುಗಳ ಗುಣಗಳನ್ನು ಹೇಳಿರುವರು.

ದಧ್ಯಾಜಂ ಕಫಪಿತ್ತಘ್ನಂ ಲಘು ಪಾಕೇ ವಿಷಾಪಹಮ್ ||
ದುರ್ನಾಮಶ್ವಾಸಕಾಸೇಷು ಹಿತಮಗ್ನೇಶ್ಚ ದೀಪನಮ್ ||
ವಿಪಾಕೇ ಮಧುರಂ ವೃಷ್ಯಂ ರಕ್ತಪಿತ್ತಪ್ರಣಾಶನಮ್ ||
ಬಲಾಸವರ್ಧನಮ್ ಸ್ನಿಗ್ಧಂ ವಿಶೇಷಾದ್ದಧಿ ಮಾಹಿಷಮ್ ||

ವಿಪಾಕೇ ಕಟುಕಂ ಕ್ಷಾರಮಮ್ಲಂ ಭೇದಾಸ್ಯೃಕಂ ದಧಿ ||
ವಾತಾರ್ಶಾಂಸಿ ಚ ಕುಷ್ಠಾನಿ ಕೃಮೀನ್ ಹಂತ್ಯುದರಾಣಿ ಚ ||

ವಾತಘ್ನಂ ಕಫಕೃತ್ ಸ್ನಿಗ್ಧಂ ವಿಶೇಷಾನ್ನ ಚ ಪಿತ್ತಕೃತ್ ||
ಕುರ್ಯಾದ್ರಕ್ತಾಭಿಲಾಷಂ ಚ ದಧಿ ಮತ್ಸುಪರಿಸ್ರುತಮ್ ||

ಶೃತಕ್ಷೀರಾಚ್ಚ ಯಜ್ಜಾತಂ ಗುಣವದ್ದಧಿ ತತ್ಸ್ಮೃತಮ್ ||
ವಾತಪಿತ್ತಹರಂ ರುಚ್ಯಂ ಧಾತ್ವಗ್ನಿಬಲವರ್ಧನಮ್ ||

ದಧಿ ತ್ವಸಾರಂ ರೂಕ್ಷಂ ತು ಗ್ರಾಹಿ ವಿಷ್ಟಂಭಿ ವಾತಲಮ್ ||
ದೀಪನೀಯಂ ವಿಶೇಷೇಣ ಸಕಷಾಯಂ ರುಚಿಪ್ರದಮ್ ||

ಕೇವಲ ಮೊಸರಿನ ಗುಣಗಳನ್ನು ಹೇಳಿದ್ದರಿಂದ ಸ್ವಲ್ಪ ಮೊಸರನ್ನು ಮೇಲೆ ಹೇಳಿದ ಹೆಸರಿನ ತೊಪ್ಪೆ ಮುಂತಾದ ಪದಾರ್ಥಗಳನ್ನು ಕೂಡಿಸದೆ ತಿನ್ನಲು ಅಡ್ಡಿ ಇಲ್ಲ. (೪೩||)

**ತಕ್ರಂ ಲಘು ಕಷಾಯಾಮ್ಲಂ ದೀಪನಂ ಕಫವಾತಜಿತ್ ||೪೪||**
**ಶೋಫೋದರಾರ್ಶೋಗ್ರಹಣೀದೋಷಮೂತ್ರಗ್ರಹಾರುಚೀಃ ||**
**ಪ್ಲೀಹಗುಲ್ಮಘೃತವ್ಯಾಪದ್ಗರಪಾಂಡ್ವಾಮಯಾನ್ ಜಯೇತ್ ||೪೪||**

ಅರ್ಥ— ಮಜ್ಜಿಗೆಯು ಹಗುರು ಒಗುರು ಹುಳಿ ದೀಪನ ಕಫ ಮತ್ತು ವಾತನಾಶಕವಿದ್ದು, ಬಾವು, ಉದರ, ಮೂಲವ್ಯಾಧಿ, ಗ್ರಹಣೀ, ಮೂತ್ರಾಘಾತ, ಅರುಚಿ, ಪ್ಲೀಹ, ಗುಲ್ಮ, ತುಪ್ಪದ ಹೆಚ್ಚುವಿಕೆಯಿಂದ ಉಂಟಾದ ರೋಗ, ಕೃತ್ರಿಮ ವಿಷ, ಪಾಂಡುರೋಗಗಳನ್ನು ಕಳೆಯುತ್ತದೆ.

ಟಿಪ್ಪಣಿಃ—

ಸುಶ್ರುತದಲ್ಲಿ:— ನೈವ ತಕ್ರಂ ಕ್ಷತೇ ದದ್ಯಾನ್ನೋಷ್ಣಕಾಲೇ ನ ದುರ್ಬಲೇ
ನಮೂರ್ಚ್ಛಾಭ್ರಮದಾಹೇಷು ನ ರೋಗೇ ರಕ್ತಪೈತ್ತಿಕೇ ||
ಶೀತಕಾಲೇಽಗ್ನಿ ಮಾಂದ್ಯೇ ಚ ಕಫೋತ್ಥೇಷ್ವಾಮಯೇಷು ಚ ||
ಮಾರ್ಗಾವರೋಧೇ ದುಷ್ಟೇ ಚ ವಾಯೌ ತಕ್ರಂ ಪ್ರಶಸ್ಯತೇ||

ಸಂಗ್ರಹದಲ್ಲಿ:— ತಕ್ರಮಾಮಂ ಕಫಂ ಕೋಷ್ಠೇ ಹಂತಿ ಕಂಠೇ ಕರೋತಿ ತು ||
ಪೀನಸಶ್ವಾಸಕಾಸಾದೌ ಸಿದ್ಧಮೇವೋಪಯೋಜಯೇತ್ ||

ಸುಶ್ರುತದಲ್ಲಿ:— ವಾತೇಽಮ್ಲಂ ಸೈಂಧವೋಪೇತಂ ಸ್ವಾದುಪಿತ್ತೇ ಸಶರ್ಕರಮ್ ||
ಹಿತಂ ತಕ್ರಂ ಕಫೇ ಸಾಮ್ಲಂ ವ್ಯೋಷಸೌವರ್ಚಲಾನ್ವಿತಮ್ ||

ಎಂದು ಹೆಚ್ಚಿಗೆ ಹೇಳಿದ್ದಾರೆ.

ತದ್ವಸ್ಮಸ್ತು ಸರಂ ಸ್ರೋತಃ ಶೋಧಿ ವಿಷ್ಟಂಭಜಿಲ್ಲಘು ||

ಅರ್ಥಃ— ಅದರಂತೆ ಮೊಸರಿನ ಮೇಲಿನ ನೀರಿನಲ್ಲಿ ಮಜ್ಜಿಗೆಯ ಗುಣಗಳಿದ್ದು ಅದು ಸಾರಕವೂ, ಸ್ರೋತಸ್ಸನ್ನು ಶೋಧಿಸುವದೂ, ಮಲ ಬಂಧ ನಾಶಮಾಡುವದೂ, ಹಗುರೂ ಆಗಿರುವದು.

ಟಿಪ್ಪಣಿಃ— ಕೂಷ್ಮಾಂಡವು ಸಾರಕವಿದ್ದರೂ ವಿಷ್ಟಂಭಿಯಾಗಿದೆ. ಶುಂಠಿಯು ಸ್ತಂಭಕವಿದ್ದರೂ ಮಲಭೇದಕವಾಗಿದೆ. ಆದ್ದರಿಂದ ಇಲ್ಲಿ ಸರ (ಮಲಾನುಲೋಮನ), ವಿಷ್ಟಂಭಜಿತ್ (ವಾತಾನುಲೋಮನ) ಎಂಬ ಎರಡೂ ಗುಣ ಗಳನ್ನು ಹೇಳಿದರು. (೩೪||)

ನವನೀತಂ ನವಂ ವೃಷ್ಯಂ ಶೀತಂ ವರ್ಣಬಲಾಗ್ನಿಕೃತ್ ||೩೫||
ಸಂಗ್ರಾಹಿ ವಾತಪಿತ್ತಾಸೃಕ್ ಕ್ಷಯಾರ್ಶೋರ್ದಿತಕಾಸಜಿತ್ ||

ಅರ್ಥಃ— ಹೊಸಬೆಣ್ಣೆಯು ವೀರ್ಯವರ್ಧಕ, ಶೀತ, ವರ್ಣಬಲ ಅಗ್ನಿವರ್ಧಕ, ಸ್ತಂಭಕವಿದ್ದು; ವಾತಪಿತ್ತ, ರಕ್ತಪಿತ್ತ, ಕ್ಷಯ, ಮೂಲ-ವ್ಯಾಧಿ, ಅರ್ದಿತ, ಕೆಮ್ಮುಗಳನ್ನು ಕಳೆಯುವದು. (೩೫||)

ಕ್ಷೀರೋದ್ಭವಂತು ಸಂಗ್ರಾಹಿ ರಕ್ತಪಿತ್ತಾಕ್ಷಿರೋಗಜಿತ್ ||೩೬||

ಅರ್ಥ:— ಹಾಲಿನಿಂದ ತೆಗೆದ ಬೆಣ್ಣೆಯು ಸ್ತಂಭಕವೂ, ರಕ್ತಪಿತ್ತ, ಕಣ್ಣು-ರೋಗಗಳನ್ನು ನಾಶ ಮಾಡುವದೂ ಆಗಿದೆ. (೩೬)

ಶಸ್ತಂ ಧೀಸ್ಮೃತಿಮೇಧಾಗ್ನಿ ಬಲಾಯುಃಶುಕ್ರಚಕ್ಷುಷಾಮ್ ||
ಬಾಲವೃದ್ಧಪ್ರಜಾಕಾಂತಿಸೌಕುಮಾರ್ಯಸ್ವರಾರ್ಥಿನಾಮ್ ||೩೭||

ಕ್ಷತಕ್ಷೀಣಪರಿಸರ್ಪಶಸ್ತ್ರಾಗ್ನಿಗ್ಲಪಿತಾತ್ಮನಾಮ್ ||
ವಾತಪಿತ್ತವಿಷೋನ್ಮಾದಶೋಷಾಲಕ್ಷ್ಮೀಜ್ವರಾಪಹಮ್ ||೩೮||

ಸ್ನೇಹಾನಾಮುತ್ತಮಂ ಶೀತಂ ವಯಸಃ ಸ್ಥಾಪನಂ ಪರಮ್ ||
ಸಹಸ್ರವೀರ್ಯಂ ವಿಧಿಭಿರ್ಘೃತಂ ಕರ್ಮಸಹಸ್ರಕೃತ್ ||೩೯||

ಅರ್ಥ:— ತುಪ್ಪವು ಬುದ್ಧಿ ಸ್ಮರಣಶಕ್ತಿ ಧಾರಣಾಶಕ್ತಿ ಅಗ್ನಿ ಬಲ ಆಯುಷ್ಯ ಶುಕ್ರ ಚಕ್ಷುಗಳಿಗೂ, ಬಾಲವೃದ್ಧರಿಗೂ, ಮಕ್ಕಳು ಕಾಂತಿ

ಸುಕುಮಾರತೆ ಮಧುರ ಸ್ವರಗಳನ್ನು ಬಯಸುವವರಿಗೂ, ಉರಃಕ್ಷತದಿಂದ ಕ್ಷೀಣರಾದವರಿಗೂ ಮತ್ತು ವಿಸರ್ಪ ಶಸ್ತ್ರ ಅಗ್ನಿದಾಹಗಳಿಂದ ಪೀಡಿತರಾದವರಿಗೂ ಹಿತಕರವು.

ಇದು ವಾತ ಪಿತ್ತ ವಿಷ ಉನ್ಮಾದ ಕ್ಷಯ ದಾರಿದ್ರ್ಯ ಜ್ವರಗಳನ್ನು ನಾಶಮಾಡುತ್ತವೆ. ಇದು ಎಲ್ಲ ಸ್ನೇಹಗಳಲ್ಲಿ ಶ್ರೇಷ್ಠವಾದದ್ದು. ಸಂಸ್ಕಾರಗಳಿಂದ ಅನೇಕ ಶಕ್ತಿಗಳನ್ನು ಹೊಂದಿ ಸಾವಿರಾರು ಕರ್ಮಗಳನ್ನು ಮಾಡುತ್ತದೆ. (೩೯)

**ಮದಾಪಸ್ಮಾರಮೂರ್ಛಾಯಶಿರಃಕರ್ಣಾಕ್ಷಿಯೋನಿಜಾನ್ ||**
**ಪುರಾಣಂ ಜಯತಿ ವ್ಯಾಧೀನ್ ವ್ರಣಶೋಧನರೋಪಣಮ್ ||೪೦||**

ಅರ್ಥ:— ಹಳೇತುಪ್ಪವು ಮದ ಅಪಸ್ಮಾರ ಮೂರ್ಛೆಗಳನ್ನೂ ತಲೆ ಕಿವಿ ಕಣ್ಣು ಯೋನಿ ರೋಗಗಳನ್ನೂ ಗೆಲ್ಲುವದು. ಹುಣ್ಣನ್ನು ಶುದ್ಧ ಮಾಡಿ ತುಂಬಿತರುವದು.

**ಟಿಪ್ಪಣೆ:—** ಹಳೇ ತುಪ್ಪವೆಂದರೆ ಹತ್ತು ವರ್ಷದ್ದು. ಆಗ್ಗೆ ಅದು ಶೀತ, ಲಾಕ್ಷಾರಸದ ಬಣ್ಣವುಳ್ಳದ್ದು, ಅತಿ ದುರ್ಗಂಧವಿರುವದು. ಇದಕ್ಕೂ ಹಳೆಯದು ಪ್ರಪುರಾಣವೆಂದು ಕರೆಯಲ್ಪಡುವದು. (೪೦)

**ಬಲ್ಯಾಃ ಕಿಲಾಟಪೀಯೂಷಕೂರ್ಚಿಕಾಮೋರಣಾದಯಃ ||**
**ಶುಕ್ರನಿದ್ರಾಕಫಕರಾ ವಿಷ್ಟಂಭಿಗುರುದೋಷಲಾಃ ||೪೧||**

ಅರ್ಥಃ— ಕಿಲಾಟ, ಗಿಣ್ಣು, ಕೂರ್ಚಿಕಾ, ಮೋರಣ ಮುಂತಾದವು ಶಕ್ತಿವರ್ಧಕ ಸ್ತಂಭಕ ಗುರು ದೋಷವರ್ಧನಗಳೂ ಆಗಿದ್ದು ಶುಕ್ರ ನಿದ್ದೆ ಕಫಗಳನ್ನುಂಟುಮಾಡುತ್ತವೆ.

**ಟಿಪ್ಪಣೆ:—** ಹಾಲಿನಲ್ಲಿ ಮೊಸರು ಹಾಕಿ ಕುದಿಸಲು ಉಂಟಾದ ಗಟ್ಟಿ ಮತ್ತು ದ್ರವಭಾಗವುಳ್ಳ ಪದಾರ್ಥವು ಕೂರ್ಚಿಕೆಯು. ಅದರಲ್ಲಿಯ ಗಟ್ಟಿ ಭಾಗವು ಕಿಲಾಟವು. ದ್ರವಭಾಗವು ಮೋರಣವು. ಪೀಯೂಷವೆಂದರೆ ಗಿಣ್ಣುವು (೪೧)

**ಗವ್ಯೇಕ್ಷೀರಘೃತೇ ಶ್ರೇಷ್ಠೇ ನಿಂದಿತೇ ಚಾವಿಸಂಭವೇ ||**

ಅರ್ಥ:— ಆಕಳ ಹಾಲು ತುಪ್ಪಗಳು ಎಲ್ಲಕ್ಕೂ ಶ್ರೇಷ್ಠ. ಉಣ್ಣಿ ಗುರಿಯವು ಎಲ್ಲಕ್ಕೂ ಕನಿಷ್ಠವು. (೪೧||)

## ಇಕ್ಷುವರ್ಗ

ಹಾಲಿನಂತೆ ಸಾರಕ ಸ್ನಿಗ್ಧ ಬೃಂಹಣವಾದ್ದರಿಂದ ಇಕ್ಷುವರ್ಗವನ್ನು ಹೇಳುತ್ತಾರೆ.

**ಇಕ್ಷೋಃ ರಸೋಃ ಗುರುಃ ಸ್ನಿಗ್ಧೋಃ ಬೃಂಹಣಃ ಕಫಮೂತ್ರಕೃತ್||೪೨||**
**ವೃಷ್ಯಃ ಶೀತೋಽಸ್ರಪಿತ್ತಘ್ನಃ ಸ್ವಾದುಪಾಕರಸಃ ಸರಃ ||**
**ಸೋಽಗ್ರೇಃ ಸಲವಣೋಃ, ದಂತಪೀಡಿತಃ ಶರ್ಕರಾಸಮಃ ||೪೩||**

ಅರ್ಥ— ಕಬ್ಬಿನ ರಸವು ಜಡ, ಸ್ನಿಗ್ಧ, ಪೌಷ್ಟಿಕ, ಕಫ ಮೂತ್ರ-ವರ್ಧಕ, ವೃಷ್ಯ, ಶೀತ, ರಕ್ತ-ಪಿತ್ತ-ನಾಶಕ, ಪಾಕರಸಗಳಲ್ಲಿ ಮಧುರ ಮತ್ತು ಸಾರಕವಿರುವದು. ಕಬ್ಬು ತುದಿಗೆ ಸ್ವಲ್ಪ ಉಪ್ಪು ಇರುವದು. ಹಲ್ಲಿನಿಂದ ಕಡಿದು ತಿಂದರೆ ಸಕ್ಕರೆಯಂತೆ ಸೀಯೊಗಿರುವದು. (೪೩)

**ಮೂಲಾಗ್ರಜಂತುಜಗ್ಧಾದಿಪೀಡನಾನ್ಮಲಸಂಕರಾತ್ ||**
**ಕಿಂಚಿತ್ಕಾಲಂ ವಿಧೃತ್ಯಾ ಚ ವಿಕೃತಿಂ ಯಾತಿ ಯಾಂತ್ರಿಕಃ ||೪೪||**
**ವಿದಾಹೀಃ ಗುರುವಿಷ್ಟಂಭೀಃ ತೇನಾಸೌ.**

ಅರ್ಥ:— ಗಾಣದಿಂದ ತೆಗೆದ ಕಬ್ಬಿನ ರಸವು ತುದಿ ಬುಡ ಹುಳಿತ ಭಾಗಗಳನ್ನು ಹಿಂಡುವದರಿಂದಲೂ ಹೊಲಸು ಕೂಡೋಣದರಿಂದಲೂ ಕೆಲವು ವೇಳೆ ಇಡೋಣದರಿಂದಲೂ ವಿಕೃತವಾಗುತ್ತದೆ. ಆದ್ದರಿಂದ ಅದು ವಿದಾಹಿ ಜಡ ಸ್ತಂಭಕವಾಗಿರುವದು.

**ಟಿಪ್ಪಣೆ:**— ಯದ್ಯಪಿ ಎಲ್ಲ ಪದಾರ್ಥಗಳು ಜಠರಾಗ್ನಿಯ ಸಂಯೋಗದಿಂದ ಪಚನವಾಗುವ ಕಾಲದಲ್ಲಿ ನಡುವಿನ ಅವಸ್ಥೆಯಲ್ಲಿ ವಿದಾಹವನ್ನುಂಟುಮಾಡುತ್ತವೆ. ಆದರೆ ಇವು ವಿದಾಹಾವಸ್ಥೆಯಲ್ಲಿ ಬಹಳ ಹೊತ್ತು ಇದ್ದು ಪಚನವಾಗುವವು. ಆದ್ದರಿಂದ ಇವಕ್ಕೆ ವಿದಾಹಿ ಎನ್ನುವರು. (೪೪)

**..................................ತತ್ರ ಪೌಂಡ್ರಕಃ ||**
**ಶೈತ್ಯಪ್ರಸಾದಮಾಧುರ್ಯೈರ್ವರಸ್ತಮನು ವಾಂಶಿಕಃ ||೪೫||**

**ಶಾತಪರ್ವಕಕಾಂತಾರನೈಪಾಲಾದ್ಯಾಸ್ತತಃ ಕ್ರಮಾತ್ ||**
**ಸಕ್ಷಾರಾಃ ಸಕಷಾಯಾಶ್ಚ ಸೋಷ್ಣಾಃ ಕಿಂಚಿದ್ವಿದಾಹಿನಃ ||೪೬||**

ಅರ್ಥ:— ಇದರಲ್ಲಿ ಬಿಳೀ ಕಬ್ಬು ಶೀತ ಸ್ವಚ್ಛ ಮಧುರವಾಗಿರುವದರಿಂದ ಎಲ್ಲಕ್ಕೂ ಶ್ರೇಷ್ಠವು. ಅದರ ತರುವಾಯ ಕರೇ ಕಬ್ಬು ಅದಕ್ಕಿಂತ ಶಾತಪರ್ವಕ, ಕಾಂತಾರ, ನೈಪಾಳ ಎಂಬ ಕಬ್ಬುಗಳು ಕ್ರಮದಿಂದ ಹೀನವಾದವು. ಇವು ಸ್ವಲ್ಪ ಉಪ್ಪು ಒಗರು ಉಷ್ಣ ವಿದಾಹಿಯೂಗಿರುವವು. (೪೬)

**ಫಾಣಿತಂ ಗುರ್ವಭಿಷ್ಯಂದಿ ಚಯಕೃನ್ಮೂತ್ರಶೋಧನಮ್ ||**

ಅರ್ಥ:— ಕಾಕಂಬಿಯು ಜಡ ಕಫಕರ ತ್ರಿದೋಷಕರ ಮತ್ತು ಮೂತ್ರಶೋಧಕವಾಗಿರುವದು. (೪೬||)

**ನಾತಿಶ್ಲೇಷ್ಮಕರೋ ಧೌತಃ ಸೃಷ್ಟಮೂತ್ರಶಕೃದ್ಗುಡಃ ||೪೭||**

ಅರ್ಥ:— ಸ್ವಚ್ಛ ಬೆಲ್ಲವು ವಿಶೇಷ ಕಫ ಮಾಡುವದಿಲ್ಲ. ಮತ್ತು ಮಲ-ಮೂತ್ರ ಪ್ರವೃತ್ತಿಯನ್ನು ಮಾಡುವದು.

**ಪ್ರಭೂತಕೃಮಿಮಜ್ಜಾಸೃಙ್ಮೇದೋಮಾಂಸಕಫೋಽಪರಃ ||**

ಅರ್ಥ:— ಸ್ವಚ್ಛಮಾಡದ ಬೆಲ್ಲವು ಕೃಮಿ ಮಜ್ಜೆ ರಕ್ತ ಮೇದ ಮಾಂಸ ಕಫಗಳನ್ನು ಹೆಚ್ಚಿಸುವದು. (೪೭||)

**ಹೃದ್ಯಃ ಪುರಾಣಃ ಪಥ್ಯಶ್ಚ, ನವಃ ಶ್ಲೇಷ್ಮಾಗ್ನಿಸಾದಕೃತ್ ||೪೮||**

ಅರ್ಥ:— ಹಳೇ ಬೆಲ್ಲವು ಪಥ್ಯವೂ ಹೃದಯಕ್ಕೆ ಹಿತಕರವೂ ಆಗಿದೆ. ಹೊಸ ಬೆಲ್ಲವು ಕಫ ಅಗ್ನಿಮಾಂದ್ಯಗಳನ್ನು ಮಾಡುವದು. (೪೮)

**ವೃಷ್ಯಾಃ ಕ್ಷೀಣಕ್ಷತಹಿತಾ ರಕ್ತಪಿತ್ತಾನಿಲಾಪಹಾಃ ||**
**ಮತ್ಸ್ಯಂಡಿಕಾಖಂಡಸಿತಾಃ ಕ್ರಮೇಣ ಬಲವತ್ತರಾಃ ||೪೯||**

ಅರ್ಥ:— ರಾಬ, ಕಲ್ಲುಸಕ್ಕರೆ, ಸಕ್ಕರೆಗಳು ವೀರ್ಯವರ್ಧಕ, ಸೊರಗಿದವರಿಗೂ ಗಾಯವಾದವರಿಗೂ ಹಿತಕರವಾಗಿದ್ದು

ರಕ್ತ-ಪಿತ್ತ ಮತ್ತು ವಾತ-ನಾಶಕವಾಗಿರುವವು. ಕ್ರಮದಿಂದ ಒಂದ ಕ್ಕಿಂತೊಂದು ಶ್ರೇಷ್ಠವು. (೪೯)

**ತದ್ಗುಣಾ ತಿಕ್ತಮಧುರಾ ಕಷಾಯಾ ಯಾಸಶರ್ಕರಾ ||**

ಅರ್ಥ:— ಯಾಸಸಕ್ಕರೆಯು ಮೇಲಿನ ಗುಣವುಳ್ಳದ್ದು ಕಹಿ ಮಧುರ ಒಗುರು ಇರುವದು. (೪೯||)

**ದಾಹತೃಟ್‌ಛರ್ದಿಮೂರ್ಛಾಸೃಕ್‌ಪಿತ್ತಘ್ನ್ಯಃ ಸರ್ವಶರ್ಕರಾಃ ||೫೦||**

ಅರ್ಥ:— ಎಲ್ಲ ಸಕ್ಕರೆಗಳು ದಾಹ ನೀರಡಿಕೆ ವಾಂತಿ ಮೂರ್ಛಾ ರಕ್ತ-ಪಿತ್ತಗಳನ್ನು ಕಳೆಯುವವು. (೫೦)

**ಶರ್ಕರೇಕ್ಷುವಿಕಾರಾಣಾಂ ಫಾಣಿತಂ ಚ ವರಾವರೇ ||**

ಅರ್ಥ:— ಕಬ್ಬಿನ ಪದಾರ್ಥಗಳಲ್ಲಿ ಸಕ್ಕರೆಯು ಎಲ್ಲಕ್ಕೂ ಶ್ರೇಷ್ಠವೂ, ಕಾಕಂಬಿಯು ಎಲ್ಲಕ್ಕೂ ಕನಿಷ್ಠವೂ ಇರುವದು. (೫೦||)

**ಚಕ್ಷುಷ್ಯಂ ಛೇದಿ ತೃಟ್‌ಶ್ಲೇಷ್ಮವಿಷಹಿಧ್ಮಾಸ್ರಪಿತ್ತನುತ್ ||೫೧||**
**ಮೇಹಕುಷ್ಠಕೃಮಿಛರ್ದಿಶ್ವಾಸಕಾಸಾತಿಸಾರಜಿತ್ ||**
**ವ್ರಣಶೋಧನಸಂಧಾನರೋಪಣಂ ವಾತಲಂ ಮಧು ||೫೨||**
**ರೂಕ್ಷಂ ಕಷಾಯಮಧುರಂ, ತತ್ತುಲ್ಯಾ ಮಧುಶರ್ಕರಾ ||**

ಅರ್ಥ:— ಜೇನತುಪ್ಪವು ಕಣ್ಣಿಗೆ ಹಿತಕರವು. ದೇಹದಲ್ಲಿದ್ದ ಗಟ್ಟಿಯಾದ ಪದಾರ್ಥಗಳನ್ನು ಕರಗಿಸುವದು. ನೀರಡಿಕೆ ಕಫ ವಿಷ ಬಿಕ್ಕು ರಕ್ತ-ಪಿತ್ತ ಪ್ರಮೇಹ ಕುಷ್ಠ ಕ್ರಿಮಿ ವಾಂತಿ ದಮ್ಮು ಕೆಮ್ಮು ಅತಿಸಾರ ಗಳನ್ನು ಕಳೆಯುವದು. ವ್ರಣವನ್ನು ಶುದ್ಧಮಾಡಿ ಕೂಡಿಸಿ ಮಾಯಿಸು ವದೂ, ವಾತಕಾರಕವೂ ಆಗಿರುವದು. ರುಕ್ಷ ಒಗುರು ಸಿಹಿ ಇರುವದು. ಅದರಂತೆಯೇ ಜೇನತುಪ್ಪದ ಸಕ್ಕರೆಯೂ ಇರುವದು.

**ಟಿಪ್ಪಣಿ:—** ಜೇನತುಪ್ಪವು ಭ್ರಾಮರ, ಪೌತ್ತಿಕ, ಕ್ಷೌದ್ರ, ಮಾಕ್ಷಿಕ ಎಂದು ನಾಲ್ಕು ಪ್ರಕಾರವಿರುವದು. ಭ್ರಾಮರದ ವರ್ಣವು ಬೆಳ್ಳಗೆ, ಪೈತ್ತಿಕದ ವರ್ಣವು ತುಪ್ಪದಂತೆ, ಕ್ಷೌದ್ರದ ವರ್ಣವು ನಸುಗೆಂಪು, ಮಾಕ್ಷಿಕದ ವರ್ಣವು

ಎಣ್ಣೆಯಂತೆ ಇರುವದು. ಭ್ರಾಮರವು ತರ್ಪಕ ಮತ್ತು ಮಧುರ. ಪೌತ್ತಿಕವು ತ್ರಿದೋಷಕರ. ಕ್ಷೌದ್ರವು ಜಡ ಕಫಕರ ರುಕ್ಷ ಗುರು. ಮಾಕ್ಷಿಕವು ಲಘು, ಮಧುರ, ವ್ರಣದಲ್ಲಿ ಹಿತಕರವಾಗಿರುವದು.

ಹೊಸ ಜೇನತುಪ್ಪವು ಜಡ ಮಧುರ ಕಫಕಾರಕವು. ಹಳೆಯದು ಇದರ ವಿಪರೀತವಾಗಿರುವದು. 'ಸಂಗ್ರಹ'ದಲ್ಲಿ ಇದು ಯೋಗವಾಹಿ ಎಂದು ಹೇಳಲ್ಪಟ್ಟಿದೆ. ಯೋಗವಾಹಿ ಎಂದರೆ ಕೆಲವರು ''ಯಾವ ದ್ರವ್ಯವು ಎರಡನೆಯ ದ್ರವ್ಯದೊಡನೆ ಕೂಡಿ ತನ್ನ ಸ್ವಭಾವವನ್ನು ಬಿಟ್ಟು ಅದರ ಸ್ವಭಾವವನ್ನು ಹೊಂದುವದೋ ಅದು'' ಎಂದು ಹೇಳುವರು. ಆದರೆ ಅದು ಸರಿಯಲ್ಲ. ಹಾಗಾದರೆ ಯೋಗವಾಹಿ ದ್ರವ್ಯದ ಸಂಯೋಗವು ವ್ಯರ್ಥವಾಗುವದು. ಯಾಕೆಂದರೆ ಮೊದಲಿನ ದ್ರವ್ಯದ ಸ್ವಭಾವದಲ್ಲಿ ಇದರಿಂದ ಏನೂ ಹೆಚ್ಚು ಕಡಿಮೆಯಾಗುವದಿಲ್ಲ. ಹಲವರು ''ಯಾವ ದ್ರವ್ಯವು ಎರಡನೇ ದ್ರವ್ಯದೊಡನೆ ಕೂಡಿ ಅದರ ಶಕ್ತಿಯನ್ನು ಹೆಚ್ಚಿಸುವದೋ ಅದು ಯೋಗವಾಹಿ'' ಎಂದು ಹೇಳುವರು. ಹಾಗೆ ಅಂದರೆ ಸಮಾನಗುಣವುಳ್ಳ ಒಂದು ವಸ್ತುವು ಜೇನತುಪ್ಪದ ಶಕ್ತಿಯನ್ನು ಹೆಚ್ಚು ಮಾಡಿದರೆ ಅದಾದರೂ ಯೋಗವಾಹಿಯಾಗಬೇಕಾದೀತು. ಕಾರಣ ಇದೂ ಸರಿ ಅಲ್ಲ. ಬೇರೆ ಕೆಲವರು ''ಯಾವ ದ್ರವ್ಯವು ಬೇರೆ ದ್ರವ್ಯದಿಂದ ಕೂಡಿ ಅದರಲ್ಲಿದ್ದ ಗುಣವನ್ನು ಹೆಚ್ಚಿಸುವದೋ ಮತ್ತು ಅದರ ಅವಿರುದ್ಧವಾದಂಥ ತನ್ನ ಕಾರ್ಯವನ್ನು ಮಾಡುವದೋ ಅದು ಯೋಗವಾಹಿ. ಜೇನತುಪ್ಪವು ಮದನಫಲದಿಂದ ಯುಕ್ತವಾಗಿ ವಮನವನ್ನು ಮಾಡುವದು; ಆದರೆ ಅದರ ವಿರುದ್ಧವಾದ ತನ್ನ ವಮನ ನಿವಾರಣ ಕಾರ್ಯವನ್ನು ಮಾಡದು; ಅದರಂತೆ ಅಳ್ಳೀಕಾಯಿಯೊಡನೆ ಕೂಡಿ ವಿರೇಚನವನ್ನು ಮಾಡುವದು, ತನ್ನ ಸ್ತಂಭನಗುಣವನ್ನು ಬಿಟ್ಟು ಬಿಡುವದು'' ಎಂದು ಹೇಳುವರು.

ಜೇನು ವಾತಕರವೆಂದು ಇಲ್ಲಿ ಹೇಳಿದೆ. ಸುಶ್ರುತಾಚಾರ್ಯರು ತ್ರಿದೋಷಶಾಮಕವೆಂದು ಹೇಳುವರು. ಈ ವಿರೋಧಕ್ಕೆ ಹೇಮಾದ್ರಿಯು ಕೆಳಗಿನ ಸಮಾಧಾನವನ್ನು ಹೇಳುತ್ತಾನೆ. 'ಕೇವಲ ವಾತವಿದ್ದಲ್ಲಿ ಜೇನು ಕೊಟ್ಟರೆ ಅದು ವಾತಕರವಾಗುತ್ತದೆ. ಆದರೆ ವಾತನಾಶಕ ಔಷಧಗಳಿಂದ ಮಿಶ್ರವಾದ ಜೇನು ಪಿತ್ತ-ಕಫಗಳಿಂದ ಕೂಡಿದ ವಾತ-ವಿಕಾರದಲ್ಲಿ ವಾತ-ನಾಶಕವಾಗುತ್ತದೆ.'

ಚರಕಾಚಾರ್ಯರು ಜೇನು ಗುರುವೆಂದೂ, ಸುಶ್ರುತಾಚಾರ್ಯರು ಲಘುವೆಂದೂ ಹೇಳುವರು. ಈ ವಿರೋಧವನ್ನು ಗುಣದಿಂದ ಗುರುವೆಂದೂ ಪಾಕದಿಂದ ಲಘುವೆಂದೂ ಪರಿಹರಿಸಿರುವರು. ಚರಕಾಚಾರ್ಯರು ಗುಣಗಳಲ್ಲಿಯೇ ಗುರು ಲಘು ಭೇದಗಳನ್ನು ಹೇಳುವರು. ಆದರೆ ಸುಶ್ರುತಾಚಾರ್ಯರು ಪಾಕಗಳಲ್ಲಿಯೂ ಆ ಭೇದವನ್ನು ಹೇಳುವರು. ಯಾವದು ತಡವಾಗಿ ಬೇಯುತ್ತದೋ

ಆದು ಗುರು ಗುಣವುಳ್ಳದ್ದು; ಯಾವದು ತೀವ್ರವಾಗಿಯೋ, ಅದು ಲಘು ಗುಣವುಳ್ಳದ್ದು. ಯಾವದು ಪಕ್ವವಾದ ನಂತರ ಮಲಮೂತ್ರಗಳನ್ನು ಪ್ರವರ್ತಿಸುವದೋ, ಕಫವನ್ನುಂಟು ಮಾಡುವದೋ ಅದು ಗುರುಪಾಕವು; ಯಾವದು ಮಲ ಮೂತ್ರಗಳನ್ನು ಬಂಧಿಸುವದೋ, ವಾತವನ್ನುಂಟುಮಾಡುವದೋ ಅದು ಲಘು ಪಾಕವು. (೫೨॥)

**ಉಷ್ಣ ಮುಷ್ಣಾರ್ತಮುಷ್ಣೇ ಚ ಯುಕ್ತಂ ಚೋಷ್ಣೈರ್ನಿಹಂತಿ ತತ್ ॥೫೩॥**

ಅರ್ಥಃ— ಜೇನ ತುಪ್ಪವನ್ನು ಉಷ್ಣಮಾಡಿ ಅಥವಾ ಉಷ್ಣ ವಿಕಾರದವನಿಗೆ ಅಥವಾ ಉಷ್ಣದೇಶ ಕಾಲದಲ್ಲಿ ಅಥವಾ ಉಷ್ಣ ಪದಾರ್ಥಗಳೊಡನೆ ಕೊಟ್ಟರೆ ಅವನನ್ನು ಕೊಲ್ಲುವದು. (೫೩)

**ಪ್ರಚ್ಛರ್ದನೇ ನಿರೂಹೇ ಚ ಮಧೂಷ್ಣಂ ನ ನಿವಾರ್ಯತೇ ॥**
**ಅಲಬ್ಧಪಾಕಮಾಶ್ವೇವ ತಯೋರ್ಯಸ್ಮಾನ್ನಿವರ್ತತೇ ॥೫೪॥**

ಅರ್ಥಃ— ವಾಮಕ ಔಷಧ ಮತ್ತು ನಿರೂಹಗಳಲ್ಲಿ ಮಾತ್ರ ಉಷ್ಣ ಜೇನುತುಪ್ಪವು ಬಾಧಕವಾಗದು. ಯಾಕಂದರೆ ಅದು ಪಾಕವಾಗದೆ ಹಾಗೇ ತಿರುಗಿ ಬರುತ್ತದೆ. (೫೪)

## ತೈಲವರ್ಗ

ಆಹಾರದಲ್ಲಿ ಮದ್ಯಕ್ಕಿಂತ ಹೆಚ್ಚು ಉಪಯುಕ್ತವಾದ್ದರಿಂದ ಅದಕ್ಕಿಂತ ಮೊದಲು ತೈಲವರ್ಗವನ್ನು ಹೇಳುತ್ತಾರೆ.

**ತೈಲಂ ಸ್ವಯೋನಿವತ್.....................................**

ಅರ್ಥಃ— ತೈಲದ ಗುಣವು ಅದು ಯಾತರಿಂದ ಹೊರಡುತ್ತದೆಯೋ ಅದರಂತೆ ಇರುತ್ತದೆ. (೫೪॥)

**........ತತ್ರ ಮುಖ್ಯಂ ತೀಕ್ಷ್ಣಂ ವ್ಯವಾಯಿ ಚ ॥**
**ತ್ವಗ್ದೋಷಕೃದಚಕ್ಷುಷ್ಯಂ ಸೂಕ್ಷ್ಮೋಷ್ಣಂ ಕಫಕೃನ್ನ ಚ ॥ ೫॥**

**ಕೃಶಾನಾಂ ಬೃಂಹಣಾಯಾಲಂ ಸ್ಥೂಲಾನಾಂ ಕರ್ಶನಾಯ ಚ ॥**
**ಬದ್ಧವಿಟ್ಕಂ ಕೃಮಿಘ್ನಂ ಚ ಸಂಸ್ಕಾರಾತ್ಸರ್ವರೋಗಜಿತ್ ॥೫೬॥**

ಅರ್ಥ:— ಅವರಲ್ಲಿ ಮುಖ್ಯವಾದ ಎಳ್ಳೆಣ್ಣೆಯು ತೀಕ್ಷ್ಣವೂ, ಶರೀರವನ್ನೆಲ್ಲ ತೀವ್ರ ಹಬ್ಬುವದೂ, ತ್ವಚೆಯಲ್ಲಿ ದೋಷವನ್ನುಂಟುಮಾಡುವದೂ, ಕಣ್ಣಿಗೆ ಅಹಿತವೂ, ಸೂಕ್ಷ್ಮವೂ (ಸಣ್ಣ ಅವಯವಗಳಲ್ಲಿ ಕೂಡ ಸೇರುವದೂ), ಉಷ್ಣವೂ ಇರುತ್ತದೆ. ಮತ್ತು ಕಫವನ್ನುಂಟುಮಾಡುವದಿಲ್ಲ. ಕೃಶಜನರನ್ನು ಸ್ಥೂಲರನ್ನಾಗಿಯೂ ಸ್ಥೂಲರನ್ನು ಕೃಶರನ್ನಾಗಿಯೂ ಮಾಡುವದು. ಮಲಬಂಧಕವೂ, ಕೃಮಿಘ್ನವೂ, ಬೇರೆ ಬೇರೆ ಸಂಸ್ಕಾರದಿಂದ ಎಲ್ಲ ದೋಷಗಳನ್ನು ನಾಶಪಡಿಸುವದೂ ಆಗಿರುವದು.

**ಟಿಪ್ಪಣಿ:**— ಒಂದೇ ವಸ್ತುವು ವಿರುದ್ಧಗಳಾದ ಬೃಂಹಣವನ್ನೂ ಕರ್ಶನವನ್ನೂ ಮಾಡುವದು ಚಮತ್ಕಾರವಾಗಿ ತೋರುವದು. ಆದರೆ ತೈಲವು ಕೃಶಜನರ ಸಂಕುಚಿತವಾದ ಸ್ರೋತಸ್ಸುಗಳನ್ನು ಸೇರಿ ಶುದ್ಧಮಾಡಿ ರಸ ಧಾತುವಿಗೆ ಮಾರ್ಗವನ್ನು ಮಾಡಿಕೊಡುವದರಿಂದ ರಸಧಾತುವು ಎಲ್ಲ ಶರೀರವನ್ನು ಸಂಚರಿಸಿ ಧಾತುಗಳನ್ನು ಪೋಷಿಸುವದು. ಆದರಿಂದ ಮನುಷ್ಯನು ಪುಷ್ಟನಾಗುವನು. ಇದರಂತೆ ಸ್ಥೂಲಜನರ ಸೂಕ್ಷ್ಮ ಸ್ರೋತಸ್ಸುಗಳನ್ನು ಪ್ರವೇಶಿಸಿ ಅಲ್ಲಿರುವ ಮೇದಸ್ಸನ್ನು ನಾಶಮಾಡುವದರಿಂದ ಅವರು ಕೃಶರಾಗಿ ಧಾತುಸಾಮ್ಯವನ್ನು ಹೊಂದುವರು.

ಇಲ್ಲಿ ತಿಲ-ತೈಲವು ತ್ವಗ್ದೋಷಕಾರಕ, ಅಚಕ್ಷುಷ್ಯ ಎಂದು ಹೇಳಿರುವರು. ಆದರೆ ಸುಶ್ರುತದಲ್ಲಿ ತ್ವಚೆಯನ್ನು ಸ್ವಚ್ಛಮಾಡುವದೂ ಚಕ್ಷುಷ್ಯವೂ ಎಂದು ಹೇಳಿದ್ದಾರೆ. ಇದರ ವಿರೋಧವನ್ನು ಹೇಮಾದ್ರಿಯು ಮೊದಲಿನದು ಆಹಾರದೊಡನೆ ತಕ್ಕೊಂಡಾಗ್ಗೆ ಎಂದೂ ಎರಡನೆಯದು ಅಭ್ಯಂಗದಲ್ಲಿ ಎಂದೂ ಪರಿಹರಿಸಿರುವನು. ವಾತ ಕಫ ನಾಶಕತ್ವವು ಎರಡೂ ಕೂಡಿದಾಗ್ಗೆ ಎಂದೂ ಪರಿಹರಿಸಿರುವನು. (೫೬)

**ಸತ್ತಿಕ್ತೋಷಣಮೈರಂಡಂ ತೈಲಂ ಸ್ವಾದು ಸರಂ ಗುರು ||**
**ವರ್ಧ್ಮಗುಲ್ಮಾನಿಲಕಫಾನುದರಂ ವಿಷಮಜ್ವರಮ್ ||೫೭||**

**ರುಕ್‌ಶೋಫೌ ಚ ಕಟೀಗುಹ್ಯಕೋಷ್ಠಪೃಷ್ಠಾಶ್ರಯೌ ಜಯೇತ್ ||**
**ತೀಕ್ಷ್ಣೋಷ್ಣಂ ಪಿಚ್ಛಿಲಂ ವಿಸ್ರಂ, ರಕ್ತೈರಂಡೋದ್ಭವಂ ತ್ವತಿ ||೫೮||**

ಅರ್ಥ:— ಔಡಲ-ಎಣ್ಣೆಯು ಕಹಿ ಕಾರ ಸಿಹಿ ಸಾರಕ ಜಡವಿದ್ದು ಅಂಡವೃದ್ಧಿ, ಗುಲ್ಮ, ವಾತ, ಕಫ, ಉದರ, ವಿಷಮಜ್ವರ ಮತ್ತು ಟೊಂಕ ಗುಹ್ಯ ಹೊಟ್ಟೆ ಬೆನ್ನುಗಳಲ್ಲಿದ್ದ ಬೇನೆ ಬಾವುಗಳನ್ನು ಗೆಲ್ಲುವದು. ತೀಕ್ಷ್ಣ

ಉಷ್ಣ ಲೋಳೆ ಕೆಟ್ಟವಾಸನೆಯುಳ್ಳದ್ದೂ ಇರುತ್ತದೆ. ಅದರಲ್ಲಿ ಕೆಂಪು ಔಡಲ-ಎಣ್ಣೆಯಲ್ಲಿಯಂತೂ ಈ ತೀಕ್ಷ್ಣಾದಿ ಗುಣಗಳು ಬಹಳವಾಗಿರುತ್ತವೆ.

**ಕಟೂಷ್ಣಂ ಸಾರ್ಷಪಂ ತೀಕ್ಷ್ಣಂ ಕಫಶುಕ್ರಾನಿಲಾಪಹಮ್ ||**
**ಲಘು ಪಿತ್ತಾಸ್ರಕೃತ್ ಕೋಠಕುಷ್ಠಾರ್ಶೋವ್ರಣಜಂತುಜಿತ್ ||೫೯||**

ಅರ್ಥಃ— ಸಾಸಿವೆ ಎಣ್ಣೆಯು ಕಾರ ಉಷ್ಣ ತೀಕ್ಷ್ಣ ಲಘುವಿದ್ದು ರಕ್ತ-ಪಿತ್ತಗಳನ್ನುಂಟುಮಾಡುವದು. ಕಫ ಶುಕ್ರ ವಾತ ಶೀತ-ಪಿತ್ತ ಕುಷ್ಠ ಮೂಲವ್ಯಾಧಿ ವ್ರಣ ಜಂತುಗಳನ್ನು ನಾಶಪಡಿಸುವದು. (೫೯)

**ಆಕ್ಷಂ ಸ್ವಾದು ಹಿಮಂ ಕೇಶ್ಯಂ ಗುರು ಪಿತ್ತಾನಿಲಾಪಹಮ್ ||**

ಅರ್ಥಃ— ತಾರೀಕಾಯಿ-ಎಣ್ಣೆಯು ಮಧುರ, ಶೀತ, ಗುರು, ಕೂದಲಿಗೆ ಹಿತಕರವೂ, ಪಿತ್ತ-ವಾತಗಳ ನಾಶಕವೂ ಇರುವದು. (೫೯||)

**ನಾತ್ಯುಷ್ಣಂ ನಿಂಬಜಂ ತಿಕ್ತಂ ಕೃಮಿಕುಷ್ಠಕಫಪ್ರಣುತ್ ||೬೦||**

ಅರ್ಥಃ— ಬೇವಿನ ಎಣ್ಣೆಯು ಸ್ವಲ್ಪ ಉಷ್ಣ ಕಹಿ ಇದ್ದು ಕ್ರಿಮಿ ಕುಷ್ಠ ಕಫಗಳನ್ನು ಕಳೆಯುವದು. (೬೦)

**ಉಮಾಕುಸುಂಭಜಂ ಚೋಷ್ಣಂ ತ್ವಗ್ದೋಷಕಫಪಿತ್ತಕೃತ್ ||**

ಅರ್ಥಃ— ಅಗಸೆಯ ಮತ್ತು ಕುಸುಬೆಯ ಎಣ್ಣೆಗಳು ಉಷ್ಣವಿದ್ದು ತ್ವಗ್ರೋಗ ಕಫ ಪಿತ್ತಗಳನ್ನುಂಟುಮಾಡುತ್ತವೆ. (೬೦||)

**ವಸಾ ಮಜ್ಜಾ ಚ ವಾತಘ್ನೌ ಬಲಪಿತ್ತಕಫಪ್ರದೌ ||೬೧||**
**ಮಾಂಸಾನುಗಸ್ವರೂಪೌ ಚ, ವಿದ್ಯಾನ್ಮೇದೋಽಪಿ ತಾವಿವ ||**

ಅರ್ಥಃ— ನೆಣ ಮತ್ತು ಮಜ್ಜಾ, ಇವು ವಾತನಾಶಕ, ಬಲ ಪಿತ್ತ ಕಫಗಳನ್ನುಂಟುಮಾಡುವಂಥವು ಆಗಿದ್ದು, ಆಯಾ ಪ್ರಾಣಿಗಳ ಮಾಂಸದ ಗುಣವುಳ್ಳವು ಇರುತ್ತವೆ. ಇದರಂತೆಯೇ ಮೇದದ ಗುಣವೂ ಇರುತ್ತದೆ. (೬೧)

## ಮದ್ಯವರ್ಗ

ತೀಕ್ಷ್ಣ ಉಷ್ಣ ಸೂಕ್ಷ್ಮ ಗುಣದ ಸಾದೃಶ್ಯದಿಂದ ತೈಲವರ್ಗದನಂತರ ಮದ್ಯವರ್ಗವನ್ನು ಹೇಳುತ್ತಾರೆ.

**ದೀಪನಂ ರೋಚನಂ ಮದ್ಯಂ ತೀಕ್ಷ್ಣೋಷ್ಣಂ ತುಷ್ಟಿಪುಷ್ಟಿದಮ್ ॥೬೨॥**

**ಸಸ್ವಾದುತಿಕ್ತಕಟುಕಮಮ್ಲಪಾಕರಸಂ ಸರಮ್ ॥**
**ಸಕಷಾಯಂ ಸ್ವರಾರೋಗ್ಯಪ್ರತಿಭಾವರ್ಣಕೃಲ್ಲಘು ॥೬೩॥**

**ನಷ್ಟನಿದ್ರಾಽತಿನಿದ್ರೇಭ್ಯೋ ಹಿತಂ ಪಿತ್ತಾಸ್ರದೂಷಣಮ್ ॥**
**ಕೃಶಸ್ಥೂಲಹಿತಂ ರೂಕ್ಷಂ ಸೂಕ್ಷ್ಮಂ ಸ್ರೋತೋವಿಶೋಧನಮ್ ॥೬೪॥**

**ವಾತಶ್ಲೇಷ್ಮಹರಂ ಯುಕ್ತ್ಯಾ ಪೀತಂ ವಿಷವದನ್ಯಥಾ ॥**

ಅರ್ಥಃ— ಮದ್ಯವು ದೀಪಕ ರೋಚಕ ತೀಕ್ಷ್ಣ ಉಷ್ಣ ತುಷ್ಟಿ ಪುಷ್ಟಿಗಳನ್ನು ಕೊಡುವಂತಹದೂ, ಮಧುರ, ಕಹಿ, ಕಾರ, ಒಗುರು, ಲಘು, ವಿಪಾಕ ಮತ್ತು ರಸದಲ್ಲಿ ಹುಳಿ, ಸಾರಕ, ಸ್ವರ ಆರೋಗ್ಯ ಬುದ್ಧಿ ವರ್ಣ ಗಳನ್ನುಂಟುಮಾಡುವದೂ, ನಿದ್ದೆ ಇಲ್ಲದವರಿಗೂ ಅತಿ ನಿದ್ದೆಯವರಿಗೂ ಹಿತಕರವೂ, ರಕ್ತ-ಪಿತ್ತಕಾರಕವೂ ಮತ್ತು ಕೃಶ ಮತ್ತು ಸ್ಥೂಲರಿಗೆ ಹಿತಕರವೂ ಆಗಿದೆ. ಮತ್ತು ರುಕ್ಷ, ಸೂಕ್ಷ್ಮ, ಸ್ರೋತಸ್ಸುಗಳ ಶುದ್ಧಿ ಕರ, ವಾತ ಕಫನಾಶಕವಿರುತ್ತದೆ. ಯೋಗ್ಯ ರೀತಿಯಿಂದ ಉಪಯೋಗಿಸಿ ದರೆ ಮಾತ್ರ ಈ ಗುಣವನ್ನು ಕೊಡುತ್ತದೆ. ಇಲ್ಲವಾದರೆ ಅದನ್ನು ವಿಷದಂತೆ ತಿಳಿಯಬೇಕು.

ಟಿಪ್ಪಣೀ— ಮದ್ಯವು ನಿದ್ದೆಯ ಉತ್ಪತ್ತಿ ನಾಶ, ಈ ಎರಡೂ ವಿರುದ್ಧ ಧರ್ಮಗಳನ್ನುಂಟುಮಾಡುತ್ತದೆ ಎಂಬುದಕ್ಕೆ ಕೆಲವರು "ಕೆಲವು ಮದ್ಯಗಳು ನಿದ್ದೆ ಯನ್ನು ಉಂಟುಮಾಡುವವು, ಕೆಲವು ನಾಶಮಾಡುವವು" ಎಂದು ಅರ್ಥವನ್ನು ಹೇಳುವರು. ಕೆಲವು ಜನರು "ಒಂದೇ ಮದ್ಯವು ತನ್ನ ಪ್ರಭಾವಗುಣದಿಂದ ಹೀಗೆ ಮಾಡುವದು" ಎಂದು ಹೇಳುವರು. ಹೇಮಾದ್ರಿಯು, "ಅವಸ್ಥಾಭೇದದಿಂದ ಈ ಎರಡೂ ಕಾರ್ಯವನ್ನು ಮಾಡುವದು. ವಾತ-ವೃದ್ಧಿಯಾದಾಗ್ಗೆ ನಿದ್ದೆ ಹತ್ತದು; ಆಗ್ಗೆ ಮದ್ಯವು ವಾತವನ್ನು ನಾಶಿಸಿ ನಿದ್ದೆ ತರುವದು. ಕಫ-ವೃದ್ಧಿಯಾಗಿ ನಿದ್ದೆ ಹೆಚ್ಚು ಆದಾಗ್ಗೆ ಕಫ-ನಾಶಮಾಡಿ ನಿದ್ದೆ ಕಡಿಮೆ ಮಾಡುವದು.'' ಎಂದು ಹೇಳು ವನು. ಕೃಶ ಸ್ಥೂಲ ಹಿತತ್ವವು ತೈಲದಂತೆ ತಿಳಿಯಬೇಕು. (೬೪॥)

**ಗುರುಸ್ತ್ರಿದೋಷಜನನಂ ನವಂ, ಜೀರ್ಣಮತೋಽನ್ಯಥಾ ॥೬೫॥**

ಅರ್ಥಃ— ಹೊಸ ಮದ್ಯವು ಜಡ ಮತ್ತು ತ್ರಿದೋಷ ಜನಕವು. ಆದರೆ ಹಳೇ ಮದ್ಯವು ಇದರ ವಿಪರೀತ (ಲಘು ಮತ್ತು ತ್ರಿದೋಷ ನಾಶಕ) ಆಗಿರುವದು. (೬೫)

**ಪೇಯಂ ನೋಷ್ಣೋಪಚಾರೇಣ ನ ವಿರಿಕ್ತಕ್ಷುಧಾತುರೈಃ॥**
**ನಾತ್ಯರ್ಥತೀಕ್ಷ್ಣಮೃದ್ವಲ್ಪಸಂಭಾರಂ ಕಲುಷಂ ನ ಚ ॥೬೬॥**

ಅರ್ಥಃ— ಅದನ್ನು ಉಷ್ಣ ಆಹಾರ-ವಿಹಾರದೊಡನೆ ಕುಡಿಯಬಾರದು. ರೇಚಕ ತಕ್ಕೊಂಡವರು, ಹಸಿದವರು ಕುಡಿಯಬಾರದು. ಬಹಳ ತೀಕ್ಷ್ಣ ಅಥವಾ ಬಹಳ ಮೃದು ಮದ್ಯವನ್ನು ಮತ್ತು ಮಾದಕತ್ವ ತರುವ ಮಸಾಲೆಯನ್ನು ಸ್ವಲ್ಪವೇ ಹಾಕಿದ(ಮದ್ಯತ್ವವನ್ನು ಪೂರ್ಣವಾಗಿ ಹೊಂದದ) ಮತ್ತು ರಾಡಿಯಾಗಿರುವ ಮದ್ಯವನ್ನು ಕುಡಿಯಬಾರದು. (೬೬)

**ಗುಲ್ಮೋದರಾರ್ಶೋಗ್ರಹಣೀಶೋಷಹೃತ್ ಸ್ನೇಹನೀ ಗುರುಃ ॥**
**ಸುರಾಽನಿಲಘ್ನೀ ಮೇದೋಽಸೃಕ್ಸ್ತನ್ಯಮೂತ್ರಕಫಾವಹಾ ॥೬೭॥**

ಅರ್ಥಃ— ಅಕ್ಕಿ-ಹಿಟ್ಟಿನಿಂದ ಮಾಡಿದ ಮದ್ಯವು (ಸುರಾ) ಗುಲ್ಮ ಉದರ, ಮೂಲವ್ಯಾಧಿ, ಸಂಗ್ರಹಣಿ, ಕ್ಷಯ, ವಾತಗಳನ್ನು ನಾಶಮಾಡುವದು. ಶರೀರವನ್ನು ಸ್ನಿಗ್ಧಮಾಡುವಂತಹದೂ, ಮೇದ ರಕ್ತ ಸ್ತನ್ಯ ಮೂತ್ರ ಕಫಗಳನ್ನು ಹೆಚ್ಚಿಸುವಂತಹದೂ, ಜಡವೂ ಆಗಿರುವದು. (೬೭)

**ತದ್ಗುಣಾ ವಾರುಣೀ ಹೃದ್ಯಾ ಲಘುಸ್ತೀಕ್ಷ್ಣಾ ನಿಹಂತಿ ಚ ॥**
**ಶೂಲಕಾಸವಮಿಶ್ವಾಸವಿಬಂಧಾಧ್ಮಾನಪೀನಸಾನ್ ॥೬೮॥**

ಅರ್ಥಃ— ವಾರುಣೀ ಮದ್ಯವು ಮೇಲಿನಂತೆ ಇದ್ದು ರುಚಿಕರವೂ ಹಗುರೂ ತೀಕ್ಷ್ಣವೂ ಇದ್ದು ಶೂಲಿ ಕೆಮ್ಮು ವಾಂತಿ ದಮ್ಮು ಮಲಬಂಧ ಹೊಟ್ಟೆಯುಬ್ಬು ನೆಗಡಿಗಳನ್ನು ನಾಶಮಾಡುವದು.

**ಟಿಪ್ಪಣೀಃ—** ವಾರುಣೀ ಅಂದರೆ ಸೆರೆಯ ಮೇಲಿನ ತಿಳಿಭಾಗವೆಂದು ಕೆಲವರೂ, ಶ್ವೇತಪುನರ್ನವೆ (ಬಿಳಿಯಗಣಜಲಿ) ಮತ್ತು ಅಕ್ಕಿಯಿಂದ ಮಾಡಿದ ಬಿಳಿಯ ಮದ್ಯವೆಂದು ಕೆಲವರೂ ಹೇಳುವರು, (೬೮)

**ನಾತಿತೀವ್ರಮದಾ ಲಘ್ವೀ ಪಥ್ಯಾ ಬೈಭೀತಕೀ ಸುರಾ ||**
**ವ್ರಣೇ ಪಾಂಡ್ವಾಮಯೇ ಕುಷ್ಠೇ ನ ಚಾತ್ಯರ್ಥಂ ವಿರುಧ್ಯತೇ ||೬೯||**

ಅರ್ಥಃ— ತಾರೀಕಾಯಿಯ ಶೆರೆಯು ಲಘು ಪಥ್ಯಕರವಿದ್ದು, ಬಹಳ ಮದವನ್ನುಂಟುಮಾಡುವದಿಲ್ಲ. ವ್ರಣದಲ್ಲಿಯೂ ಪಾಂಡುರೋಗದಲ್ಲಿಯೂ ಕುಷ್ಠದಲ್ಲಿಯೂ ಬೇರೆ ಮದ್ಯದಷ್ಟು ಬಾಧಕವಾಗದು (೬೯)

**ವಿಷ್ಟಂಭಿನೀ ಯವಸುರಾ ಗುರ್ವೀ ರೂಕ್ಷಾ ತ್ರಿದೋಷಲಾ ||**

ಅರ್ಥಃ— ಜವೆ-ಹಿಟ್ಟಿನಿಂದ ಮಾಡಿದ ಮದ್ಯವು ಮಲಬಂಧಕರ ಜಡ ರುಕ್ಷ ಮತ್ತು ತ್ರಿದೋಷಕರವಾಗಿದೆ. (೬೯॥)

**ಯಥಾದ್ರವ್ಯಗುಣೋಽರಿಷ್ಟಃ ಸರ್ವಮದ್ಯಗುಣಾಧಿಕಃ ||೭೦||**

**ಗ್ರಹಣೀಪಾಂಡುಕುಷ್ಠಾರ್ಶಃಶೋಫಶೋಷೋದರಜ್ವರಾನ್ ||**
**ಹಂತಿ ಗುಲ್ಮಕ್ರಿಮಿಪ್ಲೀಹ್ನಃ ಕಷಾಯಕಟುವಾತಲಃ ||೭೦||**

ಅರ್ಥಃ— ಅರಿಷ್ಟವು ಅದರಲ್ಲಿರುವ ದ್ರವ್ಯಗಳಂತೆಯೇ ಇದ್ದು ಎಲ್ಲ ಮದ್ಯಗಳಿಗಿಂತ ದೀಪನಾದಿ ಗುಣಗಳಲ್ಲಿ ಶ್ರೇಷ್ಠವಾದದ್ದು. ಇದು ಒಗರು ಕಾರವಿದ್ದು ವಾತವನ್ನುಂಟುಮಾಡುವದೂ, ಸಂಗ್ರಹಣಿ, ಪಾಂಡು, ಕುಷ್ಠ, ಮೂಲವ್ಯಾಧಿ, ಬಾವು, ಕ್ಷಯ, ಉದರ, ಜ್ವರ, ಗುಲ್ಮ, ಕ್ರಿಮಿ, ಪ್ಲೀಹ ಗಳನ್ನು ನಾಶಪಡಿಸುವದೂ ಆಗಿದೆ.

**ಟಿಪ್ಪಣಿ:—** ಔಷಧ ಮತ್ತು ಮದ್ಯಾಕರ ವಸ್ತುಗಳಿಂದ ಮಾಡಿದ ಮದ್ಯವು ಆಸವವೆಂದೂ, ಕುದಿಸಿದ ಔಷಧ ಮತ್ತು ಮದ್ಯಾಕರ ವಸ್ತುಗಳಿಂದ ಮಾಡಿದ್ದು ಅರಿಷ್ಟವೆಂದೂ ಕರೆಯಲ್ಪಡುತ್ತದೆ. ಆಸವಕ್ಕಿಂತ ಅರಿಷ್ಟವು ಗುಣದಲ್ಲಿ ಶ್ರೇಷ್ಠವು (೭೦)

**ಮಾರ್ದ್ವೀಕಂ ಲೇಖನಂ ಹೃದ್ಯಂ ನಾತ್ಯುಷ್ಣಂ ಮಧುರಂ ಸರಮ್ ||**
**ಅಲ್ಪಪಿತ್ತಾನಿಲಂ ಪಾಂಡುಮೇಹಾರ್ಶಃಕ್ರಿಮಿನಾಶನಮ್ ||೭೧||**

ಅರ್ಥ:— ದ್ರಾಕ್ಷದ ಮದ್ಯವು ಲೇಖನ, ಹೃದ್ಯ, ಸಾಧಾರಣ ಉಷ್ಣ, ಮಧುರ, ಸಾರಕ, ಸ್ವಲ್ಪ ಪಿತ್ತವಾತಗಳನ್ನುಂಟುಮಾಡುವದು ಮತ್ತು

ಪಾಂಡು ಮೇಹ ಮೂಲವ್ಯಾಧಿ ಕೃಮಿಗಳನ್ನು ನಾಶಮಾಡುವದು ಆಗಿರುವದು.

ಟಿಪ್ಪಣೆ:— ಲೇಖನವೆಂದರೆ ಹುದುಗಿಕೊಂಡು ಕೂತಿದ್ದ ದೋಷವನ್ನು ಕಿತ್ತಿ ಮೇಲೆ ತರುವದು. (೭೨)

**ಆಸ್ವಾದಲ್ಪಾಂತರಗುಣಂ ಖಾರ್ಜೂರಂ ವಾತಲಂ ಗುರು ॥**

ಅರ್ಥಃ— ಖರ್ಜೂರದ (ಉತ್ತತ್ತಿಯ) ಮದ್ಯವು ವಾತಲ ಮತ್ತು ಜಡವಿದ್ದು ಅದಕ್ಕೂ ದ್ರಾಕ್ಷದ ಮದ್ಯಕ್ಕೂ ಸ್ವಲ್ಪವೇ ಅಂತರವಿದೆ. (೭೩॥)

**ಶಾರ್ಕರಃ ಸುರಭಿಃ ಸ್ವಾದುಹೃದ್ಯೋ ನಾತಿಮದೋ ಲಘುಃ ॥೭೪॥**

ಅರ್ಥಃ— ಸಕ್ಕರೆಯ ಮದ್ಯವು ಸುಗಂಧ ಮಧುರ ಹೃದ್ಯ ಲಘು ಇದ್ದು ಬಹಳ ಮದವನ್ನುಂಟುಮಾಡುವದಿಲ್ಲ. (೭೪)

**ಸೃಷ್ಟಮೂತ್ರಶಕೃದ್ವಾತೋ ಗೌಡಸ್ತರ್ಪಣದೀಪನಃ ॥**

ಅರ್ಥಃ— ಬೆಲ್ಲದ ಮದ್ಯವು ಮಲ ಮೂತ್ರ ವಾತಗಳ ಅನುಲೋಮ ಮಾಡುವದು. ತರ್ಪಕ ಮತ್ತು ದೀಪಕವಾಗಿರುವದು. (೭೪॥)

**ವಾತಪಿತ್ತಕರಃ ಸೀಧುಃ ಸ್ನೇಹಶ್ಲೇಷ್ಮವಿಕಾರಹಾ ॥೭೫॥**
**ಮೇದಃಶೋಫೋದರಾರ್ಶೋಘ್ನಸ್ತತ್ರ ಪಕ್ವರಸೋ ವರಃ ॥**

ಅರ್ಥಃ— ಕುದಿಸದ ಕಬ್ಬಿನ ರಸದ ಮದ್ಯ(ಸೀಧು)ವು ವಾತಪಿತ್ತವನ್ನುಂಟುಮಾಡುತ್ತಿದ್ದು ಸ್ನೇಹದ ಮತ್ತು ಕಫದ ವಿಕಾರವನ್ನು ನಾಶಮಾಡುತ್ತದೆ. ಆದರೆ ಕುದಿಸಿದ ರಸದ ಮದ್ಯವು ಅದಕ್ಕೂ ಶ್ರೇಷ್ಠವಿದ್ದು ಮೇದ, ಬಾವು, ಉದರ, ಮೂಲವ್ಯಾಧಿಗಳನ್ನು ಕಳೆಯುವದು. (೭೫॥)

**ಛೇದೀ ಮಧ್ವಾಸವಸ್ತೀಕ್ಷ್ಣೋ ಮೇಹಪೀನಸಕಾಸಜಿತ್ ॥೭೬॥**

ಅರ್ಥಃ— ಜೇನುತುಪ್ಪದ ಮದ್ಯವು ಗಟ್ಟಿಯಾದ ಕಫಾದಿ ದೋಷಗಳನ್ನು ಕರಗಿಸುವದು. ತೀಕ್ಷ್ಣವೂ ಮೇಹ, ನೆಗಡಿ, ಕೆಮ್ಮುಗಳ ನಾಶಕವೂ ಇರುತ್ತದೆ. (೭೬)

**ರಕ್ತಪಿತ್ತಕಫೋತ್ಕ್ಲೇದಿಶುಕ್ತಂ ವಾತಾನುಲೋಮನಮ್ ||**
**ಭೃಶೋಷ್ಣತೀಕ್ಷ್ಣರೂಕ್ಷಾಮ್ಲಂ ಹೃದ್ಯಂ ರುಚಿಕರಂ ಸರಮ್ ||೭೬||**

**ದೀಪನಂ ಶಿಶಿರಸ್ಪರ್ಶಂ ಪಾಂಡುದೃಕ್‌ಕ್ರಿಮಿನಾಶನಮ್ ||**

ಅರ್ಥ:— ಶುಕ್ತವು ರಕ್ತ-ಪಿತ್ತ ಕಫಗಳನ್ನು ಕರಗಿಸುವದು. ವಾತಾನುಲೋಮನ, ಬಹಳ ಉಷ್ಣ, ತೀಕ್ಷ್ಣ, ರುಕ್ಷ, ಆಮ್ಲ, ಹೃದ್ಯ, ರುಚಿಕರ, ಸಾರಕ, ದೀಪಕ, ಶೀತಸ್ಪರ್ಶವಿದ್ದು, ಪಾಂಡು, ದೃಷ್ಟಿ, ಕ್ರಿಮಿಗಳನ್ನು ನಾಶಮಾಡುತ್ತದೆ.

**ಟಿಪ್ಪಣಿ:—** ಕಂದ ಮೂಲ ಫಲ ಮುಂತಾದವುಗಳನ್ನೂ, ಸ್ನೇಹ ಲವಣಗಳನ್ನೂ ಹಾಕಿಮಾಡುವ ಮದ್ಯವು ಶುಕ್ತವು (೭೬||)

**ಗುಡೇಕ್ಷುಮದ್ಯಮಾರ್ದ್ವೀಕಶುಕ್ತಂ ಲಘು ಯಥೋತ್ತರಮ್ ||೭೭||**

ಅರ್ಥ:— ಬೆಲ್ಲ, ಕಬ್ಬಿನ-ರಸ, ಮದ್ಯ, ದ್ರಾಕ್ಷಾಸವ ಇವುಗಳಿಂದ ಉಂಟಾದ ಶುಕ್ತಗಳಲ್ಲಿ ಮುಂದು ಮುಂದಿನವು ಲಘುವಿರುತ್ತವೆ. (೭೭)

**ಕಂದಮೂಲಫಲಾದ್ಯಂ ಚ ತದ್ವದ್ವಿದ್ಯಾತ್ತದಾಸುತಮ್ ||**

ಅರ್ಥ:— ಶುಕ್ತದಲ್ಲಿ ಕಂದ ಮೂಲ ಫಲ ಮುಂತಾದವುಗಳನ್ನು ಹಾಕಿದ ಬಹಳ ದಿವಸ ಇಟ್ಟು ಹುಳಿಯಾದದಕ್ಕೆ ಆಸುತವೆನ್ನುವರು. ಇದರ ಗುಣವು ಶುಕ್ತದಂತೆ ಇರುತ್ತದೆ. (೭೭||)

**ಶಾಂಡಾಕೀ ಚಾಸುತಂ ಚಾನ್ಯತ್ಕಾಲಾಮ್ಲಂ ರೋಚನಂ ಲಘು ||೭೮||**

ಅರ್ಥ:— ಶಾಂಡಾಕೀ ಮತ್ತು ಬಹಳ ದಿವಸ ಇಟ್ಟದ್ದರಿಂದ ಹುಳಿಯಾದ ಇತರ ಆಸುತಗಳು ರುಚಿಕರ ಮತ್ತು ಹಗುರಾಗಿರುತ್ತವೆ.

**ಟಿಪ್ಪಣಿ:—** ಶಾಂಡಾಕೀ= ಕುದಿಸಿ ಮಾಡಿದ ಕಂದ ಮೂಲ ಸಾಸಿವೆಗಳ ಆಸುತಗಳಿಗೆ ಶಹಜೀರಿಗೆ ಸಾಸಿವೆಗಳ ಚೂರ್ಣವನ್ನು ಹಾಕಿ ಬಹಳ ಕಾರ ಹುಳಿ ಮಾಡಿದರೆ ಅದಕ್ಕೆ ಶಾಂಡಾಕೀ ಅನ್ನುವರು. (೭೮)

ಧಾನ್ಯಾಮ್ಲಂ ಭೇದಿ ತೀಕ್ಷ್ಣೋಷ್ಣಂ ಪಿತ್ತಕೃತ್ಸ್ಪರ್ಶಶೀತಲಮ್ ॥
ಶ್ರಮಕ್ಲಮಹರಂ ರುಚ್ಯಂ ದೀಪನಂ ಬಸ್ತಿಶೂಲನುತ್ ||೭೯||

ಶಸ್ತಮಾಸ್ಥಾಪನೇ ಹೃದ್ಯಂ ಲಘು ವಾತಕಫಾಪಹಮ್ ॥
† "ಏಭಿರೇವ ಗುಣೈರ್ಯುಕ್ತೇ ಸೌವೀರಕತುಷೋದಕೇ ||೮೦||

ಕೃಮಿಹೃದ್ರೋಗಗುಲ್ಮಾರ್ಶಃಪಾಂಡುರೋಗನಿಬರ್ಹಣೇ ॥
ತೇ ಕ್ರಮಾದ್ವಿತುಷೈರ್ವಿದ್ಯಾತ್ಸತುಷೈಶ್ಚ ಯವೈಃ ಕೃತೇ ||೮೧||

ಅರ್ಥ:— ಧಾನ್ಯಾಮ್ಲವು (ಹುಂಬಲಿಯು) ಮಲಭೇದಕ, ತೀಕ್ಷ್ಣ, ಉಷ್ಣ, ಪಿತ್ತಕಾರಕ, ಶೀತಸ್ಪರ್ಶವಾಗಿದೆ. ಶ್ರಮ ಕ್ಲಮ ವಾತ ಕಫ ಬಸ್ತಿಶೂಲ-ನಾಶಕ ಇದ್ದು ಆಸ್ಥಾಪನ ಬಸ್ತಿಯನ್ನು ಕೊಡಲು ಉಪಯುಕ್ತವಿದೆ. (೮೧)

ಮದ್ಯದಂತೆ ತೀಕ್ಷ್ಣ ಉಷ್ಣವಾಗಿರುವದರಿಂದ ಮೂತ್ರಗಳನ್ನು ಹೇಳುತ್ತಾರೆ.

ಮೂತ್ರಂ ಗೋಽಜಾವಿಮಹಿಷೀಗಜಾಶ್ವೋಷ್ಟ್ರಖರೋದ್ಭವಮ್
ಪಿತ್ತಲಂ ರೂಕ್ಷ್ಣತೀಕ್ಷ್ಣೋಷ್ಣಂ ಲವಣಾನುರಸಂ ಕಟು ||೮೨||
ಕೃಮಿಶೋಫೋದರಾನಾಹಶೂಲಪಾಂಡುಕಫಾನಿಲಾನ್
ಗುಲ್ಮಾರುಚಿವಿಷಶ್ವಿತ್ರಕುಷ್ಠಾರ್ಶಾಂಸಿ ಜಯೇಲ್ಲಘು ||೮೩||

ಅರ್ಥ:— ಆಕಳು ಆಡು ಉಣ್ಣೆಗುರಿ ಎಮ್ಮೆ ಆನೆ ಕುದುರೆ ಒಂಟೆ ಕತ್ತೆಗಳ ಮೂತ್ರವು ಪಿತ್ತಕರ ರುಕ್ಷ ತೀಕ್ಷ್ಣ ಉಷ್ಣ ಲವಣಾನುರಸ (ಹಿಂದುಗಡೆ ಉಪ್ಪು ಹತ್ತುವದು) ಕಾರ ಲಘು ಇದ್ದು ಕೃಮಿ ಬಾವು ಉದರ ಹೊಟ್ಟೆಯುಬ್ಬು ಶೂಲ ಪಾಂಡುರೋಗ ಕಫ ವಾತ ಗುಲ್ಮ ಅರುಚಿ ವಿಷ–ವಿಕಾರ ಶ್ವಿತ್ರ (ಬಿಳುಪು) ಕುಷ್ಠ ಮೂಲವ್ಯಾಧಿಗಳನ್ನು ಕಳೆಯುವದು.

ಟಿಪ್ಪಣಿ:— ಮೂತ್ರಗಳನ್ನು ಹೆಣ್ಣುಪ್ರಾಣಿಗಳದೇ ತಕ್ಕೊಳ್ಳಬೇಕು. ಉಣ್ಣೆಗುರಿಯ ಮೂತ್ರವು ಕೆಮ್ಮು ದಮ್ಮುಗಳನ್ನು ಕಳೆಯುವದು. ಅದನ್ನು ಕಿವಿಯಲ್ಲಿ ಹಾಕಲು ಅಲ್ಲಿಯ ಶೂಲಿಯು ನಷ್ಟವಾಗುವದು. ಕತ್ತೆಯ ಮೂತ್ರವು ಉನ್ಮಾದ ಅಪಸ್ಮಾರ ಕೃಮಿ ಮೋಹಗಳನ್ನು ಕಳೆಯುವದು. ಇವುಗಳ ಮಲವು ಬಿಕ್ಕು ಶ್ವಾಸಗಳನ್ನು ಕಳೆಯುವದು. ಇವುಗಳ ಪಿತ್ತವು ಕ್ರಿಮಿನಾಶಕವು. ಗೋರೋಚನವು ಕಫ ವಾತನಾಶಕವು, ಹುರುಕಿಗೆ ಹಿತವು. ಮನುಷ್ಯನ ಮೂತ್ರವು ವಿಷನಾಶಕವು. (೮೩)

† ಈ ಒಂದೂವರೆ ಶ್ಲೋಕವನ್ನು ಅರುಣದತ್ತನು ಹೆಚ್ಚಿಗೆ ಹಿಡಿದಿದ್ದಾನೆ.

ತೋಯಕ್ಷೀರೇಕ್ಷುತೈಲಾನಾಂ ವರ್ಗೈರ್ಮದ್ಯಸ್ಯ ಚ ಕ್ರಮಾತ್ ॥
ಇತಿ ದ್ರವ್ಯೈಕದೇಶೋಽಯಂ ಯಥಾಸ್ಥೂಲಮುದಾಹೃತಃ ॥೮೯॥

ಅರ್ಥಃ— ಈ ಪ್ರಕಾರ ಕ್ರಮದಿಂದ ನೀರು, ಹಾಲು, ಕಬ್ಬು, ಎಣ್ಣೆ, ಮದ್ಯ ಎಂದು ಐದು ವರ್ಗಗಳನ್ನು ಮಾಡಿ ದ್ರವಪದಾರ್ಥದ ಕೆಲವು ಭಾಗವು ಮಾತ್ರ ಸ್ಥೂಲಮಾನದಿಂದ ವರ್ಣಿಸಲ್ಪಟ್ಟಿತು. (೮೯)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ದ್ರವದ್ರವ್ಯವಿಜ್ಞಾನೀಯೋ ನಾಮ ಪಂಚಮೋಽಧ್ಯಾಯಃ ಸಮಾಪ್ತಃ।**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ' ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ ದ್ರವದ್ರವ್ಯವಿಜ್ಞಾನೀಯ ಎಂಬ ೫ನೆಯ ಅಧ್ಯಾಯವು ಮುಗಿದುದು.



# ೩ನೆಯ ಅಧ್ಯಾಯ

ಮೊದಲು ದ್ರವ ಆಹಾರವನ್ನು ಹೇಳಿದರು. ಈಗ್ಗೆ ಅದ್ರವ ಆಹಾರ (ಅನ್ನ) ವನ್ನು ಹೇಳುವರು.

**ಅಥಾತೋಽ*ನ್ನಸ್ವರೂಪವಿಜ್ಞಾನೀಯಮಧ್ಯಾಯಂ ವ್ಯಾಖ್ಯಾಸ್ಯಾಮಃ**

ಅರ್ಥ:— ಇನ್ನು ಮೇಲೆ ಅನ್ನದ ಸ್ವರೂಪ (ರಸ, ವೀರ್ಯ ವಿಪಾಕ ಗುಣಕರ್ಮ ಮುಂತಾದ) ವನ್ನು ತಿಳಿಸುವ ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ |**

ಅರ್ಥ:— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದ್ದಾರೆ.

ಧಾನ್ಯದಲ್ಲಿ ಶೂಕಜ (ತೆನೆಯಲ್ಲಿ ಆಗುವ), ಶಿಂಬೀಜ (ಸೊಟ್ಟೆಯಲ್ಲಿ ಆಗುವ) ಎಂದು ಎರಡು ಭೇದಗಳುಂಟು. ಅವುಗಳಲ್ಲಿ ಶಿಂಬೀಜವು ವ್ಯಂಜನವಾದ್ದರಿಂದ ಅಪ್ರಧಾನವು. ಕಾರಣ ಮೊದಲು ಪ್ರಧಾನವಾದ ಶೂಕಜ ಧಾನ್ಯಗಳನ್ನು ಹೇಳುತ್ತಾರೆ.

### ಶೂಕಧಾನ್ಯವರ್ಗ

**ರಕ್ತೋ ಮಹಾನ್ ಸಕಲಮಸ್ತೂರ್ಣಕಃ ಶಕುನಾಹೃತಃ ||**
**ಸಾರಾಮುಖೋ ದೀರ್ಘಶೂಕೋ ರೋಧ್ರಶೂಕಃ ಸುಗಂಧಿಕಃ ||೧||**
**ಪತಂಗಾಸ್ತಪನೀಯಾಶ್ಚ ಯೇ ಚಾನ್ಯೇ ಶಾಲಯಃ ಶುಭಾಃ ||**
**ಸ್ವಾದುಪಾಕರಸಾಃ ಸ್ನಿಗ್ಧಾ ವೃಷ್ಯಾ ಬದ್ಧಾಲ್ಪವರ್ಚಸಃ ||೨||**
**ಕಷಾಯಾನುರಸಾಃ ಪಥ್ಯಾ ಲಘವೋ ಮೂತ್ರಲಾ ಹಿಮಾಃ ||**
**ಶೂಕಜೇಷು ವರಸ್ತತ್ರ ರಕ್ತಸ್ತೃಷ್ಣಾತ್ರಿದೋಷಹಾ ||೩||**
**ಮಹಾಂಸ್ತಸ್ಯಾನುಕಲಮಸ್ತಂ ಚಾಪ್ಯನು ತತಃ ಪರೇ ||**

ಅರ್ಥ:— ತೆನೆಯಲ್ಲಿ ಆಗುವ ಧಾನ್ಯಗಳಲ್ಲಿ ಕೆಂಪು ನೆಲ್ಲು, ದೊಡ್ಡ ನೆಲ್ಲು, ಕಲಮ (ಕಳವೇ ಭತ್ತ), ತೂರ್ಣಕ, ಶಕುನಾಹೃತ, ಸಾರಾಮುಖ, ದೀರ್ಘಶೂಕ, ರೋಧ್ರಶೂಕ, ಸುಗಂಧಿಕ (ಗಂಧಶಾಲಿ), ಪತಂಗ, ತಪ

---

* ಈ ಅನ್ನಸ್ವರೂಪವಿಜ್ಞಾನವು ಚರಕದ ಸೂತ್ರಸ್ಥಾನ ೨೭ನೇ, ಸುಶ್ರುತದ ಸೂತ್ರಸ್ಥಾನ ೪೬ನೇ, ಅಷ್ಟಾಂಗ ಸಂಗ್ರಹದ ಸೂತ್ರಸ್ಥಾನ ೭ ಮತ್ತು ೧೨ನೇ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ.

ಸೀಯು ಮತ್ತು ಇವರಂತೆ ಇಷ್ಟ ಕೆಲವು ಚಲೋ ನೆಲ್ಲುಗಳು ವಿಪಾಕ ರಸಗಳಲ್ಲಿ ಮಧುರ, ಸ್ನಿಗ್ಧ, ವೃಷ್ಯ ಹಾಗು ಮಲವನ್ನು ಸ್ವಲ್ಪ ಮತ್ತು ಗಟ್ಟಿಮಾಡುವವೂ, ಒಗರು ಅನುರಸವುಳ್ಳವೂ, ಪಥ್ಯಕರ, ಹಗುರು, ಮೂತ್ರ-ಕರ ಮತ್ತು ಶೀತವೂ ಆಗಿರುವವು. ಇವುಗಳಲ್ಲಿ ಕೆಂಪು ಭತ್ತವು ಶ್ರೇಷ್ಠವು. ಅದು ನೀರಡಿಕೆ ತ್ರಿದೋಷಗಳನ್ನು ನಾಶಮಾಡುವದು. ಅದರ ಹಿಂದೆ ದೊಡ್ಡ ನೆಲ್ಲು; ಅದರ ಹಿಂದೆ ಕಲಮವು; ಅದರ ಹಿಂದೆ ಉಳಿದ ನೆಲ್ಲುಗಳು.

**ಟಿಪ್ಪಣಿ:—**

**ಶಕುನಾಹೃತ:—** ಬುದ್ಧನ ಕಾಲದಲ್ಲಿ ಕುರುದೇಶದಿಂದ ಹಂಸಗಳಿಂದ ತರಿಸಲ್ಪಟ್ಟ, ಮಗಧದೇಶದಲ್ಲಿ ಬೆಳಿಸಲ್ಪಟ್ಟ ನೆಲ್ಲು.

**ಸಾರಾಮುಖ:—** ಕರೀಸುಂಕದ ಭತ್ತವು.

**ದೀರ್ಘಶೂಕ:—** ಜಿಳೇ ಬಣ್ಣದ ಉದ್ದ ಸುಂಕಿನ ಭತ್ತವು.

**ರೋಧ್ರಶೂಕ:—** ರೋಧ್ರ ಪುಷ್ಪದಂತೆ ಸುಂಕು ಇರುವ ಭತ್ತವು.

**ಸುಗಂಧಿಕ:—** ಸುಗಂಧ ಭತ್ತವು (ದೇವಶಾಲಿ).

ಇವುಗಳಲ್ಲಿ ಹೀನ ಯಾವವು ? ಉತ್ತಮ ಯಾವವು ? ಎಂಬ ವಿಷಯ ದಲ್ಲಿ ಮತಭೇದವು ಕಂಡು ಬರುತ್ತದೆ. ಆದ್ದರಿಂದ ಮೊತ್ತಗೆ ಸಿಹಿ ಸ್ನಿಗ್ಧ ಸುಗಂಧ ಬಿಳಿ ಸ್ವಚ್ಛ ಸ್ಥೂಲ ಉದ್ದ ಮುಂತಾದ ಗುಣಗಳುಳ್ಳ ಅಕ್ಕಿಗಳು ಯಾವವೋ ಅವು ಶ್ರೇಷ್ಠವೆಂದು ಬಗೆಯಬೇಕು. (೩॥)

**ಯವಕಾ ಹಾಯನಾಃ ಪಾಂಸುಬಾಷ್ಪನೈಷಧಕಾದಯಃ ॥೬॥**
**ಸ್ವಾದೂಷ್ಣಾ ಗುರವಃ ಸ್ನಿಗ್ಧಾಃ ಪಾಕೇಽಮ್ಲಾಃ ಶ್ಲೇಷ್ಮಪಿತ್ತಲಾಃ ॥**
**ಸೃಷ್ಟಮೂತ್ರಪುರೀಷಾಶ್ಚ ಪೂರ್ವಂ ಪೂರ್ವಂ ಚ ನಿಂದಿತಾಃ ॥೫॥**

ಅರ್ಥ:— ಯವಕ, ಹಾಯನ, ಪಾಂಸು, ಬಾಷ್ಪ, ನೈಷಧಕ ಮುಂತಾದ ಬೇರೆ ನೆಲ್ಲುಗಳು ಮಧುರ ಉಷ್ಣ ಗುರು ಸ್ನಿಗ್ಧವಿದ್ದು, ವಿಪಾಕ ದಲ್ಲಿ ಆಮ್ಲ, ಕಫ-ಪಿತ್ತಕರ, ಮಲ-ಮೂತ್ರಗಳ ಪ್ರವೃತ್ತಿಯನ್ನು ಮಾಡು ವಂತಹವು ಆಗಿರುವವು. ಇವುಗಳಲ್ಲಿ ಮೊದಲು ಮೊದಲಿನವು ಮುಂದೆ ಮುಂದಿನವಕ್ಕಿಂತ ಹೀನವು ಆಗಿರುವವು. (೫)

ಸ್ನಿಗ್ಧೋ ಗ್ರಾಹೀ ಲಘುಃ ಸ್ವಾದುಸ್ತ್ರಿದೋಷಘ್ನಃ ಸ್ಥಿರೋ ಹಿಮಃ ||
ಷಷ್ಟಿಕೋ ವ್ರೀಹಿಷು ಶ್ರೇಷ್ಠೋ ಗೌರಶ್ಚಾಸಿತಗೌರತಃ ||೬||

ಅರ್ಥ:— ಷಷ್ಟಿಕ (ಅರವತ್ತು ದಿನಕ್ಕೆ ಆಗುವ) ನೆಲ್ಲು ಎಲ್ಲ ನೆಲ್ಲುಗಳಲ್ಲಿ ಶ್ರೇಷ್ಠವು. ಅದು ಸ್ನಿಗ್ಧ ಸ್ತಂಭಕ ಹಗುರು ಮಧುರ, ತ್ರಿದೋಷ-ನಾಶಕ ಸ್ಥೈರ್ಯಕರ ಮತ್ತು ಶೀತವಿರುತ್ತದೆ. ಇದರಲ್ಲಿಯೂ ನಸುಗಪ್ಪಿನದಕ್ಕಿಂತ ಸ್ವಚ್ಛ ಬಿಳಿಯ ನೆಲ್ಲು ಶ್ರೇಷ್ಠವಿರುತ್ತದೆ. (೬)

ತತಃ ಕ್ರಮಾನ್ಮಹಾವ್ರೀಹಿ ಕೃಷ್ಣವ್ರೀಹಿಜತೂಮುಖಾಃ ||
ಕುಕ್ಕುಟಾಂಡಕಪಾಲಾಖ್ಯಪಾರಾವತಕಶೂಕರಾಃ ||೭||

ವರಕೋದ್ದಾಲಕೋಜ್ಜ್ವಾಲಚೀನಶಾರದದರ್ದುರಾಃ ||
ಗಂಧನಾಃ ಕುರುವಿಂದಾಶ್ಚ ಗುಣೈರಲ್ಪಾಂತರಾಃ ಸ್ಮೃತಾಃ ||೮||

ಅರ್ಥ:— ಆ ಕರಿಯ ನೆಲ್ಲಿನ ಕೆಳಗೆ ಕ್ರಮದಿಂದ ಮಹಾವ್ರೀಹಿ (ದೊಡ್ಡ ಅಕ್ಕಿ), ಕೃಷ್ಣವ್ರೀಹಿ, ಜತೂಮುಖ, ಕುಕ್ಕುಟಾಂಡ, ಕಪಾಲ, ಪಾರಾವತಕ, ಶೂಕರ, ವರಕ, ಉದ್ದಾಲಕ, ಉಜ್ವಾಲ, ಚೀನ, ಶಾರದ, ದರ್ದುರ, ಗಂಧನ, ಕುರುವಿಂದ ಎಂಬ ಜಾತಿಗಳು ಇರುತ್ತವೆ. ಇವುಗಳ ಗುಣಗಳಲ್ಲಿ ಸ್ವಲ್ಪೇ ಅಂತರವಿರುತ್ತದೆ. (೮)

ಸ್ವಾದುರಮ್ಲವಿಪಾಕೋಽನ್ಯೋ ವ್ರೀಹಿಃ ಪಿತ್ತಕರೋ ಗುರುಃ ||
ಬಹುಮೂತ್ರಪುರೀಷೋಷ್ಮಾ..........................................

ಅರ್ಥ:— ಇದರ ಹೊರ್ತು ಇತರ ಜಾತಿಯ ನೆಲ್ಲು ಮಧುರ, ವಿಪಾಕದಲ್ಲಿ ಅಮ್ಲ, ಪಿತ್ತಕರ ಮತ್ತು ಜಡವಿರುತ್ತದೆ. ಮಲ-ಮೂತ್ರ ಉಷ್ಣತೆಗಳನ್ನು ಹೆಚ್ಚು ಮಾಡುತ್ತದೆ. (೮||)

..........................ತ್ರಿದೋಷಸ್ತ್ವೇವ ಪಾಟಲಃ ||೯||

ಅರ್ಥ:— ಪಾಟಲವೆಂಬ ನೆಲ್ಲು ತ್ರಿದೋಷವನ್ನುಂಟು ಮಾಡುವದು. (೯)

**ಕಂಗುಕೋದ್ರವನೀವಾರಶ್ಯಾಮಾಕಾದಿ ಹಿಮಂ ಲಘು ॥**
**ತೃಣಧಾನ್ಯಂ ಪವನಕೃಲ್ಲೇಖನಂ ಕಫಪಿತ್ತಹೃತ್** ॥೧೦॥

ಅರ್ಥ:— ಕಂಗು (ನವಣೆ), ಕೋದ್ರವ (ಹಾರಕ), ನೀವಾರ (ನ್ಯಾರೇಭತ್ತ), ಸಾವಿ ಮೊದಲಾದ ತೃಣಧಾನ್ಯಗಳು ಶೀತ, ಲಘು, ವಾತ-ಕಾರಕ, ಲೇಖನವಿದ್ದು ಕಫ-ಪಿತ್ತಗಳನ್ನು ನಾಶಮಾಡುವವು. (೧೦)

**ಭಗ್ನಸಂಧಾನಕೃತ್ತತ್ರ ಪ್ರಿಯಂಗುರ್ಬೃಂಹಣೀ ಗುರುಃ ॥**

ಅರ್ಥ— ಇದರಲ್ಲಿ ನವಣೆಯು ಮುರಿದ ಎಲವುಗಳನ್ನು ಕೂಡಿಸುವದೂ ಪೌಷ್ಟಿಕವೂ ಜಡವೂ ಆಗಿರುವದು.

ಟಿಪ್ಪಣಿ:— ನವಣೆಯು ಕೆಂಪು, ಹಳದಿ, ಕಪ್ಪು, ಬಿಳೀ ಎಂದು ನಾಲ್ಕು ಪ್ರಕಾರ. ಮುಂದಿನವು ಹಿಂದಿನಕ್ಕಿಂತ ಶ್ರೇಷ್ಠ ರುಕ್ಷ ಕಫಕರವು ಆಗಿರುವವು. (೧೦॥)

**ಕೋರದೂಷಃ ಪರಂ ಗ್ರಾಹೀ ಸ್ಪರ್ಶಶೀತೋ ವಿಷಾಪಹಃ** ॥೧೧॥

ಅರ್ಥಃ— ಹಾರಕವು ಅತ್ಯಂತ ಸ್ತಂಭಕ, ಸ್ಪರ್ಶದಲ್ಲಿ ಶೀತ ಮತ್ತು ವಿಷನಾಶಕವಿರುತ್ತದೆ. (೧೧)

**ರೂಕ್ಷಃ ಶೀತೋ ಗುರುಃ ಸ್ವಾದುಃ ಸರೋ ವಿಡ್ವಾತಕೃದ್ಯವಃ ॥**
**ವೃಷ್ಯಃ ಸ್ಥೈರ್ಯಕರೋ ಮೂತ್ರಮೇದಃಪಿತ್ತಕಫಾನ್ ಜಯೇತ್** ॥೧೨॥
**ಪೀನಸಶ್ವಾಸಕಾಸೋರುಸ್ತಂಭಕಂಠತ್ವಗಾಮಯಾನ್ ॥**

ಅರ್ಥಃ— ಮುಳ್ಳುಜವೆಯು ರುಕ್ಷ, ಶೀತ, ಗುರು, ಮಧುರ, ಸಾರಕ, ಮಲ, ಮತ್ತು ವಾತವರ್ಧಕ, ವೃಷ್ಯ, ಸ್ಥೈರ್ಯಕರವಿದ್ದು ಮೂತ್ರ-ವಿಕಾರ ಮೇದ ಪಿತ್ತ-ಕಫ ಪೀನಸ ಶ್ವಾಸ ಕಾಸ ಊರು-ಸ್ತಂಭ ಕಂಠರೋಗ ತ್ವಕ್‌ರೋಗಗಳನ್ನು ಕಳೆಯುವದು. (೧೨॥)

**ನ್ಯೂನೋ ಯವಾದನುಯವಃ.......... ................**

ಅರ್ಥ:— ಅನುಯವವೆಂಬ ಜವೆಯು ಇದಕ್ಕಿಂತ ಗುಣದಲ್ಲಿ ಹೀನವಾಗಿದೆ. (ಸುಂಕವಿಲ್ಲದ ಜವೆ ಎಂದು ಹೇಮಾದ್ರಿಯು ಅನ್ನುತ್ತಾನೆ.)

...........................ರೂಕ್ಷೋಷ್ಣೋ ವಂಶಜೋ ಯವಃ ||೧೩||

ಅರ್ಥ:— ಬಿದರಕ್ಕಿಯು ರುಕ್ಷ ಮತ್ತು ಉಷ್ಣವಿದೆ.

[ಬಿದರುಗಳಿಗೆ ಅರವತ್ತು ವರ್ಷಗಳು ಸಂದಲು ಹೂವಾಗಿ ಭತ್ತವಾಗುವವು. ಅವೇ ಬಿದರಕ್ಕಿ ಎಂದು ಮಲ್ಲಾಡದಲ್ಲಿ ಪ್ರಸಿದ್ಧ.] (೧೩)

ವೃಷ್ಯಃ ಶೀತೋ ಗುರುಃ ಸ್ನಿಗ್ಧೋ ಜೀವನೋ ವಾತಪಿತ್ತಹಾ ||
ಸಂಧಾನಕಾರೀ ಮಧುರೋ ಗೋಧೂಮಃ ಸ್ಥೈರ್ಯಕೃತ್‌ಸರಃ ||೧೪||

ಅರ್ಥ:— ಗೋದಿಯು ವೀರ್ಯವರ್ಧಕ ಶೀತ, ಜಡ ಸ್ನಿಗ್ಧ ಜೀವನೀಯ ಪಿತ್ತನಾಶಕ ಸಂಧಾನಕರ ಮಧುರ ಸ್ಥೈರ್ಯಕರ ಮತ್ತು ಸಾರಕವಿರುವದು. (೧೪)

ಪಥ್ಯಾ ನಂದೀಮುಖೀ ಶೀತಾ ಕಷಾಯಮಧುರಾ ಲಘುಃ||

ಅರ್ಥ:— ನಂದೀಮುಖಿಯೆಂಬ (ಸಣ್ಣವಾಗಿಯೂ ಉದ್ದವಾಗಿಯೂ ಇರುವ) ಗೋದಿಯು ಶೀತ ಒಗರು ಮಧುರ ಲಘು ಮತ್ತು ಪಥ್ಯವಾಗಿರುವದು. (೧೪||)

ಮುದ್ಗಾಢಕೀಮಸೂರಾದಿ ಶಿಂಬೀಧಾನ್ಯಂ ವಿಬಂಧಕೃತ್ ||೧೫||

ಕಷಾಯಂ ಸ್ವಾದುಸಂಗ್ರಾಹಿ ಕಟುಪಾಕಂ ಹಿಮಂ ಲಘು ||

ಮೇದಃಶ್ಲೇಷ್ಮಾಸ್ರಪಿತ್ತೇಷು ಹಿತಂ ಲೇಪೋಪಸೇಕಯೋಃ ||೧೬||

ಅರ್ಥಃ— ಹೆಸರು, ತೊಗರೆ, ಚನ್ನಂಗಿ ಮುಂತಾದ ಸೊಟ್ಟೆಯಲ್ಲಿಯ ಧಾನ್ಯಗಳು ಸ್ರೋತಸ್ಸುಗಳನ್ನು ಅವರೋಧಮಾಡುತ್ತವೆ. ಒಗರು, ಮಧುರ, ಮಲ-ಪ್ರತಿಬಂಧಕ, ವಿಪಾಕದಲ್ಲಿ ಕಟು, ಶೀತ, ಲಘು ಆಗಿದ್ದು ಮೇದ ಕಫ ರಕ್ತ-ಪಿತ್ತ ರೋಗಗಳಲ್ಲಿ ಹಿತಕರ, ಲೇಪ ಮತ್ತು ಸಾರು ಮಾಡಲು ಉಪಯುಕ್ತ ಅವೆ. (೧೬)

ವರೋಽತ್ರ ಮುದ್ಗೋಽಲ್ಪಚಲಃ ಕಲಾಯಸ್ತ್ವತಿವಾತಲಃ ||

ಅರ್ಥ:— ಎಲ್ಲ ಸೊಟ್ಟೆಯ ಧಾನ್ಯಗಳಲ್ಲಿ ಹೆಸರು ಸ್ವಲ್ಪವೇ ವಾತಕರವು; ಆದ್ದರಿಂದ ಶ್ರೇಷ್ಠವು. ಬಟಗಡ್ಲೆಯು ಬಹಳ ವಾತಕರವು. (೧೬)

**ರಾಜಮಾಷೋSನಿಲಕರೋ ರುಕ್ಷೋ ಬಹುಶಕೃದ್ಗುರುಃ ||೧೭||**

ಅರ್ಥ:— ತಿಲಸಂದಿಯು ವಾತಕರ ರುಕ್ಷ ಮಲವರ್ಧಕ ಮತ್ತು ಜಡವಿರುವದು. (೧೭)

**ಉಷ್ಣಾಃ ಕುಲತ್ಥಾಃ ಪಾಕೇSಮ್ಲಾಃ ಶುಕ್ರಾಶ್ಮಶ್ವಾಸಪೀನಸಾನ್ ||**
**ಕಾಸಾರ್ಶಃಕಫವಾತಾಂಶ್ಚ ಘ್ನಂತಿ ಪಿತ್ತಾಸ್ರದಾಃ ಪರಮ್ ||೧೮||**

ಅರ್ಥ:— ಹುರುಳಿಯು ಉಷ್ಣ, ವಿಪಾಕದಲ್ಲಿ ಅಮ್ಲ, ಶುಕ್ರ, ಅಶ್ಮರೀ ಶ್ವಾಸ ಪೀನಸ ಕೆಮ್ಮು ಮೂಲವ್ಯಾಧಿ ಕಫ ವಾತಗಳನ್ನು ಹೊಡೆಯುವದು, ಮತ್ತು ಪಿತ್ತ-ರಕ್ತವನ್ನು ಹೆಚ್ಚಿಸುವದು. (೧೮)

**ನಿಷ್ಪಾವೋ ವಾತಪಿತ್ತಾಸ್ರಸ್ತನ್ಯಮೂತ್ರಕರೋ ಗುರುಃ ||**
**ಸರೋ ವಿದಾಹೀ ದೃಕ್ ಶುಕ್ರಕಫಶೋಫವಿಷಾಪಹಃ ||೧೯||**

ಅರ್ಥ:— ಅವರಿಯು ವಾತ ರಕ್ತ-ಪಿತ್ತ ಸ್ತನ್ಯ ಮೂತ್ರಗಳನ್ನು ಹೆಚ್ಚಿಸುವದು. ಮತ್ತು ಜಡ ಸಾರಕ ವಿದಾಹಿ ಆಗಿದ್ದು ದೃಷ್ಟಿ ವೀರ್ಯ ಕಫ ಬಾವು ವಿಷಗಳನ್ನು ನಾಶ ಮಾಡುವದು. (೧೯)

**ಮಾಷಃ ಸ್ನಿಗ್ಧೋ ಬಲಶ್ಲೇಷ್ಮಮಲಪಿತ್ತಕರಃ ಸರಃ ||**
**ಗುರೂಷ್ಣೋSನಿಲಹಾ ಸ್ವಾದುಃ ಶುಕ್ರವೃದ್ಧಿವಿರೇಕಕೃತ್ ||೨೦||**

ಅರ್ಥಃ— ಉದ್ದು ಸ್ನಿಗ್ಧ, ಬಲ ಕಫ ಮಲ ಪಿತ್ತಗಳನ್ನು ಮಾಡುವದೂ, ಸಾರಕ, ಗುರು, ಉಷ್ಣ, ವಾತಹಾರಕ, ಮಧುರ, ವೀರ್ಯ ವರ್ಧಕ ಮತ್ತು ವೀರ್ಯರೇಚಕವೂ ಆಗಿರುವದು. (೨೦)

**ಫಲಾನಿ ಮಾಷವದ್ವಿದ್ಯಾತ್ಕಾಕಾಂಡೋಲಾತ್ಮಗುಪ್ತಯೋಃ ||**

ಅರ್ಥ:— ಸುಂಕವಿಲ್ಲದ ಮತ್ತು ಸುಂಕವಿರುವ ನಸುಗುನ್ನಿಯ ಬೀಜದ ಗುಣಗಳು ಉದ್ದಿನಂತೆ ಇರುತ್ತವೆ. (೨೦||)

**ಉಷ್ಣಸ್ತ್ವಚ್ಯೋ ಗುರುಃ ಸ್ಪರ್ಶೇ ಕೇಶ್ಯೋ ಬಲ್ಯಸ್ತಿಲೋ ಗುರುಃ ||೨೦||**

**ಅಲ್ಪಮೂತ್ರಃ ಕಟುಃ ಪಾಕೇ ಮೇಧಾಗ್ನಿ ಕಫಪಿತ್ತ ಕೃತ್ ||**

ಅರ್ಥ:— ಎಳ್ಳು ಉಷ್ಣ, ಚರ್ಮ ಮತ್ತು ಕೂದಲುಗಳಿಗೆ ಹಿತಕರ, ಸ್ಪರ್ಶದಲ್ಲಿ ಶೀತ, ಬಲವರ್ಧಕ, ಗುರು, ಅಲ್ಪಮೂತ್ರಕಾರಕ ವಿಪಾಕದಲ್ಲಿ ಕಾರ, ಬುದ್ಧಿ ಅಗ್ನಿ ಕಫ ಪಿತ್ತಗಳನ್ನು ಉಂಟುಮಾಡುವದು ಆಗಿದೆ.

**ಟಿಪ್ಪಣಿ:—** ಎಳ್ಳುಗಳಲ್ಲಿ ಕರಿಯ ಎಳ್ಳು ಶ್ರೇಷ್ಠ; ಆದರ ಹಿಂದೆ ಬಿಳಿಯದು, ಆದರ ಹಿಂದೆ ಕೆಂಪದು. (೨೧||)

**ಸ್ನಿಗ್ಧೋಮಾ ಸ್ವಾದುತಿಕ್ತೋಷ್ಣಾ ಕಫಪಿತ್ತಕರೀ ಗುರುಃ ||೨೨||**
**ದೃಕ್ಶುಕ್ರಹೃತ್ಕಟುಃ ಪಾಕೇ......................**

ಅರ್ಥ:— ಅಗಸಿಯು ಸ್ನಿಗ್ಧ, ಮಧುರ, ಕಹಿ, ಉಷ್ಣ, ಕಫ-ಪಿತ್ತಕರ, ಗುರು, ದೃಷ್ಟಿ ಮತ್ತು ವೀರ್ಯನಾಶಕ, ವಿಪಾಕದಲ್ಲಿ ಕಾರವಾಗಿರುವದು. (೨೨)

**..............................ತದ್ವದ್ಬೀಜಂ ಕುಸುಂಭಜಮ್ ||**

ಅರ್ಥ:— ಆದರಂತೆಯೇ ಕುಸುಬಿಯ ಬೀಜವು ಇರುವದು. (೨೨||)

**ಮಾಷೋಽತ್ರ ಸರ್ವೇಷ್ವವರೋ, ಯವಕಃ ಶೂಕಜೇಷು ಚ ||೨೩||**

ಅರ್ಥ:— ಸೊಟ್ಟೆಯ ಧಾನ್ಯಗಳಲ್ಲಿ, ಉದ್ದು, ಸುಂಕಿನ ಧಾನ್ಯಗಳಲ್ಲಿ ಮುಳ್ಳಜವೆಯೂ ಎಲ್ಲಕ್ಕೂ ಹೀನವು. (೨೩)

**ನವಂ ಧಾನ್ಯಮಭಿಷ್ಯಂದಿ, ಲಘು ಸಂವತ್ಸರೋಷಿತಮ್ ||**
**ಶೀಘ್ರಜನ್ಮ ತಥಾ ಸೂಪ್ಯಂ ನಿಸ್ತುಷಂ ಯುಕ್ತಿಭರ್ಜಿತಮ್ ||೨೪||**

ಅರ್ಥಃ— ಹೊಸ ಧಾನ್ಯವು ಕಫಕರವು ಅರ್ಥಾತ್ ಜಡವು; ಒಂದು ವರ್ಷದ ಹಳೆಯ ಧಾನ್ಯವು ಪಚನಕ್ಕೆ ಹಗುರು. ತೀವ್ರ ಉತ್ಪನ್ನವಾಗು ವಂಥ ಮತ್ತು ಮೇಲಿನ ಹೊಟ್ಟು ತೆಗೆದು ಯೋಗ್ಯ ರೀತಿಯಿಂದ ಹುರಿದಂಥ ಸೊಟ್ಟಿಯ ಧಾನ್ಯಗಳು ಹಗುರಾಗಿರುವವು.

ಟಿಪ್ಪಣೀ— ಒಂದು ವರ್ಷದ ಮೇಲೆ ಧಾನ್ಯವು ಹಗುರು ಆಗುವದು; ಆದರೂ ಅದರ ವೀರ್ಯವು ಕಡಿಮೆಯಾಗಿರುವದಿಲ್ಲ. ಆಮೇಲೆ ಮಾತ್ರ ಅದರ ವೀರ್ಯವು ಕಡಿಮೆಯಾಗುತ್ತ ಹೋಗುತ್ತದೆ. ಸೊಟ್ಟಿಯ ಧಾನ್ಯಗಳನ್ನು ತುಪ್ಪ ಹೆಚ್ಚು ಹಾಕಿ ಬಲಿಷ್ಠರಿದ್ದವರೇ ಉಣ್ಣಬೇಕು. (೩೪)

## ಸಿದ್ಧಾನ್ನವರ್ಗ

**ಮಂಡಪೇಯಾವಿಲೇಪೀನಾಮೋದನಸ್ಯ ಚ ಲಾಘವಮ್ ||**

**ಯಥಾಪೂರ್ವಂ..................................**

ಅರ್ಥಃ— ಗಂಜಿ, ಪೇಯಾ, ವಿಲೇಪೀ ಮತ್ತು ಅನ್ನಗಳಲ್ಲಿ ಕ್ರಮ ದಿಂದ ಮೊದಲಿನವು ಲಘುವಾಗಿರುವವು.

ಟಿಪ್ಪಣೀ:— ಗಂಜಿಯಲ್ಲಿ ಅಗಳು ಇರುವದಿಲ್ಲ. ಪೇಯೆಯಲ್ಲಿ ಅಗಳು ಸ್ವಲ್ಪ, ದ್ರವಭಾಗ ಹೆಚ್ಚು ಇರುವದು. ವಿಲೇಪಿಯಲ್ಲಿ ದ್ರವಭಾಗ ಕಡಿಮೆ, ಅಗಳು ಹೆಚ್ಚು ಇರುವವು. ಅನ್ನದಲ್ಲಿ ದ್ರವಭಾಗವಿರುವದೇ ಇಲ್ಲ.

ಹೇಮಾದ್ರಿಯು "ಯವಾಗೂ ಎರಡು ಪ್ರಕಾರ-ಪೇಯಾ, ವಿಲೇಪೀ ಎಂದು. ಸ್ವಲ್ಪ ಅಗಳು ಉಳ್ಳದ್ದು ಪೇಯೆ ಎಂದೂ, ಹೆಚ್ಚು ಅಗಳು ಉಳ್ಳದ್ದು ವಿಲೇಪೀ" ಎಂದೂ ಹೇಳುವನು.

ಶಾರ್ಙ್ಗಧರನು ಆರು ಪಾಲು ನೀರಿನಲ್ಲಿ ಕುದಿಸಿದ್ದಕ್ಕೆ ಯವಾಗೂ ಎಂದೂ, ನಾಲ್ಕು ಪಾಲು ನೀರಿನಲ್ಲಿ ಕುದಿಸಿದ್ದಕ್ಕೆ ವಿಲೇಪೀ (ಲೇಪಗಳಂತೆ ಸ್ವಲ್ಪ ಗಟ್ಟಿಯಾಗಿ ಇದ್ದದ್ದು) ಎಂದೂ, ಹದಿನಾಲ್ಕು ಪಾಲು ನೀರು ಹಾಕಿ ಕುದಿಸಿದ, ಸ್ವಲ್ಪೇ ಅಗಳು ಇದ್ದು ದ್ರವ ಭಾಗವು ಹೆಚ್ಚಿರುವದಕ್ಕೆ ಪೇಯಾ (ಕುಡಿಯುವಂತೆ ದ್ರವವಾಗಿದ್ದದ್ದು) ಎಂದೂ, ಹದಿನಾಲ್ಕು ಪಾಲು ನೀರು ಹಾಕಿ ಕುದಿಸಿ ಗಂಜೀ ಬಸೆದು ತೆಗೆದದ್ದಕ್ಕೆ ಓದನ (ಅನ್ನ)ವೆಂದೂ, ಬಸಿದ ಗಂಜಿಗೆ ಮಂಡ ಎಂದೂ ಹೇಳುವನು. (೩೪||)

...........ಶಿವಸ್ತತ್ರ ಮಂಡೋ ವಾತಾನುಲೋಮನಃ ||೨೫||

**ತೃಡ್ಗ್ಲಾನಿ ದೋಷಶೇಷಘ್ನಃ ಪಾಚನೋ ಧಾತುಸಾಮ್ಯಕೃತ್ ||**
**ಸ್ರೋತೋಮಾರ್ದವಕೃತ್ಸ್ವೇದೀ ಸಂಧುಕ್ಷಯತಿ ಚಾನಲಮ್ ||೨೬||**

ಅರ್ಥಃ— ಅದರಲ್ಲಿ ಗಂಜಿಯು ಪಥ್ಯ, ವಾತಾನುಲೋಮನ, ನೀರಡಿಕೆ ಗ್ಲಾನಿ ವಮನ ವಿರೇಚನಗಳ ನಂತರ ಉಳಿದ ದೋಷಗಳನ್ನು ಕಳೆಯುವದೂ, ಪಾಚಕವೂ, ಧಾತು ಸಾಮ್ಯಕರವೂ, ಸ್ರೋತಸ್ಸುಗಳನ್ನು ಮೃದುಮಾಡುವಂಥದೂ, ಬೆವರು ತರುವಂಥದೂ, ಅಗ್ನಿದೀಪಕವೂ ಆಗಿದೆ.

ಟಿಪ್ಪಣಿ:— ಅನ್ನದ ಹೊರ್ತು ಉಳಿದುವೆಲ್ಲ ಭತ್ತರಳಿನಿಂದ ಮಾಡಿದವೇ ಹೊರ್ತು ಅಕ್ಕಿಯಿಂದ ಮಾಡಿದವಲ್ಲ ಎಂದು ಅರುಣದತ್ತನು ಹೇಳುವನು. (೨೬)

**ಕ್ಷುತ್ತೃಷ್ಣಾಗ್ಲಾನಿದೌರ್ಬಲ್ಯಕುಕ್ಷಿರೋಗಜ್ವರಾಪಹಾ ||**
**ಮಲಾನುಲೋಮನೀ ಪಥ್ಯಾ ಪೇಯಾ ದೀಪನಪಾಚನೀ ||೨೭||**

ಅರ್ಥಃ— ಪೇಯೆಯು ಹಸಿವೆ ನೀರಡಿಕೆ ಗ್ಲಾನಿ ಅಶಕ್ತಿ ಅತಿಸಾರ ಜ್ವರಗಳ ನಾಶಕವೂ, ಮಲದ ಅನುಲೋಮನಕರ, ಪಥ್ಯ, ದೀಪಕ, ಪಾಚಕವೂ ಇರುತ್ತದೆ. (೨೭)

**ವಿಲೇಪೀ ಗ್ರಾಹಿಣೀ ಹೃದ್ಯಾ ತೃಷ್ಣಾಘ್ನೀ ದೀಪನೀ ಹಿತಾ ||**
**ವ್ರಣಾಕ್ಷಿರೋಗಸಂಶುದ್ಧದುರ್ಬಲಸ್ನೇಹಪಾಯಿನಾಮ್ ||೨೮||**

ಅರ್ಥಃ— ವಿಲೇಪಿಯು ಸ್ತಂಭಕ, ಹೃದ್ಯ, ನೀರಡಿಕೆಯನ್ನು ಕಳೆಯುವದೂ ದೀಪಕವೂ ಆಗಿದ್ದು, ವ್ರಣ, ನೇತ್ರರೋಗಿಗಳಿಗೂ ಶೋಧನ ತಕ್ಕೊಂಡವರಿಗೂ ದುರ್ಬಲರಿಗೂ ನಿತ್ಯ ಸ್ನೇಹವನ್ನು ಕುಡಿಯುವವರಿಗೂ ಹಿತಕರವು. (೨೮)

**ಸುಧೌತಃ ಪ್ರಸ್ರುತಃ ಸ್ವಿನ್ನೋಽತ್ಯಕ್ತೋಷ್ಮಾ ಚೌದನೋ ಲಘುಃ ||**
**ಯಶ್ಚಾಗ್ನೇಯೌಷಧಕ್ವಾಥಸಾಧಿತೋ ಭೃಷ್ಟತಂಡುಲಃ ||೨೯||**

ಅರ್ಥ:— ಚೆನ್ನಾಗಿ ತೊಳೆದು ಗಂಜಿ ತೆಗೆದ, ಮುಚ್ಚಿದ್ದರಿಂದ ಉಗಿಯಿಂದ ಬೆಂದ ಬಿಸಿ ಬಿಸಿ ಅನ್ನವೂ ಮತ್ತು ಅಗ್ನಿ ವರ್ಧಕ ಔಷಧ ಗಳ ಕಷಾಯದಿಂದ ಮಾಡಿದ ಮತ್ತು ಹುರಿದ ಅಕ್ಕಿಯಿಂದ ಮಾಡಿದ ಅನ್ನವೂ ಹಗುರು ಇರುತ್ತದೆ. (೨೯)

**ವಿಪರೀತೋ ಗುರುಃ ಕ್ಷೀರಮಾಂಸಾದ್ಯೈರ್ಯಶ್ಚ ಸಾಧಿತಃ ॥**

ಅರ್ಥ:— ಇದರ ವಿಪರೀತವಾಗಿ ಇದ್ದಂಥ ಮತ್ತು ಹಾಲು ಮಾಂಸ ಮುಂತಾದ ದ್ರವ್ಯಗಳಿಂದ ಮಾಡಿದ ಅನ್ನವು ಜಡವಿರುತ್ತದೆ. (೨೯॥)

**ಇತಿ ದ್ರವ್ಯಕ್ರಿಯಾಯೋಗಮಾನಾದ್ಯೈಃ ಸರ್ವಮಾದಿಶೇತ್ ॥೩೦॥**

ಅರ್ಥ:— ಇದರಂತೆ ಎಲ್ಲ ಪದಾರ್ಥಗಳ ಗುರುತ್ವ ಲಘುತ್ವ ಗಳನ್ನು ಆಯಾ ದ್ರವ್ಯ, ಪಾಕಾದಿ ಸಂಸ್ಕಾರ, ಅದರಲ್ಲಿ ಕೂಡಿರುವ ಪದಾರ್ಥ, ಪ್ರಮಾಣ, ದೇಶ, ಕಾಲ ಮುಂತಾದವುಗಳನ್ನು ನೋಡಿ ನಿಶ್ಚಯಿಸಬೇಕು.

**ಟಿಪ್ಪಣಿ:—**

**ದ್ರವ್ಯ:—** ಕೆಂಪು ಅಕ್ಕಿಯು ಹಗುರು; ಮುಳ್ಳಜವಿ ಜಡವು.

**ಕ್ರಿಯಾ:—** ಕುದಿಸಿದ ಮಾಂಸವು ಜಡ; ಸಾಕ್ಷಾತ್ ಬೆಂಕಿಯಿಂದ ಬೇಯಿಸಿದ್ದು ಹಗುರು.

**ಯೋಗ:—** ಹಾಗೆಯೇ ಮಾಡಿದ್ದಕ್ಕಿಂತ ಚಿತ್ರಕ ಮುಂತಾದ ಪಾಚಕ ಔಷಧಗಳ ಕಷಾಯಗಳಲ್ಲಿ ಮಾಡಿದ್ದು ಹಗುರು.

**ಪ್ರಮಾಣ:—** ಸ್ವಲ್ಪ ಜಡ ಪದಾರ್ಥ ಕೂಡಿಸಿದ್ದು ಹಗುರು; ಬಹಳ ಜಡ ಪದಾರ್ಥ ಕೂಡಿಸಿ ಮಾಡಿದ್ದು ಜಡ.

**ಉತ್ಪತ್ತಿ ದೇಶ:—** ಸುಟ್ಟ ನೆಲದಲ್ಲಿ ಉಂಟಾದ ಅಕ್ಕಿಗಳು ಹಗುರು; ಉಳಿದವು ಗುರು.

**ಉತ್ಪತ್ತಿ ಕಾಲ:—** ಸಕಾಲದ ಮಳೆಯ ನೀರಿನಿಂದ ಮಾಡಿದ ಅನ್ನವು ಹಗುರು; ಅಕಾಲ ಮಳೆಯ ನೀರಿನಿಂದ ಮಾಡಿದ ಅನ್ನವು ಗುರು. (೩೦)

ಬೃಂಹಣಃ ಪ್ರೀಣನೋ ವೃಷ್ಯಶ್ಚಕ್ಷುಷ್ಯೋ ವ್ರಣಹಾ ರಸಃ ॥

ಅರ್ಥ:— ಮಾಂಸ ರಸವು ಪೌಷ್ಟಿಕ, ತೃಪ್ತಿಕರ, ವೀರ್ಯವರ್ಧಕ, ವ್ರಣನಾಶಕ ಮತ್ತು ಕಣ್ಣಿಗೆ ಹಿತಕರವಾಗಿದೆ. (೩೦॥)

ಮೌದ್ಗಸ್ತು ಪಥ್ಯಃ ಸಂಶುದ್ಧ ವ್ರಣಕಂಠಾಕ್ಷಿರೋಗಿಣಾಮ್ ॥೩೧॥

ಅರ್ಥ:— ಹೆಸರಿನ ಕಟ್ಟು ಶೋಧನ ತಕ್ಕೊಂಡವರಿಗೂ ಮತ್ತು ವ್ರಣ ಕಂಠರೋಗ ನೇತ್ರರೋಗ ಉಳ್ಳವರಿಗೂ ಹಿತಕರವು. (೩೧॥)

ವಾತಾನುಲೋಮೀ ಕೌಲತ್ಥೋ ಗುಲ್ಮತೂನೀಪ್ರತೂನಿಜಿತ್ ॥

ಅರ್ಥ:— ಹುರುಳಿಯ ಕಟ್ಟು ವಾತದ ಅನುಲೋಮನಕರವೂ ಗುಲ್ಮ, ತೂನೀ, ಪ್ರತೂನೀ ಎಂಬ ವಾತರೋಗಗಳ ನಾಶಕವೂ ಆಗಿರುವದು. (೩೧॥)

ತಿಲಪಿಣ್ಯಾಕವಿಕೃತಿಃ ಶುಷ್ಕಶಾಕಂ ವಿರೂಢಕಮ್ ॥೩೨॥
ಶಾಂಡಾಕೀವಟಕಂ ದೃಗ್ಘ್ನಂ ದೋಷಲಂ ಗ್ಲಪನಂ ಗುರು ॥

ಅರ್ಥ:— ಎಳ್ಳಿನ ಮತ್ತು ಹಿಂಡಿಯ ಪದಾರ್ಥಗಳು, ಒಣಗಿದ ಪಲ್ಲೆ, ಮೊಳಕೆ ಒಡೆದ ಧಾನ್ಯ, ಶಾಂಡಾಕೀವಟಕಗಳು (ಉದ್ದಿನ ಹಿಟ್ಟಿನ ಮಧ್ಯದಲ್ಲಿ ಇಟ್ಟು ಒಣಗಿಸಿದ ವಡಿಗಳು) ದೃಷ್ಟಿಯನ್ನು ಕೆಡಿಸುವವು ಮತ್ತು ತ್ರಿದೋಷಕಾರಕ, ಗ್ಲಾನಿಕಾರಕ ಹಾಗೂ ಜಡವಿರುವವು. (೩೨॥)

ರಸಾಲಾ ಬೃಂಹಣೀ ವೃಷ್ಯಾ ಸ್ನಿಗ್ಧಾ ಬಲ್ಯಾ ರುಚಿಪ್ರದಾ ॥೩೩॥

ಅರ್ಥ:— ಶ್ರೀಖಂಡವು ಪೌಷ್ಟಿಕ, ವೀರ್ಯವರ್ಧಕ, ಸ್ನಿಗ್ಧ, ಬಲ ಮತ್ತು ರುಚಿಯನ್ನು ಕೊಡುವದು. (೩೩)

ಶ್ರಮಕ್ಷುತ್ತೃಟ್ಕ್ಲಮಹರಂ ಪಾನಕಂ ಪ್ರೀಣನಂ ಗುರು ॥
ವಿಷ್ಟಂಭಿ ಮೂತ್ರಲಂ ಹೃದ್ಯಂ ಯಥಾದ್ರವ್ಯಗುಣಂ ಚ ತತ್ ॥೩೪॥

ಅರ್ಥ:— ಪಾನಕವು ಶ್ರಮ ಹಸಿವೆ ನೀರಡಿಕೆ ದಣುವುಗಳನ್ನು ನಾಶಮಾಡುವದು. ಆನಂದದಾಯಕ, ಜಡ, ಅವಷ್ಟಂಭಕ, ಮೂತ್ರ ವರ್ಧಕ, ಹೃದ್ಯ ಮತ್ತು ಯಾವ ಪದಾರ್ಥದಿಂದ ಮಾಡಲ್ಪಟ್ಟಿರುವದೋ ಅದರ ಗುಣವುಳ್ಳದ್ದೂ ಆಗಿರುವದು. ( ೩೪ )

**ಲಾಜಾಸ್ತೃಟ್ಛರ್ದ್ಯತೀಸಾರ ಮೇಹಮೇದಃಕಫಚ್ಛಿದಃ ||**
**ಕಾಸಪಿತ್ತೋಪಶಮನಾ ದೀಪನಾ ಲಘವೋ ಹಿಮಾಃ ||೩೫||**

ಅರ್ಥ:—ಭತ್ತದ ಅರಳು ನೀರಡಿಕೆ ವಾಂತಿ ಅತಿಸಾರ, ಮೇಹ ಮೇದ ಕಫಗಳ ನಾಶಕವೂ, ಕಾಸ ಪಿತ್ತಗಳ ಶಾಮಕವೂ, ದೀಪಕವೂ, ಹಗುರೂ, ಶೀತವೂ ಆಗಿರುವದು. ( ೩೫ )

**ಪೃಥುಕಾ ಗುರವೋ ಬಲ್ಯಾಃ ಕಫವಿಷ್ಟಂಭಕಾರಿಣಃ ||**

ಅರ್ಥ:— ಅವಲಕ್ಕಿಯು ಜಡ ಬಲವರ್ಧಕವಿದ್ದು ಕಫ ಮಲ-ಬಂಧ ಮಾಡುವದು. ( ೩೫|| )

**ಧಾನಾ ವಿಷ್ಟಂಭಿನೀ ರೂಕ್ಷಾ ತರ್ಪಣೀ ಲೇಖನೀ ಗುರುಃ ||೩೬||**

ಅರ್ಥ:— ಮೊಂಡಕ್ಕಿ (ಚುರಮುರಿ) ಮುಂತಾದ ಹುರಿದ ಧಾನ್ಯವು ಸ್ತಂಭಕ, ರುಕ್ಷ, ತೃಪ್ತಿಕರ, ದೋಷಚ್ಛೇದಕ ಮತ್ತು ಜಡವಿರುವದು .(೩೬)

**ಸಕ್ತವೋ ಲಘವಃ ಕ್ಷುತ್ತೃಟ್ಛ್ರಮ ನೇತ್ರಾಮಯ ವ್ರಣಾನ್ ||**
**ಘ್ನಂತಿ ಸಂತರ್ಪಣಾಃ ಪಾನಾತ್ಸದ್ಯ ಏವ ಬಲಪ್ರದಾಃ ||೩೭||**

**ನೋಂದಕಾಂತರಿತಾನ್ನ ದ್ವಿರ್ನ ನಿಶಾಯಾಂ ನ ಕೇವಲಾನ್ ||**
**ನ ಭುಕ್ತ್ವಾ ನ ದ್ವಿಜೈಶ್ಛಿತ್ತ್ವಾ ಸಕ್ತೂನದ್ಯಾನ್ನ ವಾ ಬಹೂನ್||೩೮||**

ಅರ್ಥ:— ಹುರಿದ ಮುಳ್ಳುಜವೆ ಮುಂತಾದವುಗಳ ಹಿಟ್ಟು, ಲಘು ವಿದ್ದು ಹಸಿವೆ ನೀರಡಿಕೆ ಶ್ರಮ ನೇತ್ರರೋಗ ವ್ರಣಗಳನ್ನುನಾಶಮಾಡುವದು. ಕುಡಿದ ಕೂಡಲೇ ತೃಪ್ತಿಕರ ಮತ್ತು ಬಲಪ್ರದವಾಗಿರುವದು ಅವು

ಗಳನ್ನು ತಿನ್ನುವಾಗ್ಗೆ ನಡುವೆ ನೀರು ಕುಡಿಯಬಾರದು. ಹಗಲು ಎರಡು ಸಾರೆ ತಿನ್ನಬಾರದು. ರಾತ್ರಿಯಲ್ಲಿಯೂ ಬರೇ ಅವನ್ನೇ ತಿನ್ನಬಾರದು. ಊಟಮಾಡಿದ ಮೇಲೂ, ಹಲ್ಲಿನಿಂದ ಕಡಿದೂ, ಹೆಚ್ಚು ಪ್ರಮಾಣದಿಂದಲೂ ತಿನ್ನಬಾರದು. (೩೮)

**ಪಿಣ್ಯಾಕೋ ಗ್ಲಪನೋ ರೂಕ್ಷೋ ವಿಷ್ಟಂಭೀ ದೃಷ್ಟಿದೂಷಣಃ ||**

ಅರ್ಥ:— ಹಿಂಡಿಯು ಗ್ಲಾನಿಕರ, ರುಕ್ಷ, ಸ್ತಂಭಕ, ದೃಷ್ಟಿಗೆ ಅಪಾಯವನ್ನು ಮಾಡುವದಾಗಿರುವದು. (೩೮||)

**ವೇಸವಾರೋ ಗುರುಃ ಸ್ನಿಗ್ಧೋ ಬಲೋಪಚಯವರ್ಧನಃ ||೩೯||**

ಅರ್ಥ:— ವೇಸವಾರ (ಇಂಗು, ಶುಂಠಿ, ಹವೀಜ, ಜೀರಿಗೆ, ತುಪ್ಪ ಮೊದಲಾದವುಗಳಿಂದ ಸಂಸ್ಕೃತವಾದ ಜಜ್ಜಿದ ಮಾಂಸ)ವು ಜಡ, ಸ್ನಿಗ್ಧ ಮತ್ತು ಶಕ್ತಿ ಪುಷ್ಟಿಕರವಾಗಿರುವದು. (೩೯)

**ಮುದ್ಗಾದಿಜಾಸ್ತು ಗುರವೋ ಯಥಾದ್ರವ್ಯಗುಣಾನುಗಾಃ ||**

ಅರ್ಥ:— ಹೆಸರು ಮೊದಲಾದವುಗಳ ಉಸಳೆಯು ಜಡವೂ ಆಯಾ ದ್ರವ್ಯದ ಗುಣವುಳ್ಳದ್ದೂ ಆಗಿರುವದು. (೩೯||)

**ಕುಕೂಲಖರ್ಪರಭ್ರಾಷ್ಟ್ರಕಂದ್ವಂಗಾರವಿಪಾಚಿತಾನ್ ||೪೦||**
**ಏಕಯೋನೀನ್ ಲಘೂನ್ವಿದ್ಯಾದಪೂಪಾನುತ್ತರೋತ್ತರಮ್ ||**

ಅರ್ಥಃ— ಕಾಡಕುಳ್ಳು, ಮಣ್ಣಿನ ಭಗ್ಗರಿ, ಬಾಣಲಿ, ಬಿಸ್ಕಿಟ ಪಾತ್ರೆ, ಮತ್ತು ಸಾಕ್ಷಾತ್ ಕೆಂಡದ ಮೇಲೆ ಬೇಯಿಸಿದ ಪದಾರ್ಥಗಳು ಒಂದೇ ಧಾನ್ಯದಿಂದ ಮಾಡಿದ್ದರೂ ಕೂಡ ಕ್ರಮವಾಗಿ ಹಿಂದಿನವುಗಳ ಕ್ಕಿಂತ ಮುಂದಿನವು ಹೆಚ್ಚು ಹಗುರು ಇರುತ್ತವೆ.

ಟಿಪ್ಪಣಿ:— ಅಗ್ನಿ ಸನ್ನಿಕರ್ಷವು ಹೆಚ್ಚಿದಂತೆ ಅವಕ್ಕೆ ಲಘುತ್ವ ಬರುತ್ತದೆ ಎಂಬ ಭಾವವು. (೪೦||)

ಅನ್ನವರ್ಗದ ನಂತರ ಅದರ ವ್ಯಂಜನಗಳಾದ ಮಾಂಸವರ್ಗ, ಶಾಕ ವರ್ಗಗಳನ್ನು ಹೇಳುತ್ತಾರೆ. ಅವರಲ್ಲಿಯೂ ಮಾಂಸವು ಮುಖ್ಯವು. ಏಕೆಂದರೆ ಅನ್ನದೊಡನೆ ಇದನ್ನು ಹೆಚ್ಚಾಗಿ ಉಪಯೋಗಿಸಿದರೂ ದೋಷವಿಲ್ಲ. ಆದರೆ ಶಾಕವನ್ನು ಹೆಚ್ಚಾಗಿ ಉಪಯೋಗಿಸಿದರೆ ಬಾಧಕವಿದೆ.

## ಮಾಂಸವರ್ಗ

ಮಾಂಸದಲ್ಲಿ ಎಂಟು ಪ್ರಕಾರಗಳು– ಮೃಗ, ವಿಷ್ಕಿರ, ಪ್ರತುದ, ಬಿಲೇಶಯ, ಪ್ರಸಹ, ಮಹಾಮೃಗ, ಜಲಚರ, ಮತ್ಸ್ಯ ಎಂದು. ಅವುಗಳನ್ನು ಹೇಳುತ್ತಾರೆ.

**ಹರಿಣೈಣಕುರುಂಗರ್ಕ್ಷಗೋಕರ್ಣಮೃಗಮಾತೃಕಾಃ ॥೪೧॥**
**ಶಶಶಂಬರಚಾರುಷ್ಕಶರಭಾದ್ಯಾ ಮೃಗಾಃ ಸ್ಮೃತಾಃ ||**

ಅರ್ಥ:— ಚಿಗರೆ (ಜಿಂಕೆ), ಏಣ, ಕುರಂಗ, ಕರಡಿ, ಗೋಕರ್ಣ (ಕಡತಿ), ಮೃಗ ಮಾತೃಕ (ಕಸ್ತೂರಿ ಮೃಗ), ಮೊಲ, ಶಂಬರ (ಕೆಂಪು ಬಣ್ಣದ ಹುಲ್ಲೆಯ ಹೋರೆ), ಚಾರುಷ್ಕ, ಶರಭ ಮುಂತಾದವುಗಳಿಗೆ ಮೃಗವೆನ್ನುತ್ತಾರೆ.

ಟಿಪ್ಪಣೆ:— ಹರಿಣವು ಕೆಂಪು. ಏಣವು ಕಪ್ಪು. ಕುರಂಗವು ಚಪಲ ಮತ್ತು ಚತುರಗತಿವುಳ್ಳದ್ದು. ಕರಡಿಯು ನೀಲಾಂಡವುಳ್ಳದ್ದು. ಗೋಕರ್ಣದ ಕಿವಿಯು ಆಕಳಂತೆ ಇದ್ದು, ಆಕಾರವು ಕತ್ತೆಯಂತೆ. ಮೃಗಮಾತ್ರಕದ ಹೊಟ್ಟೆಯು ತೆಳ್ಳಗೆ ಮತ್ತು ವಿಸ್ತೃತ. ಶಂಬರದ ಕೊಂಬುಗಳು ದೊಡ್ಡವಿದ್ದು ಟಿಸಿಲು ಒಡೆದಿರುತ್ತವೆ. ಚಾರುಷ್ಕವು ಸುಂದರ ಶರೀರವುಳ್ಳದ್ದು. ಶರಭಕ್ಕೆ ೮ ಕಾಲುಗಳಿರುವವು. (ಹೇಮಾದ್ರಿ) (೪೧॥)

**ಲಾವವರ್ತೀಕವರ್ತೀರರಕ್ತವರ್ತ್ಮಕಕುಕ್ಕುಭಾಃ ॥೪೨॥**

**ಕಪಿಂಜಲೋಪಚಕ್ರಾಖ್ಯಚಕೋರಕುರುಬಾಹವಃ ||**
**ವರ್ತಕೋ ವರ್ತಿಕಾ ಚೈವ ತಿತ್ತಿರಿಃ ಕ್ರಕರಃ ಶಿಖೀ ||೪೩||**

**ತಾಮ್ರಚೂಡಾಖ್ಯಬಕರಗೋವರ್ದಗಿರಿವರ್ತಿಕಾಃ ||**
**ತಥಾ ಶಾರಪದೇಂದ್ರಾಭವರಟಾದ್ಯಾಶ್ಚ ವಿಷ್ಕಿರಾಃ ॥೪೪॥**

ಅರ್ಥ:— ಲಾವ, ವರ್ತೀಕ (ಅಡವಿಯ ಗುಬ್ಬಿ), ಅಡವಿಯ ಕೋಳಿ (ಕುಕ್ಕುಭ) ಕಪಿಂಜಲ, (ಬಿಳೀವೇದ ಪಕ್ಷಿ) ಉಪಚಕ್ರ (ಚಕ್ರವಾಕ

ಜಾತಿ), ಚಕೋರ, ಕುರುಕುರು ಪಕ್ಷಿ, ವರ್ತಕ (ಕೆಂಡೆಲಿ ಹಕ್ಕಿ), ವರ್ತಿಕಾ (ಸಿಡಿಮಿಡಿ ಹಕ್ಕಿ), ತಿತ್ತಿರಿ (ವೇದಪಕ್ಷಿ), ಕ್ರಕರ ( ಕೂಗುವ ಜಿರಲೆ ) ನವಿಲು, ಕೋಳಿ, ಬಕರ, ಗೋನರ್ದ (ಸಾರಸ), ಗಿರಿವರ್ತಿಕಾ (ಗುಡ್ಡೀ ಸಿಡಿಮಿಡಿ ಹಕ್ಕಿ), ಸಾರಪದ, ಇಂದ್ರಾಭ (ಕೆಂಭೂತದ ಜಾತಿ), ವರಟ (ಹಂಸಜಾತಿ)-ಇವುಗಳಿಗೆ ವಿಷ್ಕಿರ ಅಂದರೆ ಕೆದರಿ ಹರವಿ ತಿನ್ನುವಂಥ ಪಕ್ಷಿಗಳೆಂದೆನ್ನುತ್ತಾರೆ.

**ಟಿಪ್ಪಣೀ**— ಲಾವವು ಯುದ್ಧಮಾಡುವದರಲ್ಲಿ ಚತುರವು. ವರ್ತೀರವು ಸಣ್ಣ ಕಪಿಂಜಲದಂತೆ ಇರುವದು. ಕುಕ್ಕುಭದಲ್ಲಿ ಸ್ಥಲಜ, ಜಲಜ ಎಂದು ಎರಡು ಭೇದಗಳುಂಟು. ರಕ್ತವರ್ತ್ಮಕವು ಸ್ಥಲಜವು; ಇದರ ಕಾಂತಿಯು ನೀಲ, ಕೊರಳಲ್ಲಿ ಕಪ್ಪು, ಆಕಾರ ಊರ ಗುಬ್ಬಿಯಂತೆ. ಕಪಿಂಜಲವೆಂದರೆ ಬಿಳೀ ತಿತ್ತಿರ ಪಕ್ಷಿಯು. ಉಪಚಕ್ರಕ್ಕೆ ಸಣ್ಣ ಚುಂಚು ಇದ್ದು ಮತ್ತವಾಗಿರುವದು. ಚಕೋರದ ಕಣ್ಣು ಕೆಂಪಗಿರುವದು. ಕುರುಬಾಹುವಿನ ಕೊರಳು ನೀಲ, ಶಿಖೆ ಕೆಂಪು, ಪಕ್ಕಗಳು ಬೆಳ್ಳಗಿರುವವು. ವರ್ತಕವು ವರ್ತೀರಕ್ಕಿಂತ ಸಣ್ಣದು. ವರ್ತಿಕೆಯು ಅದರಂತೆ ಇದ್ದು ಅದಕ್ಕೂ ಸಣ್ಣದು ಇರುವದು. ತಿತ್ತಿರಿಯ ಪಕ್ಕಗಳು ನಾನಾ ಬಣ್ಣದವು. ಕ್ರಕರವು ಕರಕರ ಶಬ್ದಮಾಡುವದು; ಕೊರಳಲ್ಲಿ ಕಪ್ಪು ಮತ್ತು ಹಳದಿ ಬಣ್ಣವಿದ್ದು ಚುಂಚು ಮತ್ತು ಕಾಲುಗಳು ಕಪ್ಪಾಗಿರುವವು; ಬೆನ್ನು ಕೆಂಪಗಿರುವದು. ಬಕರವು ಬಕದಂತೆ ಇರುವದು. ಸಾರಪದವು ಕಂಕಪಕ್ಷಿಯಂತೆ. ಇಂದ್ರಾಭವು ಕಂಕದಂತೆಯೇ ಆದರೆ ಅನೇಕ ಬಣ್ಣಗಳಿರುವವು. (೪೪)

**ಜೀವಂಜೀವಕದಾತ್ಯೂಹಭೃಂಗಾಹ್ವಶುಕಸಾರಿಕಾಃ ||**

**ಲಟ್ವಾಕೋಕಿಲಹಾರೀತಕಪೋತಚಟಕಾದಯಃ ||೪೫||**

**ಪ್ರತುದಾಃ......................................**

ಅರ್ಥಃ— ಜೀವಂಜೀವಕ, ದಾತ್ಯೂಹ (ಕುರುಡು ಕಾಗಿ), ಭೃಂಗರಾಜ, ಗಿಳಿ, ಸಾರಿಕೆ, ಲಟ್ವಾ ಕೋಕಿಲೆ, ಹಾರೀತ (ಹಸುಬನ ಪಕ್ಷಿ), ಪಾರಿವಾಳ, ಗುಬ್ಬಿ ಮುಂತಾದವುಗಳಿಗೆ **ಪ್ರತುದ** ಅಂದರೆ ಚುಂಚುವಿನಿಂದ ಚುಚ್ಚಿ ತಿನ್ನುವ ಪಕ್ಷಿಗಳು ಎಂದು ಅನ್ನುತ್ತಾರೆ.

**ಟಿಪ್ಪಣೀ**— ಜೀವಂಜೀವಕವು ಎರಡು ತಲೆ ಒಂದು ಹೊಟ್ಟೆಯುಳ್ಳದ್ದು. ಭೃಂಗರಾಜವು ಕರೇ ಗುಬ್ಬಿಯಂತೆ ಇರುವದು. ಲಟ್ವಾ - ಪುಚ್ಛದ ಕೆಳಗೆ ಕೆಂಪು ಬಣ್ಣವುಳ್ಳದ್ದು. ಹಾರೀತವು ಹಸರು ಹಳದೀ ಬಣ್ಣದ್ದು. (೪೫)

........ಭೇಕಗೋಧಾಹಿಶ್ವಾವಿದಾದ್ಯಾ ಬಿಲೇಶಯಾಃ ||

ಅರ್ಥ:— ಕಪ್ಪೆ, ಗೋಧಾ (ಉಡ), ಹಾವು, ಶ್ವಾವಿದ (ಮುಳ್ಳ ಹಂದಿ-ಸಲಾಕೆಯಂತೆ ಕೂದಲುಳ್ಳದ್ದು) ಮುಂತಾದವುಗಳಿಗೆ ಬಿಲೇಶಯ ಅಂದರೆ ಹೊದರಿನಲ್ಲಿ ಇರುವಂಥವು ಅನ್ನುತ್ತಾರೆ. (೪೫॥)

ಗೋಖರಾಶ್ವತರೋಷ್ಟ್ರಾಶ್ವದ್ವೀಪಿಸಿಂಹರ್ಕ್ಷವಾನರಾಃ ||೪೬||

ಮಾರ್ಜಾರಮೂಷಕವ್ಯಾಘ್ರವೃಕಬಭ್ರುತರಕ್ಷವಃ ||
ಲೋಪಾಕಜಂಬುಕಶ್ಯೇನಚಾಷವಾಂತಾದವಾಯಸಾಃ ||೪೭||

ಶಶಘ್ನೀಭಾಸಕುರರಗೃಧ್ರೋಲೂಕಕುಲಿಂಗಕಾಃ ||
ಧೂಮಿಕಾ ಮಧುಹಾ ಚೇತಿ ಪ್ರಸಹಾ ಮೃಗಪಕ್ಷಿಣಃ ||೪೮||

ಅರ್ಥ:— ಆಕಳು, ಕತ್ತೆ, ಹೇಸರಕತ್ತೆ, ಒಂಟೆ, ಕುದುರೆ, ಚಿರ್ತ್ಯ, ಸಿಂಹ, ಕರಡಿ, ಮಂಗ, ಬೆಕ್ಕು, ಇಲಿ, ಹುಲಿ, ತೋಳ, ಮುಂಗಲಿ, ತರಕ್ಷು (ಶಿವಂಗಿ), ಲೋಪಾಕ (ಮೈಮೇಲೆ ಕೂದಲುಳ್ಳ ಪ್ರಾಣಿ), ನರಿ, ನಾಯಿ ಮುಂತಾದ ಮೃಗಗಳಿಗೂ ಗಿಡಗ, ಚಾಷ (ಹಂಗನ ಹಕ್ಕಿ), ಕಾಗಿ, ಶಶಘ್ನಿ (ಮೊಲದ ವೈರಿ), ಭಾಸ (ನೀರಕಾಗಿ), ಕುರರ (ಬಿಳೀತಲೆಯ ಕೆಂಪು ಶರೀರದ ಮತ್ಸ್ಯಭಕ್ಷಕ ಪಕ್ಷಿ), ಹದ್ದು, ಗೂಗೆ, ಕರೆಗುಬ್ಬಿ, ಧೂಮಿಕಾ, ಮಧುಹಾ (ಜೇನು ನಾಶಮಾಡುವ ಪಕ್ಷಿ) ಮುಂತಾದ ಪಕ್ಷಿಗಳಿಗೂ ಪ್ರಸಹ (ಕಸಗೊಂಡು ತಿನ್ನುವಂಥವುಗಳು) ಎಂದು ಅನ್ನುವರು. (೪೮)

ವರಾಹಮಹಿಷನ್ಯಂಕುರುರುರೋಹಿತವಾರಣಾಃ ||
ಸೃಮರಶ್ಚಮರಃ ಖಡ್ಗೋ ಗವಯಶ್ಚ ಮಹಾಮೃಗಾಃ ||೪೯||

ಅರ್ಥ:— ಹಂದಿ, ಕೋಣ, ನ್ಯಂಕು (ಭೀಕರ ಕೋಡುಗಳುಳ್ಳ ಚಿಗರೆಯಂತೆ ಇದ್ದ ಪ್ರಾಣಿ,) ರುರು (ಕರೇದುಪ್ಪಿ=ಶರತ್ಕಾಲದಲ್ಲಿ ಕೋಡುಗಳನ್ನು ಬಿಡುವ ಬಹು ಕೋಡುಳ್ಳ ಪ್ರಾಣಿ) ರೋಹಿತ (ಕೆಂಪು ಮೃಗ), ಆನೆ, ಸೃಮರ (ಅಡವೀ ಕುದುರೆ), ಚಮರ (ಕಾಡಎತ್ತು), ಖಡ್ಗ (ಗಂಡಕ), ಗವಯ (ಇಣಿ ಮತ್ತು ಗಂಗೆದೊಗಲು ಇಲ್ಲದ ಎತ್ತು) ಇವು— ಮಹಾಮೃಗಗಳು. (೪೯)

ವಾಸ್ತುಶಿಲ್ಪವನ್ನು ಅರಮನೆ, ಮಸೀದಿ ಮತ್ತು ಸಮಾಧಿಭವನ ಎಂದು ಮೂರು ಭಾಗ ಮಾಡಿದಲ್ಲಿ, ಅವರ ಸಮಾಧಿಭವನಗಳೇ ಹೆಚ್ಚು ಪ್ರಸಿದ್ಧಿಯನ್ನು ಪಡೆದವುಗಳು. ಇಬ್ರಾಹಿಂ ರೋಜಾ ಮತ್ತು ಗೋಲಗುಂಬಜ್ ಇವುಗಳಲ್ಲಿ ಬಹುಮುಖ್ಯ. ಅವರ ಅರಮನೆಗಳಲ್ಲಿ ಗಗನ್ ಮಹಲ್, ಸಾತ್ ಮಂಜಿಲ್, ಆನಂದ್ ಮಹಲ್, ಆಸಾರ್ ಮಹಲ್, ಸಂಗೀತ್ ಮಹಲ್ ಮುಖ್ಯವಾದುವುಗಳು. ಅರಮನೆಗಳು ವಿಶಾಲ ಸಭಾಂಗಣ, ಜಾಲಂಧ್ರ, ಕೆತ್ತನೆಯ ಕಿಟಕಿಬಾಗಿಲು, ಮರದ ಕೆತ್ತನೆಯ ಕಂಬ ಮತ್ತು ಚಿತ್ರಿತ ಛಾವಣಿಗಳಿಂದ ಕೂಡಿದೆ.

**ಮೆಹತರ್ ಮಹಲ್ :**

ಮೆಹತರ್ ಮಹಲ್ ಎಂಬುದು ಒಂದು ಮಹಾದ್ವಾರ. ಬಹಳ ಆಕರ್ಷಕವಾಗಿ ಕೆತ್ತಲ್ಪಟ್ಟ ಮರದ ಬಾಗಿಲು ಇದರ ವೈಶಿಷ್ಟ್ಯ. ಇದರ ಮೇಲೆ 66 ಅಡಿ ಎತ್ತರದ ಕುಸುರಿಕೆಲಸದಿಂದ ಕೂಡಿದ ಎರಡು ಗೋಪುರಗಳಿವೆ. ಪರ್ಸಿ ಬ್ರೌನ್ "ಇಲ್ಲಿಯ ವಾಸ್ತುಶಿಲ್ಪದ ಸೂಕ್ಷ್ಮಕಲಾಕೌಶಲ್ಯ ಬೆರಗುಗೊಳಿಸುವಂತಹುದು. ಕಲ್ಲನ್ನು ಮಿದು ವಾದ ಮಣ್ಣಿನಂತೆ ಕೈಯಿಂದ ತಿದ್ದಿ ಆಕಾರ ಕೊಟ್ಟಂತೆ ಕಾಣುತ್ತದೆ" ಎಂದಿದ್ದಾನೆ.

**ಜಾಮೀ ಮಸೀದಿ :**

ದಕ್ಷಿಣಭಾರತದ ಮಸೀದಿಗಳಲ್ಲಿ ದೊಡ್ಡದಾದ, ಸುಮಾರು ಮೂರುಸಾವಿರಮಂದಿ ಮಸೀದಿಯ ಒಳಗೆ ಒಟ್ಟಿಗೆ ನಮಾಜು ಮಾಡಲು ಸ್ಥಳಾವಕಾಶವಿರುವ ವಿಶಾಲವಾದ ಈ ಮಸೀದಿಯು ಒಂದನೇ ಆಲಿಯ ಕಾಲದಲ್ಲಿ ಕಟ್ಟಲ್ಪಟ್ಟಿತು. ವಿಜಯನಗರದ ವಿರುದ್ಧ ಹೂಡಿದ ಯುದ್ಧದಲ್ಲಿ ಗೆದ್ದುತಂದ ಸಂಪತ್ತಿನಿಂದ ಈ ಮಸೀದಿಯನ್ನು ನಿರ್ಮಿಸಲಾಯಿತೆನ್ನಲಾಗಿದೆ. ತಳಭಾಗ ಕಮಲದಾಕಾರದಲ್ಲಿದ್ದು, ಮೇಲೇರುವ ಇದರ ಗುಮ್ಮಟ ತುಂಬಾ ಆಕರ್ಷಕವಾಗಿದೆ. ಮಸೀದಿಯ ಒಳಗಡೆ ಸುತ್ತಲೂ ಕಮಾನುಗಳಿವೆ. ಇವುಗಳಿಗೆ ಉತ್ತಮ ದರ್ಜೆಯ ಕಲ್ಲುಗಳನ್ನು ಬಳಸಲಾಗಿದೆ. ನಡುವಿನ ಕಮಾನಿಗೆ ಚಿನ್ನದ ಲೇಪನ ಮಾಡಲಾಗಿದೆ.

**ಆಸಾರ್ ಮಹಲ್ :**

ನ್ಯಾಯಸ್ಥಾನಕ್ಕಾಗಿ ಕಟ್ಟಿದ ಈ ಕಟ್ಟಡದ ಗೋಡೆಯ ಮೇಲೆ ಸುಂದರವಾದ ವರ್ಣಚಿತ್ರಗಳನ್ನು ಬರೆಯಲಾಗಿದೆ. ಯುರೋಪಿನ ತಾಂತ್ರಿಕತೆಯನ್ನು ಈ ವರ್ಣ ಚಿತ್ರಗಳಲ್ಲಿ ಬಳಸಲಾಗಿದೆ. ಔರಂಗಜೇಬನು ಈ ವರ್ಣಚಿತ್ರಗಳ ಮೇಲೆ ಬಿಳಿ ಬಣ್ಣ ಬಳಿಸಿದನು.

**ಯೋನಿಷ್ವಜಾವೀ ವ್ಯಾಮಿಶ್ರಗೋಚರತ್ವಾದನಿಶ್ಚಿತೇ ॥**
**ಆದ್ಯಾಂತ್ಯಾ ಜಾಂಗಲಾನೂಪಾ ಮಧ್ಯೌ ಸಾಧಾರಣೌ ಸ್ಮೃತಃ**

ಅರ್ಥಃ— ಆಡು ಬುಣ್ಣೆಗುರಿಗಳಲ್ಲಿ ಜಾಂಗಲ, ಅನೂಪ ಎರಡೂ ಲಕ್ಷಣಗಳಿದ್ದುದರಿಂದ ಅವನ್ನು ಯಾತರಲ್ಲಿ ಸಮಾವೇಶ ಮಾಡಬೇಕೆಂದು ಹೇಳಲಿಕ್ಕೆ ಬಾರದು. ಮೇಲಿನ ಎಂಟು ವರ್ಗಗಳಲ್ಲಿ ಮೊದಲಿನ ಮೂರು (ಮೃಗ, ವಿಷ್ಕಿರ, ಪ್ರತುದ) ಜಾಂಗಲ (ಜಾಂಗಲದೇಶದವು), ಕಡೆಯ ಮೂರು (ಮಹಾಮೃಗ, ಜಲಚರ, ಮತ್ಸ್ಯ) ಆನೂಪ (ಅನೂಪದೇಶದವು), ನಡುವಿನ ಎರಡು (ಬಿಲೇಶಯ-ಪ್ರಸಹ) ಸಾಧಾರಣ (ಸಾಧಾರಣದೇಶದವು) ಎಂದು ತಿಳಿಯಬೇಕು. (೫೩)

**ತತ್ರ ಬದ್ಧಮಲಾಃ ಶೀತಾ ಲಘವೋ ಜಾಂಗಲಾ ಹಿತಾಃ ॥**
**ಪಿತ್ತೋತ್ತರೇ ವಾತಮಧ್ಯೇ ಸನ್ನಿಪಾತೇ ಕಫಾನುಗೇ ॥೫೪॥**

ಅರ್ಥಃ— ಅವುಗಳಲ್ಲಿ ಜಾಂಗಲಪ್ರಾಣಿಗಳು ಮಲಬಂಧಕ ಶೀತ ಲಘು ಇದ್ದು ಪಿತ್ತಾಧಿಕ ಮಧ್ಯಮವಾತ ಸ್ವಲ್ಪ ಕಫವುಳ್ಳ ಸನ್ನಿಪಾತದಲ್ಲಿ ಹಿತಕರವಿರುತ್ತವೆ. (೫೪)

**ದೀಪನಃ ಕಟುಕಃ ಪಾಕೇ ಗ್ರಾಹೀ ರೂಕ್ಷೋ ಹಿಮಃ ಶಶಃ ॥**

ಅರ್ಥಃ— ಮೊಲವು ದೀಪಕ, ವಿಪಾಕದಲ್ಲಿ ಕಾರ, ಸ್ತಂಭಕ, ರುಕ್ಷ ಮತ್ತು ಶೀತವಾಗಿರುತ್ತದೆ. (೫೪॥)

**ಈಷದುಷ್ಣಗುರುಸ್ನಿಗ್ಧಾ ಬೃಂಹಣಾ ವರ್ತಕಾದಯಃ ॥೫೫॥**

ಅರ್ಥಃ— ವರ್ತಕ ಮೊದಲಾದ ಎಲ್ಲ ಜಾಂಗಲಪ್ರಾಣಿಗಳು ಸ್ವಲ್ಪ ಉಷ್ಣ ಗುರು ಸ್ನಿಗ್ಧ ಪೌಷ್ಟಿಕವಿರುತ್ತವೆ. (೫೫)

**ತಿತ್ತಿರಿಸ್ತೇಷ್ವಪಿ ವರೋ ಮೇಧಾಗ್ನಿಬಲಶುಕ್ರಕೃತ್ ॥**
**ಗ್ರಾಹೀ ವರ್ಣ್ಯೋಽನಿಲೋದ್ರಿಕ್ತಸನ್ನಿಪಾತಹರಃ ಪರಮ್ ॥೫೬॥**

ಅರ್ಥಃ— ಅವುಗಳಲ್ಲಿ ಕೂಡ ತಿತ್ತಿರಿಯು ಶ್ರೇಷ್ಠವಿದ್ದು ಅದು ಬುದ್ಧಿ ಅಗ್ನಿ ಶಕ್ತಿ ಶುಕ್ರಗಳ ವರ್ಧಕವೂ ಸ್ತಂಭಕವೂ ಶಾಂತಿಕರವೂ ವಾತಾಧಿಕ-ಸನ್ನಿಪಾತ ನಾಶಕವೂ ಆಗಿರುವದು. (೫೬)

ನಾತಿಪಥ್ಯಃ ಶಿಖೀ ಪಥ್ಯಃ ಶ್ರೋತ್ರಸ್ವರವಯೋದೃಶಾಮ್ ॥

ಅರ್ಥಃ— ನವಿಲು ಸಿರೋಗಿಗಳಿಗೆ ವಿಶೇಷ ಪಥ್ಯಕರವಲ್ಲ; ಆದರೂ ಆಯುಷ್ಕರ, ಕಿವಿ ಸ್ವರ ದೃಷ್ಟಿಗಳಿಗೆ ಹಿತಕರವು. (೫೬||)

ತದ್ವಚ್ಚ ಕುಕ್ಕುಟೋ ವೃಷ್ಯಃ.........................

ಅರ್ಥಃ— ಅದರಂತೆಯೇ ಕಾಡಕೋಳಿಯ ಗುಣವಿದ್ದು ವೃಷ್ಯವಾಗಿರುವದು.

........ಗ್ರಾಮ್ಯಸ್ತು ಶ್ಲೇಷ್ಮಲೋ ಗುರುಃ ||೫೭||

ಅರ್ಥಃ— ಊರುಕೋಳಿಯ ಮಾಂಸವು ಕಫಕರವೂ ಜಡವೂ ಇರುತ್ತದೆ. (೫೭)

ಮೇಧಾನಲಕರಾ ಹೃದ್ಯಾ ಕ್ರಕರಾಃ ಸೋಪಚಕ್ರಕಾಃ ॥

ಅರ್ಥ:— ಕ್ರಕರ ಮತ್ತು ಉಪಚಕ್ರಕ ಪಕ್ಷಿಗಳು ಬುದ್ಧಿ ಮತ್ತು ಅಗ್ನಿವರ್ಧಕವಿದ್ದು ಹೃದ್ಯ ಇರುತ್ತವೆ. (೫೭||)

ಗುರುಃ ಸಲವಣಃ ಕಾಣಕಪೋತಃ ಸರ್ವದೋಷಕೃತ್ ||೫೮||

ಅರ್ಥಃ— ಕಾಣಕಪೋತವು (ಪಾರಿವಾಳದ ಸಣ್ಣ ಜಾತಿ) ಜಡ, ಸ್ವಲ್ಪ ಉಪ್ಪು ಮತ್ತು ತ್ರಿದೋಷಕರವಿರುತ್ತದೆ. (೫೮)

ಚಟಕಾಃ ಶ್ಲೇಷ್ಮಲಾಃ ಸ್ನಿಗ್ಧಾ ವಾತಘ್ನಾಃ ಶುಕ್ರಲಾಃ ಪರಮ್ ॥

ಅರ್ಥಃ— ಗುಬ್ಬಿಗಳು ಕಫಕರ, ಸ್ನಿಗ್ಧ, ವಾತನಾಶಕ, ಬಹಳ ವೀರ್ಯವರ್ಧಕವಾಗಿರುತ್ತವೆ. (೫೮||)

ಗುರೂಷ್ಣಸ್ನಿಗ್ಧಮಧುರಾ ವರ್ಗಾಶ್ಚಾತೋ ಯಥೋತ್ತರಮ್ ||೫೯||
ಮೂತ್ರಶುಕ್ರಕೃತೋಬಲ್ಯಾ ವಾತಘ್ನಾಃ ಕಫಪಿತ್ತಲಾಃ ॥

ಅರ್ಥಃ— ಇದರ ಮುಂದಿನ [ಬಿಲೇಶಯ ಮೊದಲಾದ] ವರ್ಗಗಳಲ್ಲಿ ಮುಂದು ಮುಂದಿನವು ಹಿಂದು ಹಿಂದಿನಕ್ಕಿಂತ ಹೆಚ್ಚು ಹೆಚ್ಚು ಜಡ,

ಉಷ್ಣ, ಸ್ನಿಗ್ಧ, ಮಧುರ, ಮೂತ್ರ ಶುಕ್ರ ಬಲವರ್ಧಕ, ವಾತನಾಶಕ, ಕಫ ಪಿತ್ತಕರವಾಗಿರುತ್ತವೆ. (೫೯||)

**ಶೀತಾ ಮಹಾಮೃಗಾಸ್ತೇಷು, ಕ್ರವ್ಯಾದಪ್ರಸಹಾಃ ಪುನಃ ||೬೦||**

**ಲವಣಾನುರಸಾಃ ಪಾಕೇ ಕಟುಕಾ ಮಾಂಸ ವರ್ಧನಾಃ||**
**ಜೀರ್ಣಾರ್ಶೋಗ್ರಹಣೀದೋಷಶೋಷಾರ್ತಾನಾಂ ಪರಂ ಹಿತಾಃ||೬೧||**

ಅರ್ಥಃ- ಅವುಗಳಲ್ಲಿ ಮಹಾಮೃಗಗಳ ಮಾಂಸವು ಶೀತವಿರುತ್ತದೆ. ಹಸಿ ಮಾಂಸತಿನ್ನುವ ಪ್ರಸಹಪ್ರಾಣಿಗಳಾದ ಬೆಕ್ಕುಹದ್ದು ಮೊದಲಾದವು ಲವಣವು ಅನುರಸವಾಗಿವುಳ್ಳವು, ವಿಪಾಕದಲ್ಲಿ ಕಾರ, ಮಾಂಸ ವರ್ಧಕ, ಹಳೇ ಮೂಲ ವ್ಯಾಧಿ ಗ್ರಹಣೀ ಕ್ಷಯಗಳಿಂದ ಪೀಡಿತರಾದವರಿಗೆ ಬಹಳ ಹಿತಕರವಾಗಿರುತ್ತವೆ. (೬೧)

**ನಾತಿಶೀತಂ ಗುರು ಸ್ನಿಗ್ಧಂ ಮಾಂಸಮಾಜಮದೋಷಲಮ್ ||**
**ಶರೀರಧಾತುಸಾಮಾನ್ಯಾದನಭಿಷ್ಯಂದಿ ಬೃಂಹಣಮ್ ||೬೨||**

ಅರ್ಥ:— ಆಡಿನ ಮಾಂಸವು ಸಾಧಾರಣ ಶೀತ ಗುರು ಸ್ನಿಗ್ಧವಿದ್ದು ಯಾವ ದೋಷವನ್ನೂ ಹೆಚ್ಚಿಸದು. ಮನುಷ್ಯನ ಶರೀರ ಧಾತುವಿಗೆ ಸಮಾನವಾದ್ದರಿಂದ ಕಫವನ್ನು ಮಾಡದೇ ಶರೀರ ಪುಷ್ಟಿಯನ್ನು ಮಾಡುತ್ತದೆ. (೬೨)

**ವಿಪರೀತಮತೋ ಜ್ಞೇಯಮಾವಿಕಂ ಬೃಂಹಣಂ ತು ತತ್ ||**

ಅರ್ಥಃ— ಉಣ್ಣೆಗುರಿಯ ಮಾಂಸವು ಇದರ ವಿಪರೀತ (ಉಷ್ಣ, ದೋಷಲ ಇತ್ಯಾದಿ) ಇದ್ದು ಪೌಷ್ಟಿಕ ಮಾತ್ರ ಇರುತ್ತದೆ. (೬೩||)

**ಶುಷ್ಕಕಾಸಶ್ರಮಾತ್ಯಗ್ನಿವಿಷಮಜ್ವರಪೀನಸಾನ್ ||೬೪||**
**ಕಾರ್ಶ್ಯಂ ಕೇವಲವಾತಾಂಶ್ಚ ಗೋಮಾಂಸಂ ಸನ್ನಿಯಚ್ಛತಿ ||**

ಅರ್ಥಃ— ಗೋಮಾಂಸವು ಒಣಕೆಮ್ಮು ಶ್ರಮ ಅತ್ಯಗ್ನಿ ವಿಷಮ-ಜ್ವರ ಪೀನಸ ಕಾರ್ಶ್ಯ ಶುದ್ಧವಾತಗಳನ್ನು ಕಳೆಯುವದು. (೬೪||)

**ಉಷ್ಣೋ ಗರೀಯಾನ್ ಮಹಿಷಃ ಸ್ವಪ್ನದಾರ್ಢ್ಯಬೃಹತ್ತ್ವಕೃತ್**
|೬೪||

ಅರ್ಥಃ— ಕೋಣದ ಮಾಂಸವು ಉಷ್ಣ, ಗುರು ಇದ್ದು ನಿದ್ರೆ ದಾರ್ಢ್ಯ ಪುಷ್ಟಿಗಳನ್ನು ಕೊಡುತ್ತದೆ. (೬೪)

**ತದ್ವದ್ವರಾಹಃ ಶ್ರಮಹಾ ರುಚಿಶುಕ್ರಬಲಪ್ರದಃ ||**

ಅರ್ಥಃ— ಇದರಂತೆಯೆ ಹಂದಿಯ ಮಾಂಸವಿದ್ದು ಶ್ರಮವನ್ನು ನಾಶಪಡಿಸುತ್ತದೆ. ಮತ್ತು ರುಚಿ ಶುಕ್ರ ಬಲಗಳನ್ನು ಕೊಡುತ್ತದೆ. (೬೪||)

**ಮತ್ಸ್ಯಾಃ ಪರಂ ಕಫಕರಾಃ..........................**

ಅರ್ಥಃ— ಮೀನಗಳು ಬಹಳ ಕಫಕರವು. (೬೪|||)

**..........................ಚಿಲಿಚೀಮಸ್ತ್ರಿದೋಷಕೃತ್** ||೬೫||

ಅರ್ಥಃ— ಚಿಲಿಚೀಮವು ತ್ರಿದೋಷವನ್ನುಂಟುಮಾಡುತ್ತದೆ. (೬೫)

**ಲಾವರೋಹಿತಗೋಧೈಣಾಃ ಸ್ವೇ ಸ್ವೇ ವರ್ಗೇ ವರಾಃ ಪರಮ್ ||**

ಅರ್ಥಃ— ಲಾವ, ರೋಹಿತ, ಉಡ, ಮತ್ತು ಏಣ ಇವು ತಮ್ಮ ತಮ್ಮ ವರ್ಗ (ಕ್ರಮದಿಂದ ವಿಷ್ಕಿರ, ಮತ್ಸ್ಯ, ಬಿಲೇಶಯ, ಮೃಗ) ಗಳಲ್ಲಿ ಶ್ರೇಷ್ಠವಾದವು ಇರುತ್ತವೆ. (೬೫||)

**ಮಾಂಸಂ ಸದ್ಯೋಹತಂ ಶುದ್ಧಂ ವಯಃಸ್ಥಂ ಚ ಭಜೇತ್........**

ಅರ್ಥಃ— ತರುಣ ಮತ್ತು ಅದೇ ಹೊಡೆದ ಪ್ರಾಣಿಯ ಶುದ್ಧವಾದ (ಸ್ನಾಯು ಅಸ್ಥಿಗಳನ್ನು ತೆಗೆದು) ಮಾಂಸವನ್ನು ತಿನ್ನಬೇಕು. (೬೬)

**..................................................ತ್ಯಜೇತ್** ||೬೬||
**ಮೃತಂ ಕೃಶಂ ಭೃಶಂ ಮೇದ್ಯಂ ವ್ಯಾಧಿವಾರಿವಿಷೈರ್ಹತಮ್ ||**

ಅರ್ಥಃ— ತಾನಾಗಿಯೇ ಸತ್ತ, ಕೃಶ, ಬಹಳ ಮೇದವುಳ್ಳ, ಬೇನೆಯಿಂದ ಅಥವಾ ನೀರಿನಲ್ಲಿ ಬಿದ್ದು ಅಥವಾ ವಿಷದಿಂದ ಸತ್ತ ಪ್ರಾಣಿಯ ಮಾಂಸವನ್ನು ತಿನ್ನಬಾರದು. (೬೬||)

**ಪುಂಸ್ತ್ರಿಯೋಃ ಪೂರ್ವಪಶ್ಚಾರ್ಧೇ ಗುರುಣೀ, ಗರ್ಭಿಣೀ ಗುರುಃ ||**
**||೬೭||**

ಅರ್ಥಃ— ಗಂಡು ಪ್ರಾಣಿಯ ಮುಂದಿನ ಅರ್ಧಭಾಗವೂ (ತಲೆ ಯಿಂದ ಹೊಕ್ಕಳದ ವರೆಗೆ), ಹೆಣ್ಣು ಪ್ರಾಣಿಯ ಹಿಂದಿನ ಅರ್ಧ ಭಾಗವೂ ( ಹೊಕ್ಕಳದಿಂದ ಬಾಲದ ವರೆಗೆ ), ಗರ್ಭಿಣಿಯ ಮಾಂಸವೂ ಗುರು ಇರುತ್ತದೆ. (೬೭)

**ಲಘುಯೋಷಿಚ್ಚತುಷ್ಪಾತ್ಸು ವಿಹಂಗೇಷು ಪುನಃ ಪುಮಾನ್ ||**

ಅರ್ಥಃ— ನಾಲ್ಕು ಕಾಲುಗಳುಳ್ಳ ಪ್ರಾಣಿಗಳಲ್ಲಿ ಹೆಣ್ಣು ಹಗುರು. ಆದರೆ ಪಕ್ಷಿಗಳಲ್ಲಿ ಗಂಡು ಹಗುರು. (೬೭||)

**ಶಿರಃಸ್ಕಂಧೋರುಪೃಷ್ಠಸ್ಯ ಕಟ್ಯಾಃ ಸಕ್ಥ್ನೋಶ್ಚ ಗೌರವಮ್ ||೬೮||**

**ತಥಾಽಽಮಪಕ್ವಾಶಯಯೋರ್ಯಥಾಪೂರ್ವಂ ವಿನಿರ್ದಿಶೇತ್ ||**
**ಶೋಣಿತಪ್ರಭೃತೀನಾಂ ಚ ಧಾತೂನಾಮುತ್ತರೋತ್ತರಮ್ ||೬೯||**

ಅರ್ಥಃ— ತಲೆ, ಹೆಗಲು, ತೊಡೆ, ಬೆನ್ನು, ಟೊಂಕ, ಮೊಣಕಾಲುಗಳಲ್ಲಿ ಹಿಂದೆ ಹಿಂದಿನವು ಜಡ; ಅದರಂತೆ ಆಮಾಶಯವು ಪಕ್ವಾಶಯಕ್ಕಿಂತ ಜಡ; ರಕ್ತಾದಿ ಧಾತುಗಳು ಉತ್ತರೋತ್ತರ ಜಡವಿರುವವು. (೬೯)

**ಮಾಂಸಾದ್ಗರೀಯೋವೃಷಣಮೇಢ್ರವೃಕ್ಕಯಕೃದ್ಗುದಮ್ ||**

ಅರ್ಥಃ— ಮಾಂಸಕ್ಕಿಂತ ವೃಷಣ, ಶಿಶ್ನ, ಮೂತ್ರಪಿಂಡ, ಯಕೃತ್, ಗುದಗಳು ಕ್ರಮವಾಗಿ ಹೆಚ್ಚು ಜಡವಿರುತ್ತವೆ. (೬೯||)

**ಶಾಕವರ್ಗ**

**ಶಾಕಂ ಪಾಠಾಶಠೀಸೂಷಾಸುನಿಷಣ್ಣಸತೀನಜಮ್ ||೭೦||**
**ತ್ರಿದೋಷಘ್ನಂ ಲಘು ಗ್ರಾಹಿ ಸರಾಜಕ್ಷವವಾಸ್ತುಕಮ್ ||**

ಅರ್ಥ:— ಅಗಳಶುಂಠಿ (ಹಾಡೆ), ಕಚೋರ, ಸೂಷಾ (ಎಲವರಿಗೆ), ಸುನಿಷಣ್ಣ (ಪಾಂಡವರ ಹರಿವೆ), ಸತೀನಜ, ವಿಷ್ಣುಕ್ರಾಂತಾ, ರಾಜಕ್ಷವ, ವಾಸ್ತುಕ (ಚಕೋತ)-ಇವು ತ್ರಿದೋಷನಾಶಕ ಲಘು ಸ್ತಂಭಕರವಿರುತ್ತವೆ. (೭೦॥)

**ಸುನಿಷಣ್ಣೋಽಗ್ನಿಕೃದ್ವೃಷ್ಯಸ್ತೇಷು.......................**

ಅರ್ಥ:— ಇವುಗಳಲ್ಲಿ ಸುನಿಷಣ್ಣವು (ಪಾಂಡವರ ಹರಿವೆ) ಅಗ್ನಿ-ವರ್ಧಕ ಮತ್ತು ವೃಷ್ಯವಿರುತ್ತದೆ. (೭೦|||)

**............................ .......ರಾಜಕ್ಷವಃ ಪರಮ್ ॥೭೧॥**
**ಗ್ರಹಣ್ಯರ್ಶೋವಿಕಾರಘ್ನಃ...............................**

ಅರ್ಥ:— ರಾಜಕ್ಷವವು ಸಂಗ್ರಹಣೀ, ಮೂಲವ್ಯಾಧಿಗಳನ್ನು ನಾಶ ಮಾಡುತ್ತದೆ. (೭೧|)

**.ವರ್ಚೋಭೇದಿ ತು ವಾಸ್ತುಕಮ್**

ಅರ್ಥ:— ವಾಸ್ತುಕ ( ಚಕೋತ )ವು ಮಲದ ಗಂಟನ್ನು ಒಡೆಯುವದು. (೭೧||)

**ಹಂತಿ ದೋಷತ್ರಯಂ ಕುಷ್ಠಂ ವೃಷ್ಯಾ ಸೋಷ್ಣಾ ರಸಾಯನೀ॥೭೨॥**
**ಕಾಕಮಾಚೀ ಸರಾಸ್ವರ್ಯಾ.......................... ........**

ಅರ್ಥ:— ಕಾಕಮಾಚಿಯು (ಗಣಿಕೆಯ ಸೊಪ್ಪು=ಕಾಕಪಿಟ್ಲೆಯ ಸೊಪ್ಪು ) ತ್ರಿದೋಷ-ಕುಷ್ಠ-ನಾಶಕವಿದ್ದು ವೀರ್ಯವರ್ಧಕ ಉಷ್ಣ ರಸಾಯನ ಸಾರಕ ಮತ್ತು ಸ್ವರಕ್ಕೆ ಹಿತಕರವಿರುತ್ತದೆ. (೭೨|)

**...........................ಚಾಂಗೇರ್ಯಮ್ಲಾಽಗ್ನಿದೀಪನೀ ॥**
**ಗ್ರಹಣ್ಯರ್ಶೋಽನಿಲಶ್ಲೇಷ್ಮಹಿತೋಷ್ಣಾ ಗ್ರಾಹಿಣೀ ಲಘುಃ ॥೭೩॥**

ಅರ್ಥ:— ಚಾಂಗೇರಿ (ಪುಳ್ಳಂಪರಚೆ) ಯು ಹುಳಿ, ಅಗ್ನಿ-ದೀಪಕವಿದ್ದು ಗ್ರಹಣೀ ಮೂಲವ್ಯಾಧಿ ವಾತ ಕಫಗಳ ನಾಶಕ, ಉಷ್ಣ, ಸ್ತಂಭಕ, ಲಘುವಿರುತ್ತದೆ. (೭೩)

**ಪಟೋಲಸಪ್ತಲಾರಿಷ್ಟಶಾಙ್ಗೇಷ್ಟಾವಲ್ಗುಜಾಽಮೃತಾಃ ||**
**ವೇತ್ರಾಗ್ರಬೃಹತೀವಾಸಾಕುತಿಲೀತಿಲಪರ್ಣಿಕಾಃ ||೨೪||**

**ಮಂಡೂಕಪರ್ಣೀಕರ್ಕೋಟಕಾರವೇಲ್ಲಕಪರ್ಪಟಾಃ ||**
**ನಾಡೀಕಲಾಯಗೋಜಿಹ್ವಾವಾರ್ತಾಕಂ ವನತಿಕ್ತಕಮ್ ||೨೫||**

**ಕರೀರಂ ಕುಲಕಂ ನಂದೀ ಕುಚೈಲಾ ಶಕುಲಾದನೀ ||**
**ಕಟಿಲ್ಲಂ ಕೇಂಬುಕಂ ಶೀತಂ ಸಕೋಶಾತಕಕರ್ಕಶಮ್ ||೨೬||**

**ತಿಕ್ತ ಪಾಕೇ ಕಟು ಗ್ರಾಹಿ ವಾತಲಂ ಕಫಪಿತ್ತಜಿತ್ ||**

ಅರ್ಥಃ— ಪಡುವಲ, ಸಪ್ತಲಾ ( ಶೀಗೀಸೊಪ್ಪು ), ಬೇವು ಶಾಙ್ಗೇಷ್ಟಾ (ಗಜಗ=ದೊಡ್ಡ ಹುಲಗಲಿ), ಬಾವಂಚೀ, ಅಮೃತಬಳ್ಳಿ, ಬೆತ್ತದ ಮುಗುಳು, ನೆಲಗುಳ್ಳ, ಹೆಬ್ಬುಗುಳ್ಳ, ಅಡಸಲ, ಅಡವೀಎಳ್ಳು, ತಿಲಪರ್ಣಿಕ (ನಾರಂಬೇಳೆ), ಮಂಡೂಕಪರ್ಣಿ (ಬ್ರಾಹ್ಮೀ), ಕರ್ಕೋಟ (ಮಡಹಗಲು), ಹಾಗಲ, ಪರಿಪಾಷ್ಟಕ, ನಾಡೀಕಲಾಯ, ಗೋಜಿಹ್ವಾ (ಹತ್ತರಕೆ), ಬದನಿ, ವನತಿಕ್ತಕ (ಚಿರಾಯತ), ನೇಪತ್ತಿ (ಕಳಲೆ), ಕುಲಕ (ಹಾಗಲಜಾತಿ), ನಂದೀ (ಮೇಷಶೃಂಗಿ,) ಕುಚೇಲಾ (ಕರೇಹಾಡೆ), ಶಕುಲಾದನೀ (ಕಟುಕ ರೋಣಿ), ಕಟಿಲ್ಲ ( ಕೆಂಪುಗಣಜಲಿ=ಕೊಮ್ಮೆ ), ಕೇಂಬುಕ, ಹೀರಿ, ಕರ್ಕಶ (ಕಪಿಲಾ=ಗುಬ್ಬಿ-ಹಾಗಲು)- ಈ ಪಲ್ಲೆಗಳು ಶೀತ, ಕಹಿ, ಪಾಕದಲ್ಲಿ ಕಾರ, ಸ್ತಂಭಕ, ವಾತಕರ, ಕಫ-ಪಿತ್ತನಾಶಕ ಇರುತ್ತವೆ. (೨೬||)

**ಹೃದ್ಯಂ ಪಟೋಲಂ ಕ್ರಿಮಿನುತ್ಸ್ವಾದುಪಾಕಂ ರುಚಿಪ್ರದಮ್ ||೨೭||**

ಅರ್ಥಃ— ಇದರಲ್ಲಿ ಕಹಿಪಡುವಲು ಹೃದ್ಯ, ಕ್ರಿಮಿನಾಶಕ, ಪಾಕದಲ್ಲಿ ಸ್ವಾದು ಮತ್ತು ರುಚಿಕರ ಇರುತ್ತದೆ. (೨೭)

**ಪಿತ್ತಲಂ ದೀಪನಂ ಭೇದಿ ವಾತಘ್ನಂ ಬೃಹತೀದ್ವಯಮ್ ||**

ಅರ್ಥಃ— ಹೆಬ್ಬುಗುಳ್ಳ, ನೆಲಗುಳ್ಳಗಳು ಪಿತ್ತಕರ, ಅಗ್ನಿದೀಪಕ, ಮಲಭೇದಕ ಮತ್ತು ವಾತನಾಶಕವಿರುತ್ತವೆ. (೨೮||)

ವೃಷಂ ತು ವಮಿಕಾಸಘ್ನಂ ರಕ್ತಪಿತ್ತಹರಂ ಪರಮ್ ॥೭೮॥

ಅರ್ಥಃ— ಅಡಸಲವು ವಾಂತಿ, ಕೆಮ್ಮು ಮತ್ತು ವಿಶೇಷವಾಗಿ ರಕ್ತ ಪಿತ್ತವನ್ನು ನಾಶ ಮಾಡುತ್ತದೆ. (೭೮)

ಕಾರವೇಲ್ಲಂ ಸಕಟುಕಂ ದೀಪನಂ ಕಫಜಿತ್ಪರಮ್ ॥

ಅರ್ಥ:— ಹಾಗಲವು ಕಾರ, ದೀಪಕ, ಅತ್ಯಂತ ಕಫನಾಶಕ ಇರುತ್ತದೆ. (೭೮॥)

ವಾರ್ತಾಕಂ ಕಟು ತಿಕ್ತೋಷ್ಣಂಮಧುರಂ ಕಫವಾತಜಿತ್ ॥೭೯॥
ಸಕ್ಷಾರಮಗ್ನಿಜನನಂ ಹೃದ್ಯಂ ರುಚ್ಯಮುಪಿತ್ತಲಮ್ ॥

ಅರ್ಥ:— ಬದನೀಕಾಯಿಯು ಕಾರ ಕಹಿ, ಮಧುರ, ಉಷ್ಣ, ಕಫ-ವಾತ-ನಾಶಕ, ಕ್ಷಾರಯುಕ್ತ, ಅಗ್ನಿವರ್ಧಕ, ಹೃದ್ಯ, ರುಚಿಕರು ಸ್ವಲ್ಪ ಪಿತ್ತಕರ ಇರುವದು. (೭೯॥)

ಕರೀರಮಾಧ್ಮಾನಕರಂ ಕಷಾಯಂ ಸ್ವಾದು ತಿಕ್ತಕಮ್ ॥೮೦॥

ಅರ್ಥ:— ನೇಪತ್ತಿ (ಕಳಲಿ) ಯು ಹೊಟ್ಟೆಯುಬ್ಬು ಮಾಡುವದು, ಒಗರು, ಮಧುರ ಮತ್ತು ಕಹಿ ಇರುತ್ತದೆ. (೮೦)

ಕೋಶಾತಕಾವಲ್ಗುಜಕೌ ಭೇದಿನಾವಗ್ನಿದೀಪನೌ ॥

ಅರ್ಥ:— ಹೀರಿಯು ಮತ್ತು ಬಾವಂಚಿಯು ಮಲಭೇದಕ ಮತ್ತು ಅಗ್ನಿದೀಪಕ ಇರುತ್ತವೆ. (೮೦॥)

ತಂಡುಲೀಯೋ ಹಿಮೋ ರೂಕ್ಷಃ ಸ್ವಾದುಪಾಕರಸೋ ಲಘುಃ॥೮೧॥
ಮದಪಿತ್ತವಿಷಾಸ್ರಘ್ನಃ.. .............................

ಅರ್ಥ:— ಕಿರಕಸಾಲಿಯು ಶೀತ, ರುಕ್ಷ, ಪಾಕದಲ್ಲಿಯೂ ರಸ ದಲ್ಲಿಯೂ ಮಧುರ, ಲಘುವಿದ್ದು ಮದ ಪಿತ್ತ ವಿಷ ರಕ್ತ-ದೋಷಗಳನ್ನು ಕಳೆಯುವದು. (೮೧)

**ಮೃಣಾಲಬಿಸಶಾಲೂಕಕುಮುದೋತ್ಪಲಕಂದಕಮ್ ||**
**ನಂದೀಮಾಷಕಕೇಲೂಟಶೃಂಗಾಟಕಕಸೇರುಕಮ್ ||೯೦||**

**ಕ್ರೌಂಚಾದನಂ ಕಲೋಡ್ಯಂ ಚ ರೂಕ್ಷಂ ಗ್ರಾಹಿ ಹಿಮಂ ಗುರು ||**

ಅರ್ಥ:— ಮೃಣಾಲ (ಕಮಲದ ಸಣ್ಣದೇಟು), ಬಿಸ (ಕಮಲದ ದೊಡ್ಡದೇಟು), ಶಾಲೂಕ(ಕಮಲದ ಬೇರು), ಕೆಂಪು ಕಮಲ-ಕಂದ, ಬಿಳಿಯ ಕಮಲ-ಕಂದ, ನೀಲ ಕಮಲ-ಕಂದ, ನಂದೀಮಾಷಕ, ಕೇಲೂಟ, ಶೃಂಗಾಟಕ (ಶಿಂಗಾಡೆ), ಕಸೇರುಕ (ಕೊತ್ತೀಗಡ್ಡೆ), ಕ್ರೌಂಚಾದನ, ಕಲೋಡ್ಯ (ಪದ್ಮಬೀಜ)-ಇವು ರುಕ್ಷ ಸ್ತಂಭಕ ಶೀತ ಮತ್ತು ಜಡವಿರುತ್ತವೆ. (೯೦||)

**ಕಲಂಬನಾಲಿಕಾಮಾರ್ಷಕುಟಿಂಜರಕುತುಂಬಕಮ್ ||೯೧||**

**ಚಿಲ್ಲೀಲಟ್ವಾಕಲೋಣೀಕಾಕುರೂಟಕಗವೇಧುಕಮ್ ||**
**ಜೀವಂತ ಝುಂಝುಂರ್ಝ್ವೇಡಗಜಯುವಶಾಕಸುವರ್ಚಲಾಃ ||೯೨||**

**ಆಲುಕಾನಿ ಚ ಸರ್ವಾಣಿ ತಥಾ ಸೂಪ್ಯಾನಿ ಲಕ್ಷ್ಮಣಮ್ ||**
**ಸ್ವಾದು ರೂಕ್ಷಂ ಸಲವಣಂ ವಾತಶ್ಲೇಷ್ಮಕರಂ ಗುರು ||೯೩||**

**ಶೀತಲಂ ಸೃಷ್ಟವಿಣ್ಮೂತ್ರಂ ಪ್ರಾಯೋ ವಿಷ್ಟಭ್ಯ ಜೀರ್ಯತಿ ||**

ಅರ್ಥ:— ಕಲಂಬ, ನಾಲಿಕಾ (ಬಚ್ಚಲಬಳ್ಳಿ), ಮಾರ್ಷ (ಹರಿವೆ), ಕುಟಿಂಜರ (ಪಾಂಡವರ ಹರಿವೆ), ಕುತುಂಬಕ, ಚಿಲ್ಲೀ (ಚಂದನಬಟವ) ಲಟ್ವಾಕ (ಗುಗ್ಗುಳಶಾಕ), ಲೋಣೀಕಾ (ಗೋಳೀಸೊಪ್ಪು), ಕರೂಟಕ, ಗವೇಧುಕ, ಜೀವಂತ (ಕೆಂಪುದೇಟಿನ ಹರಿವೆ) ಝುಂಝುಂ, ಏಡಗಜ, ಯವ ಶಾಕ, ಸುವರ್ಚಲ, ಎಲ್ಲ ತರದ ಶಾವೆ(ಕೆಸವು), ಉದ್ದು, ಹೆಸರು ಮೊದಲಾದ ದ್ವಿದಳ ಧಾನ್ಯಗಳ ಕಾಯಿ ಮತ್ತು ಎಲೆ, ಜೇಷ್ಠಮಧು ಇವೆಲ್ಲ ಮಧುರ, ರುಕ್ಷ, ಉಪ್ಪು, ವಾತ-ಕಫಕರ, ಗುರು, ಶೀತ, ಮಲಮೂತ್ರ-ಸಾರಕವಿದ್ದು ಬಹುತರ ಹೊಟ್ಟೆಯನ್ನು ಉಬ್ಬಿಸಿ ಪಚನವಾಗುವವು. (೯೩||)

**ಸ್ವಿನ್ನಂ ನಿಷ್ಪೀಡಿತರಸಂ ಸ್ನೇಹಾಢ್ಯಂ ನಾತಿದೋಷಲಮ್ ||೯೪||**

ಅರ್ಥ:— ಇವನ್ನು ಬೇಯಿಸಿ ಹಿಂಡಿ ರಸ ತೆಗೆದು ಸ್ನೇಹ ಹಾಕಿ ತಿನ್ನಲು ವಿಶೇಷ ಬಾಧಕವಾಗವು.

**ಲಘುಪತ್ರಾ ತು ಯಾ ಚಿಲ್ಲೀ ಸಾ ವಾಸ್ತುಕಸಮಾ ಮತಾ ||**

ಅರ್ಥ:— ಸಣ್ಣ ಎಲೆಯ ಚಿಲ್ಲಿ (ಚಕೋತಜಾತಿ) ಯ ಗುಣವು ಚಕೋತದಂತೆ ಇರುತ್ತದೆ. (೯೪||)

**ತರ್ಕಾರೀವರುಣಂ ಸ್ವಾದು ಸತಿಕ್ತಂ ಕಫವಾತಜಿತ್ ||೯೫||**

ಅರ್ಥ:— ತರ್ಕಾರಿ (ಹೊಸಲಕ್ಕಿ), ವರುಣ (ಮಟ್ಟಿಮಾವು)-ಇವು ಮಧುರ, ಸ್ವಲ್ಪ ಕಹಿ, ಕಫ-ವಾತ-ನಾಶಕವಿರುತ್ತವೆ. (೯೫)

**ವರ್ಷಾಭ್ವೌ ಕಾಲಶಾಕಂ ಚ ಸಕ್ಷಾರಂ ಕಟುತಿಕ್ತಕಮ್ ||**
**ದೀಪನಂ ಭೇದನಂ ಹಂತಿ ಗರಶೋಫಕಫಾನಿಲಾನ್ ||೯೬||**

ಅರ್ಥ:— ಕೆಂಪು ಬಿಳಿ ಗಣಜಲ ಮತ್ತು ಕಾಲಶಾಕ (ಕರಿಬೇರು)-ಇವು ಕ್ಷಾರಯುಕ್ತ ಕಾರ ಕಹಿ ದೀಪಕ ಮಲಭೇದಕವಿದ್ದು, ಕೃತ್ರಿಮ ವಿಷ, ಬಾವು, ಕಫ, ವಾತಗಳನ್ನು ನಾಶಮಾಡುತ್ತವೆ. (೯೬)

**ದೀಪನಾಃ ಕಫವಾತಘ್ನಾಶ್ಚಿರಿಬಿಲ್ವಾಂಕುರಾಃ ಸರಾಃ ||**

ಅರ್ಥ:— ಹುಲಗಲಿ (ಹೊಂಗೆ)ಯ ಅಂಕುರಗಳು ಸಾರಕ, ದೀಪಕ, ಕಫ-ವಾತ—ನಾಶಕ ಆಗಿರುತ್ತವೆ. (೯೬||)

**ಶತಾವರ್ಯಂಕುರಾಸ್ತಿಕ್ತಾ ವೃಷ್ಯಾ ದೋಷತ್ರಯಾಪಹಾಃ ||೯೭||**

ಅರ್ಥ:— ಶತಾವರಿಯ ಅಂಕುರಗಳು ಕಹಿ, ವೃಷ್ಯ, ತ್ರಿದೋಷ-ನಾಶಕರ ಇರುತ್ತವೆ. (೯೭)

**ರೂಕ್ಷೋ ವಂಶಕರೀರಸ್ತು ವಿದಾಹೀ ವಾತಪಿತ್ತಲಃ ||**

ಅರ್ಥ:— ಬಿದಿರಿನ ಅಂಕುರವು (ಕಳಲೆಯು) ರುಕ್ಷ, ವಿದಾಹೀ, ವಾತ-ಪಿತ್ತ-ಕರ ಇರುತ್ತದೆ. (೯೭||)

**ಪತ್ತೂರೋ ದೀಪನಸ್ತಿಕ್ತಃ ಪ್ಲೀಹಾರ್ಶಃಕಫವಾತಜಿತ್ ||೯೮||**

ಅರ್ಥ:— ಪತ್ತೂರವು ( ಹೆಮ್ಮೆಗುಳು ) ದೀಪಕ ಕಹಿ ಇದ್ದು ಪ್ಲೀಹ ಮೂಲವ್ಯಾಧಿ ಕಫ-ವಾತ ನಾಶಮಾಡುತ್ತದೆ. (೯೮)

**ಕೃಮಿಕಾಸಕಫೋತ್ಕ್ಲೇದಾನ್ ಕಾಸಮರ್ದೋ ಜಯೇತ್ಸರಃ ||**

ಅರ್ಥ:— ಕಾಸಮರ್ದವು (ಎಲಿವರಿಗೆಯು) ಸಾರಕವಿದ್ದು ಕ್ರಿಮಿ ಕಾಸ ಕಫದ ಲೇಪಗಳನ್ನು ನಾಶಮಾಡುತ್ತದೆ. (೯೮||)

**ರೂಕ್ಷೋಷ್ಣಮಮ್ಲಂ ಕೌಸುಂಭಂ ಗುರು ಪಿತ್ತಕರಂ ಸರಮ್ ||೯೯||**

ಅರ್ಥ:— ಕುಸುಬೆಯ ಪಲ್ಲೆಯು ರುಕ್ಷ ಉಷ್ಣ ಆಮ್ಲ ಗುರು ಪಿತ್ತಕರ ಸಾರಕವಿರುತ್ತದೆ. (೯೯)

**ಗುರೂಷ್ಣಂ ಸಾರ್ಷಪಂ ಬದ್ಧವಿಣ್ಮೂತ್ರಂ ಸರ್ವದೋಷಕೃತ್ ||**

ಅರ್ಥ:— ಸಾಸಿವೆಯ ಎಲೆಗಳು ಜಡ, ಉಷ್ಣ, ಮಲಮೂತ್ರ ಪ್ರತಿಬಂಧಕ ಇದ್ದು ಎಲ್ಲ ದೋಷಗಳನ್ನು ಉತ್ಪನ್ನಮಾಡುತ್ತವೆ. (೯೯||)

**ಯದ್ಬಾಲಮವ್ಯಕ್ತರಸಂ ಕಿಂಚಿತ್ಕ್ಷಾರಂ ಸತಿಕ್ತಕಮ್ ||೧೦೦||**
**ತನ್ಮೂಲಕಂ ದೋಷಹರಂ ಲಘು ಸೋಷ್ಣಂ ನಿಯಚ್ಛತಿ ||**
**ಗುಲ್ಮಕಾಸಕ್ಷಯಶ್ವಾಸವ್ರಣನೇತ್ರಗಲಾಮಯಾನ್ ||೧೦೧||**
**ಸ್ವರಾಗ್ನಿಸಾದೋದಾವರ್ತಪೀನಸಾಂಶ್ಚ....................**

ಅರ್ಥ:— ಯಾವ ರಸವೂ ಇನ್ನೂ ವ್ಯಕ್ತವಾಗದಂಥ ಎಳೆ ಮೂಲಂಗಿಯು ಸ್ವಲ್ಪ ಕ್ಷಾರ ಕಹಿ ದೋಷನಾಶಕ ಹಗುರು ಉಷ್ಣವಿದ್ದು ಗುಲ್ಮ ಕಾಸ ಕ್ಷಯ ಶ್ವಾಸ ವ್ರಣ ನೇತ್ರರೋಗ ಗಲರೋಗ ಸ್ವರರೋಗ ಅಗ್ನಿ-ಮಾಂದ್ಯ ಉದಾವರ್ತ ಪೀನಸಗಳನ್ನು ನಾಶಮಾಡುತ್ತದೆ. (೧೦೧)

**..........................................ಮಹತ್ಪುನಃ**
**ರಸೇ ಪಾಕೇ ಚ ಕಟುಕಮುಷ್ಣವೀರ್ಯಂ ತ್ರಿದೋಷಕೃತ್ ||೧೦೨||**
**ಗುರ್ವಭಿಷ್ಯಂದಿ ಚ.........................**

ಹೊಸಕೋಟೆ, ಕೋಲಾರ, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ ಮತ್ತು ಸಿರಾ ಪ್ರದೇಶಗಳನ್ನು ಕೊಟ್ಟು ಜಹಗೀರುದಾರನನ್ನಾಗಿ ಮಾಡಿದನು. ಶಹಜಿಯ ಜಹಗೀರಿನ ಇನ್ನೊಂದು ಭಾಗವು ರಾಯಚೂರಿನ ಕನಕಗಿರಿಯಲ್ಲಿತ್ತು. ಗೌರಿಮಹಲ್ ಎಂಬ ಅರಮನೆಯನ್ನು ಕಟ್ಟಿಸಿ, ಅಲ್ಲಿ ಶಹಜಿಯು ರಾಜನಂತೆ ವೈಭವದಿಂದ ಆಳಿದನು. ಮಹಾರಾಷ್ಟ್ರದಿಂದ ಅನೇಕ ಕುಟುಂಬಗಳನ್ನು ಕರ್ನಾಟಕಕ್ಕೆ ತಂದು ಅವರನ್ನು ಸೇನಾಧಿಕಾರದಲ್ಲಿಯೂ ಆಡಳಿತಾಧಿಕಾರದಲ್ಲಿಯೂ ನೇಮಿಸಿದನು. ಮರಾಠಿ ಭಾಷೆಯಲ್ಲಿ ವ್ಯವಹಾರ ನಡೆಸಿದನು ಹಾಗೂ ಕಂದಾಯ ಮತ್ತು ಲೆಕ್ಕಪತ್ರಗಳಲ್ಲಿ ಮರಾಠ ಪದ್ಧತಿಯನ್ನು ಬಳಕೆಗೆ ತಂದನು. ಶಹಜಿಯು ತನ್ನ ಹೆಸರಿನಲ್ಲಿ ನಾಣ್ಯಗಳನ್ನು ಮುದ್ರಿಸಿ ಚಲಾವಣೆಗೆ ತಂದನು. ಸಂಸ್ಕೃತ ಮತ್ತು ಮರಾಠಿ ಸಾಹಿತ್ಯಕ್ಕೆ ಪ್ರೋತ್ಸಾಹಕೊಟ್ಟನು. ಶಹಜಿಯ ರಾಜ್ಯಭಾರವು ಒಟ್ಟು ಹಿಂದೂವಿನ ಮುಂದಾಳ್ತನದಲ್ಲಿ ಮೂಲತಃ ವಿಜಯನಗರದ ಪರಂಪರೆಯೇ ಮುಂದುವರಿದಂತೆ ಇದ್ದು ಪ್ರಜೆಗಳಿಗೆ ಸಮಾಧಾನವಾಗಿತ್ತು.

ಮೈಸೂರಿನ ಕಂಠೀರವ ನರಸರಾಜರಿಗೂ ಶಹಜಿಗೂ ಸುಮಾರು ಇಪ್ಪತ್ತು ವರ್ಷಗಳ ಕಾಲ ಮೇಲಿಂದಮೇಲೆ ಯುದ್ಧ ನಡೆಯುತ್ತಲೇ ಇತ್ತು. ಬೆಂಗಳೂರಿನಿಂದ ಶಹಜಿಯನ್ನು ಓಡಿಸಬೇಕೆಂಬ ಕಂಠೀರವ ಒಡೆಯರ ಆಸೆ ನೆರವೇರಲಿಲ್ಲ; ಮೈಸೂರನ್ನು ಗೆಲ್ಲಬೇಕೆಂದು ಇದ್ದ ಶಹಜಿಯ ಇಚ್ಛೆಯೂ ಕೈಗೂಡಲಿಲ್ಲ.

ದೊಡ್ಡದೇವರಾಜ ಒಡೆಯರು ಮೈಸೂರಿನ ಅರಸರಾದಾಗಲೂ ಮರಾಠರೊಡನೆ ಉತ್ತಮ ಬಾಂಧವ್ಯ ಬೆಳೆಯಲಿಲ್ಲ. ಕ್ರಿ.ಶ. 1664ರಲ್ಲಿ ಶಹಜಿಯು ಶಿವಮೊಗ್ಗ ಜಿಲ್ಲೆಯ ಚೆನ್ನಗಿರಿಯಲ್ಲಿ ನಿಧನನಾದನು. ಬೆಂಗಳೂರಿನ ಜಹಗೀರು ಏಕೋಜಿ ಎಂಬ ಅವನ ಮಗನಿಗೆ ದೊರೆಯಿತು. 1667ರಲ್ಲಿ ದೊಡ್ಡದೇವರಾಜ ಒಡೆಯರು ಏಕೋಜಿಯನು. ಸೋಲಿಸಿದುದರಿಂದ ಮೈಸೂರಿನ ಪ್ರತಿಷ್ಠೆ ಪುನಃ ಹೆಚ್ಚಿತು. ಏಕೋಜಿಯು ತಂಜಾವೂರನ್ನು ಗೆದ್ದುಕೊಂಡಬಳಿಕ ತನ್ನ ರಾಜಧಾನಿಯನ್ನು ತಂಜಾವೂರಿಗೆ ಸ್ಥಳಾಂತರಿಸಿದನ್ನು

ಕ್ರಿ.ಶ. 1673ರಲ್ಲಿ ಪಟ್ಟಕ್ಕೆ ಬಂದ ಚಿಕ್ಕದೇವರಾಜ ಒಡೆಯರು ಮೈಸೂರು ರಾಜ್ಯವನ್ನು ವಿಸ್ತರಿಸುವ ಉದ್ದೇಶ ಇಟ್ಟುಕೊಂಡಿದ್ದರು. ಆದರೆ ಕ್ರಿ.ಶ. 1667ರಲ್ಲಿ ಶಿವಾಜಿಯು (ಕ್ರಿ.ಶ. 1627–1680) ದಕ್ಷಿಣ ಪ್ರದೇಶಗಳನ್ನು ಗೆದ್ದುಕೊಳ್ಳಲು ದೊಡ್ಡ ಸೇನೆಯೊಡನೆ ಬಂದನು. ಬೆಂಗಳೂರು ಜಹಗೀರಿನ ಎಲ್ಲಾ ಪ್ರದೇಶಗಳನ್ನು ಗೆದ್ದುಕೊಂಡನು. ಆದರೆ ಕೋಲಾರ, ದೊಡ್ಡಬಳ್ಳಾಪುರ ಪ್ರದೇಶಗಳನ್ನು ಇಟ್ಟುಕೊಂಡು ಉಳಿದ ಬೆಂಗಳೂರು ಪ್ರದೇಶಗಳನ್ನು ತನ್ನ ಸಹೋದರನಾದ ಏಕೋಜಿಯ ಪತ್ನಿ ದೀಪಾಬಾಯಿಗೆ ಕೊಟ್ಟನು. ಶಿವಾಜಿಯ ಮರಣದ ಬಳಿಕ ಅತನ ಮಗ ಸಂಬಾಜಿಗೆ ಈ ಪ್ರದೇಶಗಳು ದೊರೆಯಿತೆಂದು ಸಂಸ್ಕೃತ ಶಾಸನದಿಂದ ತಿಳಿದುಬರುತ್ತದೆ.

ಸಾಮ್ರಾಜ್ಯವಿಸ್ತರಣಾ ನೀತಿಯ ಚಿಕ್ಕದೇವರಾಜ ಒಡೆಯರು 1677ರಲ್ಲಿ ಶಿವಾಜಿಯನ್ನು ಶ್ರೀರಂಗಪಟ್ಟಣದಲ್ಲಿ ಸೋಲಿಸಿದುದಲ್ಲದೆ ಏಕೋಜಿಯ ಬೆಂಗಳೂರು ಜಹಗೀರಿನ ಕೆಲವು ಪ್ರದೇಶಗಳನ್ನು ಸೆಳೆದುಕೊಂಡರು. 1687ರಲ್ಲಿ ಮೊಗಲ ಸೇನಾನಿ

ಹಿಕ್ಕಾಕಾಸವಿಷಶ್ವಾಸಪಾರ್ಶ್ವರುಕ್ಪೂತಿಗಂಧಹಾ ||೧೦೬||
ಸುರಸಃ.......................................................

ಅರ್ಥ:— ತುಳಸಿಯು ಬಿಕ್ಕು ಕೆಮ್ಮು ವಿಷ ದಮ್ಮು ಪಕ್ಕೆಶೂಲಿ ದುರ್ಗಂಧಗಳ ನಾಶಕವಿರುತ್ತದೆ. (೧೦೬)

.....ಸುಮುಖೋ ನಾತಿವಿದಾಹೀ ಗರಶೋಫಹಾ ||

ಅರ್ಥ:— ಸುಮುಖವು ಸ್ವಲ್ಪ ವಿದಾಹಿ ಇದ್ದು ಕೃತ್ರಿಮ ಬಾವುಗಳನ್ನು ಕಳೆಯುವದು. (೧೦೬||)

ಆರ್ದ್ರಿಕಾ ತಿಕ್ತಮಧುರಾ ಮೂತ್ರಲಾ ನ ಚ ಪಿತ್ತಕೃತ್ ||೧೦೭||

ಅರ್ಥ:— ಕೊತ್ತುಂಬರೀ ಸೊಪ್ಪು ಕಹಿ ಮಧುರ ಮೂತ್ರರೇಚಕ ವಿದ್ದು ಪಿತ್ತವನ್ನುಂಟುಮಾಡುವದಿಲ್ಲ.

ಲಶುನೋ ಭೃಶತೀಕ್ಷ್ಣೋಷ್ಣಃ ಕಟುಪಾಕರಸಃ ಸರಃ ||
ಹೃದ್ಯಃ ಕೇಶ್ಯೋ ಗುರುರ್ವೃಷ್ಯಃ ಸ್ನಿಗ್ಧೋ ರೋಚನದೀಪನಃ||೧೦೮||

ಭಗ್ನಸಂಧಾನಕೃದ್ಬಲ್ಯೋ ರಕ್ತಪಿತ್ತಪ್ರದೂಷಣಃ ||
ಕಿಲಾಸಕುಷ್ಠಗುಲ್ಮಾರ್ಶೋಮೇಹಕ್ರಿಮಿಕಫಾನಿಲಾನ್ ||೧೦೯||

ಸಹಿಧ್ಮಾಪೀನಸಶ್ವಾಸಕಾಸಾನ್ ಹಂತಿ ರಸಾಯನಮ್ ||

ಅರ್ಥ:— ಬಳ್ಳೊಳ್ಳಿಯು ಅತ್ಯಂತ ತೀಕ್ಷ್ಣ, ಉಷ್ಣ, ಪಾಕರಸ ಗಳಲ್ಲಿ ಕಾರ, ಸಾರಕ, ಹೃದ್ಯ, ಕೇಶ್ಯ, ಗುರು, ವೃಷ್ಯ, ಸ್ನಿಗ್ಧ, ರೋಚನ ದೀಪನ, ಮುರಿದ ಎಲವುಗಳನ್ನು ಕೂಡಿಸುವದೂ,, ಬಲಕರ, ರಕ್ತ-ಪಿತ್ತ ಕಾರಕವಿದ್ದು ಕಿಲಾಸ, ಕುಷ್ಠ, ಗುಲ್ಮ ಮೂಲವ್ಯಾಧಿ ಮೇಹ ಕ್ರಿಮಿ ಕಫ ವಾತ ಬಿಕ್ಕು ಪೀನಸ ಶ್ವಾಸ ಕಾಸಗಳ ನಾಶಕ ಮತ್ತು ರಸಾಯನ ವಿರುತ್ತದೆ. (೧೦೯||)

ಪಲಾಂಡುಸ್ತದ್ಗುಣನ್ಯೂನಃ ಶ್ಲೇಷ್ಮಲೋ ನಾತಿಪಿತ್ತಲಃ ||೧೧೦||

ಕನ್ನಡನಾಡನ್ನು ವಶಪಡಿಸಿಕೊಂಡರು. 1818ರಲ್ಲಿ ಅಲ್ಲಿಯ ಕೆಲವು ಪ್ರದೇಶಗಳು ಬ್ರಿಟಿಷರ ವಶವಾದರೂ, ಜಮಖಂಡಿ, ಮುದಗಲ್ಲು, ರಾಮದುರ್ಗ, ನರಗುಂದ, ಸಂಡೂರು, ಮಿರಜ್, ಸಾಂಗ್ಲಿ ಮೊದಲಾದ ಕನ್ನಡ ಪ್ರದೇಶಗಳಲ್ಲಿ ಮರಾಠ ಅರಸರು ಬ್ರಿಟಿಷರ ಸಾಮಂತರಾಗಿ 1947ರ ವರೆಗೆ ಆಳುತ್ತಿದ್ದರು.

ಮರಾಠರ ಆಳ್ವಿಕೆಯ ಕಾಲದಲ್ಲಿ ಅವರು ಅನುಸರಿಸಿದ ನೀತಿಯಿಂದ ಕನ್ನಡಿಗರಿಗೆ ಮರಾಠರ ಮೇಲೆ ಸದಭಿಪ್ರಾಯ ಬೆಳೆಯಲಿಲ್ಲ. ಮರಾಠಿ ಭಾಷೆಯನ್ನು ಜನರ ಮೇಲೆ ಹೊರಿಸಿದ್ದುದು ಹಾಗೂ ಚೌತನ್ನು ಸಂಗ್ರಹಿಸಲು ಮೇಲಿಂದಮೇಲೆ ನಡೆಸಿದ ದಾಳಿಗಳು —ನುಂತಾದುವುಗಳು ಅದಕ್ಕೆ ಮುಖ್ಯ ಕಾರಣ. ಅಲ್ಲದೆ ಪೇಶ್ವೆಗಳ ಆಡಳಿತವು ಜನಪ್ರಿಯವಾಗಿರಲಿಲ್ಲ. ಅನೇಕ ವರ್ಷಗಳವರೆಗೆ ತುಂಗಭದ್ರೆಯ ಉತ್ತರದ ಪ್ರದೇಶಗಳು ಮರಾಠರ ವಶದಲ್ಲಿದ್ದುದರಿಂದ ಅಲ್ಲಿ ಮರಾಠಿ ಭಾಷೆಯ ಪ್ರಭಾವ ಅಧಿಕವಾಗಿರುವುದನ್ನು ಕಾಣಬಹುದು.

## ೩. ಕರ್ನಾಟಕದಲ್ಲಿ ಪಾಳೆಯಗಾರರು

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದೊಡ್ಡ ದೊಡ್ಡ ಸಾಮ್ರಾಜ್ಯಗಳು ಅಸ್ತಿತ್ವದಲ್ಲಿರುವಾಗಲೂ, ಸಣ್ಣಪುಟ್ಟ ರಾಜ್ಯಗಳೂ ಅಲ್ಲಲ್ಲಿ ಇದ್ದವು. ಹಾಗೆಯೇ ವಿಜಯನಗರ ಸಾಮ್ರಾಜ್ಯದ ಕಾಲದಲ್ಲೂ ಸಣ್ಣ ಸಣ್ಣ ನಾಯಕರು ಪ್ರವರ್ಧಮಾನಕ್ಕೆ ಬಂದರು. ಇವರಲ್ಲಿ ಕೆಲವರು ಸಣ್ಣಪುಟ್ಟ ಪ್ರಾಂತ್ಯಗಳಲ್ಲಿ ಸರ್ವತಂತ್ರಸ್ವತಂತ್ರರಾಗಿ ಪರಮಾಧಿಕಾರವನ್ನು ನಡೆಸುತ್ತಿದ್ದರು. ಇವರನ್ನು ಪಾಳೆಯಗಾರರೆಂದೂ ಕರೆಯ ಲಾಗುತ್ತಿತ್ತು. ಈ ಪಾಳೆಯಗಾರರು ತಮ್ಮ ಪ್ರದೇಶದಲ್ಲಿ ಕಂದಾಯ ವಸೂಲಿ ಮಾಡು ತ್ತಿದ್ದರು. ಕಾನೂನು ಮತ್ತು ನಿಯಮಗಳನ್ನು ಪಾಲಿಸುತ್ತಿದ್ದರು. ಪ್ರಜೆಗಳು ಅವರನ್ನು ರಾಜರಂತೆ ಗೌರವಿಸುತ್ತಿದ್ದರು. ಈ ಪಾಳೆಯಗಾರರು ವೀರವರ್ಗಕ್ಕೆ ಸೇರಿ ದವರಾಗಿದ್ದು ಸದಾ ಸಿದ್ಧವಾದ ಸೇನೆಯನ್ನು ಇಟ್ಟಿದ್ದರು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಪ್ರಾಮುಖ್ಯತೆಗೆ ಬಂದ ಪಾಳೆಯಗಾರರು ಪ್ರಭುಗಳಿಗೆ ಕಪ್ಪಕಾಣಿಕೆ ಕೊಡು ತ್ತಿದ್ದರು. ಯುದ್ಧದ ಸಮಯದಲ್ಲಿ ತಮ್ಮ ಸೈನ್ಯವನ್ನು ಒಡೆಯನಿಗೆ ಕೊಡುತ್ತಿದ್ದರು. ಪ್ರಭುಗಳನ್ನು ಸಂದರ್ಶಿಸುವ ಸಂದರ್ಭ ಬಂದಾಗ ರಾಜಧಾನಿಯ ಹೊರಗಿನ "ಪಾಳೆಯ" ಎಂಬ ಸೇನಾಬಿಡಾರದಲ್ಲಿ ಬೀಡುಬಿಡುತ್ತಿದ್ದುದರಿಂದ ಅವರನ್ನು "ಪಾಳೆಯಗಾರರು" ಎಂದು ಕರೆದಿರಬಹುದು.

ಕರ್ನಾಟಕದಲ್ಲಿ ವಿಜಯನಗರದ ಅರಸರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಕೆಲವು

ಆಹಾರದಲ್ಲಿ ಶಾಕಗಳಿಗಿಂತ ಅಲ್ಪ ಉಪಯೋಗಿ ಆದ್ದರಿಂದ ಶಾಕವರ್ಗದ ನಂತರ ಫಲವರ್ಗವನ್ನು ಹೇಳುತ್ತಾರೆ.

## ಫಲವರ್ಗ

**ದ್ರಾಕ್ಷಾ ಫಲೋತ್ತಮಾ ವೃಷ್ಯಾ ಚಕ್ಷುಷ್ಯಾ ಸೃಷ್ಟಮೂತ್ರವಿಟ್ ॥**
**ಸ್ವಾದುಪಾಕರಸಾ ಸ್ನಿಗ್ಧಾ ಸಕಷಾಯಾ ಹಿಮಾ ಗುರುಃ ॥೧೧೪॥**

**ನಿಹಂತ್ಯನಿಲಪಿತ್ತಾಸ್ರತಿಕ್ತಾಸ್ಯತ್ವಮದಾತ್ಯಯಾನ್ ॥**
**ತೃಷ್ಣಾಕಾಸಶ್ರಮಶ್ವಾಸಸ್ವರಭೇದಕ್ಷತಕ್ಷಯಾನ್ ॥೧೧೫॥**

ಅರ್ಥ:— ಬೀಜದ ದ್ರಾಕ್ಷೆಯು ಎಲ್ಲ ಫಲಗಳಲ್ಲಿ ಶ್ರೇಷ್ಠ, ವೃಷ್ಯ, ಕಣ್ಣಿಗೆ ಹಿತ, ಮಲ-ಮೂತ್ರ ಸಾರಕ, ರಸ-ಪಾಕಗಳಲ್ಲಿ ಮಧುರ, ಸ್ನಿಗ್ಧ ಒಗರು, ಶೀತ, ಜಡವಿದ್ದು ವಾತ-ಪಿತ್ತ, ರಕ್ತ-ಪಿತ್ತ, ಬಾಯಿಯ-ಕಹಿ ಮದಾತ್ಯಯ, ನೀರಡಿಕೆ ಕೆಮ್ಮು ಶ್ರಮ ದಮ್ಮು ಸ್ವರ-ಭೇದ ಕ್ಷತ ಕ್ಷಯ ಗಳನ್ನು ನಾಶಮಾಡುತ್ತದೆ. (೧೧೫)

**ಉದ್ರಿಕ್ತಪಿತ್ತಾಞ್ಜಯತಿ ತ್ರೀನ್ದೋಷಾನ್ ಸ್ವಾದು ದಾಡಿಮಮ್ ॥**
**ಪಿತ್ತಾವಿರೋಧಿ ನಾತ್ಯುಷ್ಣಮಮ್ಲಂ ವಾತಕಫಾಪಹಮ್ ॥೧೧೬॥**

**ಸರ್ವಂ ಹೃದ್ಯಂ ಲಘುಸ್ನಿಗ್ಧಂ ಗ್ರಾಹಿ ರೋಚನದೀಪನಮ್ ॥**

ಅರ್ಥ.— ಸಿಹಿದಾಳಿಂಬವು ಪಿತ್ತಾಧಿಕ-ತ್ರಿದೋಷಗಳನ್ನು ಕಳೆಯುವದು. ಹುಳಿದಾಳಿಂಬವು ಪಿತ್ತಕ್ಕೆ ವಿರೋಧಿಯಲ್ಲ; ಅತ್ಯುಷ್ಣವೂ ಅಲ್ಲ; ವಾತ ಕಫಗಳ ನಾಶಕವು ಇರುತ್ತದೆ. ಎಲ್ಲತರದ ದಾಳಿಂಬವು ಹೃದ್ಯ ಲಘು ಸ್ನಿಗ್ಧ ಗ್ರಾಹಕ ರುಚಿಕರ ಅಗ್ನಿದೀಪಕ ಆಗಿದೆ. (೧೧೬॥)

**ಮೋಚಖರ್ಜೂರಪನಸನಾರಿಕೇಲಪರೂಷಕಮ್ ॥೧೧೭॥**

**ಆಮ್ರಾತತಾಲಕಾಶ್ಮರ್ಯರಾಜಾದನಮಧೂಕಜಮ್ ॥**
**ಸೌವೀರಬದರಾಂಕೋಲ್ಲಫಲ್ಗುಶ್ಲೇಷ್ಮಾತಕೋದ್ಭವಮ್ ॥೧೧೮॥**

**ವಾತಾಮಾಭಿಷುಕಾಕ್ಷೋಡಮುಕೂಲಕನಿಕೋಚಕಂ ॥**

**ಉರುಮಾಣಂ ಪ್ರಿಯಾಲಂ ಚ ಬೃಂಹಣಂ ಗುರುಶೀತಲಮ್**
**।೧೧೯॥**

**ದಾಹಕ್ಷತಕ್ಷಯಹರಂ ರಕ್ತಪಿತ್ತಪ್ರಸಾದನಮ್ ॥**
**ಸ್ವಾದುಪಾಕರಸಂ ಸ್ನಿಗ್ಧಂ ವಿಷ್ಟಂಭಿ ಕಫಶುಕ್ರಕೃತ್ ॥೧೨೦॥**

ಅರ್ಥ:— ಬಾಳೆ, ಉತ್ತತ್ತಿ, ಹಲಸು, ಟೆಂಗು, ಪರೂಷಕ, (ದಡಸಲ ಹಣ್ಣು), ಆಮ್ರಾತ (ಅಪಟೆ), ತಾಳೇಕಾಯಿ, ಶಿವನೀಹಣ್ಣು, ರಾಜಾದನ, ಇಪ್ಪೇ ಹಣ್ಣು, ಸೌವೀರ, ಚಡವೀಬೋರೆ, ಬೋರೆ, ಅಂಕೋಲ, ಅಂಜೀರ, ಚಳ್ಳೇಕಾಯಿ, ಬದಾಮು, ಅಭಿಷುಕ, ಆಕ್ರೋಡ, ಮುಕೂಲಕ (ಪಿಸ್ತೆ), ನಿಕೋಚಕ, ಉರುಮಾಣ (ಅಲಬುಖಾರ), ಪ್ರಿಯಾಲ (ನುರುಕುಲ)—ಇವುಗಳ ಫಲಗಳು ಪೌಷ್ಟಿಕ, ಜಡ, ಶೀತ, ದಾಹ, ಕ್ಷತ ಕ್ಷಯ ನಾಶಕ, ರಕ್ತ-ಪಿತ್ತಹರ, ಪಾಕರಸದಲ್ಲಿ ಮಧುರ, ಸ್ನಿಗ್ಧ, ಸ್ತಂಭಕ, ಕಫ ಮತ್ತು ಶುಕ್ರವರ್ಧಕವಾಗಿರುವವು. (೧೨೦)

**ಫಲಂ ತು ಪಿತ್ತಲಂ ತಾಲಂ.....................**

ಅರ್ಥ:— ತಾಲಫಲವು ಪಿತ್ತಕರವು. (೧೨೦।)

**........................... .ಸರಂ ಕಾಶ್ಮರ್ಯಜಂ ಹಿಮಮ್**
**ಶಕೃನ್ಮೂತ್ರವಿಬಂಧಘ್ನಂ ಕೇಶ್ಯಂ ಮೇಧ್ಯಂ ರಸಾಯನಮ್ ॥೧೨೧॥**

ಅರ್ಥ:— ಕಾಶ್ಮರೀ (ಶಿವನ್ನಿ) ಫಲವು ಸಾರಕ, ಶೀತ, ಮಲ-ಮೂತ್ರ-ಬಂಧ-ನಾಶಕ, ಕೇಶ್ಯ ಮತ್ತು ಬುದ್ಧಿ-ವರ್ಧಕ ಹಾಗೂ ರಸಾಯನ ಇರುತ್ತದೆ. (೧೨೧)

**ವಾತಾಮಾದ್ಯುಷ್ಣವೀರ್ಯಂ ತು ಕಫಪಿತ್ತಕರಂ ಸರಮ್ ॥**
**ಪರಂ ವಾತಹರಂ ಸ್ನಿಗ್ಧಮನುಷ್ಣಂ ತು ಪ್ರಿಯಾಲಜಮ್ ॥೧೨೨॥**

ಅರ್ಥ:— ಬದಾಮು ಮುಂತಾದ ಫಲಗಳು ಉಷ್ಣ-ವೀರ್ಯ, ಕಫ-ಪಿತ್ತಕರ, ಸಾರಕ, ಅತ್ಯಂತ ವಾತ ನಾಶಕ, ಸ್ನಿಗ್ಧ ಇರುತ್ತವೆ. ಆದರೆ ಪ್ರಿಯಾಲವು ಉಷ್ಣವಿರುವದಿಲ್ಲ. (೧೨೨)

**ಪ್ರಿಯಾಲಮಜ್ಜಾ ಮಧುರೋ ವೃಷ್ಯಃ ಪಿತ್ತಾನಿಲಾಪಹಃ ||**

ಅರ್ಥ:— ಪ್ರಿಯಾಲ ಮಜ್ಜೆಯು (ಚಾರಪಪ್ಪು=ನುರುಕುಲಬೀಜ) ಮಧುರ ವೃಷ್ಯ ವಾತ-ಪಿತ್ತ ನಾಶಕವಿದೆ. (೧೨೨)

**ಕೋಲಮಜ್ಜಾ ಗುಣೈಸ್ತದ್ವತ್ತೃಟ್ಛರ್ದಿಃಕಾಸಜಿಚ್ಚ ಸಃ ||೧೨೩||**

ಅರ್ಥ:— ಬಾರೀಕಾಯಿಯ ಮಜ್ಜೆಯು ಮೇಲಿನ ಗುಣವುಳ್ಳದ್ದಿದ್ದು ನೀರಡಿಕೆ ವಾಂತಿ ಕೆಮ್ಮುಗಳನ್ನು ನಾಶಮಾಡುವದು. (೧೨೩)

**ಪಕ್ವಂ ಸುದುರ್ಜರಂ ಬಿಲ್ವಂ ದೋಷಲಂ ಪೂತಿಮಾರುತಮ್ ||**
**ದೀಪನಂ ಕಫವಾತಘ್ನಂ ಬಾಲಂ, ಗ್ರಾಹ್ಯುಭಯಂ ಚ ತತ್ ||೧೨೪||**

ಅರ್ಥ:— ಹಣ್ಣಾದ ಬಿಲ್ವ ಫಲವು ಪಚನಕ್ಕೆ ಜಡ, ದೋಷಕಾರಕ, ಅಪಾನವಾಯುವನ್ನು ದುರ್ಗಂಧಮಾಡುವದು. ಎಳೆ ಬಿಲ್ವವು ದೀಪಕ ಕಫ-ವಾತ-ನಾಶಕವಾಗಿರುವದು. ಎರಡೂ ತರದ ಬಿಲ್ವಗಳು ಸ್ತಂಭಕವಿರುವವು. (೧೨೪)

**ಕಪಿತ್ಥಮಾಮಂ ಕಂಠಘ್ನಂ ದೋಷಲಂ, ದೋಷಘಾತಿ ತು ||**
**ಪಕ್ವಂ ಹಿಧ್ಮಾವಮಥುಜಿತ್, ಸರ್ವಂ ಗ್ರಾಹಿ ವಿಷಾಪಹಮ್ ||೧೨೫||**

ಅರ್ಥ:— ಹಣ್ಣಾಗದ ಬೆಳವಲ ಕಾಯಿಯು ದನಿಯನ್ನು ಕುಗ್ಗಿಸುವದೂ ತ್ರಿದೋಷಕರವೂ ಇದೆ. ಆದರೆ ಅದರ ಹಣ್ಣು ಬಿಕ್ಕು ವಾಂತಿ ಮತ್ತು ತ್ರಿದೋಷ ನಾಶಕ; ಪಕ್ವ ಅಪಕ್ವ ಇವೆರಡೂ ಸ್ತಂಭಕ ಮತ್ತು ವಿಷಹಾರಕವಿದೆ. (೧೨೫)

**ಜಾಂಬವಂ ಗುರು ವಿಷ್ಟಂಭಿ ಶೀತಲಂ ಭೃಶವಾತಲಮ್ ||**
**ಸಂಗ್ರಾಹಿ ಮೂತ್ರಶಕೃತೋಃಕಂಠ್ಯಂ ಕಫಪಿತ್ತಜಿತ್ ||೧೨೬||**

ಅರ್ಥ:— ನೇರಿಲಹಣ್ಣು ಜಡ, ಅಪಾನವಾಯು-ಪ್ರತಿಬಂಧಕ, ಶೀತ, ಅತಿಶಯ ವಾತಕಾರಕ, ಮಲ-ಮೂತ್ರ ಸ್ತಂಭಕ, ಸ್ವರಕ್ಕೆ ಅಹಿತ, ಕಫ ಪಿತ್ತ ನಾಶಕವದೆ. (೧೨೬)

ವಾತಪಿತ್ತಾಸ್ರಕೃದ್ಬಾಲಂ, ಬದ್ಧಾಸ್ಥಿ ಕಫಪಿತ್ತಕೃತತ್ ॥
ಗುರ್ವಾಮ್ರಂ ವಾತಜಿತ್ಪಕ್ವಂ ಸ್ವಾದ್ವಮ್ಲಂ ಕಫಶುಕ್ರಕೃತ್ ॥೧೨೭॥

ಅರ್ಥ:— ಇನ್ನೂ ಬೀಜವುಂಟಾಗದ ಮಾವಿನ ಕಾಯಿಯು ವಾತ-ಪಿತ್ತ ರಕ್ತದೋಷಗಳನ್ನುಂಟುಮಾಡುವದು. ಗೊರಟಾದ ಮೇಲೆ ಕಫ-ಪಿತ್ತಕಾರಕ. ಹಣ್ಣಾದ ಮಾವು ಜಡ ವಾತನಾಶಕ ಸಿಹಿ ಹುಳಿ ಇದ್ದು ಕಫ ಮತ್ತು ಶುಕ್ರವನ್ನುಂಟುಮಾಡುತ್ತದೆ. (೧೨೭)

ವೃಕ್ಷಾಮ್ಲಂ ಗ್ರಾಹಿ ರೂಕ್ಷೋಷ್ಣಂ ವಾತಶ್ಲೇಷ್ಮಹರಂ ಲಘು ॥

ಅರ್ಥ:— ಆಮಸೋಲು (ಮುರಗಲದ ಹಣ್ಣು) ಸ್ತಂಭಕ ರುಕ್ಷ ಉಷ್ಣ ವಾತ ಶ್ಲೇಷ್ಮ-ಹರ ಮತ್ತೂ ಲಘು ಇರುವದು. (೧೨೭॥)

ಶಮ್ಯಾ ಗುರೂಷ್ಣಂ ಕೇಶಘ್ನಂ ರೂಕ್ಷಂ......................

ಅರ್ಥ:— ಶಮೀಫಲವು ಗುರು ಉಷ್ಣ ಕೇಶನಾಶಕ ಮತ್ತು ರುಕ್ಷವಿರುತ್ತದೆ. (೧೨೭॥)

.........................ಪೀಲು ತು ಪಿತ್ತಲಮ್ ॥೧೨೮॥

ಕಫವಾತಹರಂ ಭೇದಿ ಪ್ಲೀಹಾರ್ಶಃಕೃಮಿಗುಲ್ಮನುತ್ ॥
ಸತಿಕ್ತಂಸ್ವಾದು ಯತ್ಪೀಲು ನಾತ್ಯುಷ್ಣಂ ತತ್ತ್ರಿದೋಷಜಿತ್ ॥೧೨೯॥

ಅರ್ಥ:— ಕಾರ ಪೀಲು ಫಲವು (ಗೋವಿನ ಹಣ್ಣು) ಪಿತ್ತಕರ ಕಫ-ವಾತ-ನಾಶಕ ಮಲ-ಭೇದಕವಿದ್ದು ಪ್ಲೀಹ ಮೂಲವ್ಯಾಧಿ ಕೃಮಿ ಗುಲ್ಮ ಗಳನ್ನು ಕಳೆಯುವದು. ಸ್ವಲ್ಪು ಕಹಿಯುಳ್ಳ ಸವಿಯಾದ ಪೀಲು ಫಲವು ಸಾಧಾರಣ ಉಷ್ಣ ಮತ್ತು ತ್ರಿದೋಷ-ನಾಶಕವಿರುವದು. (೧೨೯)

ತ್ವಕ್ತಿಕ್ತಕಟುಕಾ ಸ್ನಿಗ್ಧಾ ಮಾತುಲುಂಗಸ್ಯ ವಾತಜಿತ್ ॥
ಬೃಂಹಣಂ ಮಧುರಂ ಮಾಂಸಂ ವಾತಪಿತ್ತಹರಂ ಗುರು ॥೧೩೦॥

ಲಘು ತತ್ಕೇಸರಂ ಕಾಸಶ್ವಾಸಹಿಧ್ಮಾಮದಾತ್ಯಯಾನ್ ॥

**ಆಸ್ಯಶೋಷಾನಿಲಶ್ಲೇಷ್ಮವಿಬಂಧಚ್ಛರ್ದ್ಯರೋಚಕಾನ್ ||೧೩೧||**
**ಗುಲ್ಮೋದರಾರ್ಶಃಶೂಲಾನಿ ಮಂದಾಗ್ನಿತ್ವಂ ಚ ನಾಶಯೇತ್ ||**

ಅರ್ಥಃ— ಮಾದಾಳದ ತೊಗಟೆಯು ಕಹಿ ಒಗುರು ಸ್ನಿಗ್ಧ ವಾತ-ನಾಶಕವಿರುವದು; ಅದರ ತಿಳಿಲು ಪೌಷ್ಟಿಕ ಮಧುರ ವಾತ-ಪಿತ್ತ-ನಾಶಕ ಮತ್ತು ಜಡವಿರುವದು. ಅದರ ಕೇಶರವು ಲಘು ಇದ್ದು ಕೆಮ್ಮು ಶ್ವಾಸ ಬಿಕ್ಕು ಮದಾತ್ಯಯ ಬಾಯಿ-ಒಣಗುವದು ವಾತ ಕಫ ಅವಷ್ಟಂಭ ವಾಂತಿ ಅರುಚಿ ಗುಲ್ಮ ಉದರ ಮೂಲವ್ಯಾಧಿ ಶೂಲ ಅಗ್ನಿಮಾಂದ್ಯಗಳನ್ನು ನಾಶ ಮಾಡುತ್ತದೆ. (೧೩೧||)

**ಭಲ್ಲಾತಕಸ್ಯ ತ್ವಙ್ಮಾಂಸಂ ಬೃಂಹಣಂ ಸ್ವಾದು ಶೀತಲಮ್ ||೧೩೨||**
**ತದಸ್ಥ್ಯಗ್ನಿಸಮಂ ಮೇಧ್ಯಂ ಕಫವಾತಹರಂ ಪರಮ್ ||**

ಅರ್ಥಃ— ಕೇರುಹಣ್ಣಿನ ತೊಗಟೆ ಮತ್ತು ತಿಳಿಲು ಪೌಷ್ಟಿಕ ಮಧುರ ಶೀತವಿರುವದು. ಅದರ ಅಸ್ಥಿಯು (ಕೇರಬೀಜವು) ಅಗ್ನಿಯಂತೆ ಉಷ್ಣ, ಬುದ್ಧಿವರ್ಧಕ, ಅತ್ಯಂತ ಕಫ-ವಾತ-ನಾಶಕವಿದೆ. (೧೩೨||)

**ಸ್ವಾದ್ವಮ್ಲಂ ಶೀತಮುಷ್ಣಂ ಚ ದ್ವಿಧಾ ಪಾಲೇವತಂ ಗುರು ||೧೩೩||**
**ರುಚ್ಯಮತ್ಯಗ್ನಿಶಮನಂ..............................**

ಅರ್ಥಃ— ಸಫರಚಂದ ಸವಿ, ಹುಳಿ ಎಂದು ಎರಡು ಪ್ರಕಾರ. ಸವಿಯದು ಶೀತವಿದ್ದು ಹುಳಿಯದು ಉಷ್ಣವದೆ. ಇವೆರಡೂ ಜಡ ರುಚಿಕರ ಅತ್ಯಗ್ನಿ-ಶಾಮಕ ಆಗಿರುವವು. (೧೩೩|)

**..............................ರುಚ್ಯಂ ಮಧುರಮಾರುಕಮ್ ||**
**ಪಕ್ವಮಾಶು ಜರಾಂ ಯಾತಿ ನಾತ್ಯುಷ್ಣಗುರುದೋಷಲಮ್ ||೧೩೪||**

ಅರ್ಥಃ— ಆರುಕವು ( ಸಪ್ತಾಳಿ ) ರುಚಿಕರ ಮತ್ತು ಮಧುರ ವಿರುತ್ತದೆ. ಹಣ್ಣಾದದ್ದು ತೀವ್ರ ಪಚನವಾಗುವದು. ಸಾಧಾರಣ ಉಷ್ಣ ಜಡ ದೋಷಕಾರಕವಿರುವದು. (೧೩೪)

ದ್ರಾಕ್ಷಾಪರೂಷಕಂ ಚಾಽರ್ದ್ರಮಮ್ಲಂ ಪಿತ್ತಕಫಪ್ರದಮ್ ||
ಗುರೂಷ್ಣವೀರ್ಯಂ ವಾತಘ್ನಂ ಸರಂ ಸಕರಮರ್ದಕಮ್ ||೧೩೫||

ಅರ್ಥಃ— ದ್ರಾಕ್ಷೆ, ಪರೂಷಕ (ದಡಸಲಹಣ್ಣು), ಕವಳಿ-ಇವು ಹಸಿಯವು ಇದ್ದಾಗ್ಗೆ ಹುಳಿ ಪಿತ್ತ-ಕಫ-ಕಾರಕ ಜಡ ಉಷ್ಣ-ವೀರ್ಯ ವಾತಘ್ನ ಮತ್ತು ಸಾರಕವಾಗಿವೆ. (೧೩೫)

ತಥಾಽಮ್ಲಂ ಕೋಲಕರ್ಕಂಧುಲಕುಚಾಮ್ರಾತಕಾರುಕಮ್ ||
ಐರಾವತಂ ದಂತಶಠಂ ಸತೂದಂ ಮೃಗಲಿಂಡಿಕಮ್ ||೧೩೬||

ಅರ್ಥಃ— ಅದರಂತೆ ಹುಳಿಯಾದ ಬೋರೆ, ಸಣ್ಣ ಬೋರೆ, ಲಕುಚ (ಹೆಬ್ಬಲಿಸಿನಹಣ್ಣು), ಆಮಟೆ, ಆರುಕ (ಸಪ್ತಾಳು), ಐರಾವತ (ಹುಳಿ ಕಂಚಿ), ದಂತಶಠ (ನಿಂಬೆ), ತೂದ (ಹಿಪ್ಪನೇರಿಲೆಹಣ್ಣು), ಮೃಗಲಿಂಡಿಕ (ಸವತೀಕಾಯಿ ಜಾತಿ)ಗಳು ಮೇಲಿನ ಗುಣವುಳ್ಳವುಗಳೇ ಇರುವವು. (೧೩೬)

ನಾತಿಪಿತ್ತಕರಂ ಪಕ್ವಂ ಶುಷ್ಕಂ ಚ ಕರಮರ್ದಕಮ್ ||

ಅರ್ಥಃ— ಹಣ್ಣಾದ ಒಣಗಿದ ಕವಳಿಯು ಸಾಧಾರಣ ಪಿತ್ತ ಕರವಿದೆ. (೧೩೭)

ದೀಪನಂ ಭೇದನಂ ಶುಷ್ಕಮಮ್ಲೀಕಾಕೋಲಯೋಃ ಫಲಮ್||೧೩೭||
ತೃಷ್ಣಾಶ್ರಮಕ್ಲಮಚ್ಛೇದಿ ಲಘ್ವಿಷ್ಟಂ ಕಫವಾತಯೋಃ ||

ಅರ್ಥಃ— ಒಣಗಿದ ಹುಣಸಿ, ಬಾರೀ, ಫಲಗಳು ದೀಪಕ ಮಲ ಭೇದಕವಿದ್ದು ನೀರಡಿಕೆ ಶ್ರಮ ಗ್ಲಾನಿಗಳನ್ನು ನಾಶಮಾಡುವವು; ಮತ್ತು ಹಗುರೂ, ಕಫ ವಾತಗಳಿಗೆ ಹಿತಕರವೂ ಆಗಿರುವವು. (೧೩೭)

ಫಲಾನಾಮವರಂ ತತ್ರ ಲಕುಚಂ ಸರ್ವದೋಷಕೃತ್ ||೧೩೮||

ಅರ್ಥಃ— ಎಲ್ಲ ಫಲಗಳಲ್ಲಿ ಲಕುಚವು ಕೆಟ್ಟದು; ಮತ್ತು ತ್ರಿದೋಷ ವನ್ನುಂಟುಮಾಡುತ್ತದೆ. (೧೩೮)

ಹಿಮಾನಲೋಷ್ಣದುರ್ವಾತವ್ಯಾಲಲಾಲಾದಿದೂಷಿತಮ್ ||
ಜಂತುಜುಷ್ಟಂ ಜಲೇ ಮಗ್ನಮಭೂಮಿಜಮನಾರ್ತವಮ್ ||೧೪೯||

ಅನ್ಯಧಾನ್ಯಯುತಂ ಹೀನವೀರ್ಯಂ ಜೀರ್ಣತಯಾಽತಿ ಚ ||
ಧಾನ್ಯಂ ತ್ಯಜೇತ್ತಥಾ ಶಾಕಂ ರೂಕ್ಷಸಿದ್ಧಮಕೋಮಲಮ್ ||೧೫೦||

ಅಸಂಜಾತರಸಂ ತದ್ವಚ್ಛುಷ್ಕಂ ಚಾನ್ಯತ್ರ ಮೂಲಕಾತ್ ||
ಪ್ರಾಯೇಣ ಫಲಮಪ್ಯೇವಂ ತಥಾಽಽಮಂ ಬಿಲ್ವವರ್ಜಿತಮ್ ||೧೫೧||

ಅರ್ಥಃ— ಮಂಜು ಬೆಂಕಿ ಬಿಸಿಲು ಕೆಟ್ಟ-ಗಾಳಿ ಸರ್ಪದ-ಜೊಲ್ಲು ಮುಂತಾದವುಗಳಿಂದ ದುಷ್ಟವಾದ, ಹುಳ ಹತ್ತಿದ, ನೀರಲ್ಲಿ ಮುಳುಗಿದ, ಅಯೋಗ್ಯ ಸ್ಥಳಗಳಲ್ಲಿ ಆದ, ಅಯೋಗ್ಯ ಕಾಲದಲ್ಲಿ ಉಂಟಾದ, ವಿಜಾತೀಯ ಧಾನ್ಯದೊಡನೆ ಕೂಡಿದ, ಬಹಳ ದಿವಸ ಬಿಡುವದರಿಂದ ಹೀನವೀರ್ಯ ವಾದ ಧಾನ್ಯವನ್ನು ಬಿಡಬೇಕು. ಅದರಂತೆ ಸ್ನೇಹ ಹಾಕದೇ ಸಿದ್ಧ ಮಾಡಿದ ಬಿರುಸಾದ, ಅಥವಾ ರಸ ಉಂಟಾಗದೇ ಇದ್ದ, (ಮೂಲಂಗಿಯ ಹೊರ್ತು) ಒಣಗಿದ ಪಲ್ಲೆಗಳನ್ನು ತಿನ್ನಬಾರದು. ಇದರಂತೆ ಇದ್ದ ಫಲ ಗಳನ್ನೂ ತಿನ್ನಬಾರದು. ಬಿಲ್ವದ ಹೊರ್ತಾಗಿ ಉಳಿದ ಅಪಕ್ವ ಫಲಗಳನ್ನು ತಿನ್ನಬಾರದು. (೧೫೧)

## ಔಷಧವರ್ಗ

ಆಹಾರೋಪಯೋಗಿಯಾದ್ದರಿಂದ ಫಲವರ್ಗದ ನಂತರ ಔಷಧವರ್ಗವನ್ನು ಹೇಳು ತ್ತಾರೆ.ಅದರಲ್ಲಿಯೂ ಹೆಚ್ಚು ಉಪಯುಕ್ತವಾಗುವದರಿಂದ ಲವಣಗಳನ್ನು ಹೇಳುತ್ತಾರೆ.

ವಿಷ್ಯಂದಿ ಲವಣಂ ಸರ್ವಂ ಸೂಕ್ಷ್ಮಂ ಸೃಷ್ಟಮಲಂ ಮೃದು ||
ವಾತಘ್ನಂ ಪಾಕಿ ತೀಕ್ಷ್ಣೋಷ್ಣಂ ರೋಚನಂ ಕಫಪಿತ್ತಕೃತ್ ||೧೫೨||

ಅರ್ಥಃ— ಎಲ್ಲ ಉಪ್ಪುಗಳು ಕಫಸ್ರಾವಕ ಸೂಕ್ಷ್ಮ ಮಲಸಾರಕ ಮೃದು ವಾತನಾಶಕ ಪಾಚಕ ತೀಕ್ಷ್ಣ ಉಷ್ಣ ರುಚಿಕರ ಕಫ-ಪಿತ್ತ-ವರ್ಧಕವಿರುತ್ತವೆ. (೧೫೨)

ಸೈಂಧವ, ಕಾಚ-ಲವಣ, ಬಿಡ, ಸಾಮುದ್ರ, ಖನಿಜ, ಕೃಷ್ಣ, ರೋಮಕ, ಮಣ್ಣಿನುಪ್ಪು- ಹೀಗೆ ಉಪ್ಪಿನಲ್ಲಿ ಎಂಟು ಪ್ರಕಾರಗಳುಂಟು. ಅವುಗಳನ್ನು ಹೇಳುತ್ತಾರೆ.

**ಸೈಂಧವಂ ತತ್ರ ಸಸ್ವಾದು ವೃಷ್ಯಂ ಹೃದ್ಯಂ ತ್ರಿದೋಷನುತ್ ॥**
**ಲಘ್ವನುಷ್ಣಂ ದೃಶಃ ಪಥ್ಯಮವಿದಾಹ್ಯಗ್ನಿದೀಪನಮ್ ॥೧೪೩॥**

ಅರ್ಥಃ— ಅದರಲ್ಲಿ ಸೈಂಧವವು ಸ್ವಲ್ಪ ಮಧುರ ವೃಷ್ಯ, ಹೃದ್ಯ, ತ್ರಿದೋಷಹರ, ಲಘು, ಸ್ವಲ್ಪೇ ಉಷ್ಣ, ಕಣ್ಣಿಗೆ ಹಿತಕರ, ಸ್ವಲ್ಪ ವಿದಾಹಿ, ಅಗ್ನಿದೀಪಕವಿರುತ್ತದೆ. (೧೪೩)

**ಲಘು ಸೌವರ್ಚಲಂ ಹೃದ್ಯಂ ಸುಗಂಧ್ಯುದ್ಗಾರ ಶೋಧನಮ್ ॥**
**ಕಟುಪಾಕಂ ವಿಬಂಧಘ್ನಂ ದೀಪನೀಯಂ ರುಚಿಪ್ರದಮ್ ॥೧೪೪॥**

ಅರ್ಥಃ— ಕಾಚ-ಲವಣವು ಲಘು, ಹೃದ್ಯ, ಸುಗಂಧಿ, ತೇಗನ್ನು ಶುದ್ಧ ಮಾಡುವದು, ಪಾಕದಲ್ಲಿ ಕಾರ, ಮಲಬಂಧ-ನಾಶಕ, ದೀಪಕ, ರುಚಿಕರವಿರುತ್ತದೆ. (೧೪೪)

**ಊರ್ಧ್ವಾಧಃಕಫವಾತಾನುಲೋಮನಂ ದೀಪನಂ ಬಿಡಮ್ ॥**
**ವಿಬಂಧಾನಾಹವಿಷ್ಟಂಭಶೂಲಗೌರವನಾಶನಮ್ ॥೧೪೫॥**

ಅರ್ಥಃ— ಬಿಡ-ಲವಣವು ಮೇಲಣ ಕೆಳಗಣ ಎರಡೂ ಮಾರ್ಗದಿಂದ ಕಫ-ವಾತಗಳ ಶೋಧಕ, ದೀಪಕವಿದ್ದು ಮಲಬಂಧ ಹೊಟ್ಟೆ-ಯುಬ್ಬು, ವಾತಾವರೋಧ ಶೂಲಿ ಜಡತ್ವಗಳನ್ನು ನಾಶಮಾಡುತ್ತದೆ. (೧೪೫)

**ವಿಪಾಕೇ ಸ್ವಾದು ಸಾಮುದ್ರಂ ಗುರು ಶ್ಲೇಷ್ಮವಿವರ್ಧನಮ್ ॥**

ಅರ್ಥ:— ಸಮುದ್ರದ ಉಪ್ಪು ವಿಪಾಕದಲ್ಲಿ ಮಧುರ, ಗುರು, ಕಫವರ್ಧಕವಿದೆ. (೧೪೫॥)

**ಸತಿಕ್ತಕಟುಕಕ್ಷಾರಂ ತೀಕ್ಷ್ಣಮುತ್ಕ್ಲೇದಿ ಚೌದ್ಭಿದಮ್ ॥೧೪೬॥**

ಅರ್ಥ:— ಖಣಿಜ ಉಪ್ಪು ಸ್ವಲ್ಪ ಕಹಿ, ಕಾರ, ಕ್ಷಾರಯುಕ್ತ, ತೀಕ್ಷ್ಣವಿದ್ದು, ಕ್ಲೇದನ್ನು ಹೆಚ್ಚಿಸುವದು. (೧೪೬)

**ಕೃಷ್ಣೇ ಸೌವರ್ಚಲಗುಣಾ ಲವಣೇ ಗಂಧವರ್ಜಿತಾಃ ||**

ಅರ್ಥ:— ಕರೀ ಉಪ್ಪಿನಲ್ಲಿ ವಾಸನೆಯ ಹೊರತಾಗಿ ಎಲ್ಲ ಕಾಚ ಲವಣದ ಗುಣಗಳಿರುತ್ತವೆ. (೧೪೬||)

**ರೋಮಕಂ ಲಘು,ಪಾಂಸೂತ್ಥಂ ಸಕ್ಷಾರಂ ಶ್ಲೇಷ್ಮಲಂ ಗುರು||೧೪೭||**

ಅರ್ಥ:— ರೋಮಕಉಪ್ಪು ಲಘು. ಮಣ್ಣುಪ್ಪು ಸ್ವಲ್ಪ ಕ್ಷಾರ ಯುಕ್ತ ಕಫವರ್ಧಕ ಮತ್ತು ಜಡವಿರುತ್ತದೆ. (೧೪೭)

**ಲವಣಾನಾಂ ಪ್ರಯೋಗೇ ತು ಸೈಂಧವಾದಿ ಪ್ರಯೋಜಯೇತ್ ||**

ಅರ್ಥ:— ಲವಣಗಳ ಪ್ರಯೋಗವಿದ್ದಲ್ಲಿ ಸೈಂಧವ ಮುಂತಾದವು ಗಳನ್ನು ಕ್ರಮದಿಂದ ತಕ್ಕೊಳ್ಳಬೇಕು.

**ಟಿಪ್ಪಣೀ**— ಸಾಮಾನ್ಯವಾಗಿ ಒಂದು ಉಪ್ಪು ಎಂದು ಹೇಳಿದಾಗ್ಗೆ ಸೈಂಧವ ವನ್ನೂ, ಎರಡು ಉಪ್ಪು ಎಂದು ಹೇಳಿದಾಗ್ಗೆ ಸೈಂಧವ ಮತ್ತು ಕಾಚಲವಣ ಗಳನ್ನೂ, ಮೂರು ಉಪ್ಪು ಎಂದು ಹೇಳಿದಾಗ್ಗೆ ಸೈಂಧವ, ಕಾಚಲವಣ, ಬಿಡಲವಣ ಗಳನ್ನೂ—ಈ ಪ್ರಕಾರ ತಕ್ಕೊಳ್ಳಬೇಕು. (೧೪೭||)

**ಗುಲ್ಮಹೃದ್ಗ್ರಹಣೀಪಾಂಡುಪ್ಲೀಹಾನಾಹಗಲಾಮಯಾನ್ ||೧೪೮||**
**ಶ್ವಾಸಾರ್ಶಃಕಫಕಾಸಾಂಶ್ಚ ಶಮಯೇದ್ಯವಶೂಕಜಃ||**

ಅರ್ಥ:— ಜವಖಾರವು ಗುಲ್ಮ ಹೃದ್ರೋಗ ಗ್ರಹಣೀ ಪಾಂಡು ಪ್ಲೀಹ ಹೊಟ್ಟೆಯುಬ್ಬು ಕುತ್ತಿಗೆಯ ರೋಗ, ಶ್ವಾಸ ಮೂಲವ್ಯಾಧಿ ಕಫ ಕೆಮ್ಮುಗಳನ್ನು ಕಳೆಯುವದು. (೧೪೮||)

**ಕ್ಷಾರಃ ಸರ್ವಶ್ಚ ಪರಮಂ ತೀಕ್ಷ್ಣೋಷ್ಣಃ ಕೃಮಿಜಿಲ್ಲಘುಃ ||೧೪೯||**

**ಪಿತ್ತಾಸೃಗ್ದೂಷಣಃ ಪಾಕೀ ಛೇದ್ಯಹೃದ್ಯೋ ವಿದಾರಣಃ ||**

**ಅಪಥ್ಯಃ ಕಟುಲಾವಣ್ಯಾಚ್ಛುಕ್ರೌಜಃಕೇಶಚಕ್ಷುಷಾಮ್ ||೧೫೦||**

ಅರ್ಥ:— ಎಲ್ಲ ತರದ ಕ್ಷಾರಗಳು ಅತ್ಯಂತ ತೀಕ್ಷ್ಣ, ಉಷ್ಣ, ಕೃಮಿನಾಶಕ, ಲಘು, ರಕ್ತ-ಪಿತ್ತ-ದೂಷಕ, ಪಾಚಕ, ಮೇದ-ಕಫಗಳ ಗಂಟುಗಳನ್ನು ಒಡೆಯುವದೂ, ಹೃದಯಕ್ಕೆ ಅಹಿತವೂ, ಹಣ್ಣಾದ ವ್ರಣ ಗಳನ್ನು ಶೀಳುವದೂ, ಕಾರ-ಉಪ್ಪು ರಸಗಳು ಇರುವದರಿಂದ ಶುಕ್ರ ಓಜ ಕೇಶ ಕಣ್ಣುಗಳಿಗೆ ಅಹಿತವೂ ಆಗಿರುವವು. (೧೫೦)

**ಹಿಂಗು ವಾತಕಫಾನಾಹಶೂಲಘ್ನಂ ಪಿತ್ತಕೋಪನಮ್||**
**ಕಟುಪಾಕರಸಂ ರುಚ್ಯಂ ದೀಪನಂ ಪಾಚನಂ ಲಘು ||೧೫೧||**

ಅರ್ಥ:— ಇಂಗು ವಾತ ಕಫ ಹೊಟ್ಟೆಯುಬ್ಬು ಶೂಲಗಳ ನಾಶಕ, ಪಿತ್ತರೋಚಕ, ಪಾಕರಸದಲ್ಲಿ ಕಾರ, ರುಚಿಕರ, ದೀಪಕ ಪಾಚಕ ಮತ್ತು ಲಘು ಇರುತ್ತದೆ. (೧೫೧)

**ಕಷಾಯಾ ಮಧುರಾ ಪಾಕೇ ರೂಕ್ಷಾ ವಿಲವಣಾ ಲಘುಃ ||**
**ದೀಪನೀ ಪಾಚನೀ ಮೇಧ್ಯಾ ವಯಸಃ ಸ್ಥಾಪನೀ ಪರಮ್ ||೧೫೨||**

**ಉಷ್ಣವೀರ್ಯಾ ಸರಾऽऽಯುಷ್ಯಾ ಬುದ್ಧೀಂದ್ರಿಯಬಲಪ್ರದಾ ||**
**ಕುಷ್ಠ ವೈವರ್ಣ್ಯವೈಸ್ವರ್ಯ ಪುರಾಣವಿಷಮಜ್ವರಾನ್ ||೧೫೩||**

**ಶಿರೋऽಕ್ಷಿಪಾಂಡುಹೃದ್ರೋಗಕಾಮಲಾಗ್ರಹಣೀಗದಾನ್ ||**
**ಸಶೋಷಶೋಫಾತೀಸಾರಮೇದಮೋಹವಮಿಕ್ರಿಮೀನ್ ||೧೫೪||**

**ಶ್ವಾಸಕಾಸಪ್ರಸೇಕಾರ್ಶಃಪ್ಲೀಹಾನಾಹಗರೋದರಮ್ ||**

**ವಿಬಂಧಂ ಸ್ರೋತಸಾಂ ಗುಲ್ಮಮೂರುಸ್ತಂಭಮರೋಚಕಮ್ ||೧೫೫||**

**ಹರೀತಕೀ ಜಯೇದ್ವ್ಯಾಧೀಂಸ್ತಾಂಸ್ತಾಂಶ್ಚ ಕಫವಾತಜಾನ್ ||**

ಅರ್ಥ:— ಅಳಲೇಕಾಯಿಯು ಒಗರು, ವಿಪಾಕದಲ್ಲಿ ಮಧುರ, ರುಕ್ಷ, ಉಪ್ಪಿನ ಹೊರ್ತಾಗಿ ಉಳಿದ ರಸವುಳ್ಳದ್ದು, ಲಘು, ದೀಪಕ, ಪಾಚಕ,ಬುದ್ಧಿ ವರ್ಧಕ, ಅತ್ಯಂತ ತಾರುಣ್ಯ ರಕ್ಷಕ, ಉಷ್ಣ-ವೀರ್ಯ, ಸಾರಕ, ಆಯು ವರ್ಧಕ, ಬುದ್ಧಿ ಇಂದ್ರಿಯಗಳ ಶಕ್ತಿವರ್ಧಕವಿದ್ದು ಕುಷ್ಠ ನಿಸ್ತೇಜತನ

ಸ್ವರ-ಭೇದ ಜೀರ್ಣ-ಜ್ವರ ವಿಷಮ-ಜ್ವರ ಶಿರೋರೋಗ ನೇತ್ರರೋಗ ಪಾಂಡು ಹೃದ್ರೋಗ ಕಾಮಣೀ ಗ್ರಹಣೀ ರೋಗಗಳನ್ನೂ ಕ್ಷಯ ಜ್ವರ ಅತಿಸಾರ ಮೇದ ಮೋಹ ವಾಂತಿ ಕೃಮಿಗಳನ್ನೂ ಶ್ವಾಸ ಕೆಮ್ಮು ಬಾಯಲ್ಲಿ-ನೀರು-ಬರುವದು ಮೂಲವ್ಯಾಧಿ ಪ್ಲೀಹ ಹೊಟ್ಟೆಯುಬ್ಬು. ಕೃತ್ರಿಮ-ವಿಷ ಉದರ ಸ್ರೋತಸ್ಸುಗಳ-ಸಂಕೋಚ ಗುಲ್ಮ ಊರುಸ್ತಂಭ ಅರೋಚಕಗಳನ್ನೂ ಮತ್ತು ಕಫ-ವಾತದಿಂದುಂಟಾಗುವ ಆಯಾ ರೋಗಗಳನ್ನೂ ನಾಶಮಾಡುತ್ತದೆ.

**ತದ್ವದಾಮಲಕಂ ಶೀತಮಮ್ಲಂ ಪಿತ್ತಕಫಾಪಹಮ್** ॥೧೫೬॥

ಅರ್ಥ:— ನೆಲ್ಲೀಕಾಯಿಯ ಗುಣವಾದರೂ ಇದರಂತೆ ಇದ್ದು ಶೀತ, ಹುಳಿ, ಪಿತ್ತ-ಕಫನಾಶಕವಿದೆ.

**ಟಿಪ್ಪಣಿ:—** ಸುಶ್ರುತಾಚಾರ್ಯರು ತ್ರಿದೋಷನಾಶಕವೆಂದು ಹೇಳಿದ್ದಾರೆ. (೧೫೬)

**ಕಟು ಪಾಕೇ ಹಿಮಂ ಕೇಶ್ಯಮಕ್ಷಮೀಷಚ್ಚ ತದ್ಗುಣಂ** ॥

ಅರ್ಥ:— ತಾರೀಕಾಯಿಯು ಪಾಕದಲ್ಲಿ ಕಾರ, ಶೀತ, ಕೇಶಕ್ಕೆ ಹಿತಕರವಿದ್ದು ಮೇಲಿನಂತಹ ಸ್ವಲ್ಪ ಗುಣವುಳ್ಳದ್ದಿರುವದು.

**ಟಿಪ್ಪಣಿ:—** ಹೇಮಾದ್ರಿಯು "ಅಹಿಮಂ" ಎಂದು ಪದಚ್ಛೇದ ಮಾಡುವನು; ಉಳಿದವರು "ಹಿಮಂ" ಎಂದು. (೧೫೬॥)

**ಇಯಂ ರಸಾಯನವರಾ ತ್ರಿಫಲಾಽಕ್ಷ್ಯಾಮಯಾಪಹಾ** ॥೧೫೭॥
**ರೋಪಣೀ ತ್ವಗ್ಗದಕ್ಲೇದಮೇದೋಮೇಹಕಫಾಸ್ರಜಿತ್** ॥

ಅರ್ಥ:— ಅಳಲೀಕಾಯಿ, ತಾರೀಕಾಯಿ, ನೆಲ್ಲೀಕಾಯಿ-ಈ ಮೂರಕ್ಕೂ ಕೂಡಿ ತ್ರಿಫಳೆಎಂಬ ಹೆಸರು. ಇದು ಕಣ್ಣುಬೇನೆಯನ್ನು ಕಳೆಯುವದು; ವ್ರಣವನ್ನು ತುಂಬಿ ತರುವದು; ತ್ವಗ್ರೋಗ ವ್ರಣದ-ಸ್ರಾವ ಮೇದ ಮೇಹ ಕಫ ರಕ್ತ-ದೋಷಗಳನ್ನು ನಾಶಪಡಿಸುವದು.

**ಟಿಪ್ಪಣಿ:—** ಈ ಮೂರು ಫಲಗಳು ತೂಕದಲ್ಲಿ ಹೆಚ್ಚು ಕಡಿಮೆ ಇರುವದರಿಂದ ಸಂಖ್ಯಾ ಪ್ರಮಾಣದಿಂದ ತೆಗೆದುಕೊಳ್ಳಲಿಕ್ಕೆ ಬರುವದಿಲ್ಲ. ಇವುಗಳ ಚೂರ್ಣ

ವನ್ನೇ ಸಮತೂಕದಲ್ಲಿ ತೆಗೆದುಕೊಳ್ಳಬೇಕು. ಕೆಲವು ಕಡೆಯಲ್ಲಿ ಒಂದು ಅಳ್ಳೀಕಾಯಿ, ಎರಡು ತಾರೀಕಾಯಿ, ನಾಲ್ಕು ನೆಲ್ಲೀಕಾಯಿಗಳನ್ನು ತೆಗೆದುಕೊಳ್ಳಲು ಹೇಳಿದೆ. ಆದಾಪರೂ ಸರಿಯೇ ಅದೆ. ಹೇಗೆಂದರೆ ಅಳ್ಳೀಕಾಯಿ ಎರಡು ತೊಲೆಯದು, ತಾರೀಕಾಯಿ ಒಂದು ತೊಲೆಯದು, ನೆಲ್ಲೀಕಾಯಿ ಅರ್ಧ ತೊಲೆಯದು ಒಳ್ಳೇದೆಂದು ಹೇಳಿದ್ದರಿಂದ ಎಲ್ಲವೂ ಸಮವಾಗಿಯೇ ಆಗುತ್ತವೆ. (೧೫೭॥)

**ಸಕೇಸರಂ ಚತುರ್ಜಾತಂ ತ್ವಕ್ಪತ್ರೈಲಂ ತ್ರಿಜಾತಕಮ್ ||೧೫೮.||**
**ಪಿತ್ತಪ್ರಕೋಪಿ ತೀಕ್ಷ್ಣೋಷ್ಣಂ ರೂಕ್ಷಂ ರೋಚನದೀಪನಮ್ ||**

ಅರ್ಥ:— ದಾಲಚಿನ್ನಿ, ತಮಾಲ ಪತ್ರ, ಯಾಲಕ್ಕಿ—ಈ ಮೂರಕ್ಕೆ ಕೂಡಿ ತ್ರಿಜಾತಕ ಎಂಬ ಹೆಸರು. ಇದರಲ್ಲಿ ನಾಗಕೇಶರ ಕೂಡಿಸಿದರೆ **ಚತುರ್ಜಾತಕ** ಎಂಬ ಹೆಸರು. ಇವು ಪಿತ್ತಕೋಪಕ ತೀಕ್ಷ್ಣ, ಉಷ್ಣ, ರುಕ್ಷ, ರುಚಿಕರ, ದೀಪಕವಿರುತ್ತವೆ.

**ಟಿಪ್ಪಣಿ:—** ತ್ರಿಜಾತಕಕ್ಕೆ ತ್ರಿಸುಗಂಧ ಎಂದೂ ಹೆಸರು. (೧೫೮॥)

**ರಸೇ ಪಾಕೇ ಚ ಕಟುಕಂ ಕಫಘ್ನಂ ಮರಿಚಂ ಲಘು ||೧೫೯||**

ಅರ್ಥ:— ಮೆಣಸು ರಸದಲ್ಲಿ ಪಾಕದಲ್ಲಿ ಕಾರ, ಕಫಘ್ನ ಮತ್ತು ಲಘು ಇರುತ್ತದೆ. (೧೫೯)

**ಶ್ಲೇಷ್ಮಲಾ ಸ್ವಾದುಶೀತಾಽಽರ್ದ್ರಾ ಗುರ್ವೀ ಸ್ನಿಗ್ಧಾ ಚ ಪಿಪ್ಪಲೀ ||**
**ಸಾ ಶುಷ್ಕಾ ವಿಪರೀತಾಽತಃ ಸ್ನಿಗ್ಧಾ ವೃಷ್ಯಾ ರಸೇ ಕಟುಃ ||೧೬೦||**

**ಸ್ವಾದುಪಾಕ್ಯಾನಿಲಶ್ಲೇಷ್ಮಶ್ವಾಸಕಾಸಾಪಹಾ ಸರಾ ||**
**ನ ತಾಮತ್ಯುಪಯುಂಜೀತ ರಸಾಯನವಿಧಿಂ ವಿನಾ ||೧೬೧||**

ಅರ್ಥ:— ಹಸೀ ಹಿಪ್ಪಲಿಯು ಕಫವರ್ಧಕ, ಮಧುರ, ಶೀತ, ಗುರು, ಸ್ನಿಗ್ಧವಿರುತ್ತದೆ. ಅದು ಒಣಗಿದ್ದರೆ ವಿಪರೀತವು ಮತ್ತು ಸ್ನಿಗ್ಧ, ವೃಷ್ಯ, ಕಾರ, ವಿಪಾಕದಲ್ಲಿ ಮಧುರ, ವಾತಕಫ ಶ್ವಾಸ ಕಾಸಗಳ ನಾಶಕ ಮತ್ತು ಸಾರಕವಿರುತ್ತದೆ. ರಸಾಯನದ ಹೊರ್ತಾಗಿ ಅದನ್ನು ಬಹಳ ಉಪಯೋಗಿಸ ಬಾರದು. (೧೬೧)

**ನಾಗರಂ ದೀಪನಂ ವೃಷ್ಯಂ ಗ್ರಾಹಿ ಹೃದ್ಯಂ ವಿಬಂಧನುತ್ ||**
**ರುಚ್ಯಂ ಲಘು ಸ್ವಾದುಪಾಕಂ ಸ್ನಿಗ್ಧೋಷ್ಣಂ ಕಫವಾತಜಿತ್ ||೧೬೦||**

ಅರ್ಥಃ— ಶುಂಠಿಯು ದೀಪಕ, ವೃಷ್ಯ, ಸ್ತಂಭಕ, ಹೃದ್ಯ, ಮಲ ಬಂಧ-ನಾಶಕ, ರುಚಿಕರ, ಲಘು, ವಿಪಾಕದಲ್ಲಿ ಮಧುರ, ಸ್ನಿಗ್ಧ, ಉಷ್ಣ ಮತ್ತು ಕಫವಾತ-ನಾಶಕ ಇರುತ್ತದೆ. (೧೬೦)

**ತದ್ವದಾರ್ದ್ರಕಮ್.**

ಅರ್ಥಃ— ಇದರಂತೆ ಹಸಿ ಶುಂಠಿಯ ಗುಣವು ಇರುತ್ತದೆ. (೧೬೧)

**...................ಏತಚ್ಚ ತ್ರಯಂ ತ್ರಿಕಟುಕಂ, ಜಯೇತ್ ||**
**ಸ್ಥೌಲ್ಯಾಗ್ನಿಸದನಶ್ವಾಸಕಾಸಶ್ಲೀಪದಪೀನಸಾನ್ ||೧೬೨||**

ಅರ್ಥಃ— ಶುಂಠಿ, ಮೆಣಸು, ಹಿಪ್ಪಲಿ-ಇವು ಮೂರಕ್ಕೆ ಕೂಡಿ ತ್ರಿಕಟುಎನ್ನುವರು. ಇದು ಸ್ಥೌಲ್ಯ ಅಗ್ನಿಮಾಂದ್ಯ ಶ್ವಾಸ ಕಾಸ ಶ್ಲೀಪದ ಮತ್ತು ಪೀನಸುಗಳನ್ನು ಕಳೆಯುವದು. (೧೬೨)

**ಚವಿಕಾಪಿಪ್ಪಲೀಮೂಲಂ ಮರಿಚಾಲ್ಪಾಂತರಂ ಗುಣೈಃ ||**

ಅರ್ಥಃ— ಚವಕ ( ಕಾಡಮೆಣಸಿನ ಬಳ್ಳಿಯ ಬೇರು ) ಮತ್ತು ಮೋಡಿ ಕಡ್ಡಿಗಳು ಗುಣದಲ್ಲಿ ಮೆಣಸಿನಂತೆ; ಆದರೆ ಸ್ವಲ್ಪ ಹೀನವಾಗುತ್ತವೆ. (೧೬೩||)

**ಚಿತ್ರಕೋಽಗ್ನಿಸಮಃ ಪಾಕೇ ಶೋಫಾರ್ಶಃ ಕೃಮಿಕುಷ್ಠಹಾ ||೧೬೪||**

ಅರ್ಥಃ— ಚಿತ್ರಕವು ಪಾಕದಲ್ಲಿ ಅಗ್ನಿಯ ಸಮಾನವಿದ್ದು ಬಾವು ಮೂಲವ್ಯಾಧಿ ಕೃಮಿ ಕುಷ್ಠಗಳನ್ನು ನಾಶಮಾಡುತ್ತದೆ. (೧೬೪)

**ಪಂಚಕೋಲಕಮೇತಚ್ಚ ಮರಿಚೇನ ವಿನಾ ಸ್ಮೃತಮ್ ||**
**ಗುಲ್ಮಪ್ಲೀಹೋದರಾನಾಹಶೂಲಘ್ನಂ ದೀಪನಂ ಪರಮ್ ||೧೬೫||**

ಅರ್ಥ:— ಮೆಣಸಿನ ಹೊರತಾಗಿ ಉಳಿದ ಮೇಲಿನ ಐದು (ಚವಕ, ಚಿತ್ರಕ, ಹಿಪ್ಪಲಿ, ಮೋಡಿ ಕಡ್ಡಿ, ಶುಂಠಿ) ಔಷಧಗಳಿಗೆ **ಪಂಚಕೋಲ** ಎಂಬ ಹೆಸರು. ಇದು ಗುಲ್ಮ, ಪ್ಲೀಹ, ಉದರ, ಹೊಟ್ಟೆಯುಬ್ಬು, ಶೂಲಗಳನ್ನು ನಾಶಮಾಡುವದು; ಮತ್ತು ಅತ್ಯಂತ ದೀಪಕವಿರುವದು. (೧೬೫)

**ಬಿಲ್ವಕಾಶ್ಮರ್ಯತರ್ಕಾರೀಪಾಟಲಾಟಿಂಟುಕೈರ್ಮಹತ್ ॥**
**ಜಯೇತ್ಕಷಾಯತಿಕ್ತೋಷ್ಣಂ ಪಂಚಮೂಲಂ ಕಫಾನಿಲೌ** ॥೧೬೬॥

ಅರ್ಥ:— ಬಿಲ್ವದಬೇರು, ಕಾಶ್ಮರ್ಯ (ಶಿವನೀಬೇರು), ತರ್ಕಾರಿ (ಹೊಸಲಕ್ಕಿಬೇರು), ಪಾಟಲಾ (ಪಾದರೀಬೇರು), ಟಿಂಟುಕ (ಹೆಮ್ಮರದ ಬೇರು)—ಈ ಐದರಿಂದ ಮಹತ್ಪಂಚಮೂಲವಾಗುವದು. ಇದು ಒಗರು ಕಹಿ ಉಷ್ಣವಿದ್ದು ಕಫವಾತಗಳನ್ನು ಗೆಲ್ಲುವದು. (೧೬೬)

**ಹ್ರಸ್ವಂ ಬೃಹತ್ಯಂಶುಮತೀದ್ವಯಗೋಕ್ಷುರಕೈಃ ಸ್ಮೃತಮ್ ॥**
**ಸ್ವಾದುಪಾಕರಸಂ ನಾತಿಶೀತೋಷ್ಣಂ ಸರ್ವದೋಷಜಿತ್** ॥೧೬೭॥

ಅರ್ಥ:— ನೆಲಗುಳ್ಳ, ಹೆಬ್ಬುಗುಳ್ಳ, ಶಾಲಿಪರ್ಣಿ (ಒಂದೆಲೆ ಹೊನ್ನಿ), ಪೃಶ್ನಿಪರ್ಣಿ (ಮೂರೆಲೆ ಹೊನ್ನಿ), ನೆಗ್ಗಿಲಬೇರು—ಇವುಗಳಿಂದ **ಲಘುಪಂಚಮೂಲ**ವಾಗುವದು. ಅದು ಪಾಕದಲ್ಲಿ ರಸದಲ್ಲಿ ಮಧುರ,ಬಹಳ ಶೀತ, ಅಥವಾ ಬಹಳ ಉಷ್ಣವಿರದೆ ಎಲ್ಲ ದೋಷಗಳನ್ನು ನಾಶಮಾಡುವದು. (೧೬೭)

**ಬಲಾಪುನರ್ನವೈರಂಡಶೂರ್ಪಪರ್ಣೀದ್ವಯೇನ ತು ॥**
**ಮಧ್ಯಮಂ ಕಫವಾತಘ್ನಂ ನಾತಿಪಿತ್ತಕರಂ ಸರಮ್** ॥೧೬೮॥

ಅರ್ಥ:— ಬಲಾ (ಕಳ್ಳಂಗಡ್ಲೆ), ಬಿಳೀಗಣಜಲ (ಕೊಮ್ಮೆ), ಔಡಲ, ಕಾಡಹೆಸರು, ಕಾಡಉದ್ದು—ಈ ಐದು ಬೇರುಗಳಿಂದ **ಮಧ್ಯಮಪಂಚಮೂಲ**ವಾಗುವದು. ಇದು ಕಫ-ವಾತ ನಾಶಕವೂ ಬಹಳ ಪಿತ್ತ ಮಾಡದಿರುವದೂ ಸಾರಕವೂ ಆಗಿದೆ. (೧೬೮)

**ಅಭೀರುವೀರಾಜೀವಂತೀಜೀವಕರ್ಷಭಕೈಃ ಸ್ಮೃತಮ್ ||**
**ಜೀವನಾಖ್ಯಂ ತು ಚಕ್ಷುಷ್ಯಂ ವೃಷ್ಯಂ ಪಿತ್ತಾನಿಲಾಪಹಮ್ ||೧೬೯||**

ಅರ್ಥ:— ಶತಾವರಿ, ಕಾಕೋಲಿ, ಜೀವಂತಿ (ಶೀಹಾಲೆ), ಜೀವಕ, ಋಷಭಕ-ಈ ಐದರ ಬೇರುಗಳಿಗೆ **ಜೀವನ-ಪಂಚಮೂಲವೆನ್ನು**ವರು. ಇದು ಚಕ್ಷುಷ್ಯ, ವೃಷ್ಯವಿದ್ದು ಪಿತ್ತವಾತಗಳನ್ನು ನಾಶಮಾಡುವದು. (೧೬೯)

**ತೃಣಾಖ್ಯಂ ಪಿತ್ತಜಿದ್ದರ್ಭಕಾಸೇಕ್ಷುಶರಶಾಲಿಭಿಃ ||**

ಅರ್ಥ:— ದರ್ಭ, ಕಾಸ, (ಕಾಕೇಮಣಿ) ಹುಲ್ಲಿನಬೇರು, ಕಬ್ಬು, ಶರ (ಪೇವನಕದ ಬೇರು), ಬತ್ತ ಇವುಗಳ ಬೇರುಗಳಿಂದ **ತೃಣಪಂಚ-ಮೂಲವಾ**ಗುವದು. ಇದು ಪಿತ್ತನಾಶಕವಿರುವದು. (೧೬೯||)

**ಶೂಕಶಿಂಬೀಜ ಪಕ್ವಾನ್ನಮಾಂಸಶಾಕಫಲೌಷಧೈಃ ||೧೭೦||**
**ವರ್ಗೈರನ್ನಲೇಶೋಽಯಮುಕ್ತೋ ನಿತ್ಯೋಪಯೋಗಿಕಃ ||**

ಅರ್ಥ:— ಈ ಪ್ರಕಾರ ನಿತ್ಯ ಉಪಯೋಗದಲ್ಲಿ ಬರುವ ಭಕ್ಷ್ಯ ಪದಾರ್ಥಗಳಲ್ಲಿ ತೆನೆಯಲ್ಲಿ ಆಗುವ-ಸೊಟ್ಟೆಯಲ್ಲಿ ಆಗುವ ಧಾನ್ಯ, ಪಕ್ವ ಅನ್ನ, ಮಾಂಸ, ಶಾಕ, ಫಲ, ಔಷಧಗಳೆಂಬ ವರ್ಗಗಳನ್ನು ಮಾಡಿ ಹೇಳಲ್ಪಟ್ಟಿತು.

**ಟಿಪ್ಪಣಿ:—** ಇಷ್ಟರಿಂದಲೇ ವಸ್ತುಗಳ ಗುಣದೋಷಗಳನ್ನು ತಿಳಿಯಲು ಬಾರದು. ಮಾತ್ರಾ, ಸಂಯೋಗ, ಸಂಸ್ಕಾರ, ದೇಶಕಾಲ, ಅವಸ್ಥಾಭೇದದಿಂದ ದ್ರವ್ಯಗಳಲ್ಲಿ ಬೇರೆ ಬೇರೆ ಗುಣಗಳು ಕಂಡುಬರುತ್ತವೆ.

**ಉದಾಹರಣೆ:—**

**ಮಾತ್ರಾ:—**

೧. ಮದ್ಯದ ರೋಗಗಳು ಸ್ವಲ್ಪ ಸ್ವಲ್ಪ ಮದ್ಯ ಸೇವನೆಯಿಂದ ಗುಣವಾಗುತ್ತವೆ.

೨. ಅದರಂತೆ ಸ್ವಲ್ಪ ಪ್ರಮಾಣದಿಂದ ತಿನ್ನುತ್ತಿದ್ದರೆ ವಿಷವೂ ಅಮೃತವಾಗುವದು.

೩. ಹೀನ ಅಥವಾ ಅತಿಯಾದ ಆಹಾರವು ವಾತಕೋಪವನ್ನು ಉಂಟು ಮಾಡುತ್ತದೆ.

೪. ತುಪ್ಪ ಜೇನುಗಳು ಸಮಪ್ರಮಾಣದಲ್ಲಿ ವಿಷವಾಗುತ್ತವೆ.

ಸಂಯೋಗ:—

೧. ಆಮ್ಲ-ರಸ ಸಂಯೋಗದಿಂದ ಕ್ಷಾರವು ಮಧುರವಾಗುತ್ತದೆ.

೨. ಎಳ್ಳು ಕುಷ್ಠಕರವಾಗಿದ್ದರೂ ಕೇರಿಸೊಡನೆ ತಿಂದರೆ ಅದನ್ನು ನಾಶ ಮಾಡುತ್ತದೆ.

೩. ಬೆಲ್ಲವು ಅಗ್ನಿಮಾಂದ್ಯಕರವಾಗಿದ್ದರೂ ಅಳ್ಳೀಕಾಯಿಯೊಡನೆ ಸೇವಿಸಿದರೆ ಅಗ್ನಿಮಾಂದ್ಯವನ್ನು ಕಳೆಯುತ್ತದೆ.

೪. ಹಾಲು ಜೀವನೀಯವಾಗಿದ್ದರೂ ವಿಷದ ಲೇಶದಿಂದ ಕೂಡ ಮಾರಕವಾಗುವದು.

೫. ಸ್ಥಾವರ ಜಂಗಮ ವಿಷಗಳು ಪರಸ್ಪರ ಮಾರಕವಾಗಿರುವವು.

೬. ಸತುವಿನ ಹಿಟ್ಟು ವಾತಲ, ರುಕ್ಷವಾಗಿದ್ದರೂ ಆದನ್ನು ತಿಂದರೆ ಪುಷ್ಟಿಯನ್ನುಂಟುಮಾಡುತ್ತದೆ.

ಸಂಸ್ಕಾರ:—

೧. ಹಸಿ ಶುಂಠಿಯು ಸಂಸ್ಕಾರದಿಂದ ಶುಂಠಿಯಾಗಲು ಅದಕ್ಕೊ ಹಗುರು ಆಗುತ್ತದೆ.

೨. ಹುರಿದು ಕುಟ್ಟಿದಾಗ್ಯೂ ಅವಲಕ್ಕಿಯು ರಕ್ತಶಾಲಿಗಿಂತ ಜಡವಿರುರುತ್ತದೆ.

೩. ಅಕ್ಕಿಯ ಹಿಟ್ಟು ಗೋದಿಯಕಿಂತ ಜಡವಾಗುತ್ತದೆ.

೪. ಜಡ ಮತ್ತು ಪಿತ್ತಕರವಾದ ನೆಲ್ಲುಗಳಿಂದ ಉಂಟಾದ ಭತ್ತರಳುಗಳು ಲಘು ಮತ್ತು ಪಿತ್ತಹರವಾಗಿರುತ್ತವೆ.

೫. ಹೆಸರು ಹಗುರು ಮಲಬಂಧಕವಿದ್ದರೂ ಅದರ ಉಸಳಿಯು ಮಲಭೇದಕ ಮತ್ತು ಜಡವಿರುವದು.

೬. ಬೆಲ್ಲ ಮತ್ತು ನೀರಿಗಿಂತ ಅದರಿಂದಾದ ಪಾನಕವು ಹೆಚ್ಚು ಜಡ ಮತ್ತು ಮೂತ್ರಲವಾಗಿರುತ್ತದೆ.

೭. ಮೊಸರು ಜಡ ಮತ್ತು ಶೋಫಕರವಾಗಿದೆ. ಆದರೆ ಮಜ್ಜಿಗೆಯು ಬೆಣ್ಣೆಯನ್ನು ತೆಗೆಯದಿದ್ದರೂ ಹಗುರು, ಶೋಫಹರವಿದೆ.

೮. ತುಪ್ಪವು ಹೆಚ್ಚು ಸ್ನಿಗ್ಧವಿದ್ದರೂ ಅರ್ದಿತವನ್ನು ನಾಶಮಾಡುವದು.

೯. ಗೋದಿಯು ಕಣ್ಣಿಗೆ ಹಿತಕರವಿದ್ದರೂ ಎಣ್ಣೆಯಲ್ಲಿ ಕರಿದರೆ ಅಪಾಯ ಮಾಡುವದು.

೧೦. ಜೇನು-ವಿಷನಾಶಕವಿದ್ದರೂ ಉಷ್ಣಮಾಡಿದರೆ ವಿಷವಾಗುವದು.

ದೇಶಃ— ಕೆಲಕೆಲವು ಪ್ರದೇಶದವರಿಗೆ ಕೆಲಕೆಲವು ವಸ್ತುಗಳು ಸಾತ್ಮ್ಯ ವಾಗಿರುತ್ತವೆ.

೧. ಮರು ದೇಶದವರಿಗೆ ಹಾಲು ಮೊಸರು.

೨. ಪೂರ್ವ ದೇಶದವರಿಗೆ ಕ್ಷಾರ.

೩. ಸಿಂಧು ದೇಶದವರಿಗೆ ಮತ್ಸ್ಯ.

೪. ಮಲಯದವರಿಗೆ ಎಳ್ಳು ಎಣ್ಣೆ, ಕಂದಮೂಲ.

೫. ಕೊಂಕಣದವರಿಗೆ ಪೇಯ.

೬. ಉತ್ತರ ದಿಕ್ಕಿನವರಿಗೆ ಮಂಥ.

೭. ಅವಂತಿ ದೇಶದವರಿಗೆ ಗೋದಿ.

೮. ಇದರಂತೆ ಚೀನ, ಯವನ, ಶಕ ಮುಂತಾದ ದೇಶದವರಿಗೆ ಮಾಂಸ ಗೋದಿ ದ್ರಾಕ್ಷೆ ಮುಂತಾದವುಗಳು ಹಿತಕರವಿರುತ್ತವೆ.

೯. ಕೆಲವರ ದೇಹಕ್ಕೆ ಕೆಲಕೆಲವು ವಸ್ತುಗಳು ಸಾತ್ಮ್ಯವಾಗಿರುತ್ತವೆ. ಅಹಿತಕರವಾದ ಅವುಗಳಿಂದಲೇ ಅವರಿಗೆ ಹಿತವಾಗುತ್ತದೆ.

೧೦. ಹಾಲು ರೇಚಕವಿದ್ದರೂ ಕೆಲವರಿಗೆ ಮಲಬಂಧ ಮಾಡುತ್ತದೆ. ಹಾಲು ವಿಷ-ನಾಶಕವಿದ್ದರೂ ಹಾವಿನಲ್ಲಿ ವಿಷವನ್ನುಂಟುಮಾಡುತ್ತದೆ.

೧೧. ಹಸೀ ಮಜ್ಜಿಗೆಯು ಕೋಷ್ಠದಲ್ಲಿ ಕಫವನ್ನು ನಾಶಮಾಡಿದರೂ ಕಂಠದಲ್ಲಿ ಅದನ್ನು ಉಂಟುಮಾಡುತ್ತದೆ.

೧೨. ವಾತ-ನಾಶಕಗಳಾದ ದ್ರಾಕ್ಷೆ ಕಜ್ಜೂರಿಗಳು ಕೋಷ್ಠದಲ್ಲಿ ವಾತ ವನ್ನುಂಟುಮಾಡುತ್ತವೆ.

೧೩. ಕಣ್ಣಿಗೆ ಶೀತವು ಹಿತವಾದರೆ ಕಿವಿಗೆ ಉಷ್ಣವು ಹಿತಕರವು.

ಕಾಲಃ—

೧. ಹಾಲು ಸಿಹಿ ಸಾರಕ ಶೀತವಿದೆ. ಮೊಸರು ಅದರ ವಿಪರೀತ.

ಆದರೆ ಕಾಲದಿಂದ ಅದರಿಂದಲೇ ಹಾಲಿನ ಗುಣವುಳ್ಳ ತುಪ್ಪವು ಉಂಟಾಗುತ್ತದೆ.

೨. ಒಗರು ಹುಳಿಯಾದ ಮಜ್ಜಿಗೆಯು ಮಲಬಂಧಕ.

ಆದರೆ ಅದೇ ಹುಳಿಯಾದರೆ ರೇಚಕವಾಗುವದು.

೩. ಜೇನು ವಾತಲವಿದ್ದರೂ ವರ್ಷಾಕಾಲದಲ್ಲಿ ವಾತ-ಕೋಪಕ್ಕೆ ಔಷಧವು.

೪. ಹಗಲು ನಿದ್ರೆಯಿಂದ ಹಿಂದಿನ ದಿನದ ಆಹಾರವು ಪಚನವಾಗುವದು. ಇಂದಿನದು ಇಲ್ಲ.

೫. ಸರ್ಪ ಮುಂತಾದವುಗಳ ಕೊಳೆತ ಶರೀರದಿಂದ ಚೇಳು ಉತ್ಪನ್ನವಾಗುತ್ತವೆ. ಅವು ಕಡಿದರೆ ಅವೇ ಹಾವುಗಳು ಸಾಯುತ್ತವೆ.

೬. ಗ್ರಹಣಿಯಲ್ಲಿ ಮಜ್ಜಿಗೆಯು ಹಿತಕರವಾದರೂ ವ್ರಣದಲ್ಲಿ ಅಹಿತಕರವು.

ಇದರಂತೆ ಕಾರಣಗಳನ್ನು ಹೇಳಲಿಕ್ಕಾಗದ ವಿಚಿತ್ರ ಧರ್ಮಗಳು ಪದಾರ್ಥಗಳಲ್ಲಿ ಕಂಡುಬರುತ್ತವೆ. ಅವನ್ನು ಬುದ್ಧಿಯಿಂದ ತಿಳಿದುಕೊಳ್ಳಬೇಕು. ಉದಾಹರಣೆಗಾಗಿ ಇಲ್ಲಿ ಕೆಲವನ್ನು ಮಾತ್ರ ಹೇಳಿದ್ದೇವೆ. (೧೭೦॥)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇಽನ್ನಸ್ವರೂಪವಿಜ್ಞಾನೀಯೋ ನಾಮ ಷಷ್ಠೋಽಧ್ಯಾಯಃ ಸಮಾಪ್ತಃ।**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಅದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ ಅನ್ನಸ್ವರೂಪವಿಜ್ಞಾನೀಯ ಎಂಬ ೬ ನೆಯ ಅಧ್ಯಾಯವು ಮುಗಿದುದು.



# ೭ನೆಯ ಅಧ್ಯಾಯ

ಹಿಂದಿನ ಎರಡು ಅಧ್ಯಾಯಗಳಲ್ಲಿ ಆಹಾರವು ಹೇಳಲ್ಪಟ್ಟಿತು. ಆ ಆಹಾರದ ರಕ್ಷಣವನ್ನು ಚನ್ನಾಗಿ ಮಾಡದಿದ್ದರೆ ಅದರಿಂದ ಅಪಾಯವಾಗುವದು ಎಂದು ಅದರರಕ್ಷಣೆಯನ್ನು ಹೇಳುವದಕ್ಕಾಗಿ ಈ ಅಧ್ಯಾಯದಲ್ಲಿ ಉಪಯುಕ್ತ ಅನ್ನದ ಲಕ್ಷಣಗಳನ್ನೂ ವಿಷದ ಕಾರ್ಯವನ್ನು ಮಾಡುವ ವಿರುದ್ಧ ಆಹಾರವನ್ನೂ ಮತ್ತು ಆ ಆಹಾರದ ಸಂಗತಿಯಿಂದ ಶರೀರ ಧಾರಣಕ್ಕೆ ಉಪಯೋಗವಾದ ನಿದ್ರೆ, ಸಂಭೋಗಗಳ ವಿಧಿಯನ್ನು ಹೇಳುತ್ತಾರೆ.

**ಅಥಾತೋಽನ್ನರಕ್ಷಾಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥ:— ಇನ್ನು ಅನ್ನರಕ್ಷಾಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ।**

ಅರ್ಥಃ— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದ್ದಾರೆ.

**ರಾಜಾ ರಾಜಗೃಹಾಸನ್ನೇ ಪ್ರಾಣಾಚಾರ್ಯಂ ನಿವೇಶಯೇತ್ ॥**
**ಸರ್ವದಾ ಸ ಭವತ್ಯೇವಂ ಸರ್ವತ್ರ ಪ್ರತಿಜಾಗೃವಿಃ ॥೧॥**

ಅರ್ಥಃ— ರಾಜನು ಅರಮನೆಯ ಸಮೀಪದಲ್ಲಿ ವೈದ್ಯನನ್ನು ಇಡಬೇಕು. ಅಂದರೆ ವೈದ್ಯನು ಯಾವಾಗಲು ಅವನ ಅನ್ನಪಾನ ಮುಂತಾದ ಎಲ್ಲ ವಿಷಯಗಳಲ್ಲಿಯೂ ಎಚ್ಚರಿಕೆಯಿಂದಿರುವನು. (೧)

**ಅನ್ನಪಾನಂ ವಿಷಾದ್ರಕ್ಷೇದ್ವಿಶೇಷೇಣ ಮಹೀಪತೇಃ ॥**
**ಯೋಗಕ್ಷೇಮೌ ತದಾಯತ್ತೌ ಧರ್ಮಾದ್ಯಾ ಯನ್ನಿಬಂಧನಾಃ ॥೨॥**

ಅರ್ಥಃ— ವಿಶೇಷವಾಗಿ ಅರಸನ ಅನ್ನಪಾನವನ್ನು ವಿಷದಿಂದ ಕಾಯಬೇಕು. ಯಾಕೆಂದರೆ ಜನರ ಯೋಗಕ್ಷೇಮಗಳು ಅವನ ಆಧೀನವಾಗಿವೆ. ಆ ಯೋಗಕ್ಷೇಮದಿಂದಲೇ ಧರ್ಮಾದಿ ಚತುರ್ವಿಧ ಪುರುಷಾರ್ಥಗಳು ಸಾಧ್ಯವಾಗುತ್ತವೆ.

ಟಿಪ್ಪಣಿ:— ಯೋಗವೆಂದರೆ ಹೊಸವಾಗಿ ಸಿಗುವದು. ಕ್ಷೇಮವೆಂದರೆ ದೊರಕಿದ್ದರ ರಕ್ಷಣವು. ಅನ್ನಪಾನದಂತೆ ಸ್ತ್ರೀ, ವಸ್ತ್ರ, ಗಂಧ, ಮಾಲೆ, ಹಾಸಿಗೆ, ರತ್ನ ಮುಂತಾದವುಗಳಿಗೂ ವಿಷ ಹಚ್ಚುವರು. 'ಮುದ್ರಾರಾಕ್ಷಸ' ದಲ್ಲಿ ವಿಷಕನ್ಯಾ ಪ್ರಯೋಗವು ಪ್ರಸಿದ್ಧವೇ ಇರುತ್ತದೆ. (೨)

ಓದನೋ ವಿಷವಾನ್ ಸಾಂದ್ರೋ ಯಾತ್ಯವಿಸ್ರಾವ್ಯತಾಮಿವ ||
ಚಿರೇಣ ಪಚ್ಯತೇ ಪಕ್ವೋ ಭವೇತ್ಪರ್ಯುಷಿತೋಪಮಃ ||೩||

ಮಯೂರಕಂಠತುಲ್ಯೋಷ್ಮಾ ಮೋಹಮೂರ್ಛಾಪ್ರಸೇಕಕೃತ್ ||
ಹೀಯತೇ ವರ್ಣಗಂಧಾದ್ಯೈಃ ಕ್ಲಿದ್ಯತೇ ಚಂದ್ರಿಕಾಚಿತಃ ||೪||

ಅರ್ಥ:— ವಿಷ ಕೂಡಿದ ಅನ್ನವು ( ಕುದಿಯುವಾಗ್ಗೆ ) ಗಟ್ಟಿಯಾಗಿ ಗಂಜೀ ತೆಗೆಯಲು ಬಾರದಂತಾಗುತ್ತದೆ. ತಡವಾಗಿ ಬೇಯುತ್ತದೆ. ಬೆಂದಬಳಿಕ ತಂಗಳದಂತೆ ಸ್ತಬ್ಧ ಮತ್ತು ತಣ್ಣಗೆ ಆಗುತ್ತದೆ. ಅದರಿಂದ ನವಿಲಿನ ಕುತ್ತಿಗೆಯ ಬಣ್ಣದಂತೆ ನೀಲ ಉಗಿಯು ಹೊರಡುತ್ತದೆ. ಅದನ್ನು ತಿಂದರೆ ಭ್ರಮೆ ಮೂರ್ಛೆ ಮತ್ತು ಬಾಯಲ್ಲಿ ನೀರು ಬರುವದು. ಅನ್ನದ ಮೊದಲಿನ ವಾಸನೆ ಬಣ್ಣ ಮುಂತಾದವು ಇಲ್ಲದಂತಾಗುತ್ತವೆ. ಮತ್ತು ಅದಕ್ಕೆ ನೀರು ಬಿಡುತ್ತದೆ. ಬೇರೆ ಬೇರೆ ಬಣ್ಣದ (ಎಣ್ಣೆ ಕೂಡಿದ ನೀರಿನ ಮೇಲೆ ಉಂಟಾಗುವಂತೆ) ಗೆರೆಗಳು ಕಾಣುತ್ತವೆ. (೪)

ವ್ಯಂಜನಾನ್ಯಾಶು ಶುಷ್ಯಂತಿ ಧ್ಯಾಮಕ್ವಾಥಾನಿ ತತ್ರ ಚ ||
ಹೀನಾऽತಿರಿಕ್ತಾ ವಿಕೃತಾ ಛಾಯಾ ದೃಶ್ಯೇತ ನೈವ ವಾ ||೫||

ಫೇನೋರ್ಧ್ವರಾಜೀಸೀಮಂತತಂತುಬುದ್ಬುದಸಂಭವಃ ||
ವಿಚ್ಛಿನ್ನವಿರಸಾ ರಾಗಾಃ ಖಾಂಡವಾಃ ಶಾಕಮಾಮಿಷಮ್ ||೬||

ಅರ್ಥ:— (ವಿಷಕೂಡಿದ್ದರೆ) ವ್ಯಂಜನ ಪದಾರ್ಥಗಳು ತೀವ್ರವಾಗಿ ಒಣಗುತ್ತವೆ.ಅವುಗಳನ್ನು ಕುದಿಸಲು ಅದರಲ್ಲಿ ಹೊಲಸು ಕಾಣಿಸುವದು.ಅದರಲ್ಲಿ ಬಿದ್ದ ಪ್ರತಿಬಿಂಬವು ಸಣ್ಣದು ಅಥವಾ ದೊಡ್ಡದು ಅಥವಾ ವಿಕೃತವಾಗಿ ತೋರುವದು ಅಥವಾ ಪ್ರತಿಬಿಂಬ ತೋರುವದೇ ಇಲ್ಲ. ಬುರುಗು ಅಥವಾ

ಮೇಲ್ಭಾಗದಲ್ಲಿ ಗೆರೆಗಳು, ನಡುವೆ ವಿಚ್ಛೇದ, ತಂತು, ಗುಳ್ಳೆಗಳು ಉಂಟಾಗುತ್ತವೆ, ರಾಗ ಷಾಡವ (ಪಾನಕ ಭೇದಗಳು) ಸಲ್ಲೆ ಮತ್ತು ಮಾಂಸಗಳು ಕೆಟ್ಟು ಒಡೆದು ರಸಹೀನವಾಗುತ್ತವೆ. (೬)

ನೀಲಾ ರಾಜೀ ರಸೇ, ತಾಮ್ರಾ ಕ್ಷೀರೇ, ದಧನಿ ದೃಶ್ಯತೇ ॥
ಶ್ಯಾವಾ, ಽಽಪೀತಾಸಿತಾ ತಕ್ರೇ, ಘೃತೇ ಪಾನೀಯಸನ್ನಿಭಾ ॥೭॥

ಮಸ್ತುನಿ ಸ್ಯಾತ್ಕಪೋತಾಭಾ, ರಾಜೀ ಕೃಷ್ಣಾ ತುಷೋದಕೇ ॥
ಕಾಲೀಮದ್ಯಾಂಭಸೋಃ, ಕ್ಷೌದ್ರೇ ಹರಿತ್ತೈಲೇಽರುಣೋಪಮಾ ॥೮॥

ಅರ್ಥ:— ವಿಷಯುಕ್ತ ಮಾಂಸರಸದ ಮೇಲೆ ನೀಲವೂ, ಹಾಲಿನ ಮೇಲೆ ಕೆಂಪೂ, ಮೊಸರಿನಲ್ಲಿ ಕಪ್ಪೂ, ಮಜ್ಜಿಗೆಯ ಮೇಲೆ ಹಳದಿ ಕಪ್ಪೂ ತುಪ್ಪದಲ್ಲಿ ನೀರಿನಂತೆಯೂ, ಮೊಸರಿನ ನೀರಿನಲ್ಲಿ ಪಾರಿವಾಳದ ಬಣ್ಣವೂ, ಅಂಬಲಿಯಲ್ಲಿ ಕರಿಯುದೂ, ಮದ್ಯ ಮತ್ತು ನೀರಿನಲ್ಲಿ ಕಪ್ಪೂ, ಜೇನುತುಪ್ಪದ ಮೇಲೆ ಹಸರೂ, ಎಣ್ಣೆಯ ಮೇಲೆ ನಸುಗೆಂಪೂ ಗೆರೆಗಳು ಇರುತ್ತವೆ. (೮)

ಪಾಕಃ ಫಲಾನಾಮಾಮಾನಾಂ ಪಕ್ವಾನಾಂ ಪರಿಕೋಥನಮ್ ॥
ದ್ರವ್ಯಾಣಾಮಾರ್ದ್ರಶುಷ್ಕಾಣಾಂ ಸ್ಯಾತಾಂ ಮ್ಲಾನಿವಿವರ್ಣತೇ ॥೯॥

ಮೃದೂನಾಂ ಕಠಿನಾನಾಂ ಚ ಭವೇತ್ಸ್ಪರ್ಶವಿಪರ್ಯಯಃ ॥

ಅರ್ಥ:— ಕಸುಕು ಕಾಯಿಗಳು ಹಣ್ಣಾಗುವವು. ಹಣ್ಣುಗಳು ಕೊಳೆಯುವವು. ಹಸೀ ಪದಾರ್ಥಗಳು ಬಾಡುವವು. ಒಣಗಿದ ಪದಾರ್ಥಗಳ ಬಣ್ಣಗಳು ಬೇರೆಯಾಗುವವು. ಬಿರಸು ಪದಾರ್ಥಗಳು ಮೆತ್ತಗಾಗುವವು. ಮೆತ್ತಗಿನ ಪದಾರ್ಥಗಳು ಬಿರುಸಾಗುವವು. (೯)

ಮಾಲ್ಯಸ್ಯ ಸ್ಫುಟಿತಾಗ್ರತ್ವಂ ಮ್ಲಾನಿರ್ಗಂಧಾಂತರೋದ್ಭವಃ ॥೧೦॥

ಅರ್ಥ:— ವಿಷಯುಕ್ತ ಹೂಮಾಲೆಯ ಹೂವುಗಳ ತುದಿಯು ಸೀಳುವದು. ಅವು ಬಾಡುವವು. ಮತ್ತು ಅವಕ್ಕೆ ಎರಡನೆಯ ಗಂಧ ಉಂಟಾಗುವದು. (೧೦)

ಧ್ಯಾಮಮಂಡಲತಾ ವಸ್ತ್ರೇ, ಶದನಂ ತಂತುಪಕ್ಷ್ಮಣಾಮ್ ॥
ಧಾತುಮೌಕ್ತಿಕಕಾಷ್ಠಾಶ್ಮರತ್ನಾದಿಷು ಮಲಾಕ್ತತಾ ॥೧೧॥

ಸ್ನೇಹಸ್ಪರ್ಶಪ್ರಭಾಹಾನಿಃ, ಸಪ್ರಭತ್ವಂ ತು ಮೃಣ್ಮಯೇ ॥

ಅರ್ಥಃ— (ವಿಷಯುಕ್ತ) ವಸ್ತ್ರದ ಮೇಲೆ ಹೊಲಸಾದ ದುಂಡ ಕಲೆಗಳು ಕೂಡುವವು. ತಂತುಗಳ ಎಳೆಗಳು ಉದುರುವವು. ಧಾತು, ಮುತ್ತು, ಕಟ್ಟಿಗೆ, ಕಲ್ಲು, ರತ್ನ ಮುಂತಾದವುಗಳ ಮೇಲೆ ಹೊಲಸು ಕಲೆ ಕೂಡ್ರುವದು; ಅವುಗಳ ಸ್ನಿಗ್ಧತೆ, ಸ್ಪರ್ಶ, ಕಾಂತಿಗಳ ನಾಶವಾಗುವದು. ಮಣ್ಣಿನ ಪಾತ್ರೆಯು ಹೊಳೆಯುವದು. (೧೧॥)

ವಿಷದಃ ಶ್ಯಾವಶುಷ್ಕಾಸ್ಯೋ ವಿಲಕ್ಷೋ ವೀಕ್ಷತೇ ದಿಶಃ ॥೧೨॥

ಸ್ವೇದವೇಪಥುಮಾಂಸ್ತ್ರಸ್ತೋ ಭೀತಃ ಸ್ಖಲತಿ ಜೃಂಭತೇ ॥

ಅರ್ಥಃ— ವಿಷ ಹಾಕಿದವನ ಮೋರೆಯು ಕಪ್ಪು ಆಗುವದು ಮತ್ತು ಒಣಗುವದು. ಹುಚ್ಚನ ಹಾಗೆ ದಿಕ್ಕುದಿಕ್ಕುಗಳಲ್ಲಿ ನೋಡುವನು, ಬೆವರುವನು, ನಡುಗುವನು, ಹೆದರಿ ಉದ್ವಿಗ್ನನಾಗುವನು, ಎಡವುವನು ಮತ್ತು ಆಕಳಿಸುವನು.

ಟಿಪ್ಪಣಿ:— ಸಂಗ್ರಹದಲ್ಲಿ "ಕಾರಣವಿಲ್ಲದೆ ನಗುವನು. ಕೇಳಿದರೆ ಉತ್ತರ ಕೊಡುವದಿಲ್ಲ. ಅಥವಾ ಹುಚ್ಚನಂತೆ ಏನಾದರೊಂದು ಹೇಳುವನು. ಅರ್ಥವಿಲ್ಲದ ಅಸಂಗತ ಮಾತಾಡುವನು. ಬಟ್ಟೆಗಳನ್ನು ಮುರಕೊಳ್ಳುವನು. ನೆಲ ಕೆದರುವನು. ಮೋರೆಯ ಮೇಲೆ ಹುಚ್ಚು ಕಳೆ ಇರುವದು. ಉಗುರುಗಳನ್ನು ಕಡಿಯುವನು. ತಲೆ ತುರಿಸಿಕೊಳ್ಳುವನು. ಸಿಕ್ಕ ಹಾದಿಯಿಂದ ಹೋಗ ಲಿಚ್ಛಿಸುವನು" ಎಂದೂ "ಆದರೆ ಎಷ್ಟೋ ಸಾರೆ ತಪ್ಪು ಇಲ್ಲದಿದ್ದರೂ ಭಯದಿಂದ ಈ ಎಲ್ಲ ಲಕ್ಷಣಗಳು ಬರುವ ಸಂಭವವುಂಟು. ಕಾರಣ ಹೆಚ್ಚು ವಿಚಾರ ಮಾಡಬೇಕು" ಎಂದೂ ಹೇಳಿದೆ. (೧೨॥)

ಪಾತ್ರಪಾನ್ನಂ ಸವಿಷಂ ತ್ವಗ್ನಿರೇಕಾವರ್ತಃ ಸ್ಫುಟೆತ್ಯತಿ ॥೧೩॥

ಶಿಖಿಕಂಠಾಭಧೂಮಾರ್ಚಿರನರ್ಚಿರ್ಘ್ನೋಗ್ರಗಂಧವಾನ್ ॥

ಅರ್ಥ:— ವಿಷಯುಕ್ತ ಅನ್ನವನ್ನು ಬೆಂಕಿಯ ಮೇಲೆ ಹಾಕಲು ಅದು ಚಟ್ ಚಟ್ ಶಬ್ದ ಮಾಡುವದು. ಒಮ್ಮೆಲೇ ಒಂದೇ ಕಡೆಗೆ ಉರಿ ಏಳುವದು. ನವಿಲಿನ ಕುತ್ತಿಗೆಯ ಬಣ್ಣದಂಥ ಉರಿ ಮತ್ತು ಹೊಗೆಗಳು ಹೊರಡುವವು. ಅಥವಾ ಉರಿಯು ಇಲ್ಲದೆ ಬರೀ ಹೊಲಸು ನಾತ ಉಂಟಾಗುವದು.

**ಟಿಪ್ಪಣಿ:—** ಇದರ ಹೊಗೆಯು ಕೂಡ ರೋಮಾಂಚ, ತಲೆನೋವು, ಬಾಯಿಯಲ್ಲಿ-ನೀರುಬರೋಣ, ಕಣ್ಣು ಬೇನೆಗಳನ್ನು ಉಂಟುಮಾಡುವದು. (೧೩॥)

**ಮ್ರಿಯಂತೇ ಮಕ್ಷಿಕಾಃ ಪ್ರಾಶ್ಯ ಕಾಕಃ ಕ್ಷಾಮಸ್ವರೋ ಭವೇತ್ ||೧೪||**

**ಉತ್ಕ್ರೋಶಂತಿ ಚ ದೃಷ್ಟ್ವೈತಚ್ಛುಕದಾತ್ಯೂಹಸಾರಿಕಾಃ ||**
**ಹಂಸಃ ಪ್ರಸ್ಖಲತಿ, ಗ್ಲಾನಿರ್ಜೀವಂಜೀವಸ್ಯ ಜಾಯತೇ ||೧೫||**

**ಚಕೋರಸ್ಯಾಕ್ಷಿವೈರಾಗ್ಯಂ, ಕ್ರೌಂಚಸ್ಯ ಸ್ಯಾನ್ಮದೋದಯಃ ||**
**ಕಪೋತಪರಭೃದ್ದಕ್ಷಚಕ್ರವಾಕಾ ಜಹತ್ಯಸೂನ್ ||೧೬||**

**ಉದ್ವೇಗಂ ಯಾತಿ ಮಾರ್ಜಾರಃ, ಶಕೃನ್ಮುಂಚತಿ ವಾನರಃ ||**
**ಹೃಷ್ಯೇನ್ಮಯೂರಸ್ತದ್ದೃಷ್ಟ್ಯಾ ಮಂದತೇಜೋ ಭವೇದ್ವಿಷಮ್ ||೧೭||**

**ಇತ್ಯನ್ನಂ ವಿಷವಜ್ಜ್ಞಾತ್ವಾ ತ್ಯಜೇದೇವಂ ಪ್ರಯತ್ನತಃ ||**
**ಯಥಾ ತೇನ ವಿಪದ್ಯೇರನ್ನಪಿ ನ ಕ್ಷುದ್ರಜಂತವಃ ||೧೮||**

ಅರ್ಥ:— ನೊಣಗಳು ಅದನ್ನು ತಿಂದು ಸಾಯುತ್ತವೆ. ಕಾಗೆಯ ಸ್ವರವು ಕುಗ್ಗುತ್ತದೆ. ಗಿಳಿ, ನೀರು-ಕಾಗೆ, ಸಾರಿಕೆಗಳು ಅದನ್ನು ನೋಡಿ ಚೀರುತ್ತವೆ. ಹಂಸವು ಗಡಬಡಿಸುತ್ತದೆ. ಜೀವಂಜೀವ ಪಕ್ಷಿಯು ಗ್ಲಾನಿಯನ್ನು ಹೊಂದುತ್ತದೆ. ಚಕೋರ ಪಕ್ಷಿಯ ಕಣ್ಣಿನ ಕೆಂಪು ಅಳಿಯುವದು. ಕ್ರೌಂಚ ಪಕ್ಷಿಗೆ ಮದ ಬರುವದು. ಪಾರಿವಾಳ ಕೋಕಿಲ ಕೋಳಿ ಚಕ್ರ-ವಾಕ ಪಕ್ಷಿಗಳು ಪ್ರಾಣವನ್ನು ಬಿಡುವವು. ಬೆಕ್ಕು ದುಃಖಿತವಾಗುವದು. ಮಂಗವು ಹೇಲುವದು. ನವಿಲು ಆನಂದಪಡುವದು; ಅದರ ದೃಷ್ಟಿಯಿಂದ ವಿಷದ ತೇಜವು ಕಡಿಮೆ ಆಗುವದು. ಈ ಲಕ್ಷಣಗಳಿಂದ ಅನ್ನವು ವಿಷ

ಯುಕ್ತವೆಂದು ತಿಳಿದು ಅದರಿಂದ ಕ್ಷುದ್ರ ಜಂತುಗಳು ಕೂಡ ಸಾಯುವಂತೆ ಪ್ರಯತ್ನದಿಂದ ಅದರ ವ್ಯವಸ್ಥೆ ಮಾಡಬೇಕು. (೧೮)

**ಸ್ಪೃಷ್ಟೇ ತು ಕಂಡೂದಾಹೋಽಷಾಙ್ಜ್ವರಾರ್ತಿಸ್ಫೋಟಸುಪ್ತಯಃ ॥**
**ನಖರೋಮಚ್ಯುತಿಃ ಶೋಥಃ, ಸೇಕಾದ್ಯಾ ವಿಷನಾಶನಾಃ ॥೧೯॥**

**ಶಸ್ತಾಸ್ತತ್ರ ಪ್ರಲೇಪಾಶ್ಚ ಸೇವ್ಯಚಂದನಪದ್ಮಕೈಃ ॥**
**ಸಸೋಮವಲ್ಕತಾಲೀಸಪತ್ರಕುಷ್ಠಾಮೃತಾನತೈಃ ॥೨೦॥**

ಅರ್ಥಃ— ಅದರ ಸ್ಪರ್ಶಮಾಡಿದರೆ ತಿಂಡಿ ಸರ್ವಾಂಗ-ದಾಹ ಅಥವಾ ಏಕಾಂಗ-ದಾಹ ಜ್ವರ ಶೂಲ ಬಕ್ಕೆ ಸಂಜ್ಞಾ-ನಾಶ ಉಗುರು-ಕೂದಲುಗಳು-ಉದರೋಣ ಬಾವು ಉಂಟಾಗುವವು. ಅವುಗಳ ಮೇಲೆ ವಿಷ ನಾಶಕ ಔಷಧಗಳ ಕಷಾಯ ಮುಂತಾದವುಗಳನ್ನು ಹಾಕಬೇಕು. ಬಾಳದ ಬೇರು ಚಂದನ ಪದ್ಮಕಾಷ್ಠ ಕಿರಿಸಿವನ್ನಿ ತಾಲೀಸಪತ್ರ ಕೋಷ್ಠ ಅಮೃತ ಬಳ್ಳಿ ತಗರಗಳ ಲೇಪವು ಹಿತಕರವು. (೨೦)

**ಲಾಲಾ ಜಿಹ್ವೋಷ್ಠಯೋರ್ಜಾಡ್ಯಮೂಷಾ ಚಿಮಿಚಿಮಾಯನಮ್ ॥**
**ದಂತಹರ್ಷೋ ರಸಾಜ್ಞತ್ವಂ ಹನುಸ್ತಂಭಶ್ಚ ವಕ್ತ್ರಗೇ ॥೨೧॥**

**ಸೇವ್ಯಾದ್ಯೈಸ್ತತ್ರ ಗಂಡೂಷಾಃ ಸರ್ವಂ ಚ ವಿಷಜಿದ್ಧಿತಮ್ ॥**

ಅರ್ಥಃ— ವಿಷಯುಕ್ತ ಅನ್ನವು ಬಾಯಲ್ಲಿ ಹೋಗಲು ಜೊಲ್ಲು ಬೀಳುವದು. ನಾಲಿಗೆ ತುಟಿಗಳಲ್ಲಿ ಜಾಡ್ಯ, ದಾಹ, ಮತ್ತು ಜುಣು-ಜುಣು ಎನಿಸುವಿಕೆ ಉಂಟಾಗುವವು. ದಂತಹರ್ಷ, ರಸಜ್ಞಾನವಾಗದೇ, ಇರೋಣ, ಹನುಸ್ತಂಭ ಮುಂತಾದವುಗಳು ಆಗುವವು. ಇವುಗಳ ಮೇಲೆ ಹಿಂದೆ ಹೇಳಿದಂತೆ ಬಾಳದಬೇರು ಮುಂತಾದವುಗಳಿಂದ ಬಾಯಿ ಮುಕ್ಕಳಿಸಬೇಕು. ಮತ್ತು ಎಲ್ಲ ವಿಷನಾಶಕ ಉಪಾಯುಗಳನ್ನು ಮಾಡಬೇಕು. (೨೧॥)

**ಆಮಾಶಯಗತೇ ಸ್ವೇದಮೂರ್ಛಾಧ್ಮಾನಮದಭ್ರಮಾಃ ॥೨೨॥**
**ರೋಮಹರ್ಷೋ ವಮಿರ್ದಾಹಶ್ಚಕ್ಷುರ್ಹೃದಯರೋಧನಮ್ ॥**

ಬಿಂದುಭಿಶ್ಚಾಚಯೋಽಂಗಾನಾಂ,

ಅರ್ಥ:— ವಿಷಯುಕ್ತ ಅನ್ನವು ಆಮಾಶಯದಲ್ಲಿ ಹೋಗಲು ಬೆವರು, ಮೂರ್ಛ್ಛೆ, ಹೊಟ್ಟೆಯುಬ್ಬು, ಮದ, ಭ್ರಮ, ರೋಮಾಂಚ, ವಾಂತಿ, ದಾಹ, ಕಣ್ಣು ಮತ್ತು ಎದೆಗಳ ಸ್ತಬ್ಧತೆ, ಮೈಮೇಲೆ ಅನೇಕ ಬಣ್ಣದ ಗಾದರಿಗಳು ಉಂಟಾಗುವವು. (೩೩||)

..........................................ಪಕ್ವಾಶಯಗತೇ ಪುನಃ ||೩೩||

ಅನೇಕವರ್ಣಂ ವಮತಿ ಮೂತ್ರಯತ್ಯತಿಸಾರ್ಯತೇ ||
ತಂದ್ರಾ ಕೃಶತ್ವಂ ಪಾಂಡುತ್ವಮುದರಂ ಬಲಸಂಕ್ಷಯ: ||೩೪||

ಅರ್ಥ:— ವಿಷವು ಪಕ್ವಾಶಯದಲ್ಲಿ ಹೋದರೆ ಅನೇಕ ಬಣ್ಣದ ವಾಂತಿ, ಮಲಮೂತ್ರಗಳಾಗೋಣ, ಮಬ್ಬು, ಕೃಶತ್ವ, ಪಾಂಡುತ್ವ, ಉದರ-ರೋಗ ಮತ್ತು ಬಲನಾಶ ಇವೆಲ್ಲ ಲಕ್ಷಣಗಳಾಗುತ್ತವೆ. (೩೪)

ತಯೋರ್ವಾಂತವಿರಿಕ್ತಸ್ಯ ಹರಿದ್ರೇ ಕಟಭೀಂ ಗುಡಮ್ ||
ಸಿಂದುವಾರಿತನಿಷ್ಪಾವಬಾಷ್ಪಿಕಾಶತಪರ್ವಿಕಾಃ ||೩೫||

ತಂಡುಲೀಯಕಮೂಲಾನಿ ಕುಕ್ಕುಟಾಂಡಮುವಲ್ಗುಜಮ್ ||
ನಾವನಾಂಜನಪಾನೇಷು ಯೋಜಯೇದ್ವಿಷಶಾಂತಯೇ ||೩೬||

ಅರ್ಥ:— ಇವೆರಡರಲ್ಲಿಯೂ ಆಮಾಶಯದಲ್ಲಿ ವಿಷವಿದ್ದರೆ ವಮನವನ್ನು, ಪಕ್ವಾಶಯ ದಲ್ಲಿ ಇದ್ದರೆ ರೇಚನವನ್ನು ಕೊಟ್ಟು ವಿಷಶಾಂತಿಗಾಗಿ, ಅರಿಷಿಣ, ಮರಅರಿಷಿಣ, ಕಟಭಿ, (ಗಿರಿಕರ್ಣಿಕೆ), ಬೆಲ್ಲ, ಲಕ್ಕಿ, ಅವರೆ, ಬಾಷ್ಪಿಕಾ, ಬಜೆ, ಕಿರಸಾಲಿ ಬೇರು, ಕೋಳಿ-ತತ್ತಿ, ಬಾವಂಚಿಗಳನ್ನು ನಸ್ಯ ಅಂಜನ ಪಾನಗಳಿಂದ ಉಪಯೋಗಿಸಬೇಕು. (೩೬)

ವಿಷಭುಕ್ತಾಯ ದದ್ಯಾಚ್ಚ ಶುದ್ಧಾಯೋರ್ಧ್ವಮಧಸ್ತಥಾ ||
ಸೂಕ್ಷ್ಮಂ ತಾಮ್ರರಜಃ ಕಾಲೇ ಸಕ್ಷೌದ್ರಂ ಹೃದ್ವಿಶೋಧನಮ್ ||೩೭||

ಅರ್ಥ:— ವಿಷ-ಕುಡಿದ ಮನುಷ್ಯನಿಗೆ ವಮನ ವಿರೇಚನ ತಕ್ಕೊಂಡು ಶುದ್ಧನಾದ ನಂತರ ಜೇನುತುಪ್ಪ ಹಾಕಿದ ತಾಮ್ರ ಭಸ್ಮವನ್ನು ಯೋಗ್ಯ ಕಾಲದಲ್ಲಿ ಕೊಡಬೇಕು. ಅದು ಹೃದಯ ಶುದ್ಧಿಯನ್ನು ಮಾಡುತ್ತದೆ. (೨೭)

**ಶುದ್ಧೇ ಹೃದಿ ತತಃ ಶಾಣಂ ಹೇಮಚೂರ್ಣಸ್ಯ ದಾಪಯೇತ್ ॥**
**ನ ಸಜ್ಜತೇ ಹೇಮಪಾಂಗೇ ಪದ್ಮಪತ್ರೇಽಂಬುವದ್ವಿಷಮ್ ॥೨೮॥**
**ಜಾಯತೇ ವಿಪುಲಂ ಚಾಯುರ್ಗರೇಽಪ್ಯೇಷ ವಿಧಿಃ ಸ್ಮೃತಃ ॥**

ಅರ್ಥ:— ಹೃದಯ ಶುದ್ಧಿಯಾಗಲು ೩ ಮಾಸಿ ಸುವರ್ಣಭಸ್ಮವನ್ನು ಕೊಡಬೇಕು. ಕಮಲಪತ್ರದಲ್ಲಿ ಹೇಗೆ ನೀರು ನಿಲ್ಲುವದಿಲ್ಲವೋ ಹಾಗೆ ಬಂಗಾರ ತಿನ್ನುವವನಲ್ಲಿ ವಿಷವು ನಿಲ್ಲದು. ಮತ್ತು ವಿಪುಲ ಆಯುಷ್ಯವು ಉಂಟಾಗುತ್ತದೆ. ಕೃತ್ರಿಮ ವಿಷದಲ್ಲಿಯೂ ಇದೇ ಉಪಾಯವನ್ನು ಮಾಡಬೇಕು. (೨೮)

**ವಿರುದ್ಧಮಪಿ ಚಾಹಾರಂ ವಿದ್ಯಾದ್ವಿಷಗರೋಪಮಮ್ ॥೨೯॥**

ಅರ್ಥ:— ವಿರುದ್ಧ ಆಹಾರದ ಪರಿಣಾಮವಾದರೂ ಕೃತ್ರಿಮ ವಿಷದಂತೆ ಸಾವಕಾಶವಾಗಿಯಾಗಲಿ, ಇತರ ವಿಷದಂತೆ ತತ್ಕಾಲದಲ್ಲಿಯಾಗಲಿ, ಅಪಾಯ ಮಾಡುವದು.

ಟಿಪ್ಪಣೀ— ವಿಸ್ಫೋಟಗುಲ್ಮಮದವಿದ್ರಧಿಶೋಫಯಕ್ಷ್ಮ
ತೇಜೋಬಲಸ್ಮೃತಿಮತೀಂದ್ರಿಯಚಿತ್ತನಾಶಾನ್ ।

ಕುರ್ಯಾದ್‌ವಿರುದ್ಧಮಶನಂ ಜ್ವರಮಸ್ರಪಿತ್ತಮಷ್ಟೌ
ಗದಾಂಶ್ಚ ಮಹತೋ ವಿಷವಚ್ಚ ಮೃತ್ಯುಮ್ ॥

ಎಂದು ಸಂಗ್ರಹದಲ್ಲಿ ವಿರುದ್ಧ ಅನ್ನದ ಗುಣಗಳನ್ನು ಹೇಳಿದ್ದಾರೆ. ವಿರೋಧವು ಸಂಯೋಗ, ಸಂಸ್ಕಾರ, ಪ್ರಮಾಣ, ದೇಶ, ಕಾಲ, ಅವಸ್ಥೆ, ಸ್ವಭಾವ ಎಂಬ ಭೇದಗಳಿಂದ ಏಳು ಪ್ರಕಾರವಾಗಿರುವದು. (೨೯)

ಆ ವಿರುದ್ಧ ಆಹಾರವನ್ನು ಹೇಳುತ್ತಾರೆ.

**ಆನೂಪಮಾಮಿಷಂ ಮಾಷಕ್ಷೌದ್ರಕ್ಷೀರವಿರೂಢಕೈಃ ||**
**ವಿರುಧ್ಯತೇ ಸಹ ಬಿಸೈರ್ಮೂಲಕೇನ ಗುಡೇನ ವಾ ||೩೦||**

ಅರ್ಥಃ— ಆನೂಪ (ಮಹಾಮೃಗ, ಜಲಚರ, ವಾರಿಶಯ) ಪ್ರಾಣಿಗಳ ಮಾಂಸವು ಉದ್ದು, ಜೇನು, ಹಾಲು, ಮೊಳೆತ ಧಾನ್ಯ, ಕಮಲದ ದೇಟು, ಮೂಲಂಗಿ, ಬೆಲ್ಲಗಳಿಗೆ ವಿರುದ್ಧವು; ಅಂದರೆ ಆನೂಪ-ಮಾಂಸವು ಇವುಗಳಲ್ಲಿ ಯಾವದರೊಂದರೊಡನೆ ಕೂಡಲು ವಿಷವಾಗುವದು. (೩೦)

**ವಿಶೇಷಾತ್ಪಯಸಾ ಮತ್ಸ್ಯಾ ಮತ್ಸ್ಯೇಷ್ವಪಿ ಚಿಲೀಚಿಮಃ ||**

ಅರ್ಥಃ— ಅದರಲ್ಲಿ ವಿಶೇಷವಾಗಿ ಹಾಲಿಗೆ ಮೀನುಗಳು; ಮೀನುಗಳಲ್ಲಿಯೂ ಚಿಲೀಚಿಮವೆಂಬ ಮೀನುಗಳು ವಿಶೇಷ ವಿರುದ್ಧವವೆ. (೩೦)

**ವಿರುದ್ಧಮಮ್ಲಂ ಪಯಸಾ ಸಹ ಸರ್ವಂ ಫಲಂ ತಥಾ ||೩೦||**

**ತದ್ವತ್ಕುಲತ್ಥವರಕಕಂಗುವಲ್ಲಮಕುಷ್ಟಕಾಃ ||**

ಅರ್ಥಃ— ಹುಳಿ ಪದಾರ್ಥಗಳೂ ಮತ್ತು ಎಲ್ಲ ಫಲಗಳೂ ಹಾಗು ಹುರಳಿ, ವರಕ(ನೆಲ್ಲಿಜಾತಿ), ನವಣೆ, ವಲ್ಲ (ಅವರಿ), ಮಕುಷ್ಟಕ (ಮಡಿಕೆ)- ಇವು ಹಾಲಿನೊಡನೆ ವಿರುದ್ಧವು.

**ಟಿಪ್ಪಣಿ:—** ಹಾಲಿನೊಡನೆ ಅಥವಾ ಅದನ್ನು ಕುಡಿದ ಕೂಡಲೆ ಹುಳಿಯನ್ನು ಸೇವಿಸಬಾರದೆಂದೇ ಇದರ ಅರ್ಥವು ಹೊರ್ತು ಒಂದು ದ್ರವ್ಯದ ಸಂಸ್ಕಾರಾರ್ಥವಾಗಿ ಉಪಯೋಗಿಸಲು ಬಾಧಕವಿಲ್ಲ. ಆದ್ದರಿಂದ ಹಾಲು ಮತ್ತು ಹುಳಿಯಿಂದ ವ್ಯಂಜನ ತಯಾರಮಾಡಲು ಬಾಧಕವಿಲ್ಲ. ಅದರಂತೆ ಹಾಲು ಮತ್ತು ಹುಳಿಯಿಂದ ಘೃತ ತಯಾರಿಸಲು ಅಡ್ಡಿಯಿಲ್ಲ. ಇಲ್ಲಿ ಸರ್ವ ಶಬ್ದವನ್ನು ಸಂಕುಚಿತಮಾಡಿ ಕೆಳಗೆ ಹೇಳಿದ ಫಲಗಳನ್ನಷ್ಟೇ ತಿನ್ನಕೂಡದೆಂದು ಮುನಿಯು ಹೇಳಿರುವನು. ಮಾವು, ಆಮ್ರಾತಕ, ಲಕುಚ, ಕವಳಿ, ಬಾಳಿ, ದಂತಶಠ, ಬೋರೆ, ಕೀರಲ, ಬೆಳವಲ, ಹುಣಸಿ, ತಿಂತಿಡೀಕ, ಪಾರೇವತ, ಅಕ್ರೋಡ, ಹಲಸು, ತೆಂಗು, ದಾಳಿಂಬ, ನೆಲ್ಲೀಕಾಯಿ ಮುಂತಾದವು. (೩೦||)

**ಭಕ್ಷಯಿತ್ವಾ ಹರಿತಕಂ ಮೂಲಕಾದಿ ಪಯಸ್ತ್ಯಜೇತ್ ||೩೧||**

ಅರ್ಥ:— ಶಾಕವರ್ಗದಲ್ಲಿ ಹೇಳಿದ ಮೂಲಂಗಿ ಮುಂತಾದ ಹರಿತಕವೆಂಬ ಶಾಕಗಳನ್ನು ತಿಂದು ಹಾಲು ಕುಡಿಯಬಾರದು.

ಟಿಪ್ಪಣಿ:—ಶಾಕವರ್ಗದಲ್ಲಿ ಹೇಳಿದ ಮೂಲಂಗಿಯಿಂದ ಮುಂದಿನ ವ್ಯಂಜನ ಪದಾರ್ಥಗಳಿಗೆ ಹರಿತಕ ಎನ್ನುತ್ತಾರೆ. (೩೧)

**ವಾರಾಹಂ ಶ್ವಾವಿಧಾ ನಾದ್ಯಾದ್ದಧ್ನಾ ಪೃಷತಕುಕ್ಕುಟೌ ||**

ಅರ್ಥ:— ಹಂದಿಯ ಮಾಂಸವನ್ನು ಏದದ (ಮುಳ್ಳುಹಂದಿಯ) ಮಾಂಸದೊಡನೆಯೂ, ಪೃಷತ (ಚಿಗರಿ) ಮತ್ತು ಕೋಳಿಗಳನ್ನು ಮೊಸರಿನೊಡನೆಯೂ ತಿನ್ನಬಾರದು. (೩೨)

**ಆಮಮಾಂಸಾನಿ ಪಿತ್ತೇನ, ಮಾಷಸೂಪೇನ ಮೂಲಕಮ್ ||೩೩||**

**ಅವಿಂ ಕುಸುಂಭಶಾಕೇನ, ಬಿಸೈಃ ಸಹ ವಿರೂಢಕಮ್ ||**
**ಮಾಷಸೂಪಗುಡಕ್ಷೀರದಧ್ಯಾಜ್ಯೈರ್ಲಕುಚಂ ಫಲಮ್ ||೩೪||**

**ಫಲಂ ಕದಲ್ಯಾಸ್ತಕ್ರೇಣ ದಧ್ನಾ ತಾಲಫಲೇನ ವಾ ||**
**ಕಣೋಷಣಾಭ್ಯಾಂ ಮಧುನಾ ಕಾಕಮಾಚೀಂ ಗುಡೇನ ವಾ ||೩೫||**

**ಸಿದ್ಧಾಂ ವಾ ಮತ್ಸ್ಯಪಚನೇ ಪಚನೇ ನಾಗರಸ್ಯ ವಾ ||**
**ಸಿದ್ಧಾಮನ್ಯತ್ರ ವಾ ಪಾತ್ರೇ*ಕಾಮಾತ್ತಾಮುಷಿತಾಂ ನಿಶಾಮ್||೩೬||**

ಅರ್ಥ:— ಬೇಯಿಸಿದ ಮಾಂಸವನ್ನು ಪಿತ್ತದೊಡನೆ, ಮೂಲಂಗಿಯನ್ನು ಉದ್ದಿನ ತೊವ್ವೆಯೊಡನೆ, ಉಣ್ಣೆಗುರಿಯನ್ನು ಕುಸಿಬೆಯ ಪಲ್ಲೆಯೊಡನೆ, ಮೊಳೆತ ಧಾನ್ಯವನ್ನು ಕಮಲದ ದೇಟಿನೊಡನೆ, ಲಕುಚ ಫಲವನ್ನು ಹಾಲು ಮೊಸರು ತುಪ್ಪಗಳೊಡನೆ ಬಾಳೆಯ ಹಣ್ಣನ್ನು, ಮಜ್ಜಿಗೆ ಮೊಸರು ಅಥವಾ ತಾಲಫಲಗಳೊಡನೆ ಕಾಕಮಾಚಿಯನ್ನು, ಹಿಪ್ಪಲಿ ಮೆಣಸುಗಳೊಡನೆ ಅಥವಾ ಜೇನತುಪ್ಪದೊಡನೆ ಅಥವಾ ಬೆಲ್ಲದೊಡನೆ ತಿನ್ನ

* ಹೇಮಾದ್ರಿಯು "ಕಾಮಾತಾಂ" ಎಂಬ ಪಾಠವನ್ನು ಹಿಡಿದು ಅದರ ಅರ್ಥವನ್ನು "ಕಾಕಮಾಚಿ" ಎಂದು ಮಾಡಿರುವನು. ಅರ್ಥದಲ್ಲಿ ವಿಶೇಷ ಭೇದವಿಲ್ಲ.

ಬಾರದು. ಮಾಂಸವನ್ನು ಬೆಣ್ಣೆ ಮೀನನ್ನು ಕುದಿಸಿದ ಪಾತ್ರೆಯಲ್ಲಿ ಬೇಯಿಸಿದ ಅನ್ನ ಬೇರೆ ಪಾತ್ರೆಯಲ್ಲಿ ಬೇಯಿಸಿದ್ದರೂ ರಾತ್ರಿಯೆಲ್ಲ ತಂಗಳವಾದ ಕಾಕಮಾಚಿಯನ್ನೂ ತಿನ್ನಬಾರದು. (೩೬)

**ಮತ್ಸ್ಯನಿಸ್ತಲನಸ್ನೇಹೇ ಸಾಧಿತಾಃ ಪಿಪ್ಪಲೀಸ್ತ್ಯಜೇತ್ ||**
**ಕಾಂಸ್ಯೇ ದಶಾಹಮುಷಿತಂ ಸರ್ಪಿರುಷ್ಣಂ ಚ ಪುಷ್ಕರೇ ||೩೭||**

ಅರ್ಥ:— ಮೀನನ್ನು ಕರಿಯುವ ಸ್ನೇಹದಿಂದ ತಯಾರಿಸಿರುವ ಹಿಪ್ಪಲಿಗಳನ್ನೂ, ಕಂಚಿನಲ್ಲಿ ೧೦ ದಿವಸಗಳವರೆಗೆ ಇಟ್ಟ ತುಪ್ಪವನ್ನೂ, ಕೇರಿನೊಡನೆ ಬಿಸ್ಸ ಪದಾರ್ಥವನ್ನೂ ತಿನ್ನಬಾರದು. (೩೭)

**ಭಾಸೋ ವಿರುಧ್ಯತೇ ಶೂಲ್ಯಃ ಕಂಪಿಲ್ಲಸ್ತಕ್ರಸಾಧಿತಃ ||**

ಅರ್ಥ:— ಸಲಾಕೆಯ ಮೇಲೆ ಬೇಯಿಸಿದ ಭಾಸಪಕ್ಷಿಯೂ ಮಜ್ಜಿಗೆಯಲ್ಲಿ ಮಾಡಿದ ಕಪಿಲಶಾಕವೂ ವಿರುದ್ಧವಾದವು. (೩೭||)

**ಏಕಧ್ಯಂ ಪಾಯಸಸುರಾಕೃಶರಾಃ ಪರಿವರ್ಜಯೇತ್ ||೩೮||**

ಅರ್ಥ:— ಹಾಲು ಮದ್ಯ ಹುಗ್ಗಿಗಳನ್ನು ಒಮ್ಮೆಲೇ ತಿನ್ನಬಾರದು. (೩೮)

**ಮಧುಸರ್ಪಿರ್ವಸಾತೈಲಪಾನೀಯಾನಿ ದ್ವಿಶಸ್ತ್ರಿಶಃ**
**ಏಕತ್ರ ವಾ ಸಮಾಂಶಾನಿ ವಿರುಧ್ಯಂತೇ ಪರಸ್ಪರಮ್ ||೩೯||**

ಅರ್ಥ:— ಜೇನುತುಪ್ಪ, ತುಪ್ಪ, ನೆಣ, ಎಣ್ಣೆ, ನೀರು ಇವುಗಳಲ್ಲಿ ಎರಡರ ಮೂರರ ನಾಲ್ಕರ ಅಥವಾ ಎಲ್ಲವುಗಳ ಸಮಭಾಗ ಮಿಶ್ರಣಗಳು ಪರಸ್ಪರ ವಿರುದ್ಧವಾಗಿವೆ.

**ಟಿಪ್ಪಣಿ:— ಎಣ್ಣೆ, ತುಪ್ಪ, ಜೇನುತುಪ್ಪಗಳನ್ನು ಎರಡನೇ ಔಷಧ ಸಂಸ್ಕಾರಾರ್ಥವಾಗಿ ಸಮವಾಗಿ ಉಪಯೋಗಿಸಲು ಅಡ್ಡಿಯಿಲ್ಲ. ಅದ್ದರಿಂದಲೇ ಅಗಸ್ತ್ಯ-ಲೇಹ ಮುಂತಾದ ಔಷಧಗಳಲ್ಲಿ ಅವು ಸಮಾಂಶದಿಂದಲೇ ಉಪಯೋಗಿ ಸಲ್ಪಡುತ್ತವೆ.** (೩೯)

ಸ್ಟುಡಿಯೋ ವೀಕ್ಷಣೆ ಪ್ರಧಾನವಾಗಿದ್ದುದರಿಂದಲೂ ಅದಕ್ಕೆ ಮೂರು ನಾಲ್ಕು ಗಂಟೆ ವೇಳೆ ಬೇಕಾಗಿದ್ದುದರಿಂದಲೂ ಅಲ್ಲಿಂದ ಕದಲಿ ನಾವು ಯೂನಿವರ್ಸಲ್ ಸ್ಟುಡಿಯೋ ಕಡೆ ಹೊರಟೆವು.

ದಾರಿಯಲ್ಲಿ ಮ್ಯಾನ್ಸ್ ಚೈನೀಸ್ ಥಿಯೇಟರ್ ನೋಡಿದೆವು. ಈ ಬೃಹತ್ ಚಿತ್ರಮಂದಿರದ ರಚನೆ ಬೌದ್ಧ ವಿಹಾರ ಪಗೋಡಾ ಮಾದರಿಯಾಗಿದ್ದು ಸುತ್ತಲಿನ ಆಧುನಿಕ ಸಿಮೆಂಟ್ ಕಾನ್ಕ್ರೀಟ್ ಚಪ್ಪಟೆ ಕಟ್ಟಡಗಳ ನಡುವೆ ವಿಶಿಷ್ಟ ಕಳೆ ಪಡೆದು ಕೊಂಡಿದೆ. ಈ ಚಿತ್ರ ಮಂದಿರದಲ್ಲಿ ಪ್ರಥಮ ಪ್ರದರ್ಶನ ಪಡೆಯುವುದು ಭಾಗ್ಯ ವೆಂಬ ಭಾವನೆ ಚಿತ್ರ ನಿರ್ಮಾಪಕರಲ್ಲಿ ಇದೆ. ಇದು ಚಿತ್ರ ಪ್ರದರ್ಶನ ಮಂದಿರ ವಾದರೂ ಇದರ ವಾತಾವರಣವೇ ಚಿತ್ರಪ್ರಪಂಚವೆನಿಸುತ್ತದೆ. ಚಿತ್ರಮಂದಿರದ ಮುಂದಿನ ಫುಟ್‌ಪಾತ್ ಮತ್ತು ಮುಂದಿನ ದ್ವಾರದವರೆಗಿನ ಹಾಸುಗಲ್ಲುಗಳು ಚಿತ್ರ ಪ್ರೇಮಿಗಳಿಗೆ ಅನೇಕ ಹಳೆಯ ನೆನಪುಗಳನ್ನು ಮನಸ್ಸಿಗೆ ತರುತ್ತದೆ. ಇದುವರೆಗೆ ಈ ರಂಗದಲ್ಲಿ ಪ್ರಸಿದ್ಧಿ ಪಡೆದು ಲೋಕ ಬಿಟ್ಟವರ ಪಾದಮುದ್ರೆ, ಹಸ್ತಮುದ್ರೆ, ಪುಟ್ಟ ಸಂದೇಶಗಳು, ಹಸ್ತಾಕ್ಷರ ಮುದ್ರೆಗಳ ಕೆತ್ತನೆಗಳಿಂದ ಕೂಡಿದೆ. ನಾವು ಯೌವನದಲ್ಲಿ ನೋಡಿದ ಮೂಕಿ ಮತ್ತು ಟಾಕಿಗಳ ಅನೇಕ ಪ್ರಸಿದ್ಧ ನಟನಟಿಯರ ಹಸ್ತಾಕ್ಷರ ಕೆತ್ತನೆ ಗಳನ್ನು ನೋಡಿ ಅವರುಗಳು ನಟಿಸಿ ನಾವು ನೋಡಿ ಮೆಚ್ಚಿದ್ದ ಅನೇಕಾನೇಕ ಚಿತ್ರ ಗಳನ್ನು ನೆನಪು ಮಾಡಿಕೊಂಡೆವು.

"ಇವರೆಲ್ಲ ಕಲಾಪ್ರಪಂಚದ ಅವಿಸ್ಮರಣೀಯ ಕಲೆಗಾರರು. ಅವರ ಹೆಸರುಗಳ ಮೇಲೆ ನಡೆದು ಹೋಗುವಂತೇಕೆ ಮಾಡಿದ್ದಾರೆ ಈ ಜನ ? ಭಿತ್ತಿಗಳಲ್ಲಿ ಇವನ್ನೆಲ್ಲ ಅಳವಡಿಸಿದ್ದರೆ ಒಂದು ಸುಂದರ ಸಂಗ್ರಹಾಲಯವನ್ನೆ ನಿರ್ಮಿಸ ಬಹುದಾಗಿತ್ತಲ್ಲಾ" ಎಂದರು ಸಿ. ಕೆ. ನಾ. "ಇದು ಕಲಾದೇಗುಲ. ಇಲ್ಲಿಗೆ ಬರುವವರು ಕಲಾಭಕ್ತರು. ಭಕ್ತರ ಪಾದಧೂಳಿ ಜನ್ಮ ಪಾವನ ಮಾಡುತ್ತದೆ ಎಂಬ ನಂಬಿಕೆ ನಮ್ಮಲ್ಲಿ ಇಲ್ಲವೆ ? ದೇವಸ್ಥಾನಗಳಲ್ಲಿ, ಬೆಟ್ಟದ ಮೇಲೆ ಇರುವ ದೇವಸಂದರ್ಶನಕ್ಕೆ ಏರುವ ಮೆಟ್ಟಲುಗಳ ಮೇಲೆ ನಮ್ಮಲ್ಲಿಯೂ, ಹೆಸರುಗಳನ್ನು ಕೆತ್ತಿಸಿರುವುದಿಲ್ಲವೆ ? ಅದರಿಂದ ಇದು ಮಾನ್ಯವಲ್ಲವೆ ?" ಎಂದು ನಾನು ಹೇಳಿದೆ. "ಇದ್ದೀತೇನೋ. ಏನೋ ನನಗೆ ಹಾಗೆನ್ನಿಸಿತು ಹೇಳಿಬಿಟ್ಟೆ" ಎಂದು ಸಿ. ಕೆ. ನಾ ಮಾತು ಮುಗಿಸಿದರು.

ಅಲ್ಲಿಂದ ನಾವು ಯೂನಿವರ್ಸಲ್ ಸ್ಟುಡಿಯೋಗೆ ಹೊರಟೆವು. ಗುಡ್ಡದ ಮೇಲೆ ಹಾಲಿವುಡ್ (Holly Wood) ಎಂಬ ಹೆಸರು ವಿಶ್ವಕ್ಕೆ ತಲೆಬರಹವೆಂಬಂತೆ ಕಣ್ಗೋಚರವಾಯಿತು. ಸುತ್ತ ಮುತ್ತ ಭೂ ವಿಸ್ತಾರವೆಲ್ಲ ಹಾಲಿವುಡ್ ನಗರವೆಂದು ಪ್ರಖ್ಯಾತವಾಗಿದೆ. ಈ ನಗರದ ಹೆದ್ದಾರಿಯನ್ನು ಹಾಲಿವುಡ್ ಹೆದ್ದಾರಿ ಎಂದೆ ಹೆಸರಿಸಿದ್ದಾರೆ.ಅಮೆರಿಕದ ಪ್ರಸಿದ್ಧ ಚಿತ್ರತಯಾರಿಕಾ ಕೇಂದ್ರಗಳಾದ ಪ್ಯಾರಾಮೌಂಟ್, ಕೊಲಂಬಿಯ, ಎಂಜಿಎಂ ಮೊದಲಾದ ಸಂಸ್ಥೆಗಳೆಲ್ಲಾ ಇಲ್ಲೇ ತಮ್ಮ ನಿರ್ಮಾಪನ ಕೆಲಸ ಸಾಗಿಸಿವೆ. ಇಲ್ಲಿರುವ ಅನೇಕ ಸ್ಟುಡಿಯೋಗಳಲ್ಲಿ ಯೂನಿವರ್ಸಲ್

ಟಿಪ್ಪಣಿ:— ಇದರಂತೆ ತಿತ್ತಿರಿ, ನವಿಲು, ಉಡಾ, ಲಾವ, ಕಪಿಂಜಲ ಗಳ ಮಾಂಸವನ್ನು ಹರಳೆ ಎಣ್ಣೆಯ ಹಾಕಿ ಔಡಲ ಕಟ್ಟಿಗೆಯಿಂದ ಬೇಯಿಸಿದ್ದು ಮೊಸರಿನಿಂದ ಕೂಡಿದರೆ ಪ್ರಾಣ ತಕ್ಕೊಳ್ಳುವದು. (೪೩)

ಹಾರೀತಮಾಂಸಂ ಹಾರಿದ್ರಶೂಲಕಪ್ರೋತಪಾಚಿತಮ್ ॥
ಹಾರಿದ್ರವಹ್ನಿನಾ ಸದ್ಯೋ ವ್ಯಾಪಾದಯತಿ ಜೀವಿತಮ್ ॥೪೪॥
ಭಸ್ಮಪಾಂಸುಪರಿಧ್ವಸ್ತಂ ತದೇವ ಚ ಸಮಾಕ್ಷಿಕಮ್ ॥

ಅರ್ಥ:— ಮರದರಿಶಿಣದ ಕಟ್ಟಿಗೆಯ ಮೇಲೆ ಚುಚ್ಚಿ ಮರ ಅರಿಶಿಣದ ಬೆಂಕಿಯಿಂದಲೇ ಬೇಯಿಸಿದರೆ ಹಾರೀತ-ಪಕ್ಷಿಯ ಮಾಂಸ ತತ್ಕಾಲ ಜೀವವನ್ನು ತಕ್ಕೊಳ್ಳುವದು. ಧೂಳಿ-ಬೂದಿಗಳಿಂದ ಹೊಲಸಾದ ಹಾರೀತ-ಪಕ್ಷಿಯ ಮಾಂಸವನ್ನು ಜೇನತುಪ್ಪದೊಡನೆ ತಿಂದರೆ ಒಮ್ಮೆಲೆ ಪ್ರಾಣಹರಣಮಾಡುವದು. (೪೪)

ದ್ರವ್ಯಗಳು ಅನಂತವಾಗಿರುವದರಿಂದ ಹೀಗೆಯೇ ವಿರುದ್ಧ ದ್ರವ್ಯಗಳನ್ನೆಲ್ಲ ಹೇಳುವದು ಶಕ್ಯವಿಲ್ಲ. ಆದ್ದರಿಂದ ಅವುಗಳನ್ನು ತಿಳಿಯುವದಕ್ಕಾಗಿ "ವಿರುದ್ಧ"ದ ವ್ಯಾಪಕ ಲಕ್ಷಣವನ್ನು ಹೇಳುತ್ತಾರೆ.

ಯತ್ಕಿಂಚಿದ್ದೋಷಮುತ್ಕ್ಲೇಶ್ಯ ನ ಹರೇತ್ತತ್ಸಮಾಸತಃ ॥೪೫॥
ವಿರುದ್ಧಂ ಶುದ್ಧಿರತ್ರೇಷ್ಟಾ ಶಮೋ ವಾ ತದ್ವಿರೋಧಿಭಿಃ ॥
ದ್ರವ್ಯೈಸ್ತೈರ್ವಾ ತಥಾ ಪೂರ್ವಂ ಶರೀರಸ್ಯಾಭಿಸಂಸ್ಕೃತಿಃ ॥೪೬॥

ಅರ್ಥ:— ಸ್ವಲ್ಪದರಲ್ಲಿ ಹೇಳುವದಾದರೆ ಯಾವದು ಒಂದು ದೋಷವನ್ನು ತನ್ನ ಸ್ಥಾನ ಬಿಡಿಸುವದು ಆದರೆ ಅದನ್ನು ಹೊರಗೆ ಹಾಕದು ಅದು ವಿರುದ್ಧವು. ಇದಕ್ಕೆ ವಮನ ವಿರೇಚನಗಳಿಂದ ಶುದ್ಧಿಯನ್ನೂ ಅಥವಾ ವಿರುದ್ಧಾನ್ನದ ವಿರೋಧಿದ್ರವ್ಯಗಳಿಂದ ಶಮನವನ್ನೂ ಮಾಡಬೇಕು. ಅಥವಾ ವಿರುದ್ಧಾನ್ನದ ವಿರೋಧಿ ದ್ರವ್ಯಗಳಿಂದ ಶರೀರದ ಸಂಸ್ಕಾರವನ್ನು ಮೊದಲೇ ಮಾಡಬೇಕು. (ಹೀಗೆ ಮಾಡುವದರಿಂದ ಮುಂದೆ ತಿನ್ನುವ ವಿರುದ್ಧ ಆಹಾರದ ಪರಿಣಾಮವಾಗದು.) (೪೬)

ಟಿಪ್ಪಣಿ:— ರೇಚನವು ಸ್ಥಾನ ಬಿಡಿಸುವದು ಆದರೆ ಅದನ್ನು ಹೊರಗೂ ಹಾಕುವದು. ಅದರಂತೆ ಶಮನವು ಹೊರಗೆ ಹಾಕದು. ಆದರೆ ಸ್ಥಾನವನ್ನು ಬಿಡಿಸದು. ಆದ್ದರಿಂದ ಅವು ವಿರುದ್ಧವಲ್ಲ.

**ವ್ಯಾಯಾಮಸ್ನಿಗ್ಧದೀಪ್ತಾಗ್ನಿವಯಃಸ್ಥಬಲಶಾಲಿನಾಮ್ ।**
**ವಿರೋಧ್ಯಪಿ ನ ಪೀಡಾಯೈ ಸಾತ್ಮ್ಯಮಲ್ಪಂ ಚ ಭೋಜನಮ್ ॥೪೭॥**

ಅರ್ಥಃ— ವ್ಯಾಯಾಮ, ಸ್ನಿಗ್ಧ-ಆಹಾರ, ಪ್ರದೀಪ್ತಾಗ್ನಿ, ತಾರುಣ್ಯ, ಬಲ ಉಳ್ಳವರಿಗೆ ವಿರುದ್ಧ ಆಹಾರವೂ ಕೂಡ ಪೀಡೆಯನ್ನುಂಟುಮಾಡದು. ಅದರಂತೆ ವಿರುದ್ಧ ಆಹಾರದ ರೂಢಿಯುಳ್ಳವರಿಗೂ ಅದನ್ನು ಸ್ವಲ್ಪೇ ತಿನ್ನುವವರಿಗೂ ವಿಶೇಷ ಅಪಾಯವಾಗದು.

ಟಿಪ್ಪಣೀ— ಸಾತ್ಮ್ಯಾಸಾತ್ಮ್ಯ ಭೇದಗಳನ್ನು ಹೇಮಾದ್ರಿಯು ಈ ಪ್ರಕಾರಮಾಡಿದ್ದಾನೆ.




(೪೭)

**ಪಾದೇನಾಪಥ್ಯಮಭ್ಯಸ್ತಂ ಪಾದಪಾದೇನ ವಾ ತ್ಯಜೇತ್ ॥**
**ನಿಷೇವೇತ ಹಿತಂ ತದ್ವದೇಕದ್ವಿತ್ರ್ಯಂತರೀಕೃತಮ್ ॥೪೮॥**

ಅರ್ಥ:— ನಡುವೆ ೧-೨-೩ ದಿವಸಗಳ ಅಂತರದಿಂದ ಅಭ್ಯಾಸ ವಿದ್ದ ಅಪಥ್ಯವನ್ನು ನಾಲ್ಕನೆಯ ಅಥವಾ ಹದಿನಾರನೆಯ ಅಂಶದಿಂದ ಬಿಡುತ್ತ, ಅದರ ಬದಲಾಗಿ ಹಿತಕರವಾದದ್ದನ್ನು ಸೇವಿಸುತ್ತ ಹೋಗಬೇಕು

ಟಿಪ್ಪಣಿ:—

ನಾಲ್ಕನೆಯ ಅಂಶದಿಂದ ಅಪಥ್ಯವನ್ನು ಕಡಿಮೆ ಮಾಡುವದು:—

೧ನೆಯ ಆಹಾರ ಕಾಲ ಅಥವಾ ದಿವಸ — ೩ ಪಾದ ಅಪಥ್ಯ, ೧ ಪಾದ ಪಥ್ಯ ಸೇವಿಸಬೇಕು.

೨ನೆಯ ಆಹಾರ ಕಾಲ ಅಥವಾ ದಿವಸ — ನಾಲ್ಕೂ ಪಾದ ಅಪಥ್ಯ ಸೇವಿಸಬೇಕು.

(ಇದರಿಂದ ಒಂದು ಅನ್ನ ಕಾಲ ಅಥವಾ ದಿವಸವು ಅಪಥ್ಯದ ಪಾದದ ನಡುವೆ ಬಂದಂತಾಗುವದು.)

೩ನೆಯ ಆಹಾರ ಕಾಲ ಅಥವಾ ದಿವಸ — ೨ ಪಾದ ಅಪಥ್ಯ, ೨ ಪಾದ ಪಥ್ಯ ಸೇವಿಸಬೇಕು.

೪ನೆಯ ಆಹಾರ ಕಾಲ ಅಥವಾ ದಿವಸ — ನಾಲ್ಕೂ ಪಾದ ಅಪಥ್ಯ ಸೇವಿಸಬೇಕು.

೫ನೆಯ ಆಹಾರ ಕಾಲ ಅಥವಾ ದಿವಸ — ನಾಲ್ಕೂ ಪಾದ ಅಪಥ್ಯ ಸೇವಿಸಬೇಕು.

(ಇದರಿಂದ ಎರಡು ಅನ್ನ ಕಾಲ ಅಥವಾ ದಿವಸಗಳು ಅಪಥ್ಯದ ಎರಡು ಪಾದಗಳ ನಡುವೆ ಬಂದಂತಾಗುವವು.)

೬ನೆಯ ಆಹಾರ ಕಾಲ ಅಥವಾ ದಿವಸ — ೧ ಪಾದ ಅಪಥ್ಯ, ೩ ಪಾದ ಪಥ್ಯ ಸೇವಿಸಬೇಕು.

೭ನೆಯ ಆಹಾರ ಕಾಲ ಅಥವಾ ದಿವಸ — ನಾಲ್ಕೂ ಪಾದ ಅಪಥ್ಯ ಸೇವಿಸಬೇಕು.
೮ನೆಯ ಆಹಾರ ಕಾಲ ಅಥವಾ ದಿವಸ — ನಾಲ್ಕೂ ಪಾದ ಅಪಥ್ಯ ಸೇವಿಸಬೇಕು.
೯ನೆಯ ಆಹಾರ ಕಾಲ ಅಥವಾ ದಿವಸ — ನಾಲ್ಕೂ ಪಾದ ಅಪಥ್ಯ ಸೇವಿಸಬೇಕು.

(ಇದರಿಂದ ಮೂರು ಅನ್ನ ಕಾಲ ಅಥವಾ ದಿವಸಗಳು ಅಪಥ್ಯದ ಮೂರು ಪಾದಗಳನಡುವೆ ಬಂದಂತಾಗುವವು.)

೧೦ನೆಯ ದಿವಸದಿಂದ ಎಲ್ಲವನ್ನೂ ಪಥ್ಯವನ್ನೇ ಸೇವಿಸುತ್ತ ಹೋಗಬೇಕು.

ಇದರಂತೆ ಒಂದು-ಹದಿನಾರನೇ ಅಂಶದಿಂದ ಅಪಥ್ಯವನ್ನು ಕಡಿಮೆ ಮಾಡುವದು:—

೧ನೆಯ ಆಹಾರ ಕಾಲ ಅಥವಾ ದಿವಸ — ೧೫ ಭಾಗ ಅಪಥ್ಯ, ೧ ಭಾಗ ಪಥ್ಯ ಸೇವಿಸಬೇಕು

೨ನೆಯ ಆಹಾರ ಕಾಲ ಅಥವಾ ದಿವಸ — ಹದಿನಾರೂ ಭಾಗ ಅಪಥ್ಯವನ್ನೇ ಸೇವಿಸಬೇಕು

(ಇದರಿಂದ ಒಂದು ಅನ್ನಕಾಲವು ಅಥವಾ ದಿವಸವು ನಡುವೆ ಬಂದಂತಾಯಿತು.)

೩ನೆಯ ಆಹಾರ ಕಾಲ ಅಥವಾ ದಿವಸ—೧೪ ಭಾಗ ಅಪಥ್ಯ, ೨ ಭಾಗ ಪಥ್ಯವನ್ನು ಸೇವಿಸಬೇಕು.

೪ನೆಯ ಆಹಾರ ಕಾಲ ಅಥವಾ ದಿವಸ
೫ನೆಯ ಆಹಾರ ಕಾಲ ಅಥವಾ ದಿವಸ } ಹದಿನಾರೂ ಭಾಗ ಅಪಥ್ಯವನ್ನು ಸೇವಿಸಬೇಕು.

(ಇದರಿಂದ ಎರಡು ಅನ್ನಕಾಲ ಅಥವಾ ದಿವಸಗಳು ನಡುವೆ ಬಂದಂತಾಗುವವು.)

೬ನೆಯ ಆಹಾರ ಕಾಲ ಅಥವಾ ದಿವಸ — ೧೩ ಭಾಗ ಅಪಥ್ಯ, ೩ ಭಾಗ ಪಥ್ಯವನ್ನು ಸೇವಿಸಬೇಕು.

೭ನೆಯ ಆಹಾರ ಕಾಲ ಅಥವಾ ದಿವಸ
೮ನೆಯ ಆಹಾರ ಕಾಲ ಅಥವಾ ದಿವಸ
೯ನೆಯ ಆಹಾರ ಕಾಲ ಅಥವಾ ದಿವಸ } ಹದಿನಾರೂ ಭಾಗ ಅಪಥ್ಯವನ್ನು ಸೇವಿಸಬೇಕು.

(ಇದರಿಂದ ಮೂರು ಅನ್ನಕಾಲ ಅಥವಾ ದಿವಸಗಳು ನಡುವೆ ಬಂದಂತಾಗುವವು.)

೧೦ನೆಯ ಆಹಾರ ಕಾಲ ಅಥವಾ ದಿವಸ — ೧೨ ಭಾಗ ಅಪಥ್ಯ, ೪ ಭಾಗ ಪಥ್ಯವನ್ನು ಸೇವಿಸಬೇಕು.

೧೧ನೆಯ ಆಹಾರ ಕಾಲ ಅಥವಾ ದಿವಸ — ಹದಿನಾರೂ ಭಾಗ ಅಪಥ್ಯವನ್ನು ಸೇವಿಸಬೇಕು.

(ಇದರಿಂದ ಒಂದು ಅನ್ನಕಾಲ ಅಥವಾ ದಿವಸವು ನಡುವೆ ಬಂದಂತಾಗುವದು.)

೧೨ನೆಯ ಆಹಾರ ಕಾಲ ಅಥವಾ ದಿವಸ—೧೧ ಭಾಗ ಅಪಥ್ಯ, ೫ ಭಾಗ ಪಥ್ಯ ಸೇವಿಸಬೇಕು.

ಹೀಗೆಯೇ ೧೬ ಭಾಗವು ಪಥ್ಯ ಆಗುವ ವರೆಗೆ ಮಾಡುತ್ತ ಹೋಗಬೇಕು. ಇದಕ್ಕೆ ೬೩ ಅನ್ನಕಾಲ ಅಥವಾ ದಿವಸಗಳು ಬೇಕಾಗುವವು. ಮೂಲದಲ್ಲಿ 'ಏಕದ್ವಿತ್ರ್ಯಂತರೀಕೃತಮ್' ಎಂದಿಷ್ಟೇ ಹೇಳಿರುವದು. ಕಾಲ ವಿಶೇಷವನ್ನು ಹೇಳಿಲ್ಲ ಆದ್ದರಿಂದ ಅರುಣದತ್ತನು ಅನ್ನಕಾಲವನ್ನೂ ಹೇಮಾದ್ರಿಯು ದಿವಸವನ್ನೂ ಹಿಡಿದಿರುವನು. (೪೮)

**ಅಪಥ್ಯಮಪಿ ಹಿ ತ್ಯಕ್ತಂ ಶೀಲಿತಂ ಪಥ್ಯಮೇವ ವಾ ॥**
**ಸಾತ್ಮ್ಯಾಸಾತ್ಮ್ಯವಿಕಾರಾಯ ಜಾಯತೇ ಸಹಸಾಽನ್ಯಥಾ ॥೪೯॥**

ಅರ್ಥ:— ಇಲ್ಲವಾದರೆ ತನ್ನ (ರೂಢಿಬಿದ್ದ) ಅಪಥ್ಯವನ್ನು ಒಮ್ಮೆಲೇ ಬಿಟ್ಟರೆ ಅಥವಾ (ರೂಢಿಯಿಲ್ಲದ) ಪಥ್ಯವನ್ನು ಒಮ್ಮೆಲೇ ಸೇವಿಸಿದರೆ ಅದರಿಂದ ಸಾತ್ಮ್ಯಾಸಾತ್ಮ್ಯದ ವಿಕಾರಗಳುಂಟಾಗುತ್ತವೆ. (೪೯)

ಕ್ರಮೇಣಾಪಚಿತಾ ದೋಷಾಃ ಕ್ರಮೇಣೋಪಚಿತಾ ಗುಣಾಃ ||
†ನಾಪ್ನುವಂತಿ ಪುನರ್ಭಾವಮಪ್ರಕಂಪ್ಯಾ ಭವಂತಿ ಚ ||೫೦||

ಅರ್ಥ:— ಕ್ರಮದಿಂದ ಕಳೆಯಲ್ಪಟ್ಟ ದೋಷಗಳು ಪುನಃ ಉತ್ಪನ್ನವಾಗುವದಿಲ್ಲ. ಕ್ರಮದಿಂದ ಗಳಿಸಲ್ಪಟ್ಟ ಗುಣಗಳೂ ಸ್ಥಿರವಾಗಿ ನಿಲ್ಲುವವು.

ಟಿಪ್ಪಣಿ:— ಗುಣವು ಎರಡು ಪ್ರಕಾರ. (೧) ದೋಷಗಳನ್ನು ಕಡಿಮೆ ಮಾಡೋಣ (೨) ಗುಣಗಳನ್ನು ಹೆಚ್ಚಿಸೋಣ. ದೋಷಗಳು ಕ್ರಮದಿಂದ ಕಡಿಮೆ ಯಾಗಲು ಪುನಃ ಉತ್ಪನ್ನವಾಗುವದಿಲ್ಲ. ಗುಣಗಳು ಕ್ರಮದಿಂದ ಬೆಳೆಯಲು ಸ್ಥಿರತ್ವವನ್ನು ಹೊಂದುತ್ತವೆ. (೫೦)

ಅತ್ಯಂತಸನ್ನಿಧಾನಾನಾಂ ದೋಷಾಣಾಂ ದೂಷಣಾತ್ಮನಾಮ್ ||
ಅಹಿತೈರ್ದೂಷಣಂ ಭೂಯೋ ನ ವಿದ್ವಾನ್ ಕರ್ತುಮರ್ಹತಿ ||೫೧||

ಅರ್ಥ:— ದೂಷಣ ಸ್ವಭಾವವುಳ್ಳ ಮತ್ತು ಶರೀರದ ಅತ್ಯಂತ ನಿಕಟದಲ್ಲಿರುವ ದೋಷಗಳನ್ನು ಅಪಥ್ಯದಿಂದ ಮತ್ತಿಷ್ಟು ವಿಕೃತಮಾಡು ವದು ವಿದ್ವಾಂಸನಿಗೆ ಯೋಗ್ಯವಲ್ಲ. (೫೧)

ಆಹಾರಶಯನಾಬ್ರಹ್ಮಚರ್ಯೈರ್ಯುಕ್ತ್ಯಾ ಪ್ರಯೋಜಿತೈಃ ||
ಶರೀರಂ ಧಾರ್ಯತೇ ನಿತ್ಯಮಾಗಾರಮಿವ ಧಾರಣೈಃ ||೫೨||

ಅರ್ಥ:— ಕಂಬಗಳಿಂದ ಮನೆಯು ನಿಲ್ಲುವಂತೆ ಯೋಗ್ಯ ರೀತಿ ಯಿಂದ ಉಪಯೋಗಿಸಿದ ಆಹಾರ ಶಯನ ಮೈಥುನಗಳಿಂದ ಶರೀರವು ನಿತ್ಯವಾಗಿ ಧರಿಸಲ್ಪಡುತ್ತದೆ. (೫೨)

ಆಹಾರೋ ವರ್ಣಿತಸ್ತತ್ರ ತತ್ರ ತತ್ರ ಚ ವಕ್ಷ್ಯತೇ ||

ಅರ್ಥ:— ಇವುಗಳಲ್ಲಿಯ ಆಹಾರವು (೩ನೆಯ ಮತ್ತು ೫-೬ನೆಯ ಅಧ್ಯಾಯಗಳಲ್ಲಿ) ಹೇಳಲ್ಪಟ್ಟಿದೆ. ಮತ್ತು ಅಲ್ಲಲ್ಲಿಯೂ (ಮಾತ್ರಾಶಿತೀಯ, ಜ್ವರಚಿಕಿತ್ಸೆ ಮುಂತಾದ ಅಧ್ಯಾಯಗಳಲ್ಲಿ) ಹೇಳಲ್ಪಡುತ್ತದೆ. (೫೨||)

† 'ಸಂತೋ ಯಾಂತ್ಯ' ಎಂಬ ಪಾಠಾಂತರವಿದೆ.

ನಿದ್ರಾಯತ್ತಂ ಸುಖಂ ದುಃಖಂ ಪುಷ್ಟಿಃ ಕಾರ್ಶ್ಯಂ ಬಲಾಬಲಮ್ ॥೩೬॥
ವೃಷತಾ ಕ್ಲೀಬತಾ ಜ್ಞಾನಮಜ್ಞಾನಂ ಜೀವಿತಂ ನ ಚ ॥

ಅರ್ಥಃ— ಸುಖ, ದುಃಖ, ಪುಷ್ಟಿ, ಕೃಶತ್ವ, ಶಕ್ತಿ, ಅಶಕ್ತಿ, ಪುರುಷತ್ವ, ನಪುಂಸಕತ್ವ, ಜ್ಞಾನ, ಅಜ್ಞಾನ, ಜೀವನ, ಮರಣ-ಇವೆಲ್ಲವು ನಿದ್ರೆಯನ್ನವಲಂಬಿಸಿವೆ. (೫೬)

ಅಕಾಲೇಽತಿಪ್ರಸಂಗಾಚ್ಚ ನ ಚ ನಿದ್ರಾ ನಿಷೇವಿತಾ ॥೫೭॥
ಸುಖಾಯುಷೀ ಪರಾಕುರ್ಯಾತ್ ಕಾಲರಾತ್ರಿರಿವಾಪರಾ ॥

ಅರ್ಥಃ— ಅಕಾಲದಲ್ಲಿ ನಿದ್ರೆ, ಅತಿ ನಿದ್ರೆ, ಅಥವಾ ನಿದ್ರೆಯನ್ನು ಮಾಡದೇ ಇರೋಣ—ಇವು ಎರಡನೇ ಕಾಲರಾತ್ರಿಯಂತೆ ಸುಖ ಮತ್ತು ಆಯುಷ್ಯಗಳನ್ನು ನಾಶಮಾಡುತ್ತವೆ.

**ಟಿಪ್ಪಣಿ:**— ಹೇಮಾದ್ರಿಯು ಈ ಶ್ಲೋಕದ ಅನ್ವಯವನ್ನು ಬೇರೆ ರೀತಿಯಾಗಿ ಹಚ್ಚಿದ್ದಾನೆ. "ಅಕಾಲೇ ನಿಷೇವಿತಾ" "ಅತಿಪ್ರಸಂಗಾತ್ ನಿಷೇವಿತಾ", "ನ ಚ ನಿಷೇವಿತಾ" 'ನಿಷೇವಿತಾ' "ಇತಿ ಚತುರ್ಧಾ ನಿದ್ರಾ, ತತ್ರಪರಾ 'ಸುಖಾಯುಷೀ ಕುರ್ಯಾತ್" "ಅಪರಾ ಕಾಲರಾತ್ರಿರಿವ (ಹನ್ಯಾತ್)" ಹೀಗೆ ಅನ್ವಯಮಾಡಿ ಕ್ರಮದಿಂದ ನಿದ್ರೆಯ ಮಿಥ್ಯಾಯೋಗ, ಅತಿಯೋಗ, ಹೀನಯೋಗ, ಸಮ್ಯಗ್ಯೋಗಗಳನ್ನು ಹೇಳಿ ಅವುಗಳಲ್ಲಿ ಕಡೆಯದು (ಪರಾ) ಸುಖ ಮತ್ತು ಆಯುಷ್ಯವನ್ನು ಕೊಡುವದೆಂದೂ ಉಳಿದವು (ಅಪರಾ) ಕಾಲರಾತ್ರಿಯಂತೆ ನಾಶಮಾಡುವವೆಂದೂ ಬರೆಯುವನು. ಮತ್ತು ಪಾಣಿನಿಯ ಪ್ರತ್ಯಾಹಾರದಂತೆ 'ಸುಖಾಯುಷಿ' ಶಬ್ದದಿಂದ ಇವೆರಡರ ಮಧ್ಯದಲ್ಲಿರುವಂಥವನ್ನು ಗ್ರಹಣ ಮಾಡಿ ಸುಖ, ಪುಷ್ಟಿ, ಬಲ, ವೃಷತ್ವ, ಜ್ಞಾನ, ಜೀವಿತಗಳನ್ನು ಗ್ರಹಣಮಾಡಬೇಕೆಂದು ಹೇಳುವನು. (೫೭)

ರಾತ್ರೌ ಜಾಗರಣಂ ರೂಕ್ಷಂ ಸ್ನಿಗ್ಧಂ ಪ್ರಸ್ವಪನಂ ದಿವಾ ॥೫೮॥
ಅರೂಕ್ಷಮನಭಿಷ್ಯಂದಿ ತ್ವಾಸೀನಪ್ರಚಲಾಯಿತಮ್ ॥

ಅರ್ಥಃ— ರಾತ್ರಿಯಲ್ಲಿ ಜಾಗರಣೆಯು ರುಕ್ಷವು; ಅದರಿಂದ ವಾತವು ಹೆಚ್ಚುವದು. ಹಗಲು ನಿದ್ರೆಯು ಸ್ನಿಗ್ಧವು; ಅದು ಕಫ ಪಿತ್ತಗಳನ್ನು ಉಂಟುಮಾಡುವದು. ಕೂತಲ್ಲೇ ತೂಕಡಿಸುವದು ರುಕ್ಷವೂ ಅಲ್ಲ, ಸ್ನಿಗ್ಧವೂ ಅಲ್ಲ. (೫೮)

**ಗ್ರೀಷ್ಮೇ ವಾಯುಚಯಾದಾನರೌಕ್ಷ್ಯರಾತ್ರ್ಯಲ್ಪಭಾವತಃ ॥೪೬॥**
**ದಿವಾಸ್ವಪ್ನೋ ಹಿತೋಽನ್ಯಸ್ಮಿನ್ ಕಫಪಿತ್ತಕರೋ ಹಿ ಸಃ**

ಅರ್ಥ:— ಗ್ರೀಷ್ಮ-ಋತುವಿನಲ್ಲಿ ವಾಯುಸಂಚಯ. ಆದಾನ ಕಾಲದಿಂದ ರೂಕ್ಷತೆ ಮತ್ತು ರಾತ್ರಿಗಳು ಸಣ್ಣವು ಇರುವದರಿಂದ ಹಗಲು ನಿದ್ದೆಯು ಹಿತಕರವು. ಬೇರೆ ಕಾಲದಲ್ಲಿ ಇದು ಪಿತ್ತ ಕಫಗಳನ್ನುಂಟುಮಾಡುತ್ತದೆ. (೪೬॥)

**ಮುಕ್ತ್ವಾ ತು ಭಾಷ್ಯಯಾನಾಧ್ವಮದ್ಯಸ್ತ್ರೀಭಾರಕರ್ಮಭಿಃ ॥೪೭॥**

**ಕ್ರೋಧಶೋಕಭಯೈಃ ಕ್ಲಾಂತಾನ್ ಶ್ವಾಸಹಿಧ್ಮಾತಿಸಾರಿಣಃ ॥**
**ವೃದ್ಧಬಾಲಾಬಲಕ್ಷೀಣಕ್ಷತತೃಟ್ ಶೂಲಪೀಡಿತಾನ್ ॥೪೮॥**

**ಅಜೀರ್ಣಾಭಿಹತೋನ್ಮತ್ತಾನ್ ದಿವಾಸ್ವಪ್ನೋಚಿತಾನಪಿ ॥**
**ಧಾತುಸಾಮ್ಯಂ ತಥಾ ಹ್ಯೇಷಾಂ ಶ್ಲೇಷ್ಮಾ ಚಾಂಗಾನಿ ಪುಷ್ಯತಿ ॥೪೯॥**

ಅರ್ಥ:— ಆದರೆ ಬಹಳ ಮಾತಾಡೋಣ, ವಾಹನದ ಮೇಲೆ ಕೂಡ್ರೋಣ, ಹಾದಿ ನಡೆಯೋಣ ಮದ್ಯಪಾನ, ಸ್ತ್ರೀ-ಸಂಗ, ಭಾರ ಹೊರೋಣ – ಈ ಕರ್ಮಗಳಿಂದ ಮತ್ತು ಕ್ರೋಧ ಶೋಕ ಭಯಗಳಿಂದ ದಣಿದವರಿಗೂ, ಶ್ವಾಸ ಬಿಕ್ಕು ಅತಿಸಾರವುಳ್ಳವರಿಗೂ, ವೃದ್ಧ ಬಾಲ ಅಶಕ್ತ ಕ್ಷೀಣ ಶಸ್ತ್ರದ-ಗಾಯ ನೀರಡಿಕೆ ಶೂಲಗಳಿಂದ ಪೀಡಿತರಾದವರಿಗೂ, ಅಜೀರ್ಣ ಬಡಿತ ಉನ್ಮಾದ ಉಳ್ಳವರಿಗೂ, ಹಗಲು ನಿದ್ರೆಯು ರೂಢಿಯಿದ್ದವರಿಗೂ, ಬೇರೆ ಋತುಗಳಲ್ಲಿಯೂ ಕೂಡ ಹಗಲು ನಿದ್ದೆಯು ಬಾಧಕವಾಗದು. ಅವರಿಗೆ ಹಗಲು ನಿದ್ದೆಯಿಂದ ಧಾತು ಸಾಮ್ಯವುಂಟಾಗಿ ಕಫವು ಶರೀರವನ್ನು ಪೋಷಿಸುವದು. (೪೯)

**ಬಹುಮೇದಃಕಫಾಃ ಸ್ವಪ್ಯುಃ ಸ್ನೇಹನಿತ್ಯಾಶ್ಚ ನಾಹನಿ ॥**
**ವಿಷಾರ್ತಃ ಕಂಠರೋಗೀ ಚ ನೈವ ಜಾತು ನಿಶಾಸ್ವಪಿ ॥೫೦॥**

ಅರ್ಥ:-ಬಹಳಮೇದ ಮತ್ತು ಕಫವುಳ್ಳವರೂ,ಯಾವಾಗಲೂ ಸ್ನಿಗ್ಧ ಆಹಾರಮಾಡುವವರೂ ಗ್ರೀಷ್ಮಕಾಲದಲ್ಲಿಯೂ ಹಗಲು ಮಲಗಿಕೊಳ್ಳಬಾರದು. ವಿಷ

ತಿಂದವನೂ, ಕಂಠರೋಗಿಯೂ ರಾತ್ರಿಯಲ್ಲಿಯೂ ಕೂಡ ಎಂದೂ ಮಲಗಬಾರದು. (೬೦)

**ಅಕಾಲಶಯನಾನ್ಮೋಹಜ್ವರಸ್ತೈಮಿತ್ಯಪೀನಸಾಃ ॥**
**ಶಿರೋರುಕ್‌ಶೋಫಹೃಲ್ಲಾಸಸ್ರೋತೋರೋಧಾಗ್ನಿಮಂದತಾಃ ॥೬೧॥**

ಅರ್ಥಃ— ಅಕಾಲದಲ್ಲಿ ಮಲಗುವದರಿಂದ ಮೋಹ, ಜ್ವರ, ಆಲಸ್ಯ, ಪೀನಸ, ತಲೆನೋವು, ಬಾವು, ಬಾಯಿಗೆ ನೀರು ಬಿಡೋಣ, ಸ್ರೋತಸ್ಸುಗಳ ಸಂಕೋಚ, ಅಗ್ನಿಮಾಂದ್ಯ ಮುಂತಾದವುಗಳು ಉತ್ಪನ್ನವಾಗುವವು.

**ಟಿಪ್ಪಣೀ—** “ಕಂಡೂಷಕೋಠಪಿಟಕಾಃ ಕಾಸತಂದ್ರಾಗಲಾಮಯಾಃ ।
ಹಲೀಮಕಾರ್ಧಾವಭೇದಶೋಫಾರೋಚಕಗೌರವಮ್ ॥
ವಿಷವೇಗಪ್ರವೃತ್ತಿಶ್ಚ ಭವೇದಹಿತನಿದ್ರಯಾ ।”

ಎಂದು ಸಂಗ್ರಹದಲ್ಲಿ ಅಹಿತ ನಿದ್ರೆಯ ಗುಣಗಳನ್ನು ಹೇಳಿದ್ದಾರೆ. (೬೧)

**ತತ್ರೋಪವಾಸವಮನಸ್ವೇದನಾವನಮೌಷಧಮ್ ॥**

ಅರ್ಥಃ— ಅದರ(ಅಕಾಲಸ್ವಪ್ನಜ ರೋಗಗಳ) ಮೇಲೆ ಉಪವಾಸ ವಾಂತಿ ಸ್ವೇದ ನಸ್ಯಗಳು ಔಷಧಗಳು. (೬೧॥)

**ಯೋಜಯೇದತಿನಿದ್ರಾಯಾಂ ತೀಕ್ಷ್ಣಂ ಪ್ರಚ್ಛರ್ದನಾಂಜನಮ್ ॥೬೨॥**
**ನಾವನಂ ಲಂಘನಂ ಚಿಂತಾಂ ವ್ಯವಾಯಂ ಶೋಕಭೀಕ್ರುಧಃ ॥**

ಅರ್ಥಃ— ಅತಿ ನಿದ್ರೆಯ ಮೇಲೆ ತೀಕ್ಷ್ಣ ವಾಂತಿ ಅಂಜನ ನಸ್ಯ ಲಂಘನ ಚಿಂತೆ ಮೈಥುನ ಶೋಕ ಅಂಜಿಕೆ ಸಿಟ್ಟುಗಳನ್ನು ಯೋಜಿಸಬೇಕು. (೬೨॥)

**ಏಭಿರೇವ ಚ ನಿದ್ರಾಯಾ ನಾಶಃ ಶ್ಲೇಷ್ಮಾತಿಸಂಕ್ಷಯಾತ್ ॥೬೩॥**

ಅರ್ಥಃ— ಇವುಗಳಿಂದಲೇ ಕಫದ ನಾಶವಾಗುವದರಿಂದ ಅತಿ ನಿದ್ರೆಯು ನಾಶವಾಗುವದು. (೬೩)

ಅತಿಯೋಗವು ವೇಗದ ಉದೀರಣ-ಜನ್ಯ, ಮತ್ತು ನಿದ್ರಾಧಿಕ್ಯ-ಜನ್ಯ ಎಂದು ಎರಡು ಪ್ರಕಾರವು. ಮೊದಲನೆಯದು ರೋಗಾನುತ್ಪಾದನೀಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಎರಡನೆಯದು ಇಲ್ಲಿ ಹೇಳಲ್ಪಟ್ಟಿತು. ಇದರಂತೆ ಹೀನಯೋಗವು ನಿದ್ರಾವಿಧಾರಣ-ಜನ್ಯವೆಂದೂ, ನಿದ್ರಾವಿನಾಶ-ಜನ್ಯವೆಂದೂ ಎರಡು ಪ್ರಕಾರವು. ಮೊದಲನೆಯದು ರೋಗಾನುತ್ಪಾದನೀಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಎರಡನೆಯದನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

**ನಿದ್ರಾನಾಶಾದಂಗಮರ್ದಶಿರೋಗೌರವಜೃಂಭಿಕಾಃ ||**
**ಜಾಡ್ಯಗ್ಲಾನಿಭ್ರಮಾಪಕ್ತಿತಂದ್ರಾ ರೋಗಾಶ್ಚ ವಾತಜಾಃ ||೬೪||**

ಅರ್ಥ:— ನಿದ್ರೆಯ ನಾಶದಿಂದ ಮೈ-ಮುರಿಯೋಣ ತಲೆ-ಜಡವಾಗೋಣ ಆಕಳಿಕೆ ಜಾಡ್ಯ ಗ್ಲಾನಿ ಭ್ರಮ ಅಪಚನ ಆಲಸ್ಯ ಮತ್ತು ಇತರ ವಾತಜ ರೋಗಗಳು ಉಂಟಾಗುವವು. (೬೪)

**ಯಥಾಕಾಲಮತೋ ನಿದ್ರಾಂ ರಾತ್ರೌ ಸೇವೇತ ಸಾತ್ಮ್ಯತಃ ||**

ಅರ್ಥ:— ಆದ್ದರಿಂದ ಯೋಗ್ಯ ಕಾಲಕ್ಕೆ ರಾತ್ರಿಯಲ್ಲಿ ತನಗೆ ಮಾನಿಸುವಂತೆ ನಿದ್ರೆಯನ್ನು ಮಾಡಬೇಕು. (೬೪||)

**ಅಸಾತ್ಮ್ಯಜಾಗರಾದರ್ಧಂ ಪ್ರಾತಃ ಸ್ವಪ್ಯಾದಭುಕ್ತವಾನ್ ||೬೫||**

ಅರ್ಥ:— ತನ್ನ ರೂಢಿಯಕಿಂತ ಎಷ್ಟು ಹೆಚ್ಚು ಜಾಗರಣೆಯಾಗಿರುತ್ತದೆಯೋ ಅದರ ಅರ್ಧ ಕಾಲ ಹಗಲು ಏನೂ ತಿನ್ನದೆ ಮಲಗಬೇಕು. (೬೫)

**ಶೀಲಯೇನ್ಮಂದನಿದ್ರಸ್ತು ಕ್ಷೀರಮದ್ಯರಸಾನ್ ದಧಿ ||**
**ಅಭ್ಯಂಗೋದ್ವರ್ತನಸ್ನಾನಮೂರ್ಧಕರ್ಣಾಕ್ಷಿತರ್ಪಣಮ್ ೬೬||**

ಅರ್ಥ:— ಸರಿಯಾಗಿ ನಿದ್ದೆ ಬಾರದಿದ್ದವನು ಹಾಲು ಮದ್ಯ ಮಾಂಸರಸ ಮೊಸರುಗಳ ಸೇವನೆ, ಅಭ್ಯಂಗ, ಅನುಲೇಪನ, ಸ್ನಾನ, ತಲೆ ಕಿವಿಗಳಿಗೆ ಎಣ್ಣೆ ಉಣಿಸೋಣ, ಕಣ್ಣಿನ ಮೇಲೆ ಹಾಲಿನಲ್ಲಿ ಎದ್ದಿದ ಅರಿವೆಯನ್ನಿಡೋಣ-ಇವುಗಳನ್ನು ಮೇಲಿಂದ ಮೇಲೆ ಮಾಡಬೇಕು. (೬೬)

ಕಾಂತಾಬಾಹುಲತಾಶ್ಲೇಷೋ ನಿರ್ವೃತಿಃ ಕೃತಕೃತ್ಯತಾ ||
ಮನೋಽನುಕೂಲಾ ವಿಷಯಾಃ ಕಾಮಂ ನಿದ್ರಾಸುಖಪ್ರದಾಃ ||೬೭||

ಅರ್ಥಃ— ಹೆಂಡತಿಯ ಬಾಹುಗಳಿಂದ ಆಲಿಂಗನ, ಸೌಖ್ಯ, ನಿಶ್ಚಿಂತೆ, ಮನಸ್ಸಿಗೆ ಅನುಕೂಲವಾದ ವಿಷಯ — ಇವು ಯಥೇಷ್ಟವಾಗಿ ನಿದ್ರಾಸುಖವನ್ನು ಕೊಡುತ್ತವೆ.

ಟಿಪ್ಪಣಿ— ಆಲಿಂಗನ ಮಾತ್ರವೇ ಹೊರತು ಸಂಭೋಗವು ಹಿತಕರವಲ್ಲ. (೬೭)

ಬ್ರಹ್ಮಚರ್ಯರತೇರ್ಗ್ರಾಮ್ಯಸುಖನಿಃಸ್ಪೃಹಚೇತಸಃ ||
ನಿದ್ರಾ ಸಂತೋಷತೃಪ್ತಸ್ಯ ಸ್ವಂ ಕಾಲಂ ನಾತಿವರ್ತತೇ ||೬೮||

ಅರ್ಥ:— ಬ್ರಹ್ಮಚರ್ಯದಲ್ಲಿ ಆನಂದಬಡುವ, ಮೈಥುನಸುಖದಲ್ಲಿ ಅಭಿಲಾಷೆಯಿಲ್ಲದ, ಸಿಕ್ಕಷ್ಟರಿಂದ ತೃಪ್ತನಾದವನಿಗೆ ನಿದ್ರೆಯು ಯೋಗ್ಯ ಕಾಲಕ್ಕೆ ತಪ್ಪದೇ ಬರುವದು. (೬೮)

ಗ್ರಾಮ್ಯಧರ್ಮೇ ತ್ಯಜೇನ್ನಾರೀಮನುತ್ತಾನಾಂ ರಜಸ್ವಲಾಮ್ ||
ಅಪ್ರಿಯಾಮಪ್ರಿಯಾಚಾರಾಂ ದುಷ್ಟಸಂಕೀರ್ಣಮೇಹನಾಮ್||೬೯||

ಅತಿಸ್ಥೂಲಕೃಶಾಂ ಸೂತಾಂ ಗರ್ಭಿಣೀಮನ್ಯಯೋಷಿತಮ್ ||
ವರ್ಣಿನೀಮನ್ಯಯೋನಿಂ ಚ ಗುರುದೇವನೃಪಾಲಯಮ್ ||೭೦

ಚೈತ್ಯಶ್ಮಶಾನಾಽಽಯತನಚತ್ವರಾಂಬುಚತುಷ್ಪಥಮ್ ||
ಪರ್ವಾಣ್ಯನಂಗಂ ದಿವಸಂ ಶಿರೋಽಹೃದಯತಾಡನಮ್ ||೭೧||

ಅರ್ಥಃ— ಮೈಥುನಕರ್ಮದಲ್ಲಿ ಅಂಗಾತಳಿರದ, ರಜಸ್ವಲೆಯಾದ, ಅಪ್ರಿಯಳಾದ, ದುರಾಚಾರಿಯಾದ, ವ್ಯಾಧಿಯುಕ್ತ ಅಥವಾ ಸಂಕುಚಿತ ಯೋನಿಯುಳ್ಳ, ಅತಿ ಸ್ಥೂಲಳಾದ, ಅತಿ ಕೃಶಳಾದ, ಬಾಣಂತಿ ಅಥವಾ ಗರ್ಭಿಣಿಯಾದ, ಪರಸ್ತ್ರೀಯಾದ, ಬ್ರಹ್ಮಚಾರಿಣಿಯಾದ ಮತ್ತು ಅಮಾನುಷ ಸ್ತ್ರೀಯನ್ನೂ, ಗುರುಗಳ-ಮನೆ ದೇವಾಲಯ ಅರಮನೆ ಪೂಜ್ಯವಾದ-ವೃಕ್ಷ ಸ್ಮಶಾನ ವಧ-ಸ್ಥಾನ ಹರಟೆಯ-ಸ್ಥಳ ಜಲಾಶಯ ನಾಲ್ಕು-

ಪಾವಿಗಳು-ಕೂಡಿದ ಸ್ಥಳಗಳನ್ನು, ಪರ್ವಕಾಲಗಳನ್ನು, ಯೋನಿ ಹೊರತಾಗಿ ಇತರ ಅಂಗಗಳನ್ನು ಹಗಲನ್ನು. ತಲೆ ಎದೆಗಳಿಗೆ ತಾಡನೆಯನ್ನು ಬಿಡಬೇಕು. (೩೧)

**ಅತ್ಯಾಶಿತೋಽಧೃತಿಃ ಕ್ಷುದ್ವಾನ್ ದುಃಸ್ಥಿತಾಂಗಃ ಪಿಪಾಸಿತಃ ||**
**ಬಾಲೋ ವೃದ್ಧೋಽನ್ಯವೇಗಾರ್ತಸ್ತ್ಯಜೇದ್ರೋಗೀ ಚ ಮೈಥುನಮ್ ||೩೨||**

ಅರ್ಥ:— ಅಧಿಕ ಊಟಮಾಡಿದವನೂ ಮನಸ್ಸು ಸ್ವಸ್ಥವಿಲ್ಲದವನೂ ಹಸಿದವನೂ ಅವಯವಗಳನ್ನು ಡೊಂಕಾಗಿ ಇಟ್ಟವನೂ ನೀರಡಿಸಿದವನೂ ಹುಡುಗನೂ ವೃದ್ಧನೂ ಮಲಮೂತ್ರಾದಿ ವೇಗದಿಂದ ಪೀಡಿತನೂ ರೋಗಿಯೂ ಮೈಥುನವನ್ನು ಮಾಡಬಾರದು.

ಟಿಪ್ಪಣಿ:— ಬಾಲನೆಂದರೆ ೧೬ ವರ್ಷದ ಒಳಗಿನವನು. ವೃದ್ಧನೆಂದರೆ ೭೦ ವರ್ಷದ ಮೇಲಿನವನು. (೩೨)

**ಸೇವೇತ ಕಾಮತಃ ಕಾಮಂ ತೃಪ್ತೋ ವಾಜೀಕೃತಾಂ ಹಿಮೇ ||**
**ತ್ರ್ಯಹಾದ್ವಸಂತಶರದೋಃ ಪಕ್ಷಾದ್ವರ್ಷಾನಿದಾಘಯೋಃ ||೩೩||**

ಅರ್ಥ— ವಾಜೀಕರಣ ಔಷಧಗಳಿಂದ ಯಥೇಚ್ಛ ತೃಪ್ತನಾಗಿ ಹೇಮಂತ ಶಿಶಿರ ಋತುಗಳಲ್ಲಿ ಯಥೇಚ್ಛವಾಗಿಯೂ, ವಸಂತ ಶರದ್ ಋತುಗಳಲ್ಲಿ ೩ ದಿವಸಕ್ಕೊಮ್ಮೆಯೂ, ವರ್ಷಾ ಗ್ರೀಷ್ಮ ಋತುಗಳಲ್ಲಿ ೧೫ ದಿವಸಕ್ಕೊಮ್ಮೆಯೂ ಸ್ತ್ರೀ ಸಂಗವನ್ನು ಮಾಡಬೇಕು. (೩೩)

**ಭ್ರಮಕ್ಲಮೋರುದೌರ್ಬಲ್ಯ ಬಲಧಾತ್ವಿಂದ್ರಿಯಕ್ಷಯಾಃ ||**
**ಅಪರ್ವಮರಣಂ ಚ ಸ್ಯಾದನ್ಯಥಾ ಗಚ್ಛತಃ ಸ್ತ್ರಿಯಮ್ ||೩೪||**

ಅರ್ಥ:— ಈ ನಿಯಮವನ್ನು ಅನುಸರಿಸದೆ ಸ್ತ್ರೀ-ಸೇವನ ಮಾಡುವವನಿಗೆ ಭ್ರಮ ಗ್ಲಾನಿ ತೊಡೆಗಳಲ್ಲಿ-ದೌರ್ಬಲ್ಯ ಅಶಕ್ತತೆ ಧಾತು-ಕ್ಷಯ ಇಂದ್ರಿಯ-ದೌರ್ಬಲ್ಯ ಅಕಾಲಮರಣ-ಇವು ಉಂಟಾಗುತ್ತವೆ. (೩೪)

**ಸ್ಮೃತಿಮೇಧಾಯುರಾರೋಗ್ಯಪುಷ್ಟೀಂದ್ರಿಯಯಶೋಬಲೈಃ ||**
**ಅಧಿಕಾ ಮಂದಜರಸೋ ಭವಂತಿ ಸ್ತ್ರೀಷು ಸಂಯತಾಃ ||೩೫||**

ಅರ್ಥ:— ಮಿತಿಯಿಂದ ಸ್ತ್ರೀಸಂಗ ಮಾಡಿದವರು ಸ್ಮರಣಶಕ್ತಿ ಬುದ್ಧಿ ಆಯುಷ್ಯ ಆರೋಗ್ಯ ಪುಷ್ಟಿ ಶುಕ್ರ ಯಶಸ್ಸು ಇವುಗಳನ್ನು ಹೆಚ್ಚಾಗಿ ಪಡೆದವರೂ ತೀವ್ರ ಮುಪ್ಪು ಬಾರದವರೂ ಆಗುತ್ತಾರೆ.

ಟಿಪ್ಪಣಿ:— ಸಂಗ್ರಹದಲ್ಲಿ "ಮನಸ್ಸು ಮತ್ತು ಶರೀರಕ್ಕೆ ಹಿತವಾಗುವಷ್ಟು ಮಾತ್ರ ಮೈಥುನವನ್ನು ಸೇವಿಸಬೇಕು. ಅದರಲ್ಲಿ ಆಸಕ್ತನಾಗಬಾರದು. ಕಾಮ ವಿಕಾರದಿಂದ ಪೂರ್ಣನಾದವನು, ತರುಣನು, ಎಲ್ಲ ಅವಯವಗಳು ಸರಿಯಾಗಿದ್ದ ವನು, ಸುಗಂಧ ದ್ರವ್ಯಗಳನ್ನು ಹಚ್ಚಿಕೊಂಡವನು, ಮಲ-ಮೂತ್ರಾದಿಗಳನ್ನು ಮಾಡಿದವನು, ವಾಜೀಕರಣ ಔಷಧಗಳಿಂದ ತೃಪ್ತನಾಗಿ ಏಕಾಂತದಲ್ಲಿ ಸ್ತ್ರೀಯನ್ನು ಸೇವಿಸಬೇಕು. ಇಲ್ಲವಾದರೆ ದೃಷ್ಟಿ ಆಯುಷ್ಯ ಓಜಸ್ಸು ಮತ್ತು ಶುಕ್ರಗಳ ಕ್ಷಯ ವನ್ನೂ ಶಿಶ್ನ-ರೋಗಗಳನ್ನೂ ಹೊಂದುವನು. ಉತ್ತಾನದಿಂದ (ಅಂಗಾತ) ಮೈಥುನ ಮಾಡುವವನು, ವೇಗರೋಧಮಾಡುವವನು, ಮೈಥುನವನ್ನು ಮಾಡಿದರೆ ಅಂಡವೃದ್ಧಿ ಮೂತ್ರಾಶ್ಮರಿ ಮೂತ್ರ-ಶರ್ಕರೆ ಮುಂತಾದ ರೋಗಗಳನ್ನು ಹೊಂದು ವನು. ಶುಕ್ರವು ಶರೀರದ ಮುಖ್ಯ ತೇಜವೂ, ಆಹಾರ ರಸದ ಸಾರವೂ ಇದ್ದ ದರಿಂದ ಅದನ್ನು ಅವಶ್ಯವಾಗಿ ರಕ್ಷಿಸತಕ್ಕದ್ದು. ಅದರಿಂದ ಶರೀರವೂ ಸಂತತಿಯೂ ಉತ್ತಮವಾಗುವದು. ತಾತ್ಕಾಲಿಕ ಸುಖವನ್ನು ಕೊಡುವಂಥ ಪದಾರ್ಥಗಳಲ್ಲಿ ಆಸಕ್ತನಾಗದೆ ಅವನ್ನು ಸೇವಿಸಬೇಕು. ಪರಿಣಾಮದಲ್ಲಿ ಸುಖವನ್ನು ಕೊಡುವಂಥ ವಸ್ತುಗಳಲ್ಲಿ ಆಸಕ್ತನಾಗಿರಬೇಕು.

ಎಲ್ಲ ಪ್ರಾಣಿಗಳ ಆಯುಷ್ಯಕ್ಕೆ ದೈವ ಪೌರುಷಗಳು ಬೇಕು. ಪೂರ್ವ ಜನ್ಮದ ಕರ್ಮವೇ ದೈವವು. ದುರ್ಬಲವಾದ ದೈವವು ಪ್ರಬಲವಾದ ಪೌರುಷ ದಿಂದಲೂ, ದುರ್ಬಲ ಪೌರುಷವು ಪ್ರಬಲ ದೈವದಿಂದಲೂ ನಾಶವಾಗುತ್ತವೆ. ಆದ್ದರಿಂದ ಪ್ರಬಲ ಪೌರುಷದಿಂದ ದುಷ್ಟ ದೈವವನ್ನು ಹೊಡೆದು ಹಾಕಬೇಕು. ಮನುಷ್ಯನಿಗೆ ಒಂದು ಕಾಲ-ಮೃತ್ಯುವು, ನೂರು ಅಕಾಲ-ಮೃತ್ಯುಗಳು ಉಂಟೆಂದು ಹೇಳುವರು. ಚಲೋ ವೈದ್ಯ ಔಷಧ ಮುಂತಾದವುಗಳು ಇದ್ದರೂ ಆಗುವ ಮೃತ್ಯುವು ಕಾಲಜವೆಂದೂ ಉಳಿದವು ಅಕಾಲಜವೆಂದೂ ಹೇಳಲ್ಪಡುವವು. ಸ್ವಚ್ಛವಾದ ಎಣ್ಣೆ ಬತ್ತಿಗಳುಳ್ಳ ದೀಪವು ಸುಳಿಗಾಳಿಗಳಿಂದ ಪೀಡಿತವಾಗದಿದ್ದರೆ ಹೇಗೆ ಎಣ್ಣೆ ಇರುವ ವರೆಗೆ ಥಳಥಳವಾಗಿ ಬಾಳುವದೋ ಇಲ್ಲವಾದರೆ ಆಗಲೇ ತೀರುವದೋ ಅದರಂತೆ ಅಹಿತಗಳಿಂದ ದೇಹದ ಸ್ಥಿತಿ ಆಗುವದು. ಕಾರಣ ಹಿತದಲ್ಲಿ ಮನುಷ್ಯನು ಯತ್ನಮಾಡತಕ್ಕದ್ದು. ಅಂದರೆ ಅಕಾಲ ಮೃತ್ಯುವು ದೂರವಾಗು ವದು" ಎಂದು ವಿಶೇಷವಾಗಿ ಹೇಳಿದೆ. (೭೫)

ಸ್ನಾನಾನುಲೇಪನಹಿಮಾನಿಲಖಂಡಖಾದ್ಯ-
ಶೀತಾಂಬುದುಗ್ಧರಸಯೂಷಸುರಾಪ್ರಸನ್ನಾಃ ॥

ಸೇವೇತ ಚಾನು ಶಯನಂ ವಿರತೌ ರತಸ್ಯ
ತಸ್ಯೈವಮಾಶು ವಪುಷಃ ಪುನರೇತಿ ಧಾಮ ॥೭೬॥

ಅರ್ಥಃ— ಮೈಥುನದ ನಂತರ ಮಲಗುವದಕ್ಕಿಂತ ಮೊದಲು ಸ್ನಾನ ಅನುಲೇಪನ ತಣ್ಣಗಿನ-ಗಾಳಿ ಸಕ್ಕರೆ-ಪದಾರ್ಥ ತಣ್ಣೀರು ಹಾಲು ಮಾಂಸ-ರಸ ಕಟ್ಟು ಸುರೆ ತಿಳಿಯಾದ ಮದ್ಯಗಳನ್ನು ಸೇವಿಸಬೇಕು. ಹೀಗೆ ಮಾಡುವದರಿಂದ ಆ ಶರೀರದ ತೇಜವು ತಿರುಗಿ ಬರುವದು. (೭೬)

ಶ್ರುತಚರಿತಸಮೃದ್ಧೇ ಕರ್ಮದಕ್ಷೇ ದಯಾಲೌ ।
ಭಿಷಜಿ ನಿರನುಬಂಧಂ ದೇಹರಕ್ಷಾಂ ನಿವೇಶ್ಯ ॥

ಭವತಿ ವಿಪುಲತೇಜಃಸ್ವಾಸ್ಥ್ಯಕೀರ್ತಿಪ್ರಭಾವಃ ।
ಸ್ವಕುಶಲಫಲಭೋಗೀ ಭೂಮಿಪಾಲಶ್ಚಿರಾಯುಃ ॥೭೭॥

ಅರ್ಥಃ— ಶಾಸ್ತ್ರ ಮತ್ತು ಸದಾಚಾರದಿಂದ ಪೂರ್ಣನಾದ, ಕೆಲಸದಲ್ಲಿ ದಕ್ಷನಾದ, ದಯಾಳುವಾದ ವೈದ್ಯನಲ್ಲಿ ತನ್ನ ದೇಹರಕ್ಷಣದ ಭಾರವನ್ನು ಸಂಪೂರ್ಣವಾಗಿಟ್ಟರೆ ಅರಸನು ವಿಪುಲವಾದ ತೇಜಸ್ಸು ಶಾಂತಿ ಕೀರ್ತಿ ಪ್ರಭಾವಗಳುಳ್ಳವನೂ, ತನ್ನ ಪುಣ್ಯದ ಫಲವನ್ನು ಭೋಗಿಸುವವನೂ, ಚಿರಾಯುವೂ ಆಗುವನು.

ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇಽನ್ನ
ರಕ್ಷಾ ನಾಮ ಸಪ್ತಮೋಽಧ್ಯಾಯಃ ಸಮಾಪ್ತಃ ।

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯ ರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ' ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ ಅನ್ನರಕ್ಷಾ ಎಂಬ ೭ನೆಯ ಅಧ್ಯಾಯವು ಮುಗಿದುದು.

# ೮ನೆಯ ಅಧ್ಯಾಯವು

ವಿಷದಿಂದ ಕೂಡದಿದ್ದರೂ ಅನ್ನವು ಯೋಗ್ಯ ವಿಧಿ-ಪ್ರಮಾಣಗಳಲ್ಲಿ ಸೇವಿಸದಿದ್ದರೆ ಅಪಾಯವನ್ನುಂಟುಮಾಡುವದು. ಆದ್ದರಿಂದ ಆಹಾರದ ವಿಧಿ ಪ್ರಮಾಣಗಳನ್ನು ಹಾಗೂ ವಿಧಿ-ಪ್ರಮಾಣಗಳಲ್ಲಿ ಹೆಚ್ಚು ಕಡಿಮೆಯಾದರೆ ಆಗುವ ಅಪಾಯಗಳನ್ನು ಪ್ರತೀಕಾರ ಸಹಿತ ಹೇಳುತ್ತಾರೆ.

**ಅಥಾತೋ ಮಾತ್ರಾಶಿತೀಯಮಧ್ಯಾಯಂ ವ್ಯಾಖ್ಯಾಸ್ಯಾಮಃ ॥**

ಅರ್ಥ— ಇನ್ನು ಮೇಲೆ ಮಾತ್ರಾಶಿತೀಯ (ಮಿತಾಹಾರ ವಿಷಯುಕವಾದ) ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ॥**

ಅರ್ಥಃ— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದ್ದಾರೆ.

**ಮಾತ್ರಾಶೀ ಸರ್ವಕಾಲಂ ಸ್ಯಾನ್ಮಾತ್ರಾ ಹ್ಯಗ್ನೇಃ ಪ್ರವರ್ತಿಕಾ**
**ಮಾತ್ರಾಂ ದ್ರವ್ಯಾಣ್ಯಪೇಕ್ಷಂತೇ ಗುರೂಣ್ಯಪಿ ಲಘೂನ್ಯಪಿ ॥೧॥**

ಅರ್ಥಃ— ಯಾವಾಗಲೂ ಮಿತಿಯಿಂದ ಊಟ ಮಾಡತಕ್ಕದ್ದು. ಮಿತಿಯೇ ಅಗ್ನಿಯನ್ನು ತನ್ನ ಕ್ರಿಯೆಯಲ್ಲಿ ಪ್ರವರ್ತಿಸುವದು. ದ್ರವ್ಯಗಳು ಗುರುವೇ ಇರಲಿ ಅಥವಾ ಲಘುವೇ ಇರಲಿ ಅವಕ್ಕೆ ಪ್ರಮಾಣ ಇರುತ್ತದೆ.

**ಟಿಪ್ಪಣಿ:**— ಮಾತ್ರಾ ಶಬ್ದದಿಂದ ಇಲ್ಲಿ ಸಮ್ಯಗ್ಯೋಗವನ್ನು ಹಿಡಿಯಬೇಕು. ಅಸಮ್ಯಗ್ಯೋಗವನ್ನು ಬಿಡುವದರಿಂದಲೇ ಸಮ್ಯಗ್ಯೋಗವಾಗುವದು. ಅಸಮ್ಯಗ್ಯೋಗವು-ಸಂಕೀರ್ಣಾಶನ, ವಿರುದ್ಧಾಶನ, ಅಮಾತ್ರಾಶನ, ಅಜೀರ್ಣಾಶನ, ಸಮಶನ, ಅಧ್ಯಶನ, ವಿಷಮಾಶನ,—ಎಂದು ೭ ಪ್ರಕಾರ ಇರುತ್ತದೆ. ನಿಷಿದ್ಧರ ಮನೆಯಲ್ಲಿ ನಿಷಿದ್ಧ ಪದಾರ್ಥದೊಡನೆ ಅಥವಾ ನಿಷಿದ್ಧವಾದ ಅನ್ನವನ್ನು ತಿನ್ನುವದು—ಸಂಕೀರ್ಣಾಶನವು. ವಿರುದ್ಧಾಶನವು ಹಿಂದಿನ ಅಧ್ಯಾಯದಲ್ಲಿ ಹೇಳಲಾಗಿದೆ. ಪ್ರಮಾಣಯುಕ್ತವಾಗಿದ್ದರೂ ಪಚನವಾಗದಿದ್ದುದು —ಅಜೀರ್ಣಾಶನವು. ಉಳಿದವುಗಳ ಅರ್ಥವನ್ನು ಈ ಅಧ್ಯಾಯದಲ್ಲಿ ಮುಂದೆ ಹೇಳುತ್ತಾರೆ. (೧)

**ಗುರೂಣಾಮರ್ಧಸೌಹಿತ್ಯಂ ಲಘೂನಾಂ ನಾತಿತೃಪ್ತತಾ ||**
**ಮಾತ್ರಾಪ್ರಮಾಣಂ ನಿರ್ದಿಷ್ಟಂ ಸುಖಂ ಯಾವದ್ವಿಜೀರ್ಯತಿ ||೨||**

ಅರ್ಥ:— ಜಡ ವಸ್ತುಗಳ ಪ್ರಮಾಣವೆಂದರೆ ಅರ್ಧ ತೃಪ್ತಿಯು. ಅತಿ ತೃಪ್ತಿಯಾಗದಂತೆ ತಿನ್ನೋಣವು ಲಘು ದ್ರವ್ಯಗಳ ಪ್ರಮಾಣವು. ಸಾರಾಂಶ:—ಎಷ್ಟು ತಿಂದರೆ ಸುಖವಾಗಿ ಪಚನವಾಗುವದೋ ಅದೇ ಒಂದು ಊಟದ ಪ್ರಮಾಣವು.

**ಟಿಪ್ಪಣಿ:—** "ಮಾತ್ರಾಪ್ರಮಾಣ" ಎಂಬಲ್ಲಿಯು "ಮಾತ್ರಾ" ಶಬ್ದದ ಅರ್ಥವು ಒಂದು ವೇಳೆಗೆ ಬೇಕಾಗುವ ದ್ರವ್ಯ (Dose) ಎಂಬ ಅರ್ಥದಲ್ಲಿದ್ದದರಿಂದ ದ್ವಿರುಕ್ತಿ ದೋಷ ಬಾರದು. (೨)

**ಭೋಜನಂ ಹೀನಮಾತ್ರಂ ತು ನ ಬಲೋಪಚಯೌಜಸೇ ||**
**ಸರ್ವೇಷಾಂ ವಾತರೋಗಾಣಾಂ ಹೇತುತಾಂ ಚ ಪ್ರಪದ್ಯತೇ ||೩||**

ಅರ್ಥ:— ಹಸಿವೆಗಿಂತ ಕಡಿಮೆ ಪ್ರಮಾಣದ ಊಟವು ಶಕ್ತಿ-ಪೋಷಣಗಳನ್ನು ಮತ್ತು ಓಜಸ್ಸುಗಳನ್ನು ಉಂಟು ಮಾಡುವದಿಲ್ಲ. ಮತ್ತು ಯಾವತ್ತೂ ವಾತ ರೋಗಗಳಿಗೆ ಕಾರಣವಾಗುತ್ತದೆ. (೩)

**ಅತಿಮಾತ್ರಂ ಪುನಃ ಸರ್ವಾನಾಶು ದೋಷಾನ್ ಪ್ರಕೋಪಯೇತ್||**

ಅರ್ಥ:— ಮಿತಿಮೀರಿದ ಊಟವು ಯಾವತ್ತೂ ದೋಷಗಳನ್ನು ಕೂಡಲೇ ಕುಪಿತಮಾಡುತ್ತದೆ. (೩||)

**ಪೀಡ್ಯಮಾನಾ ಹಿ ವಾತಾದ್ಯಾ ಯುಗಪತ್ತೇನ ಕೋಪಿತಾಃ ||೪||**

**ಆಮೇನಾನ್ನೇನ ದುಷ್ಟೇನ ತದೇವಾವಿಶ್ಯ ಕುರ್ವತೇ ||**
**ವಿಷ್ಟಂಭಯಂತೋಽಲಸಕಂ ಚ್ಯಾವಯಂತೋ ವಿಸೂಚಿಕಾಮ್ ||೫||**

**ಅಧರೋತ್ತರಮಾರ್ಗಾಭ್ಯಾಂ ಸಹಸೈವಾಜಿತಾತ್ಮನಃ ||**

ಅರ್ಥ:— ಇಂದ್ರಿಯ ನಿಗ್ರಹವಿಲ್ಲದವನ (ಅತ್ಯನ್ನ ತಿನ್ನುವದರಿಂದುಂಟಾದ) ಅಪಕ್ವ ದುಷ್ಟ ಅನ್ನದಿಂದ ಕುಪಿತವಾದ ಪ್ರತಿಬಂಧಿಸಲ್ಪಟ್ಟ

ವಾತಾದಿ ದೋಷಗಳು ಅದೇ ಅನ್ನವನ್ನು ಪ್ರವೇಶಿಸಿ ಸ್ರೋತಸ್ಸಿನಲ್ಲಿ ಅನ್ನವನ್ನು ತಡೆದು ಅಲಸಕ ಎಂಬ ರೋಗವನ್ನು ಅಥವಾ ಮೇಲಿನ ಕೆಳಗಿನ ಮಾರ್ಗದಿಂದ ಒಮ್ಮಿಂದೊಮ್ಮೆ ಆ ಅನ್ನವನ್ನು ಕೆಡವುತ್ತ ವಿಸೂಚಿಕೆ ಎಂಬ ರೋಗವನ್ನುಂಟುಮಾಡುತ್ತವೆ. (೫||)

**ಪ್ರಯಾತಿ ನೋರ್ಧ್ವಂ ನಾಧಸ್ತಾದಾಹಾರೋ ನ ಚ ಪಚ್ಯತೇ ||೬||**

**ಆಮಾಶಯೇಽಲಸೀಭೂತಸ್ತೇನ ಸೋಽಲಸಕಃ ಸ್ಮೃತಃ ||**

ಅರ್ಥ:-- ಅನ್ನವು ಮೇಲೆಯೂ ಹೋಗುವದಿಲ್ಲ (ವಾಂತಿಯಾಗುವದಿಲ್ಲ); (ರೇಚವಾಗಿ) ಕೆಳಗೂ ಹೋಗುವದಿಲ್ಲ; ಪಚನವೂ ಆಗುವದಿಲ್ಲ. ಆಮಾಶಯದಲ್ಲಿ ಆಲಸ್ಯವುಳ್ಳವನಂತೆ ಆ ಅನ್ನವು ಕೂಡುತ್ತದೆ. ಆದ್ದರಿಂದ ಇದಕ್ಕೆ ಅಲಸಕವೆಂಬ ಹೆಸರು. (೬||)

**ವಿವಿಧೈರ್ವೇದನೋದ್ಭೇದೈರ್ವಾಯ್ವಾದಿಭೃಶಕೋಪತಃ ||೭||**

**ಸೂಚೀಭಿರಿವ ಗಾತ್ರಾಣಿ ವಿಧ್ಯತೀತಿ ವಿಷೂಚಿಕಾ||**

ಅರ್ಥ:— ವಾತ ಮೊದಲಾದ ದೋಷಗಳ ಅತ್ಯಂತ ಕೋಪದಿಂದ ಅನೇಕ ವೇದನೆಗಳನ್ನುಂಟುಮಾಡಿ ಶರೀರವನ್ನು ಸೂಜಿಯಂತೆ ಚುಚ್ಚುತ್ತದೆ. ಆದ್ದರಿಂದ ಅದಕ್ಕೆ ವಿಷೂಚಿಕೆ ಎಂದು ಹೆಸರು. (೭||)

**ತತ್ರ ಶೂಲಭ್ರಮಾನಾಹಕಂಪಸ್ತಂಭಾದಯೋಽನಿಲಾತ್ ||೮||**

**ಪಿತ್ತಾಜ್ಜ್ವರಾತಿಸಾರಾಂತರ್ದಾಹತೃಟ್ಪ್ರಲಯಾದಯಃ ||**

**ಕಫಾಚ್ಛರ್ದ್ಯಂಗಗುರುತಾವಾಕ್ಸಂಗಷ್ಠೀವನಾದಯಃ ||೯||**

ಅರ್ಥ:— ಅವರಲ್ಲಿ ವಾತದಿಂದ ಶೂಲ ಭ್ರಮೆ ಹೊಟ್ಟೆಯುಬ್ಬು, ಕಂಪ ಸೆಟೆ ಮುಂತಾದವುಗಳೂ ಪಿತ್ತದಿಂದ ಜ್ವರ ಅತಿಸಾರ ಅಂತರ್ದಾಹ ನೀರಡಿಕೆ ಮೂರ್ಛೆ ಮುಂತಾದವುಗಳೂ, ಕಫದಿಂದ ವಾಂತಿ ಮೈ-ಜಡವಾಗೋಣ ಮಾತು-ತಟ್ಟೆಸೋಣ ಕಫ-ಉಗುಳೋಣ ಮುಂತಾದ ವಿಕಾರಗಳೂ ಉಂಟಾಗುತ್ತವೆ.

ಟಿಪ್ಪಣಿ.— ವಿಷೂಚಿಕೆಯು ವಾತಿಕ, ಪೈತ್ತಿಕ, ಶ್ಲೈಷ್ಮಿಕ–ಎಂದು ಮೂರು ವಿಧವಾಗಿರುವದು ಎಂದು ಈ ಶ್ಲೋಕದ ಆಶಯವಲ್ಲ. ಆದರೆ ಆದರಲ್ಲಿ ಇರುವ ಯಾವ ಯಾವ ವಿಕಾರಗಳು ಯಾವ ಯಾವ ದೋಷಗಳಿಂದ ಉಂಟಾಗುತ್ತವೆ ಎಂಬುವನ್ನು ವಿದ್ಯಾರ್ಥಿಗಳಿಗೆ ತಿಳಿಸುವದಕ್ಕಾಗಿ ಹೀಗೆ ಹೇಳಿದ್ದಾರೆ.

ಮೂರ್ಛಾತಿಸಾರೌ ವಮಥುಃ ಪಿಪಾಸಾ ಶೂಲಭ್ರಮೋದ್ವೇಷ್ಟನಜೃಂಭದಾಹಾಃ ॥
ವೈವರ್ಣ್ಯಕಂಪೌ ಹೃದಯೇ ರುಜಶ್ಚ ಭವಂತಿ ತಸ್ಯಾಂ ಶಿರಸಶ್ಚ ಭೇದಃ ॥

ಎಂದು ಸುಶ್ರುತದಲ್ಲಿ ವಿಷೂಚಿಕೆಯ ಲಕ್ಷಣವನ್ನು ಹೇಳಿದ್ದಾರೆ. (೯)

**ವಿಶೇಷಾದ್ದುರ್ಬಲಸ್ಯಾಲ್ಪವಹ್ನೇರ್ವೇಗವಿಧಾರಿಣಃ ॥**
**ಪೀಡಿತಂ ಮಾರುತೇನಾನ್ನಂ ಶ್ಲೇಷ್ಮಣಾ ರುದ್ಧಮಂತರಾ ॥೧೦॥**

**ಅಲಸಂ ಕ್ಷೋಭಿತಂ ದೋಷೈಃ ಶಲ್ಯತ್ವೇನೈವ ಸಂಸ್ಥಿತಮ್ ॥**
**ಶೂಲಾದೀನ್ ಕುರುತೇ ತೀವ್ರಾಂಶ್ಛರ್ದ್ಯತೀಸಾರವರ್ಜಿತಾನ್ ॥೧೧॥**

**ಸೋಽಲಸಃ**

ಅರ್ಥ:— ವಿಶೇಷವಾಗಿ ಬಲಹೀನನ, ಮಂದಾಗ್ನಿಯುಳ್ಳ, ವೇಗ ಧಾರಣಮಾಡುವಂಥವನ ಅನ್ನವು ವಾಯುವಿನಿಂದ ಪೀಡಿತವಾಗಿ ಕಫದಿಂದ ನಡುವೇ ಪ್ರತಿಬಂಧಿಸಲ್ಪಟ್ಟು ದೋಷಗಳಿಂದ ಕ್ಷೋಭಿತವಾಗುವದರಿಂದ ಶಲ್ಯದಂತೆ ಆಗಿ ಆಮಾಶಯದಲ್ಲಿಯೇ ಕೂತ ಆ ಅನ್ನವು ವಾಂತಿ-ಭ್ರಾಂತಿಗಳನ್ನುಂಟುಮಾಡದೇ ತೀವ್ರವಾದ ಶೂಲ ಮೊದಲಾದವುಗಳನ್ನುಂಟುಮಾಡುತ್ತದೆ. ಅದು ಅಲಸವು. (೧೧)

**ಅತ್ಯರ್ಥದುಷ್ಟಾಸ್ತು ದೋಷಾ ದುಷ್ಟಾಮಬದ್ಧಖಾಃ**
**ಯಾಂತಸ್ತಿರ್ಯಕ್ತನುಂ ಸರ್ವಾಂ ದಂಡವತ್ಸ್ತಂಭಯಂತಿ ಚೇತ್**
**॥೧೨॥**

**ದಂಡಕಾಲಸಕಂ ನಾಮ ತಂ ತ್ಯಜೇದಾಶುಕಾರಿಣಮ್ ॥**

ಅರ್ಥ:— ದುಷ್ಟವಾದ ಆಮದಿಂದ ಸ್ರೋತಸ್ಸುಗಳಲ್ಲಿ ಪ್ರತಿಬದ್ಧವಾದ ಅತ್ಯಂತ ದುಷ್ಟ ದೋಷಗಳು ಅಡ್ಡಹೋಗುತ್ತ ಯಾವತ್ತೂ ಶರೀರ

ವನ್ನು ದಂಡದಂತೆ ಸೆಟಿಸಿದರೆ ಅದಕ್ಕೆ ದಂಡಕಾಲಸಕ ಎಂಬ ಹೆಸರು. ಇದು ಶೀಘ್ರ ಪ್ರಾಣಹಾರಕವಾದ್ದರಿಂದ ಇದರ ಉಪಚಾರ ಮಾಡಬಾರದು. (೧೨)

**ವಿರುದ್ಧಾಧ್ಯಶನಾಜೀರ್ಣಶೀಲಿನೋ ವಿಷಲಕ್ಷಣಮ್ ॥೧೩॥**

**ಆಮದೋಷಂ ಮಹಾಘೋರಂ ವರ್ಜಯೇದ್ವಿಷಸಂಜ್ಞಕಮ್ ॥**
**ವಿಷರೂಪಾಶುಕಾರಿತ್ವಾದ್ವಿರುದ್ಧೋಪಕ್ರಮತ್ವತಃ ॥೧೪॥**

ಅರ್ಥಃ— ವಿರುದ್ಧಾಹಾರ ಅಧ್ಯಶನ ಅಜೀರ್ಣದ ರಾಟಿಯುಳ್ಳವನಿಗೆ ವಿಷದ ಲಕ್ಷಣವುಳ್ಳ ವಿಷಾಜೀರ್ಣವೆಂಬ ಹೆಸರಿನ ಮಹಾ ಭಯಂಕರವಾದ ಆಮದೋಷವು ಉಂಟಾಗುತ್ತದೆ. ಇದು ವಿಷರೂಪವಿದ್ದದರಿಂದಲೂ ಶೀಘ್ರಕಾರಿಯಿದ್ದದರಿಂದಲೂ ವಿರುದ್ಧ ಚಿಕಿತ್ಸೆ ಮಾಡಬೇಕಾದ್ದರಿಂದಲೂ ವರ್ಜ್ಯವು.

**ಟಿಪ್ಪಣಿಃ—** ಕೇವಲ ವಿಷರೂಪವಾಗಿದ್ದರೂ ಇದು ಸಾಧ್ಯವಾಗಬಹುದಾಗಿತ್ತು; ಆದರೆ ಹಾಗಲ್ಲ. ಹೇತುವಿರುದ್ಧ ಚಿಕಿತ್ಸೆ ಮಾಡಬೇಕಾದರೆ ಹೇತುವಾದ ಆಮಕ್ಕೆ ಉಷ್ಣ ಚಿಕಿತ್ಸೆ ಮಾಡಬೇಕಾಗುವದು. ಆದು ವಿಷರೂಪವಾದ ಇದಕ್ಕೆ ಹಿತಕರವಲ್ಲ. ವಿಷರೂಪವೆಂದು (ವ್ಯಾಧಿವಿರುದ್ಧ) ಶೀತ ಉಪಚಾರ ಮಾಡಹೋದರೆ ಆದು ಆಮಕ್ಕೆ ವಿರುದ್ಧವು. ಆದ್ದರಿಂದ ಇದು ವರ್ಜ್ಯವು ಎಂಬ ಭಾವವು. (೧೪)

**ಅಥಾಮಮಲಸೀಭೂತಂ ಸಾಧ್ಯಂ ತ್ವರಿತಮುಲ್ಲಿಖೇತ್ ॥**
**ಪೀತ್ವಾ ಸೋಗ್ರಾಪಟುಫಲಂ ವಾರ್ಯುಷ್ಣಂ ಯೋಜಯೇತ್ತತಃ ॥೧೫॥**

**ಸ್ವೇದನಂ ಫಲವರ್ತಿಂ ಚ ಮಲವಾತಾನುಲೋಮನೀಮ್ ॥**
**ನಾಮ್ಯಮಾನಾನಿ ಚಾಂಗಾನಿ ಭೃಶಂ ಸ್ವಿನ್ನಾನಿ ವೇಷ್ಟಯೇತ್ ॥೧೬॥**

ಅರ್ಥಃ— ಅಲಸವಾದ ಆಮವು ಸಾಧ್ಯವಿದ್ದರೆ ತೀವ್ರವಾಗಿ ಬಜೆ ಸೈಂಧವ ಮದನ-ಫಲಗಳನ್ನು ಬಿಸಿ ನೀರಿನೊಡನೆ ಕೊಟ್ಟು ವಾಂತಿ ಮಾಡಿಸಬೇಕು. ಆಮೇಲೆ ಕಾಸಬೇಕು. ಮತ್ತು ಮಲವಾತಗಳ ಅನುಲೋಮನ ಮಾಡುವ ಫಲವರ್ತಿಯನ್ನು ಉಪಯೋಗಿಸಬೇಕು. ಹಾಗೂ ಸೆಟೆಯುವ ಅವಯವಗಳನ್ನು ಚೆನ್ನಾಗಿ ಕಾಸಿ ಅರಿವೆಯಿಂದ ಸುತ್ತಬೇಕು.

ಟಿಪ್ಪಣಿ — ಹೀಗೆಯೇ ಗ್ರಂಥಾಂತರದಲ್ಲಿ ಹೀಗೆ ಹೇಳಲ್ಪಟ್ಟಿದೆ.
"ವಿಪಾಚ್ಯ ಮೂತ್ರಪಿಷ್ಟ ಮಧೂಕದಂತೀಬೀಜಕೃಷ್ಣಾಬಿಡಧೂಮಕುಷ್ಠೈಃ ||
ವರ್ತಿಃ ಕರಾಂಗುಷ್ಠನಿಭಾ ಘೃತಾಕ್ತಾಂ ಗುದೇ ರುಜಾನಾಹಹರೀಂ ವಿದಧ್ಯಾತ್ ||"

ವಿಷೂಚ್ಯಾಮತಿವೃದ್ಧಾಯಾಂ ಪಾರ್ಷ್ಣ್ಯೋರ್ದಾಹಃ ಪ್ರಶಸ್ಯತೇ ||
ತದಹಶ್ಚೋಪವಾಸ್ಯೈನಂ ವಿರಿಕ್ತವದುಪಾಚರೇತ್ ||೧೭||

ಅರ್ಥ — ವಿಷೂಚಿಕೆಯು ಬಹಳ ಹೆಚ್ಚಾಗಿ ಬೆಳೆದಿದ್ದರೆ ಹಿಂಬ ಡಕ್ಕೆ ದಾಹ ಕೊಡುವದು ಯೋಗ್ಯವು. ಮತ್ತು ಆ ದಿವಸ ಅವನಿಗೆ ಉಪವಾಸ ಮಾಡಿಸಿ, ರೇಚಕ ತೆಗೆದುಕೊಂಡವನಿಗೆ ಉಪಚಾರ ಮಾಡು ವಂತೆ ಉಪಚಾರ ಮಾಡಬೇಕು.

ತೀವ್ರಾರ್ತಿರಪಿ ನಾಜೀರ್ಣೀ ಪಿಬೇಚ್ಛೂಲಘ್ನಮೌಷಧಮ್ ||
ಆಮಸನ್ನೋಽನಲೋ ನಾಲಂ ಪಕ್ತುಂ ದೋಷೌಷಧಾಶನಮ್ ||೧೮||

ಅರ್ಥ — ಅಜೀರ್ಣವಾದವನಿಗೆ ಬಹಳ ವೇದನೆಯಿದ್ದರೂ ಶೂಲ ನಾಶಕ ಔಷಧಗಳನ್ನು ಕೊಡಬಾರದು. ಯಾಕೆಂದರೆ ಆಮದಿಂದ ನಷ್ಟ ವಾದ ಅಗ್ನಿಯು ದೋಷ ಔಷಧ ಅನ್ನಗಳನ್ನು ಪಚನಮಾಡಲಿಕ್ಕೆ ಸಮರ್ಥ ವಾಗದು. (೧೮)

ನಿಹನ್ಯಾದಪಿ ಚೈತೇಷಾಂ ವಿಭ್ರಮಃ ಸಹಸಾಽಽತುರಮ್ ||

ಅರ್ಥ — ಅಂಥ ಔಷಧ ಕೊಟ್ಟರೆ ಅದರಿಂದ ಉಂಟಾದ ದೋಷ ಔಷಧ ಅನ್ನಗಳ ಕ್ಷೋಭೆಯು ಬೇನೆಯುವನನ್ನು ಸಹಸಾ ಕೊಲ್ಲಬಹುದು. (೧೮||)

ಜೀರ್ಣಾಶಿನೋ ಚ ಭೈಷಜ್ಯಂ ಯುಂಜ್ಯಾತ್ ಸ್ತಬ್ಧಗುರೂದರೇ ||೧೯||
ದೋಷಶೇಷಸ್ಯ ಪಾಕಾರ್ಥಮಗ್ನೇಃ ಸಂಧುಕ್ಷಣಾಯ ಚ ||

ಅರ್ಥ — ಅನ್ನವು ಜೀರ್ಣವಾಗಿ ಹೊಟ್ಟೆಯು ಸ್ತಬ್ಧ ಮತ್ತು ಜಡವಿದ್ದಾಗ ಉಳಿದ ದೋಷಗಳ ಪಾಕಕ್ಕಾಗಿ ಮತ್ತು ಅಗ್ನಿಯು ಪ್ರಜ್ವಲಿತ ವಾಗುವದಕ್ಕಾಗಿ (ಪಾಚನ) ಔಷಧವನ್ನು ಕೊಡಬೇಕು.

ಟಿಪ್ಪಣೀ— ಅನ್ನ ಜೀರ್ಣವಾದ ಲಕ್ಷಣವು ಸಂಗ್ರಹದಲ್ಲಿ ಹೇಳಿದೆ.

ಉದ್ಗಾರಶುದ್ಧಿರುತ್ಸಾಹೋ ವೇಗೋತ್ಸರ್ಗೋ ಯಥೋಚಿತಃ
ಲಘುತಾ ಕ್ಷುತ್ಪಿಪಾಸಾ ಚ ಜೀರ್ಣಾಹಾರಸ್ಯ ಲಕ್ಷಣಮ್ ॥

ಕೆಲವು ಕಳ್ಳ-ಹಸಿವೆಯಾಗುವದು ಅದನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಇಲ್ಲವಾದರೆ ಅಪಾಯವಾಗುವದೆಂದೂ ಹೇಳಿರುವರು.

ದೋಷೋಪನದ್ಧಂ ಯದಿ ಲೀನಮಾಮಂ ಪಿತ್ತೋಲ್ಬಣಸ್ಯಾನ್ನಕಣಾಯಾನ್ನವಹ್ನಿಮ್
ಜಾಯೇತ ದುಷ್ಟಾ ತು ತದಾ ಬುಭುಕ್ಷಾ ಸಾ ಮಂದಬುದ್ಧೀನ್ ವಿಷವನ್ನಿಹಂತಿ ॥

(೧೯)

ಶಾಂತಿರಾಮವಿಕಾರಾಣಾಂ ಭವತಿ ತ್ವಪತರ್ಪಣಾತ್ ॥೨೦॥

ತ್ರಿವಿಧಂ ತ್ರಿವಿಧೇ ದೋಷೇ ತತ್ಸಮೀಕ್ಷ್ಯ ಪ್ರಯೋಜಯೇತ್ ॥

ಅರ್ಥಃ— ಲಂಘನದಿಂದ ಆಮ ವಿಕಾರಗಳು ಶಾಂತವಾಗುತ್ತವೆ. ಕಾರಣ ಮೂರೂ ಪ್ರಕಾರದ ದೋಷಗಳ ಮೇಲೆ ದೇಶ ಕಾಲಾದಿಗಳನ್ನು ಆಲೋಚಿಸಿ ಮೂರು ಪ್ರಕಾರದ ಲಂಘನವನ್ನು ಪ್ರಯೋಗಿಸಬೇಕು.

(೨೦॥)

ತತ್ರಾಲ್ಪೇ ಲಂಘನಂ ಪಥ್ಯಂ ಮಧ್ಯೇ ಲಂಘನಪಾಚನಮ್ ॥೨೧॥

ಪ್ರಭೂತೇ ಶೋಧನಂ, ತದ್ಧಿ ಮೂಲಾದುನ್ಮೂಲಯೇನ್ಮಲಾನ್ ॥

ಅರ್ಥಃ— ಅದರಲ್ಲಿ ಅಲ್ಪದೋಷದ ಮೇಲೆ ಉಪವಾಸವು ಸಾಕಾಗುವದು. ಮಧ್ಯಮ ದೋಷದ ಮೇಲೆ ಉಪವಾಸಮಾಡಿಸಿ ಪಾಚಕ ಔಷಧವನ್ನು ಕೊಡಬೇಕು. ಬಹಳ ದೋಷದ ಮೇಲೆ ಶೋಧನವು ಹಿತಕರವು. ಅದು ಮಲಗಳ ಮೂಲವನ್ನೇ ಕಿತ್ತುಒಗೆಯುವದು. (೨೧॥)

ಏವಮನ್ಯಾನಪಿ ವ್ಯಾಧೀನ್ ಸ್ವನಿದಾನವಿಪರ್ಯಯಾತ್ ॥೨೨॥

ಚಿಕಿತ್ಸೇದನುಬಂಧೇ ತು ಸತಿ ಹೇತುವಿಪರ್ಯಯಮ್ ॥
ತ್ಯಕ್ತ್ವಾ ಯಥಾಯಥಂ ವೈದ್ಯೋ ಯುಂಜ್ಯಾದ್ವ್ಯಾಧಿ
ವಿಪರ್ಯಯಮ್ ॥೨೩॥

ಅರ್ಥ:— ಇದರಂತೆ ಬೇರೆ ಬೇರೆ ಬೇನೆಗಳನ್ನು ಅದರ ಕಾರಣದ ವಿರುದ್ಧೋಪಚಾರದಿಂದ ಗೆಲ್ಲಬೇಕು. ಬೇನೆಯು ಇದರಿಂದ ನಿಲ್ಲದೇ ಹೋದರೆ ವೈದ್ಯನು ಕಾರಣ-ವಿರುದ್ಧ ಔಷಧವನ್ನು ಬಿಟ್ಟು ಆಯಾ ವ್ಯಾಧಿ ವಿಪರೀತ ಔಷಧವನ್ನು ಕೊಡಬೇಕು. (೨೩)

**ತದರ್ಥಕಾರಿ ವಾ. ಪಕ್ವೇ ದೋಷೇ ತ್ವಿದ್ಧೇ ಚ ಪಾವಕೇ ॥**
**ಹಿತಮಭ್ಯಂಜನಸ್ನೇಹಪಾನಬಸ್ತ್ಯಾದಿ ಯುಕ್ತಿತಃ ॥೨೪॥**

ಅರ್ಥ:— ಅಥವಾ ರೋಗನಾಶಕವಾದ ಬೇರೆ ಚಿಕಿತ್ಸೆಯನ್ನು ಮಾಡಬೇಕು. ದೋಷವು ಪಕ್ವವಾಗಿ ಅಗ್ನಿಯು ಪ್ರಜ್ವಲಿತವಾಗಲು ಯೋಗ್ಯ ಅಭ್ಯಂಗ ಸ್ನೇಹ-ಪಾನ ಬಸ್ತಿ ಮುಂತಾದ್ದನ್ನು ಯೋಜಿಸಬೇಕು. (೨೪)

ಅಗ್ನಿಯ ವಿರುದ್ಧವಾದ್ದರಿಂದ ಕಫದ ಅಜೀರ್ಣವನ್ನು ಮೊದಲು ಹೇಳುತ್ತಾರೆ.

**ಅಜೀರ್ಣಂ ಚ ಕಫಾದಾಮಂ ತತ್ರ ಶೋಫೋಽಕ್ಷಿಗಂಡಯೋಃ ॥**
**ಸದ್ಯೋ ಭುಕ್ತ ಇವೋದ್ಗಾರಃ ಪ್ರಸೇಕೋತ್ಕ್ಲೇಶಗೌರವಮ್ ॥೨೫॥**

ಅರ್ಥ:— ಕಫದಿಂದ ಆಮವೆಂಬ ಅಜೀರ್ಣ ಉಂಟಾಗುವದು. ಅದರಲ್ಲಿ ಕಣ್ಣು ಮತ್ತು ಗಲ್ಲಗಳಿಗೆ ಬಾವು, ಆದೇ ಉಂಡಂತೆ ತೇಗು, ಬಾಯಿಗೆ ನೀರು ಬಿಡೋಣ, ಮಳಮಳ ಅನ್ನೋಣ ಮತ್ತು ಮೈ ಜಡ ವಾಗೋಣ ಇವು ಉಂಟಾಗುವವು. (೨೫)

**ವಿಷ್ಟಬ್ಧಮನಿಲಾಚ್ಛೂಲವಿಬಂಧಾಧ್ಮಾನಸಾದಕೃತ್ ॥**

ಅರ್ಥ:— ವಾತದಿಂದ ವಿಷ್ಟಬ್ಧವೆಂಬ ಅಜೀರ್ಣವಾಗುವದು. ಅದು ಶೂಲ ಮಲಬಂಧ ಹೊಟ್ಟೆಯುಬ್ಬು ನಿರ್ಬಲತ್ವಗಳನ್ನುಂಟು ಮಾಡುವದು. (೨೫॥)

**ಪಿತ್ತಾದ್ವಿದಗ್ಧಂ ತೃಣ್ಮೋಹಭ್ರಮಾಮ್ಲೋದ್ಗಾರದಾಹಕೃತ್ ॥೨೬॥**

ಅರ್ಥ:— ಪಿತ್ತದಿಂದ ವಿದಗ್ಧವೆಂಬ ಅಜೀರ್ಣ ಉಂಟಾಗುವದು. ಅದರಲ್ಲಿ ನೀರಡಿಕೆ ಮೋಹ ಭ್ರಮ ಹುಳಿತೇಗು ದಾಹಗಳು ಉಂಟಾಗು ವವು. (೨೬)

**ಲಂಘನಂ ಕಾರ್ಯಮಾಮೇ ತು, ವಿಷ್ಟಬ್ಧೇ ಸ್ವೇದನಂ ಭೃಶಮ್ ॥**
**ವಿದಗ್ಧೇ ವಮನಂ, ಯದ್ವಾ ಯಥಾವಸ್ಥಂ ಹಿತಂ ಭವೇತ್** [illegible]

ಅರ್ಥ:— ಆಮಾಜೀರ್ಣದ ಮೇಲೆ ಲಂಘನವನ್ನೂ ವಿಷ್ಟಬ್ಧಾಜೀರ್ಣದ ಮೇಲೆ ಬಹಳ ಸ್ವೇದನವನ್ನೂ ವಿದಗ್ಧಾಜೀರ್ಣದ ಮೇಲೆ ವಮನವನ್ನೂ ಕೊಡಬೇಕು. ಅಥವಾ ಆಯಾ ಅವಸ್ಥೆಯಲ್ಲಿ ಯೋಗ್ಯವಾದದ್ದನ್ನು ಮಾಡಬೇಕು. (೩೭)

**ಗರೀಯಸೋ ಭವೇಲ್ಲೀನಾದಾಮಾದೇವ ವಿಲಂಬಿಕಾ ॥**
**ಕಫವಾತಾನುಬದ್ಧಾಽಽಮಲಿಂಗಾ ತತ್ಸಮಸಾಧನಾ** ॥೩೮॥

ಅರ್ಥ:— ಒಳಗೆ ಅಡಗಿದ ಬಹಳ ಆಮದಿಂದ ವಿಲಂಬಿಕೆ ಎಂಬ ರೋಗವಾಗುವದು. ಅದಕ್ಕೆ ಕಫವಾತಗಳ ಸಂಪರ್ಕವುಳ್ಳ ಆಮದ ಲಕ್ಷಣಗಳಿರುವವು. ಆದರಂತೆ ಅದರ ಚಿಕಿತ್ಸೆ ಮಾಡಬೇಕು. (೩೮)

**ಅಶ್ರದ್ಧಾ ಹೃದ್ವ್ಯಥಾ ಶುದ್ಧೇಽಪ್ಯುದ್ಗಾರೇ ರಸಶೇಷತಃ ॥**
**ಶಯೀತ ಕಿಂಚಿದೇವಾತ್ರ**...................................

ಅರ್ಥ:— ರಸಶೇಷದಿಂದಾದ ಅಜೀರ್ಣದಲ್ಲಿ ತೇಗು ಶುದ್ಧವಿದ್ದರೂ ಅನ್ನದ ಮೇಲೆ ವಾಸನೆ ಇರುವದಿಲ್ಲ; ಮತ್ತು ಎದೆ ನೋಯಿಸುವದು. ಈ ರೋಗದಲ್ಲಿ ಸ್ವಲ್ಪ ಮಾತ್ರ ಮಲಗಿಕೊಳ್ಳಬೇಕು. (೩೮॥)

...................................**ಸರ್ವಶ್ಚಾನಾಶಿತೋ ದಿವಾ** ॥೩೯॥
**ಸ್ವಪ್ಯಾದಜೀರ್ಣೀ, ಸಂಜಾತಬುಭುಕ್ಷೋಽದ್ಯಾನ್ಮಿತಂ ಲಘು ॥**

ಅರ್ಥ:— ಎಲ್ಲ ಅಜೀರ್ಣಗಳಲ್ಲಿ ಊಟ ಮಾಡದೆ ಹಗಲು ಮಲಗಬೇಕು. ಹಸಿವೆಯಾದ ಮೇಲೆ ಮಿತ ಮತ್ತು ಲಘು ಆಹಾರವನ್ನು ಮಾಡಬೇಕು.

**ಟಿಪ್ಪಣಿ:—** ಒಮ್ಮೊಮ್ಮೆ ಸುಳ್ಳು ಹಸಿವೆಯಾಗುತ್ತದೆ. ಆಗ ಊಟ ಮಾಡಕೂಡದು. (೩೯॥)

**ವಿಬಂಧೋಽತಿಪ್ರವೃತ್ತಿರ್ವಾ ಗ್ಲಾನಿರ್ಮಾರುತಮೂಢತಾ ॥೩೦॥**

**ಅಜೀರ್ಣಲಿಂಗಂ ಸಾಮಾನ್ಯಂ ವಿಷ್ಟಂಭೋ ಗೌರವಂ ಭ್ರಮಃ ॥**

ಅರ್ಥ:— ಅಜೀರ್ಣದ ಸಾಮಾನ್ಯ ಲಕ್ಷಣಗಳೆಂದರೆ ಮಲಬಂಧ ಅಥವಾ ರೇಚ, ಗ್ಲಾನಿ, ಕೆಳಗಿನ ವಾಯು-ಸರಿಯದೇ-ಇರೋಣ, ಹೊಟ್ಟೆ ಉಬ್ಬು, ಮೈ ಜಡವಾಗೋಣ, ಭ್ರಮ. (೩೦॥)

**ನ ಚಾತಿಮಾತ್ರಮೇವಾನ್ನಮಾಮದೋಷಾಯ ಕೇವಲಮ್ ॥೩೧॥**

**ದ್ವಿಷ್ಟವಿಷ್ಟಂಭಿದಗ್ಧಾಮಗುರುರೂಕ್ಷಹಿಮಾಶುಚಿ ॥**
**ವಿದಾಹಿ ಶುಷ್ಕಮತ್ಯಂಬುಪ್ಲುತಂ ಚಾನ್ನಂ ನ ಜೀರ್ಯತಿ ॥೩೨॥**

**ಉಪತಪ್ತೇನ ಭುಕ್ತಂ ಚ ಶೋಕಕ್ರೋಧಕ್ಷುಧಾದಿಭಿಃ ॥**

ಅರ್ಥ:— ಬರೇ ಹೆಚ್ಚು ಅನ್ನವೇ ಅಜೀರ್ಣ ದೋಷವನ್ನುಂಟು ಮಾಡುತ್ತದೆಂತಲ್ಲ; ಆದರೆ ಸೇರದ್ದು, ಸ್ತಂಭಕ, ಕರಕ, ಹಸಿ ಇದ್ದ, ಜಡ, ರುಕ್ಷ, ತಣ್ಣಗಿನ, ಅಪವಿತ್ರ, ವಿದಾಹಿ, ಒಣಗಿದ, ಬಹಳ ನೀರು ಹಾಕಿದ ಅನ್ನವೂ ಪಚನವಾಗದು. ದುಃಖ, ಸಿಟ್ಟು, ಹಸಿವೆ ಮುಂತಾದ ವಿಕಾರಗಳಿಂದ ಪೀಡಿತನಾದವನ ಅನ್ನವೂ ಪಚನವಾಗದು. (೩೨॥)

ಇತರೆ ಅಸಮ್ಯಗ್ಯೋಗಗಳ ಲಕ್ಷಣವನ್ನು ಹೇಳುತ್ತಾರೆ.

**ಮಿಶ್ರಂ ಪಥ್ಯಮಪಥ್ಯಂ ಚ ಭುಕ್ತಂ ಸಮಶನಂ ಸ್ಮೃತಮ್ ॥೩೩॥**

ಅರ್ಥ:— ಪಥ್ಯ ಮತ್ತು ಅಪಥ್ಯ ಕೂಡಿ ತಿನ್ನುವದು ಸಮಶನವೆನಿಸುವದು. (೩೩)

**ವಿದ್ಯಾದಧ್ಯಶನಂ ಭೂಯೋ ಭುಕ್ತಸ್ಯೋಪರಿ ಭೋಜನಮ್ ॥**

ಅರ್ಥ:— ತಿಂದದ್ದು ಪಚನವಾಗದ ಮೊದಲು ಮತ್ತೆ ಊಟ ಮಾಡುವದು ಅಧ್ಯಶನವೆನಿಸುವದು. (೩೩॥)

**ಅಕಾಲೇ ಬಹು ಚಾಲ್ಪಂ ವಾ ಭುಕ್ತಂ ತು ವಿಷಮಾಶನಮ್ ॥೩೪॥**

ಅರ್ಥ— ಅಕಾಲದಲ್ಲಿ ಸ್ವಲ್ಪ ಅಥವಾ ಬಹಳ ತಿನ್ನುವದು ವಿಷಮಾಶನವೆನಿಸುವದು. (೩೪)

**ತ್ರೀಣ್ಯಪ್ಯೇತಾನಿ ಮೃತ್ಯುಂವಾ ಘೋರಾನ್ ವ್ಯಾಧೀನ್ ಸೃಜಂತಿ ಹಿ॥**

ಅರ್ಥ:— ಇವು ಮೂರೂ ಮೃತ್ಯುವನ್ನು ಅಥವಾ ಭಯಂಕರ ವ್ಯಾಧಿಗಳನ್ನು ಹುಟ್ಟಿಸುವವು. (೩೪॥)

ಊಟದ ವಿಧಿಯನ್ನು ಹೇಳುತ್ತಾರೆ.

**ಕಾಲೇ ಸಾತ್ಮ್ಯಂ ಶುಚಿ ಹಿತಂ ಸ್ನಿಗ್ಧೋಷ್ಣಂ ಲಘು ತನ್ಮನಾಃ ॥೩೫॥**

**ಷಡ್ರಸಂ ಮಧುರಪ್ರಾಯಂ ನಾತಿದ್ರುತವಿಲಂಬಿತಮ್ ॥**
**ಸ್ನಾತಃ ಕ್ಷುದ್ವಾನ್ ವಿವಿಕ್ತಸ್ಥೋ ಧೌತಪಾದಕರಾನನಃ ॥೩೬॥**

**ತರ್ಪಯಿತ್ವಾ ಪಿತೄನ್ ದೇವಾನತಿಥೀನ್ ಬಾಲಕಾನ್ ಗುರೂನ್॥**
**ಪ್ರತ್ಯವೇಕ್ಷ್ಯ ತಿರಶ್ಚೋಽಪಿ ಪ್ರತಿಪನ್ನಪರಿಗ್ರಹಾನ್ ॥೩೭॥**

**ಸಮೀಕ್ಷ್ಯ ಸಮ್ಯಗಾತ್ಮಾನಮನಿಂದನ್ನಬ್ರುವನ್ ದ್ರವಮ್ ॥**
**ಇಷ್ಟಮಿಷ್ಟೈಃ ಸಹಾಶ್ನೀಯಾಚ್ಛುಚಿಭಕ್ತಜನಾಹೃತಮ್ ॥೩೮॥**

ಅರ್ಥಃ— ಸ್ನಾನಮಾಡಿ ಹಸಿವೆಯಾದ ಮೇಲೆ ಕೈ-ಕಾಲು ಮೋರೆಯನ್ನು ತೊಳೆದುಕೊಂಡು ಏಕಾಂತ ಸ್ಥಾನದಲ್ಲಿ ಕುಳಿತು ಪಿತೃಗಳಿಗೂ ದೇವತೆಗಳಿಗೂ ಅತಿಥಿಗಳಿಗೂ ಗುರುಗಳಿಗೂ ಹುಡುಗರಿಗೂ (ಆಹಾರದಿಂದ) ಸಂತೋಷಪಡಿಸಿ, ಸಾಕಿದ ಪಶು-ಪಕ್ಷಿಗಳು ಅನ್ನಪಾನಗಳನ್ನು ಮಾಡಿದ್ದನ್ನು ತಿಳಕೊಂಡು, ತನ್ನ ಪ್ರಕೃತಿಯನ್ನು ವಿಚಾರ ಮಾಡಿ, ತನ್ನ ಪ್ರಕೃತಿಗೆ ಮಾನಿಸುವ, ಪವಿತ್ರ, ಹಿತಕರ, ಸ್ನಿಗ್ಧ, ಉಷ್ಣ, ಲಘು, ಷಡ್ರಸವಿದ್ದರೂ ಮಧುರ ರಸ ಹೆಚ್ಚಾಗಿಯುಳ್ಳ, ದ್ರವರೂಪವಾದ, ಪವಿತ್ರರಾದ ಭಕ್ತಿಯುಳ್ಳ ಜನರಿಂದ ಬಡಿಸಿದ, ಇಷ್ಟವಾದ ಆಹಾರವನ್ನು ಅದರ ಕಡೆಗೆ ಲಕ್ಷಗೊಟ್ಟು ಅದನ್ನು ನಿಂದಿಸದೆ ಬಹಳ ಮಾತಾಡದೆ ಬಹಳ ಅವಸರ ಅಥವಾ ಬಹಳ ಸಾವಕಾಶ ಮಾಡದೇ ಯೋಗ್ಯ ಕಾಲದಲ್ಲಿ ಉಣ್ಣಬೇಕು.

ಟಿಪ್ಪಣಿ:— ಊಟದ ಕಾಲ ಮೀರಿದ ಮೇಲೆ ತಿನ್ನುವದರಿಂದ ವಾತದಿಂದ ವಿಷ್ಟಬ್ಧವಾದ ಅನ್ನವು ಸುಲಭವಾಗಿ ಪಚನವಾಗದು. ಹಗುರು ಆಹಾರವು ಅಗ್ನಿಯನ್ನು ಪ್ರದೀಪ್ತಮಾಡುವದು. ಸ್ನಿಗ್ಧ ಆಹಾರವು ಇಂದ್ರಿಯ ದಾರ್ಢ್ಯವನ್ನೂ ಓಜಸ್ಸನ್ನೂ ಬೆಳೆಸುವದು. ಉಷ್ಣವು ರುಚಿಯನ್ನು ಕೊಡುವದು; ಕಫವನ್ನು ನಾಶಮಾಡುವದು. ಎರವನೇ: ಕಡೆಗೆ ಲಕ್ಷವಿದ್ದರೆ ಅಥವಾ ಹರಟೆ ಹೊಡೆಯುತ್ತಿದ್ದರೆ ಅಥವಾ ನಗುತ್ತಿದ್ದರೆ ಅನ್ನವು ತಿರುಗಿ ಬರುವದು; ಅನ್ನದ ರುಚಿಯೂ ತಿಳಿಯದು. ಬಹಳ ಸಾವಕಾಶ ತಿನ್ನುವದರಿಂದ ತೃಪ್ತಿ ಆಗದು. ರುಕ್ಷವು ಬಲವನ್ನು ನಾಶಮಾಡುವದು; ವಾತ ಮಲವನ್ನು ಪ್ರತಿಬಂಧಿಸುವದು. ಅತಿ ಸ್ನಿಗ್ಧವು ಕಫ-ಸಂಚಯ ಪ್ರಸೇಕ ( ಬಾಯಿಯಲ್ಲಿ-ನೀರು-ಬರೋಣ ) ಆಲಸ್ಯಗಳನ್ನೂ, ಅತ್ಯುಷ್ಣವು ಗಾಢ ದಾಹ ತೃಷ್ಣಾ ಭ್ರಮ ರಕ್ತ-ಪಿತ್ತಗಳನ್ನೂ, ಶೀತವು ಅಗ್ನಿಮಾಂದ್ಯ ಅರುಚಿ ವಿಷ್ಟಂಭ ಮುಂತಾದವುಗಳನ್ನೂ, ಅತಿಗಟ್ಟಿ ಆಹಾರವು ಮಲ-ಮೂತ್ರ-ಬಂಧ ಅತೃಪ್ತಿ ಸಾವಕಾಶ-ಪಚನಗಳನ್ನೂ, ಅತಿ-ಮಧುರವು ಅಗ್ನಿನಾಶವನ್ನೂ, ಅತಿ-ಲವಣವು ನೇತ್ರ ರೋಗವನ್ನೂ, ಅತಿ-ಹುಳಿಯು ವಾರ್ಧಕ್ಯವನ್ನೂ ಉಂಟುಮಾಡುತ್ತವೆ. (೩೮)

ಭೋಜನಂ ತೃಣಕೇಶಾದಿಜುಷ್ಟಮುಷ್ಣೀಕೃತಂ ಪುನಃ ||
ಶಾಕಾವರಾನ್ನಭೂಯಿಷ್ಠಮತ್ಯುಷ್ಣಲವಣಂ ತ್ಯಜೇತ್ ||೩೯||

ಅರ್ಥ:— ಹುಲ್ಲು ಕೂದಲು ಮುಂತಾದ್ದು ಬಿದ್ದ ಅಥವಾ ಪುನಃ ಕಾಸಿದ ಅಥವಾ ಪಲ್ಲೆ ಉದ್ದು ಮೊದಲಾದ ಹೀನ ಅನ್ನದಿಂದ ಬಹಳವಾಗಿ ಕೂಡಿದ ಅಥವಾ ಬಹಳ ಉಷ್ಣ ಅಥವಾ ಉಪ್ಪಾದ ಊಟವನ್ನು ಬಿಡಬೇಕು. (೩೯)

ಕಿಲಾಟದಧಿಕೂರ್ಚಿಕಾಕ್ಷಾರಶುಕ್ತಾಮ್ಲಮೂಲಕಮ್ ||
ಕೃಶಶುಷ್ಕವರಾಹಾವಿಗೋಮತ್ಸ್ಯಮಹಿಷಾಮಿಷಮ್ ||೪೦||

ಮಾಷನಿಷ್ಪಾವಶಾಲೂಕಬಿಸಪಿಷ್ಟವಿರೂಢಕಮ್ ||
ಶುಷ್ಕಶಾಕಾನಿ ಯವಕಾನ್ ಫಾಣಿತಂ ಚ ನ ಶೀಲಯೇತ್ ||೪೧||

ಅರ್ಥ:— ಕಿಲಾಟ ( ಕೂರ್ಚಿಕೆಯ ಘನಾಂಶ ), ಮೊಸರು, ಕೂರ್ಚಿಕಾ ( ಮೊಸರು ಅಥವಾ ಮಜ್ಜಿಗೆಯೊಡನೆ ಕೂಡಿಸಿದ ಹಾಲು), ಕ್ಷಾರ, ಶುಕ್ತ ( ಕಂದಾದಿಗಳನ್ನು ಹಾಕಿ ಮಾಡಿದ ಹುಳಿ ಮದ್ಯ), ಎಳೇ

ಮೂಲಂಗಿ, ಕೃಶವಾದ ಅಥವಾ ಶುಷ್ಕವಾದ ಹಂದಿ ಉಣ್ಣೆಗುರಿ ಆಕಳು ಮೀನ ಕೋಣಗಳ ಮಾಂಸವನ್ನೂ, ಉದ್ದು, ಅವರೆ, ಶಾಲೂಕ (ಕಮಲದ ಕಂದ), ದೇಟು, ಹಿಟ್ಟಿನ ಪದಾರ್ಥ, ಮೊಳೆತ ಧಾನ್ಯವನ್ನೂ, ಒಣಗಿದ ಪಲ್ಲೆಯನ್ನೂ, ಯವಕ (ಮುಳ್ಳಜವೆ) ಧಾನ್ಯವನ್ನೂ, ಕಾಕಂಬಿಯನ್ನೂ ಮೇಲಿಂದ ಮೇಲೆ ತಿನ್ನಬಾರದು. (೪೧)

**ಶೀಲಯೇಚ್ಛಾಲಿಗೋಧೂಮಯವಷಷ್ಟಿಕಜಾಂಗಲಮ್ ||**
**ಸುನಿಷಣ್ಣಕಜೀವಂತೀಬಾಲಮೂಲಕವಾಸ್ತುಕಮ್** ||೪೨||

**ಪಥ್ಯಾಮಲಕಮೃದ್ವೀಕಾಪಟೋಲೀಮುದ್ಗಶರ್ಕರಾಃ ||**
**ಘೃತದಿವ್ಯೋದಕಕ್ಷೀರಕ್ಷೌದ್ರದಾಡಿಮಸೈಂಧವಮ್** ||೪೩||

**ತ್ರಿಫಲಾಂ ಮಧುಸರ್ಪಿರ್ಭ್ಯಾಂ ನಿಶಿ ನೇತ್ರಬಲಾಯ ಚ||**
**ಸ್ವಾಸ್ಥ್ಯಾನುವೃತ್ತಿಕೃದ್ಯಚ್ಚ ರೋಗೋಚ್ಛೇದಕರಂ ಚ ಯತ್** ||೪೪||

ಅರ್ಥಃ— ಅಕ್ಕಿ ಗೋದಿ ಜವೆ ಷಷ್ಟಿಕ-ಅಕ್ಕಿ ಜಾಂಗಲಮಾಂಸ ಗೊರಜಿ ಸೀಹಾಲಿ ಎಳೇಮೂಲಂಗಿ ಚಕೋತ ಅಳ್ಳೀಕಾಯಿ ನೆಲ್ಲಿಕಾಯಿ ದ್ರಾಕ್ಷೆ ಪಡವಲ ಹೆಸರು ಸಕ್ಕರೆ ತುಪ್ಪ ಮಳೆಯ-ನೀರು ಹಾಲು ಜೇನು-ತುಪ್ಪ ದಾಳಿಂಬ ಸೈಂಧವಗಳನ್ನೂ, ನೇತ್ರಬಲಕ್ಕಾಗಿ ರಾತ್ರಿಯಲ್ಲಿ ತುಪ್ಪ ಜೇನತುಪ್ಪಗಳೊಡನೆ ತ್ರಿಫಳೆಯನ್ನೂ, ಆರೋಗ್ಯ ರಕ್ಷಣೆಮಾಡುವ ಮತ್ತೂ ರೋಗ ನಾಶಕ ಪದಾರ್ಥಗಳನ್ನೂ ದಿನಾಲು ಸೇವಿಸುತ್ತಿರಬೇಕು. (೪೪)

**ಬಿಸೇಕ್ಷುಮೋಚಚೋಚಾಮ್ರಮೋದಕೋತ್ಕಾರಿಕಾದಿಕಮ್ ||**
**ಅದ್ಯಾದ್ದ್ರವ್ಯಂ ಗುರು ಸ್ನಿಗ್ಧಂ ಸ್ವಾದು ಮಂದಂ ಸ್ಥಿರಂ ಪುರಃ** ||೪೫||

**ವಿಪರೀತಮತಶ್ಚಾಂತೇ ಮಧ್ಯೇಽಮ್ಲಲವಣೋತ್ಕಟಮ್ ||**

ಅರ್ಥಃ— ಕಮಲದ ದೇಟು, ಕಬ್ಬು, ಬಾಳೆ, ಹಲಸು, ಮಾವು, ಮೋದಕ (ಉಂಡಿ), ಉತ್ಕಾರಿಕ (ಗೋದಿಯ ರೊಟ್ಟಿ) ಮುಂತಾದ ಗುರು, ಸ್ನಿಗ್ಧ, ಮಧುರ, ಮಂದ, ಗಟ್ಟಿ ಪದಾರ್ಥಗಳನ್ನು ಮೊದಲು ತಿನ್ನಬೇಕು. ಇದರ ವಿರುದ್ಧ ಎಂದರೆ ಹಗುರು, ರುಕ್ಷ, ತೀಕ್ಷ್ಣ ಕಾರ ಮುಂತಾದ

ಪದಾರ್ಥಗಳನ್ನು ಕೊನೆಗೆ ತಿನ್ನಬೇಕು. ನಡುವೆ ಹುಳಿ, ಉಪ್ಪು ಹೆಚ್ಚಾಗಿರುವ ಪದಾರ್ಥಗಳನ್ನು ತಿನ್ನಬೇಕು. (೪೫||)

ಅನ್ನೇನ ಕುಕ್ಷೇರ್ದ್ವಾವಂಶೌ ಪಾನೇನೈಕಂ ಪ್ರಪೂರಯೇತ್ ||೪೬||
ಆಶ್ರಯಂ ಪವನಾದೀನಾಂ ಚತುರ್ಥಮವಶೇಷಯೇತ್ ||

ಅರ್ಥ:— ಹೊಟ್ಟೆಯ ಅರ್ಧ ಭಾಗವನ್ನು ಅನ್ನದಿಂದಲೂ, ಕಾಲು ಭಾಗವನ್ನು ನೀರಿನಿಂದಲೂ ತುಂಬಬೇಕು. ಗಾಳಿ ಮುಂತಾದವುಗಳಿಗಾಗಿ ನಾಲ್ಕನೇ ಭಾಗವನ್ನು ತೆರವು ಇಡಬೇಕು. (೪೬||)

ಅನುಪಾನಂ ಹಿಮಂ ವಾರಿ ಯವಗೋಧೂಮಯೋರ್ಹಿತಮ್||೪೭||
ದಧ್ನಿ ಮದ್ಯೇ ವಿಷೇ ಕ್ಷೌದ್ರೇ,...........................................

ಅರ್ಥ:— ಜವೆ, ಗೋದಿ, ಮೊಸರು, ಮದ್ಯ, ವಿಷ, ಜೇನತುಪ್ಪ ಇವು ತಿಂದ ನಂತರ ತಣ್ಣೀರು ಕುಡಿಯಬೇಕು.

ಟಿಪ್ಪಣಿ:— "ಅನು ಪೀಯತೇ (ಹಿಂದುಗಡೆ ಕುಡಿಯಲ್ಪಡುತ್ತದೆ) ಇತಿ ಅನುಪಾನಮ್" ಎಂದು ಅನುಪಾನದ ಅರ್ಥವಿದ್ದರೂ ಮೊದಲು, ಸಂಗಡ, ಕುಡಿಯಲ್ಪಡುವದಕ್ಕೂ ಅನುಪಾನವೆಂದು ಅನ್ನುತ್ತಾರೆ. ಯಾವದು ರುಚಿಯ ಸಲುವಾಗಿ ಬೇಕಾದಾಗ್ಗೆ ಕುಡಿಯಲ್ಪಡುತ್ತದೋ ಅದು ಪಾನವು. ಯಾವದು ನಿಯಮಿತ ಕಾಲಕ್ಕೆ ವಿಧಿಯಿಂದ ಕುಡಿಯಲ್ಪಡುತ್ತದೋ ಅದು ಅನುಪಾನವು. (೪೭)

............................ಕೋಷ್ಣಂ ಪಿಷ್ಟಮಯೇಷು ತು ||

ಅರ್ಥ:— ಆದರೆ ಪಿಷ್ಟಮಯ ಪದಾರ್ಥಗಳ ಮೇಲೆ ಬೆಚ್ಚಗಿನ ನೀರನ್ನು ಕುಡಿಯಬೇಕು. (೪೭||)

ಶಾಕಮುದ್ಗಾದಿವಿಕೃತೌ ಮಸ್ತುತಕ್ರಾಮ್ಲಕಾಂಜಿಕಮ್ ||೪೮||

ಅರ್ಥ:— ಪಲ್ಲೆ, ಹೆಸರು ಮುಂತಾದವುಗಳ ಪದಾರ್ಥಗಳನ್ನು ತಿಂದ ಮೇಲೆ ಮೊಸರಿನ ತಿಳಿಯನ್ನೂ ಮಜ್ಜಿಗೆ ಮತ್ತು ಹುಳಿ ಅಂಬಲಿಗಳನ್ನೂ ಕುಡಿಯಬೇಕು.

**ಸುರಾ ಕೃಶಾನಾಂ ಪುಷ್ಟ್ಯರ್ಥಂ, ಸ್ಥೂಲಾನಾಂ ತು ಮಧೂದಕಮ್ ||**

ಅರ್ಥಃ— ಕೃಶರು ಪುಷ್ಟಿಗಾಗಿ ಮದ್ಯವನ್ನೂ, ಸ್ಥೂಲರು ನೀರು ಕೂಡಿದ ಜೇನತುಪ್ಪವನ್ನೂ ಕುಡಿಯಬೇಕು. (೪೭)

**ಶೋಷೇ ಮಾಂಸರಸೋ,.......................................**

ಅರ್ಥಃ— ಕ್ಷಯದ ಮೇಲೆ ಮಾಂಸರಸವನ್ನು ಕೊಡಬೇಕು. (೪೮)

**..............ಮದ್ಯಂ ಮಾಂಸೇ, ಸ್ವಲ್ಪೇ ಚ ಪಾವಕೇ ||೪೯||**

ಅರ್ಥಃ— ಮಾಂಸ ತಿಂದ ಮೇಲೆ ಮತ್ತು ಅಗ್ನಿ ಮಾಂದ್ಯದ ಮೇಲೆ ಮದ್ಯವನ್ನು ಕುಡಿಯಬೇಕು. (೪೯)

**ವ್ಯಾಧ್ಯೌಷಧಾಧ್ವಭಾಷ್ಯಸ್ತ್ರೀಲಂಘನಾತಪಕರ್ಮಭಿಃ ||**
**ಕ್ಷೀಣೇವೃದ್ಧೇ ಚ ಬಾಲೇ ಚ ಪಯಃ ಪಥ್ಯಂ ಯಥಾಮೃತಮ್ ||೫೦||**

ಅರ್ಥಃ— ಬೇನೆ, ಔಷಧ, ಮಾರ್ಗ-ನಡೆಯೋಣ, ಬಹಳ-ಮಾತಾಡೋಣ, ಮೈಥುನ, ಲಂಘನ, ಬಿಸಿಲುಗಳಿಂದ ಕ್ಷೀಣರಾದವರಿಗೂ ವೃದ್ಧರಿಗೂ ಬಾಲರಿಗೂ ಹಾಲು ಅಮೃತದಂತೆ ಹಿತಕರವು. (೫೦)

**ವಿಪರೀತಂ ಯದನ್ನಸ್ಯ ಗುಣೈಃ ಸ್ಯಾದವಿರೋಧಿ ಚ ||**
**ಅನುಪಾನಂ ಸಮಾಸೇನ, ಸರ್ವದಾ ತತ್ಪ್ರಶಸ್ಯತೇ ||೫೧||**

ಅರ್ಥಃ— ಸಾಮಾನ್ಯತಃ ಯಾವುದು ಅನ್ನದ ಗುಣಗಳ ವಿಪರೀತವಿದ್ದು ಅದರ ಅವಿರೋಧಿಯಾಗಿರುವದೋ ಆ ಅನುಪಾನವು ಪ್ರಶಸ್ತವು.

**ಟಿಪ್ಪಣೀ**— ವಿರುದ್ಧವೆಂದರೆ ಸ್ನಿಗ್ಧಕ್ಕೆ ರುಕ್ಷ, ರುಕ್ಷಕ್ಕೆ ಸ್ನಿಗ್ಧ, ಶೀತಕ್ಕೆ ಉಷ್ಣ, ಉಷ್ಣಕ್ಕೆ ಶೀತ, ಮಧುರಕ್ಕೆ ಅಮ್ಲ, ಅಮ್ಲಕ್ಕೆ ಮಧುರ ಇತ್ಯಾದಿ. ಹೀಗೆನ್ನಲು ಪಾಯಸದ ಮೇಲೆ ಮಜ್ಜಿಗೆಯನ್ನು ಕುಡಿಯಬೇಕಾದೀತು; ಆದಾಗಬಾರದೆಂದು "ಅವಿರೋಧಿ" ಎಂದು ಹೇಳಿದೆ. ಹಾಲಿಗೆ ಹುಳಿಯು ವಿರುದ್ಧವಾದ್ದರಿಂದ ಅದಕ್ಕೆ ಮಜ್ಜಿಗೆಯು ಅನುಪಾನವಾಗದು. (೫೧)

**ಅನುಪಾನಂ ಕರೋತ್ಯೂರ್ಜಂ ತೃಪ್ತಿಂ ವ್ಯಾಪ್ತಿಂ ದೃಢಾಂಗತಾಮ್ ॥**
**ಅನ್ನಸಂಘಾತಶೈಥಿಲ್ಯವಿಕ್ಲಿತ್ತಿಜರಣಾನಿ ಚ ॥೫೨॥**

ಅರ್ಥ:— ಅನುಪಾನವು ಮನಸ್ಸಿಗೆ ಆನಂದವನ್ನೂ ಇಂದ್ರಿಯಗಳಿಗೆ ತೃಪ್ತಿಯನ್ನೂ ಎಲ್ಲ ಶರೀರದಲ್ಲಿ ಪ್ರಸರಣವನ್ನೂ ಅವಯವದಲ್ಲಿ ದೃಢತ್ವವನ್ನೂ ಗಟ್ಟಿ ಅನ್ನದ ಶೈಥಿಲ್ಯವನ್ನೂ ಒಣಗಿದ ಅನ್ನದ ಆರ್ದ್ರತೆಯನ್ನೂ ಪಚನವನ್ನೂ ಉಂಟುಮಾಡುತ್ತದೆ. (೫೨)

**ನೋರ್ಧ್ವಜತ್ರುಗದಶ್ವಾಸಕಾಸೋರಃಕ್ಷತಪೀನಸೇ ॥**
**ಗೀತಭಾಷ್ಯಪ್ರಸಂಗೇ ಚ ಸ್ವರಭೇದೇ ಚ ತದ್ಧಿತಮ್ ॥೫೩॥**

ಅರ್ಥ:— ಕುತ್ತಿಗೆಯ-ಮೇಲಿನ-ರೋಗ ಕೆಮ್ಮು ದಮ್ಮು ಉರಃಕ್ಷತ ಪೀನಸ ರೋಗಗಳಲ್ಲಿಯೂ ಗಾಯನ ಭಾಷಣ ಪ್ರಸಂಗದಲ್ಲಿಯೂ ಸ್ವರ-ಭೇದದಲ್ಲಿಯೂ ಅದು ಹಿತಕರವಲ್ಲ. (೫೩)

**ಪ್ರಕ್ಲಿನ್ನದೇಹಮೇಹಾಕ್ಷಿಗಲರೋಗವ್ರಣಾತುರಾಃ ॥**
**ಪಾನಂ ತ್ಯಜೇಯುಃ...............................**

ಅರ್ಥ:— ದೇಹದಲ್ಲಿ ಬಹಳ ಕ್ಲೇದ( ಆರ್ದ್ರತೆ )ವುಳ್ಳವರೂ ಮೇಹ ಕಣ್ಣು-ರೋಗ ಕಂಠ-ರೋಗವುಳ್ಳವರೂ ವ್ರಣ-ಪೀಡಿತರೂ ಪಾನವನ್ನು ಬಿಡಬೇಕು. (೫೩॥।)

**................ಸರ್ವಶ್ಚ ಭಾಷ್ಯಾಧ್ವಶಯನಂ ತ್ಯಜೇತ್ ॥೫೪॥**
**ಪೀತ್ವಾ, ಭುಕ್ತ್ವಾಽಽತಪಂ ವಹ್ನಿಂ ಯಾನಂ ಪ್ಲವನವಾಹನಮ್ ॥**

ಅರ್ಥ:— ಎಲ್ಲರೂ (ರೋಗಿ-ನಿರೋಗಿಗಳೂ) ಅನ್ನಪಾನದ ನಂತರ ಮಾತಾಡೋಣ ನಡೆಯೋಣ ಮಲಗೋಣ ಬಿಸಿಲು-ಬೆಂಕಿ-ಕಾಸೋಣ ಬಂಡಿಗಳನ್ನೇರೋಣ ಜಿಗಿಯೋಣ ಕುದುರೆ-ಮುಂತಾದವುಗಳನ್ನೇರೋಣ— ಇವುಗಳನ್ನು ಬಿಡಬೇಕು. (೫೪॥)

**ಪ್ರಸೃಷ್ಟೇ ವಿಣ್ಮೂತ್ರೇ ಹೃದಿ ಸುವಿಮಲೇ ದೋಷೇ ಸ್ವಪಥಗೇ**
**ವಿಶುದ್ಧೇ ಚೋದ್ಗಾರೇ ಕ್ಷುದುಪಗಮನೇ ವಾತೇಽನುಸರತಿ ॥**

**ತಥಾಗ್ನಾವುದ್ರಿಕ್ತೇ ವಿಶದಕರಣೇ ದೇಹೇ ಚ ಸುಲಘೌ**
**ಪ್ರಯುಂಜೀತಾಹಾರಂ ವಿಧಿನಿಯಮಿತಃ, ಕಾಲಃ ಸ ಹಿ ಮತಃ ||೫೫||**

**ಅರ್ಥ:—** ಮಲ-ಮೂತ್ರಗಳು ಆಗಲು, ಮನಸ್ಸು ಸ್ವಚ್ಛವಿರಲು ದೋಷಗಳು ತಮ್ಮ ತಮ್ಮ ಮಾರ್ಗಗಳಿಂದ ಹೋಗುತ್ತಿರಲು, ತೇಗು ಸ್ವಚ್ಛವಿರಲು, ಹಸಿವೆಯಾಗಲು, ಅಪಾನವಾಯು ಸರಿಯುತ್ತಿರಲು, ಅಗ್ನಿಯು ಪ್ರಜ್ವಲಿತವಿರಲು, ಇಂದ್ರಿಯಗಳು ಪ್ರಸನ್ನವಾಗಲು, ದೇಹವು ಹಗುರು ಇರಲು, ಊಟವನ್ನು ಮಾಡಬೇಕು. ಆಹಾರ ಸೇವನೆಗಾಗಿ ವಿಧಿಯಿಂದ ನಿಯಮಿಸಲ್ಪಟ್ಟ ಕಾಲವು ಇದೇ !

**ಟಿಪ್ಪಣಿ:—** " ಇವೆಲ್ಲ ಲಕ್ಷಣಗಳಿದ್ದು ತನ್ನ ನಿಯಮಿತ ಕಾಲವಿದ್ದರೆ ಅದು ಉತ್ತಮ ಭೋಜನ-ಕಾಲವು. ಉಳಿದ ಕಾಲದಲ್ಲಿ ಈ ಲಕ್ಷಣಗಳಿದ್ದರೂ ಅದು ಸರಿಯಾದ ಕಾಲವಲ್ಲವೆಂದು ಹೇಮಾದ್ರಿಯು ಹೇಳುವನು. (೫೫)

**ಇತಿ ಅಷ್ಟಾಂಗಹೃದಯ ಸಂಹಿತಾಯಾಂ ಸೂತ್ರಸ್ಥಾನೇ**
**ಮಾತ್ರಾಶಿತೀಯೋ ನಾಮ ಅಷ್ಟಮೋಽಧ್ಯಾಯಃ ಸಮಾಪ್ತಃ ।**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯ ರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ' ದ ಟೀಕೆ ಯಲ್ಲಿ **ಸೂತ್ರಸ್ಥಾನ**ದಲ್ಲಿಯ **ಮಾತ್ರಾಶಿತೀಯ** ಎಂಬ ೮ನೆಯ ಅಧ್ಯಾಯವು ಮುಗಿದುದು.



# ೯ನೆಯ ಅಧ್ಯಾಯವು

ಹಿಂದಿನ ನಾಲ್ಕು ಅಧ್ಯಾಯಗಳಿಂದ ಆಹಾರವು ಹೇಳಲ್ಪಟ್ಟಿತು. ಆಹಾರ ದ್ರವ್ಯಗಳು ಅನಂತ ಇರುವದರಿಂದ ಅವೆಲ್ಲವುಗಳ ಗುಣಧರ್ಮಗಳನ್ನು ಹೇಳುವದು ಅಶಕ್ಯವಿದೆ. ಆದ್ದರಿಂದ ಎಲ್ಲವುಗಳ ಸಂಗ್ರಹಾರ್ಥವಾಗಿ ದ್ರವ್ಯ ರಸ ಗುಣ ವೀರ್ಯ ವಿಪಾಕ ಪ್ರಭಾವಗಳನ್ನು ಇಲ್ಲಿ ಹೇಳುತ್ತಾರೆ.

**ಅಥಾತೋ ದ್ರವ್ಯಾದಿವಿಜ್ಞಾನೀಯಮಧ್ಯಾಯಂ ವ್ಯಾಖ್ಯಾಸ್ಯಾಮಃ |**

ಅರ್ಥ:— ಇನ್ನು ಮೇಲೆ ದ್ರವ್ಯಾದಿಗಳ ವಿಜ್ಞಾನಾಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ |**

ಅರ್ಥ:— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದ್ದಾರೆ.

**ದ್ರವ್ಯಮೇವ ರಸಾದೀನಾಂ ಶ್ರೇಷ್ಠಂ, ತೇ ಹಿ ತದಾಶ್ರಯಾಃ ||**
**ಪಂಚಭೂತಾತ್ಮಕಂ ತತ್ತು ಕ್ಷ್ಮಾಮಧಿಷ್ಠಾಯ ಜಾಯತೇ ||೧||**

**ಅಂಬುಯೋನ್ಯಗ್ನಿಪವನನಭಸಾಂ ಸಮವಾಯತಃ ||**
**ತನ್ನಿರ್ವೃತ್ತಿರ್ವಿಶೇಷಶ್ಚ ವ್ಯಪದೇಶಸ್ತು ಭೂಯಸಾ ||೨||**

ಅರ್ಥ:— ರಸ ಗುಣ ವೀರ್ಯ ವಿಪಾಕ ಪ್ರಭಾವಗಳಿಗಿಂತ ದ್ರವ್ಯವೇ ಶ್ರೇಷ್ಠವು. (ಆದ್ದರಿಂದ ದ್ರವ್ಯ ಜ್ಞಾನವು ಉಳಿದವುಗಳ ಜ್ಞಾನಕ್ಕಿಂತ ಅವಶ್ಯವಾದದ್ದು) ಯಾಕೆಂದರೆ ಅವು ದ್ರವ್ಯವನ್ನು ಆಶ್ರಯಿಸಿರುತ್ತವೆ. ಆ ದ್ರವ್ಯವು ಪಂಚಭೂತಾತ್ಮಕವು. ಅದು ಪೃಥ್ವಿಯನ್ನು ಆಧಾರ ಮಾಡಿಕೊಂಡುಂಟಾಗುತ್ತದೆ. ದ್ರವ್ಯದ ಉತ್ಪತ್ತಿಗೆ ನೀರು ಕಾರಣವು. ಅದರ ಮತ್ತು ಅಗ್ನಿ, ವಾಯು, ಆಕಾಶಗಳ ಸಂಯೋಗದಿಂದ ದ್ರವ್ಯ ಮತ್ತು ಅವುಗಳ ಭೇದಗಳು ಉಂಟಾಗುತ್ತವೆ. ( ಈ ರೀತಿಯಾಗಿ ಪ್ರತಿಯೊಂದು ದ್ರವ್ಯವು ಪಂಚ ಭೂತಾತ್ಮಕವಿರುತ್ತದೆ.) ಆದರೆ ಭೂಮಿಯ ಅಂಶವು ಹೆಚ್ಚಿದ್ದರೆ ಭೂಮಿ-ದ್ರವ್ಯವೆಂದೂ, ಜಲವು ಹೆಚ್ಚಿದ್ದರೆ ಜಲ-ದ್ರವ್ಯವೆಂದೂ ಮುಂತಾಗಿ ಹೇಳಲ್ಪಡುತ್ತದೆ.

ಟಿಪ್ಪಣಿ:— ದ್ರವ್ಯಕ್ಕೆ ಪೃಥ್ವಿಯು ಉಪಾದಾನ ಕಾರಣ, ಜಲವು ನಿಮಿತ್ತಾದಿ ಕಾರಣ, ತೇಜ ವಾಯು ಆಕಾಶಗಳು ಕಾಠಿಣ್ಯ, ಕ್ರಿಯೆ, ಅವಕಾಶಗಳನ್ನು ಕೊಟ್ಟು ಅವುಗಳ ಸಂಪೂರ್ಣ ಅವಯವನಿಷ್ಪತ್ತಿಗೆ ಕಾರಣವೆಂದು ಹೇಮಾದ್ರಿಯು ಹೇಳು ವನು. (೨)

**ತಸ್ಮಾನ್ನೈಕರಸಂ ದ್ರವ್ಯಂ ಭೂತಸಂಘಾತಸಂಭವಾತ್ ॥**
**ನೈಕದೋಷಾಸ್ತತೋ ರೋಗಾಸ್ತತ್ರ ವ್ಯಕ್ತೋ ರಸಃ ಸ್ಮೃತಃ ॥೩॥**

**ಅವ್ಯಕ್ತೋಽನುರಸಃ ಕಿಂಚಿದಂತೇ ವ್ಯಕ್ತೋಽಪಿ ಚೇಷ್ಯತೇ ॥**

ಅರ್ಥ:— ದ್ರವ್ಯವು ಪಂಚಭೂತಗಳ ಸಮೂಹದಿಂದ ಉಂಟಾ ಗುವ ಕಾರಣ ಅದರಲ್ಲಿ ಅನೇಕ ರಸಗಳು ಇರುತ್ತವೆ. ಆದಕಾರಣ ಅದ ರಿಂದುಂಟಾಗುವ ರೋಗಗಳಲ್ಲಿ ಒಂದೇ ದೋಷವಿರದೆ ಅನೇಕವಿರುತ್ತವೆ. ದ್ರವ್ಯವನ್ನು ಬಾಯಿಯಲ್ಲಿ ಹಾಕಿಕೊಂಡ ಕೂಡಲೆ ವ್ಯಕ್ತವಾಗುವ ಧರ್ಮಕ್ಕೆ ರಸವೆನ್ನುತ್ತಾರೆ. ಅದು ಅಸ್ಪಷ್ಟವಿದ್ದರೆ, ಅಥವಾ ಬಾಯಿಯಲ್ಲಿ ಹಾಕಿದ ಕೆಲವುಕಾಲದನಂತರ ಗೊತ್ತಾಗುತ್ತಿದ್ದರೆ ಅನುರಸವೆಂದು ಕರೆಯಲ್ಪಡುತ್ತದೆ.

ಟಿಪ್ಪಣಿ:— ದ್ರವ್ಯಗಳಂತೆ ರಸಗಳೂ ಅನೇಕ ಭೂತ ತಾರತಮ್ಯಗಳಿಂದ ಉತ್ಪನ್ನವಾಗಿವೆ. ಅಂತೆಯೇ ದ್ರಾಕ್ಷೆ, ಸಕ್ಕರೆ, ಹಾಲು, ಜೇನತುಪ್ಪ ಮುಂತಾದವು ಗಳಲ್ಲಿ ಒಂದೇ ಮಧುರ ರಸವು ಭಿನ್ನವಾಗಿದೆ. ಹುಣಸೆ, ನಿಂಬೆ, ಅಮಸೋಲು ಮುಂತಾದವುಗಳಲ್ಲಿ ಹುಳಿಯು ಬೇರೆಬೇರೆಯಾಗಿದೆ. ಇದರಂತೆ ಉಳಿದ ರಸ ಗಳಲ್ಲಿಯೂ ಅನೇಕ ಭೇದಗಳು ಕಾಣುತ್ತವೆ.

ಹೇಮಾದ್ರಿಯು "ನೈಕರಸಂ ದ್ರವ್ಯಂ" ಎಂಬಲ್ಲಿಯ "ರಸ" ಶಬ್ದಕ್ಕೆ ಧರ್ಮ ಎಂಬರ್ಥವನ್ನು ಹೇಳುವನು. ಮತ್ತು ಅನುರಸದಲ್ಲಿ ಅವ್ಯಕ್ತ, ಸ್ವಲ್ಪ ವ್ಯಕ್ತ, ಕೊನೆಯಲ್ಲಿ ವ್ಯಕ್ತ ಎಂದು ಮೂರು ಭೇದಮಾಡಿರುವನು.

ವಾಯು ಮತ್ತು ಆಕಾಶಗಳಿಂದ ವಾತವೂ, ಅಗ್ನಿಯಿಂದ ಪಿತ್ತವೂ, ಜಲ ಪೃಥ್ವಿಗಳಿಂದ ಕಫವೂ (ಅ. ಸ. ಸೂ. ಅ. ೨೦) ಉಂಟಾಗಿರುವದರಿಂದ ಅವು ಗಳಿಂದುಂಟಾಗುವ ರೋಗಗಳಲ್ಲಿ ತ್ರಿದೋಷವು ಇದ್ದೇ ಇರುತ್ತದೆ. ಹೀಗೆ ಪ್ರತಿ ರೋಗವು ಸನ್ನಿಪಾತಾತ್ಮಕವಿದ್ದರೂ ಮೂರರೊಗಳ ಶಕ್ತಿಯು ಹೆಚ್ಚಿದ್ದರೆ ಮಾತ್ರ ಅದಕ್ಕೆ ಸನ್ನಿಪಾತವೆನ್ನುವರು. (೩॥)

**ಗುರ್ವಾದಯೋ ಗುಣಾ ದ್ರವ್ಯೇ ಪೃಥಿವ್ಯಾದೌ ರಸಾಶ್ರಯೇ ॥೪॥**
**ರಸೇಷು ವ್ಯಪದಿಶ್ಯಂತೇ ಸಾಹಚರ್ಯೋಪಚಾರತಃ ॥**

ಅರ್ಥ:— ಗುರು, ಲಘು ಮುಂತಾದ ಗುಣಗಳು ವಸ್ತುತಃ ರಸಕ್ಕೆ ಆಶ್ರಯವಾದ ದ್ರವ್ಯಗಳಲ್ಲಿಯೇ ಇರುತ್ತವೆ. ಹೀಗಿದ್ದುದರಿಂದ ರಸಗಳು ಗುರು, ಲಘುಗಳೆಂದು (ಮಧುರ ರಸವು ಜಡ, ಆಮ್ಲವು ಲಘು ಇತ್ಯಾದಿ) ಹೇಳುವದು ಅವುಗಳ ಸಾಹಚರ್ಯ (ಒಂದೇ ಸ್ಥಳದಲ್ಲಿರುವ) ಸಂಬಂಧದಿಂದ ಔಪಚಾರಿಕವು ಎಂದು ತಿಳಿಯಬೇಕು. (೪॥)

ತತ್ರ ದ್ರವ್ಯಂ ಗುರುಸ್ಥೂಲಸ್ಥಿರಗಂಧಗುಣೋಲ್ಬಣಮ್ ॥೫॥
ಪಾರ್ಥಿವಂ ಗೌರವಸ್ಥೈರ್ಯಸಂಘಾತೋಪಚಯಾವಹಮ್ ॥

ಅರ್ಥ:— ಅವುಗಳಲ್ಲಿ ಜಡತ್ವ, ಸ್ಥೂಲತ್ವ, ಅಚಲತ್ವ, ಗಂಧ ಈ ಧರ್ಮಗಳು ಹೆಚ್ಚಾಗಿ ಉಳ್ಳದ್ದು ಪಾರ್ಥಿವ-ದ್ರವ್ಯವು. ಅದು ಜಡತ್ವ, ಸ್ಥಿರತ್ವ, ಗಟ್ಟಿತನ, ಸ್ಥೂಲತನಗಳನ್ನುಂಟು ಮಾಡುವದು. (೫॥)

ದ್ರವಶೀತಗುರುಸ್ನಿಗ್ಧಮಂದಸಾಂದ್ರಗುಣೋಲ್ಬಣಮ್ ॥೬॥
ಆಪ್ಯಂ ಸ್ನೇಹನವಿಷ್ಯಂದಕ್ಲೇದಪ್ರಹ್ಲಾದಬಂಧಕೃತ್ ॥

ಅರ್ಥ:— ದ್ರವ ಶೀತ ಜಡ ಸ್ನಿಗ್ಧ ಮಂದ ಸಾಂದ್ರ ಗುಣಗಳು ಹೆಚ್ಚಾಗಿ ಇದ್ದದ್ದು ಆಪ್ಯ (ನೀರಿನ) ದ್ರವ್ಯವು. ಇದು ಸ್ನಿಗ್ಧತ್ವ, ಸ್ರಾವ, ಕ್ಲೇದ, ಆಹ್ಲಾದ, ಕೂಡಿಸೋಣಗಳನ್ನು ಮಾಡುವದು. (೬॥)

ರುಕ್ಷತೀಕ್ಷ್ಣೋಷ್ಣವಿಶದಸೂಕ್ಷ್ಮರೂಪಗುಣೋಲ್ಬಣಮ್ ॥೭॥
ಆಗ್ನೇಯಂ ದಾಹಭಾವರ್ಣಪ್ರಕಾಶಪಚನಾತ್ಮಕಮ್ ॥

ಅರ್ಥ:— ರೂಕ್ಷ ತೀಕ್ಷ್ಣ ಉಷ್ಣ ಸ್ವಚ್ಛ ಸೂಕ್ಷ್ಮ ರೂಪಗಳು ಹೆಚ್ಚಾಗಿ ಉಳ್ಳದ್ದು ಆಗ್ನೇಯ-ದ್ರವ್ಯವು. ಅದು ದಾಹ, ಕಾಂತಿ, ವರ್ಣ, ಪ್ರಕಾಶ, ಪಚನಗಳನ್ನುಂಟುಮಾಡುವದು. (೭॥)

ವಾಯವ್ಯಂ ರೂಕ್ಷವಿಶದಲಘುಸ್ಪರ್ಶಗುಣೋಲ್ಬಣಮ್ ॥೮॥
ರೌಕ್ಷ್ಯಲಾಘವವೈಶದ್ಯವಿಚಾರಗ್ಲಾನಿಕಾರಕಮ್ ॥
ನಾಭಸಂ ಸೂಕ್ಷ್ಮವಿಶದಲಘುಶಬ್ದಗುಣೋಲ್ಬಣಮ್ ॥೯॥
ಸೌಷಿರ್ಯಲಾಘವಕರಮ್ ..............................

ಅರ್ಥ:— ರುಕ್ಷ ಸ್ವಚ್ಛ ಲಘು ಸ್ಪರ್ಶಗುಣಗಳು ಹೆಚ್ಚಾಗಿ ಉಳ್ಳದ್ದು ವಾಯುವ್ಯ-ದ್ರವ್ಯವು. ಇದು ರುಕ್ಷತೆ ಲಘುತ್ವ ಸ್ವಚ್ಛತೆ ವಿವಿಧ ಕ್ರಿಯೆ ಗ್ಲಾನಿಗಳನ್ನುಂಟು ಮಾಡುವದಾಗಿರುವದು. ಸೂಕ್ಷ್ಮ ಸ್ವಚ್ಛ ಲಘು ಶಬ್ದ ಗುಣಗಳುಳ್ಳದ್ದು ನಾಭಸ-(ಆಕಾಶದ)-ದ್ರವ್ಯವು. ಇದು ಪೊಳ್ಳು ಲಘುತ್ವಗಳನ್ನುಂಟುಮಾಡುವದು. (೯)

..................................ಜಗತ್ಯೇವಮನೌಷಧಮ್ ॥
ನ ಕಿಂಚಿದ್ವಿದ್ಯತೇ ದ್ರವ್ಯಂ ವಶಾನ್ನಾನಾರ್ಥಯೋಗಯೋಃ ॥೧೦॥

ಅರ್ಥ:— ಈ ಪ್ರಕಾರದ ಎಲ್ಲ ದ್ರವ್ಯಗಳಲ್ಲಿ ಪಂಚಮಹಾಭೂತಗಳ ಗುರುತ್ವ ಮುಂತಾದ ಗುಣಗಳಿರುವದರಿಂದ ನಾನಾತರದ ಪ್ರಯೋಜನ ಸಂಯೋಜನಗಳಿಂದ ಔಷಧವಾಗದೇ ಇರುವ ದ್ರವ್ಯವು ಯಾವದೂ ಜಗತ್ತಿನಲ್ಲಿ ಇಲ್ಲ. (೧೦)

ದ್ರವ್ಯಮೂರ್ಧ್ವಗಮಂ ತತ್ರ ಪ್ರಾಯೋಽಗ್ನಿಪವನೋತ್ಕಟಮ್ ॥
ಅಧೋಗಾಮಿ ಚ ಭೂಯಿಷ್ಠಂ ಭೂಮಿತೋಯಗುಣಾಧಿಕಮ್
॥೧೧॥
ಇತಿ ದ್ರವ್ಯಂ, ರಸೋ ಭೇದೈರುತ್ತರತ್ರೋಪದೇಕ್ಷ್ಯತೇ ॥

ಅರ್ಥ:— ಇವುಗಳಲ್ಲಿ ಅಗ್ನಿವಾಯುಗಳು ಹೆಚ್ಚಾಗಿ ಉಳ್ಳ ದ್ರವ್ಯವು ಪ್ರಾಯಃ ಊರ್ಧ್ವಗಾಮಿಯಾಗಿರುವದು (ವಾಮಕ); ಭೂಮಿ ಜಲಗಳು ಹೆಚ್ಚಾಗಿಯುಳ್ಳ ದ್ರವ್ಯವು ಬಹಳ ಮಾಡಿ ಅಧೋಗಾಮಿಯಾಗಿರುವದು. (ರೇಚಕ). ಇದಿಷ್ಟು ದ್ರವ್ಯದ ವರ್ಣನೆಯಾಯಿತು. ರಸಗಳ ಭೇದಗಳನ್ನು ಮುಂದೆ ಹೇಳುವೆವು.

**ಟಿಪ್ಪಣಿ:—** ಔಷಧವು ಶೋಧನ, ಶಮನ ಎಂದು ಎರಡು ಪ್ರಕಾರವು. ಶೋಧನವು ಊರ್ಧ್ವಗಾಮಿ, ಅಧೋಗಾಮಿ ಎಂದು ಎರಡು ಪ್ರಕಾರವಿರುವದು. ಅಗ್ನಿವಾಯುಗಳು ಹೆಚ್ಚಾಗಿ ಉಳ್ಳದ್ದು ಊರ್ಧ್ವಗಾಮಿಯು; ಏಕೆಂದರೆ ಅಗ್ನಿವಾಯುಗಳ ಗತಿಯು ಮೇಲಕ್ಕೆ ಇರುತ್ತದೆ. ಭೂಮಿ ಜಲಾಧಿಕವು ಅಧೋಗಾಮಿಯು; ಏಕೆಂದರೆ ಭೂಮಿ ಜಲಗಳ ಗತಿಯು ಕೆಳಗೆ ಇರುತ್ತದೆ. ಇದರಂತೆ ಆಕಾಶಾಧಿಕವು ಶಮನ, ವಾತಾಧಿಕವು ಗ್ರಾಹಿ, ಅಗ್ನ್ಯಧಿಕವು ದೀಪನಪಾಚನ, ಉಭಯಾಧಿಕವು ಲೇಖನ, ಭೂಮ್ಯುದಕಾಧಿಕವು ಬಂಧಣ, ಗುಣಸಂಕರ್ಷವಿದರಿ

[illegible] ಅದರ ಕಾರ್ಯ ನಿರ್ಣಯಮಾಡಬೇಕು. ಈ ಶ್ಲೋಕದಲ್ಲಿ "[illegible]" "[illegible]" ಎನ್ನುವ ಕಾರಣವೇನೆಂದರೆ ದಂತಿಯು ( [illegible] ) ಅಗ್ನಿವರ್ಧನಾಧಿಕವಿದ್ದರೂ ರೇಚಕವಾಗಿದೆ. ಜ್ಯೇಷ್ಠಮಧುವು ಭೂಮಿ [illegible] ವಾಮಕವಾಗಿದೆ. (ಹೇಮಾದ್ರಿ)

ವೀರ್ಯಂ ಪುನರ್ವದಂತ್ಯೇಕೇ ಗುರು ಸ್ನಿಗ್ಧಂ ಹಿಮಂ ಮೃದು ||೧೨||
ಲಘು ರೂಕ್ಷೋಷ್ಣತೀಕ್ಷ್ಣಂ ಚ ತದೇವಂ ಮತಮಷ್ಟಧಾ ||
ಚರಕಸ್ತ್ವಾಹ ವೀರ್ಯಂ ತತ್ ಕ್ರಿಯತೇ ಯೇನ ಯಾ ಕ್ರಿಯಾ ||೧೩||

ನಾವೀರ್ಯಂ ಕುರುತೇ ಕಿಂಚಿತ್ ಸರ್ವಾ ವೀರ್ಯಕೃತಾ ಹಿ ಸಾ ||
ಗುರ್ವಾದಿಷ್ವೇವ ವೀರ್ಯಾಖ್ಯಾ ತೇನಾನ್ವರ್ಥೇತಿ ವರ್ಣ್ಯತೇ ||೧೪||

ಸಮಗ್ರಗುಣಸಾರೇಷು ಶಕ್ತ್ಯುತ್ಕರ್ಷವಿವರ್ತಿಷು ||
ವ್ಯವಹಾರಾಯ ಮುಖ್ಯತ್ವಾದ್ಬಹ್ವಗ್ರಗ್ರಹಣಾದಪಿ ||೧೫||

ಅತಶ್ಚ ವಿಪರೀತತ್ವಾತ್ಸಂಭವತ್ಯಪಿ ನೈವ ಸಾ ||
ವಿವಕ್ಷ್ಯತೇ ರಸಾದ್ಯೇಷು ವೀರ್ಯಂ ಗುರ್ವಾದಯೋ ಹ್ಯತಃ ||೧೬||

ಅರ್ಥ:— ವೀರ್ಯವು ಗುರು, ಸ್ನಿಗ್ಧ, ಶೀತ, ಮೃದು, ಲಘು, ರೂಕ್ಷ, ಉಷ್ಣ, ತೀಕ್ಷ್ಣವೆಂದು ಎಂಟು ಪ್ರಕಾರ ಎಂದು ಕೆಲವರು ಹೇಳುತ್ತಾರೆ. ಆದರೆ "ಯಾತರಿಂದ ಯಾವದಾದರೂ ಕೆಲಸ ಮಾಡಲ್ಪಡುತ್ತದೋ ಅದೇ ವೀರ್ಯವು. ವೀರ್ಯವಲ್ಲದ್ದು ಯಾವದನ್ನೂ ಮಾಡಲಾರದು. ಕಾರಣ ಎಲ್ಲವೂ ವೀರ್ಯಕೃತವೇ ಮತ್ತು ಗುರ್ವಾದಿಗುಣಗಳೇ ಇತರ ಗುಣಗಳಿಗಿಂತ ಸ್ಥಿರ ಮತ್ತು ಅಧಿಕ ಶಕ್ತಿಯುಳ್ಳಂಥವೂ ಮತ್ತು ವ್ಯವಹಾರದಲ್ಲಿ ಮುಖ್ಯವೂ ಆಗಿರುತ್ತವೆ. ಮತ್ತು ಇವುಗಳ ಗ್ರಹಣದಿಂದ ಅನೇಕ ಗುಣಗಳ ಗ್ರಹಣವಾಗುತ್ತದೆ. ಶಾಸ್ತ್ರಗಳಲ್ಲಿ ಉಳಿದ ಗುಣಗಳಿಗಿಂತ ಇವನ್ನೇ ಮೊದಲು ಗ್ರಹಣಮಾಡುವರು. ಆದ್ದರಿಂದ ಗುರ್ವಾದಿಗಳಲ್ಲಿಯೇ ವೀರ್ಯಶಬ್ದವು ಯೋಗರೂಢಿಯಿಂದ ಅನ್ವರ್ಥವು. ಆದ್ದರಿಂದ ಇವುಗಳ ವಿಪರೀತಗುಣಗಳುಳ್ಳ ರಸಾದಿಗಳಲ್ಲಿ ವೀರ್ಯ ಶಬ್ದವು ಸಂಭವಿಸುತ್ತಿದ್ದರೂ ನಾವು ಆ ಶಬ್ದದ ಪ್ರಯೋಗವನ್ನು ಮಾಡಲಿಚ್ಛಿಸುವದಿಲ್ಲ. ಆದ ಕಾರಣ ಗುರ್ವಾದಿಗಳೇ ವೀರ್ಯ" ಎಂದು ಚರಕಾಚಾರ್ಯರ ಮತವು.

**ಉಷ್ಣಂ ಶೀತಂ ದ್ವಿಧೈವಾನ್ಯೇ ವೀರ್ಯಮಾಚಕ್ಷತೇಽಪಿ ಚ ।**
**ನಾನಾತ್ಮಕಮಪಿ ದ್ರವ್ಯಮಗ್ನಿಷೋಮೌ ಮಹಾಬಲೌ ॥೧೭॥**

**ವ್ಯಕ್ತಾವ್ಯಕ್ತಂ ಜಗದಿವ ನಾತಿಕ್ರಾಮತಿ ಜಾತುಚಿತ್ ॥**

ಅರ್ಥಃ— ಕೆಲವರು (ಸುಶ್ರುತಾಚಾರ್ಯರು ಮೊದಲಾದವರು) ಉಷ್ಣ, ಶೀತವೆಂಬ ಎರಡು ಭೇದಗಳು ವೀರ್ಯದಲ್ಲಿ ಇರುತ್ತವೆಂದು ಹೇಳುತ್ತಾರೆ. ಹೇಗೆ ಈ ಜಗತ್ತು ಅನೇಕ ವಿಧವಾಗಿದ್ದರೂ ವ್ಯಕ್ತ, ಅವ್ಯಕ್ತಗಳ ಹೊರ್ತಾಗಿ ಇರುವದಿಲ್ಲವೋ ಅದರಂತೆ ದ್ರವ್ಯಗಳು ಅನೇಕ ವಿಧವಾಗಿದ್ದರೂ ಅಗ್ನಿ (ಉಷ್ಣ), ಸೋಮ (ಶೀತ) ಗಳನ್ನು ಬಿಟ್ಟು ಇರುವದಿಲ್ಲ. ಯಾಕೆಂದರೆ ಇವು (ಇತರ ಗುಣಗಳನ್ನು ಗೆಲ್ಲುವ ಗುರ್ವಾದಿಗಳನ್ನು ಗೆಲ್ಲುವದರಿಂದ) ಬಲಿಷ್ಠವಾಗಿವೆ. (೧೭॥)

**ತತ್ರೋಷ್ಣಂ ಭ್ರಮತೃಡ್ಗ್ಲಾನಿಸ್ವೇದದಾಹಾಶುಪಾಕಿತಾಃ ॥೧೮॥**
**ಶಮಂ ಚ ವಾತಕಫಯೋಃ ಕರೋತಿ ಶಿಶಿರಂ ಪುನಃ ॥**

**ಹ್ಲಾದನಂ ಜೀವನಂ ಸ್ತಂಭಂ ಪ್ರಸಾದಂ ರಕ್ತಪಿತ್ತಯೋಃ ॥೧೯॥**

ಅರ್ಥ:— ಅವುಗಳಲ್ಲಿ ಉಷ್ಣವೀರ್ಯವು ಭ್ರಮ, ನೀರಡಿಕೆ, ಗ್ಲಾನಿ, ಸ್ವೇದ, ದಾಹ, ಶೀಘ್ರವಾಗಿ ಪಚನ, ವಾತ-ಕಫಗಳ ಶಮನಗಳನ್ನು ಮಾಡುತ್ತದೆ. ಶೀತ ವೀರ್ಯವು ಆಲ್ಹಾದನ, ಓಜೋವರ್ಧನ, ಸ್ತಂಭನ, (ಆಂಕುಚನ), ರಕ್ತಪಿತ್ತಶೋಧನಗಳನ್ನು ಮಾಡುವದು. (೧೯)

**ಜಾಠರೇಣಾಗ್ನಿನಾ ಯೋಗಾದ್ಯದುದೇತಿ ರಸಾಂತರಮ್ ॥**
**ರಸಾನಾಂ ಪರಿಣಾಮಾಂತೇ ಸ ವಿಪಾಕ ಇತಿ ಸ್ಮೃತಃ ॥೨೦॥**

ಅರ್ಥಃ— ಜಠರಾಗ್ನಿಯ ಸಂಯೋಗದಿಂದ ರಸಗಳ ಪರಿಪಾಕವಾಗಿ ಆಹಾರ ಪಚನವಾದ ನಂತರ ಉಂಟಾಗುವ ಎರಡನೇ ರಸವು ವಿಪಾಕವೆಂದು ಕರೆಯಲ್ಪಡುತ್ತದೆ.

ಟಿಪ್ಪಣಿ:— ಆಹಾರವನ್ನು ಬಾಯಿಯಲ್ಲಿ ಹಾಕಿದ ನಂತರ ಅದು ಯಾವ ರಸದ್ದಿದ್ದರೂ ಪ್ರಥಮಾವಸ್ಥೆಯಲ್ಲಿ (ಅನ್ನಂ ಷಡ್ರಸಮಪ್ಯನ್ನಂ ಮಧುರೀಭೂತಮೀರಯೇತ್) ಮಧುರವಾಗುವುದು. ನಂತರ ಕ್ರಮದಿಂದ ಹುಳಿ ಮತ್ತು ಕಟುಕವಾಗುವುದೆಂದು ಹೇಳಿದೆ. ಈ ಅವಸ್ಥಾಪಾಕದ ನಂತರ ಆಗುವ ಪಾಕವು ವಿಪಾಕವೆಂದು ಕರೆಯಲ್ಪಡುತ್ತದೆ. (ಪ. ೨೦)

"ಆಹಾರವು ಸ್ವಭಾವ ಆಮಾಶಯ ಪಕ್ವಾಶಯ ಸ್ಥಾನಗಳಲ್ಲಿ ಸ್ಥಾನ ಮಹಿಮೆಯಿಂದ ಮಧುರ, ಅಮ್ಲ, ಕಟುವಾಗಿದ್ದರೂ ಅದರ ಮೂಲ ರಸ (ಪ್ರಾಕೃತ) ವು ನಷ್ಟವಾಗುವುದಿಲ್ಲ. ಆದರೆ ಆಯಾ ಅವಸ್ಥೆಗಳಲ್ಲಿ ಮಧುರಾದಿ ರಸಗಳನ್ನು ಹೆಚ್ಚು ವ್ಯಕ್ತ ಮಾಡುವವು, ಅನೇಕ ರಸಗಳನ್ನು ಒಮ್ಮೆಲೇ ಸೇವಿಸಿದರೆ ಹೇಗೆ ಎಲ್ಲ ರಸಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡುವವೋ ಹಾಗೆಯೇ ಈ ಅವಸ್ಥಾಪಾಕವು ತನ್ನ ಕಾರ್ಯವನ್ನೂ, ರಸಾದಿಗಳು ತಮ್ಮ ಕಾರ್ಯವನ್ನು ಮಾಡುತ್ತವೆ. ಅವಸ್ಥಾಪಾಕವು ಮಧುರವಾಗಿದ್ದರೆ ಕಫಜನಕ ಮಧುರಾದಿ ರಸಗಳು ಅನುಗುಣವಾದ್ದರಿಂದ ಹೆಚ್ಚು ಕಫವನ್ನುಂಟುಮಾಡುವವು. ವಿಪರೀತವಾದ ಪಾಕವಿದ್ದರೆ ಅಲ್ಪ ಕಫವನ್ನುಂಟುಮಾಡುವವು. ವಿಪಾಕವು ಈ ಕಾಲದಲ್ಲಿರದೆ ರಸ-ಮಲ ವಿವೇಕ ಕಾಲದಲ್ಲಿದ್ದು ಈ ಅವಸ್ಥಾಪಾಕದಿಂದುಂಟಾದ ದೋಷಗಳನ್ನು ಹೆಚ್ಚು ಅಥವಾ ಕಡಿಮೆ ಮಾಡುವದು" ಎಂದು ಕೆಲವರು ಹೇಳುವರು. (೨೦)

**ಸ್ವಾದುಃ ಪಟುಶ್ಚ ಮಧುರಮಮ್ಲೋಽಮ್ಲಂ ಪಚ್ಯತೇ ರಸಃ ॥**
**ತಿಕ್ತೋಷಣಕಷಾಯಾಣಾಂ ವಿಪಾಕಃ ಪ್ರಾಯಶಃ ಕಟುಃ ॥೨೧॥**

**ರಸೈರಸೌ ತುಲ್ಯಫಲಃ...............................**

ಅರ್ಥ:— ಬಹಳ ಮಾಡಿ ಸವಿ ಮತ್ತು ಉಪ್ಪು ರಸಗಳ ವಿಪಾಕವು ಮಧುರ; ಅಮ್ಲದ ವಿಪಾಕವು ಅಮ್ಲ; ಕಹಿ, ಕಾರ, ಒಗರು ರಸಗಳ ವಿಪಾಕವು ಕಾರ ಇರುತ್ತದೆ. ಈ ವಿಪಾಕ ರಸದ ಪರಿಣಾಮವು ಪ್ರಾಕೃತ ರಸಗಳ ಪರಿಣಾಮದಂತೆಯೇ ಇರುತ್ತದೆ.

ಟಿಪ್ಪಣಿ:— ಮಧುರವಾದ ಭತ್ತದ ವಿಪಾಕವು ಅಮ್ಲ; ಉಪ್ಪು ರಸದ ಕಾಚಲವಣದ ವಿಪಾಕವು ಕಾರ; ಹುಳಿ, ಕಹಿ, ಕಾರಗಳಾದ ದಾಳಿಂಬ, ಪಡವಲ, ಹಿಪ್ಪಲಿಗಳ ವಿಪಾಕವು ಮಧುರ; ಒಗರು ರಸದ ಹುರುಳಿಯ ವಿಪಾಕವು ಅಮ್ಲವಿದ್ದುದರಿಂದ 'ಬಹಳ ಮಾಡಿ' ಎಂದು ಹೇಳಿರುವರು. (೨೧)

..........................ತತ್ರ ದ್ರವ್ಯಂ ಶುಭಾಶುಭಮ್ ।
ಕಿಂಚಿದ್ರಸೇನ ಕುರುತೇ ಕರ್ಮ ಪಾಕೇನ ಚಾಪರಮ್ ॥೭॥

ಗುಣಾಂತರೇಣ ವೀರ್ಯೇಣ ಪ್ರಭಾವೇಣೈವ ಕಿಂಚನ ॥

ಅರ್ಥ:— ಅದರಲ್ಲಿ ಕೆಲವೊಂದು ದ್ರವ್ಯವು ತನ್ನ ರಸದಿಂದ ಒಂದು ಶುಭ ಅಥವಾ ಅಶುಭ ಕರ್ಮವನ್ನು ಮಾಡುತ್ತದೆ; ಹಾಗೂ ವಿಪಾಕದಿಂದ ಅಥವಾ ಗುರ ಮುಂತಾದ ಗುಣಗಳಿಂದ ಅಥವಾ ವೀರ್ಯದಿಂದ ಇಲ್ಲವೇ ಪ್ರಭಾವದಿಂದ ಬೇರೆ ಬೇರೆ ಅಂಥ ಕಾರ್ಯಗಳನ್ನು ಮಾಡುತ್ತದೆ.

ಟಿಪ್ಪಣಿ:— ಜೇನತುಪ್ಪವು ಕಷಾಯ ರಸದಿಂದ ಪಿತ್ತವನ್ನೂ, ಕಟುವಿಪಾಕ ದಿಂದ ಕಫವನ್ನೂ ಕಳೆಯುತ್ತದೆ. ಆಮ್ಲವಾದ ಗಂಜಿಯು ರೌಕ್ಷ್ಯಗುಣದಿಂದ ಕಫವನ್ನು ಕಳೆಯುವದು. ಮಹತ್ಪಂಚಮೂಲವು ಒಗರು-ಕಹಿ ಗುಣದಿಂದ ವಾತನಾಶಕವಾಗಿದ್ದರೂ ಉಷ್ಣವೀರ್ಯವಿದ್ದುದರಿಂದ ಪಿತ್ತನಾಶಕವಾಗಿರುವದಿಲ್ಲ. ಮದ್ಯವು ಆಮ್ಲ-ಉಷ್ಣವಿದ್ದರೂ ಪ್ರಭಾವದಿಂದ ಕ್ಷೀರವೃದ್ಧಿಯನ್ನು ಮಾಡುವದು. ತೈಲವು ಕಟುಪಾಕದಿಂದ ಮಲ ಮೂತ್ರಬಂಧವನ್ನು ಮಾಡುವದು. ನೆಲ್ಲೀ ಕಾಯಿಯು ಶೀತವೀರ್ಯ ಸ್ವಾದುಪಾಕದಿಂದ ಪಿತ್ತವನ್ನೂ, ಲಘುತ್ವ ಮತ್ತು ರುಕ್ಷಗುಣದಿಂದ ಕಫವನ್ನೂ ನಾಶಮಾಡಿದರೂ ರೌಕ್ಷ್ಯ, ಶೈತ್ಯ, ಲಘುತ್ವ ಗುಣ ವಿದ್ದುದರಿಂದ ವಾತವನ್ನು ಕಳೆಯದು. ಸೈಂಧವ ಲವಣವು ಸ್ವಾದುಪಾಕದಿಂದ ಪಿತ್ತವನ್ನು ಕಳೆಯುವದು. ಈ ಶ್ಲೋಕದಲ್ಲಿಯ ಕಿಂಚಿತ್, ಅಪರಂ, ಕಿಂಚನ ಎಂಬ ಪದಗಳನ್ನು ಕರ್ತೃವಾದ ದ್ರವ್ಯಕ್ಕೆ ವಿಶೇಷಣ ಮಾಡಿದರೆ ಬೇರೆ ಬೇರೆ ದ್ರವ ಗಳು ಒಂದು ಕಾರ್ಯವನ್ನು ಮಾಡುತ್ತವೆ ಎಂದು ಅರ್ಥವಾಗುವದು. ಆದರೆ ಕರ್ಮಕಾರಕವಾದ ಕರ್ಮಕ್ಕೆ ಅದನ್ನು ವಿಶೇಷಣ ಮಾಡಿದರೆ ಒಂದೇ ದ್ರವ್ಯವು ಬೇರೆ ಬೇರೆ ಕಾರ್ಯಮಾಡುವದು ಎಂಬ ಅರ್ಥವನ್ನು ಹೇಳುವವು. ಎರಡೂ ಅರ್ಥಗಳು ಇಲ್ಲಿ ವಿವಕ್ಷಿತವಾಗಿವೆ. (೭॥)

ಯದ್ದ್ರವ್ಯೇ ರಸಾದೀನಾಂ ಬಲವತ್ತ್ವೇನ ವರ್ತತೇ ॥೨॥

ಅಭಿಭೂಯೇತರಾಂಸ್ತತ್ತತ್ಕಾರಣತ್ವಂ ಪ್ರಪದ್ಯತೇ ॥

ವಿರುದ್ಧಗುಣಸಂಯೋಗೇ ಭೂಯಸಾಲ್ಪಂ ಹಿ ಜೀಯತೇ ॥೨॥

ಅರ್ಥ:— ದ್ರವ್ಯದಲ್ಲಿದ್ದ ರಸ, ವೀರ್ಯ, ವಿಪಾಕ, ಪ್ರಭಾವಗಳಲ್ಲಿ ಯಾವದು ಬಲಿಷ್ಠವಾಗಿರುತ್ತದೋ ಅದು ಎರಡನೇದನ್ನು ಹಿಂದೂಡಿ ತನ್ನ

ಕಾರ್ಯವನ್ನು ಮಾಡುತ್ತದೆ. ವಿರುದ್ಧ ಗುಣಗಳ ಸಂಯೋಗವಿರಲು, ಹೆಚ್ಚಿದ್ದ ಗುಣವು ಅಲ್ಪ ಗುಣವನ್ನು ಗೆಲ್ಲುತ್ತದೆ. (೨೪)

**ರಸಂ ವಿಪಾಕಸ್ತೌ ವೀರ್ಯಂ ಪ್ರಭಾವಸ್ತಾನ್ಯಪೋಹತಿ ॥**
**ಬಲಸಾಮ್ಯೇ ರಸಾದೀನಾಮಿತಿ ನೈಸರ್ಗಿಕಂ ಬಲಮ್ ॥೨೫॥**

**ರಸಾದಿಸಾಮ್ಯೇ ಯತ್ಕರ್ಮ ವಿಶಿಷ್ಟಂ ತತ್ಪ್ರಭಾವಜಮ್ ॥**

ಅರ್ಥ:— ಎಲ್ಲವೂ ಸಮಬಲದಲ್ಲಿದ್ದರೆ, ವಿಪಾಕವು ರಸವನ್ನೂ, ವೀರ್ಯವು ರಸ ವಿಪಾಕಗಳನ್ನೂ, ಪ್ರಭಾವವು ರಸ ವೀರ್ಯ ವಿಪಾಕಗಳನ್ನೂ ಗೆಲ್ಲುತ್ತವೆ. ಇದು ರಸಾದಿಗಳ ಸ್ವಾಭಾವಿಕ ಬಲವು. ರಸ ವೀರ್ಯ ವಿಪಾಕಗಳು ಸಮವಾಗಿದ್ದರೂ ದ್ರವ್ಯಗಳ ಕಾರ್ಯಗಳಲ್ಲಿ ಆಗುವ ಹೆಚ್ಚುಕಡಿಮೆಯು ಪ್ರಭಾವ ಜನ್ಯವು. (೨೫॥)

**ದಂತೀ ರಸಾದ್ಯೈಸ್ತುಲ್ಯಾಽಪಿ ಚಿತ್ರಕಸ್ಯ ವಿರೇಚನೀ ॥ ॥೨೬॥**

**ಮಧುಕಸ್ಯ ಚ ಮೃದ್ವೀಕಾ ಘೃತಂ ಕ್ಷೀರಸ್ಯ ದೀಪನಮ್ ॥**

ಅರ್ಥ.— ದಂತೀಮೂಲ ಮತ್ತು ಚಿತ್ರಕ ಇವುಗಳ ರಸ ವೀರ್ಯ ವಿಪಾಕಗಳು ಒಂದೇ ಆಗಿದ್ದರೂ ದಂತೀಮೂಲವು ರೇಚಕವದೆ. ಆದರೆ ಚಿತ್ರಕವು ಇರುವದಿಲ್ಲ. ಇದರಂತೆ ಜೇಷ್ಠಮಧು ಮತ್ತು ದ್ರಾಕ್ಷೆಗಳ ರಸಾದಿಗಳು ಒಂದೇ ಇದ್ದರೂ ದ್ರಾಕ್ಷೆಯು ರೇಚಕವು. ಜೇಷ್ಠಮಧು ಅಲ್ಲ. ಇದರಂತೆ ತುಪ್ಪ ಹಾಲುಗಳ ರಸಾದಿಗಳು ಸಮವಿದ್ದರೂ ತುಪ್ಪದಂತೆ ಹಾಲು ದೀಪಕವಲ್ಲ. ಈ ಗುಣ ಭೇದವು ಪ್ರಭಾವದಿಂದ ಉಂಟಾದದ್ದು. (೨೬॥)

**ಇತಿ ಸಾಮಾನ್ಯತಃ ಕರ್ಮ ದ್ರವ್ಯಾದೀನಾಂ ಪುನಶ್ಚ ತತ್ ॥೨೭॥**

**ವಿಚಿತ್ರಪ್ರತ್ಯಯಾರಬ್ಧದ್ರವ್ಯಭೇದೇನ ಭಿದ್ಯತೇ ॥**
**ಸ್ವಾದುರ್ಗುರುಶ್ಚ ಗೋಧೂಮೋ ವಾತಜಿದ್ವಾತಕೃದ್ಯವಃ ॥೨೮॥**

**ಉಷ್ಣಾ ಮತ್ಸ್ಯಾಃ ಪಯಃ ಶೀತಂ ಕಟುಃ ಸಿಂಹೋ ನ ಸೂಕರಃ ॥**

ಅರ್ಥ:— ಈ ಪ್ರಕಾರ ದ್ರವ್ಯ ಮೊದಲಾದವುಗಳ ಕರ್ಮಗಳನ್ನು ಸಾಮಾನ್ಯವಾಗಿ ಹೇಳಿದೆವು. ಆದರೆ ಕೆಲವು ದ್ರವ್ಯಗಳ ರಚನೆಯು ವಿಚಿತ್ರ ರೀತಿಯಿಂದ ಆಗಿರುವದರಿಂದ ಅವುಗಳ ಕರ್ಮಗಳಲ್ಲಿ ಭೇದವಾಗಿರುತ್ತದೆ. ಉದಾ:— ಗೋದಿ ಮತ್ತು ಜವೆ ಇವೆರಡೂ ಮಧುರವೂ ಗುರುವೂ ಆಗಿರುತ್ತವೆ. ಆದರೆ ಗೋದಿಯು ವಾತನಾಶಕವು. ಜವೆಯು ವಾತಕಾರಕವು. ಆದರಂತೆ ಮೀನ ಮತ್ತು ಹಾಲುಗಳು ಒಂದೇ ಗುಣವುಳ್ಳವುಗಳಾಗಿದ್ದರೂ ಮೀನಗಳು ಉಷ್ಣ,ಹಾಲು ಶೀತ ಇದರಂತೆ ಸಿಂಹ ಮತ್ತು ಹಂದಿಗಳು ಒಂದೇ ಗುಣವುಳ್ಳವಿದ್ದರೂ ಸಿಂಹವು ಕಾರವು, ಹಂದಿಯು ಸೀಯಾಗಿರುವದು

**ಟಿಪ್ಪಣಿ:—** ದ್ರವ್ಯಗಳಲ್ಲಿ "ಸಮಾನ ಪ್ರತ್ಯಯಾರಬ್ಧ" "ವಿಚಿತ್ರ ಪ್ರತ್ಯಯಾರಬ್ಧ" ಎಂದು ಎರಡು ಭೇದಗಳು. ರಸಾದಿಗಳನ್ನುಂಟುಮಾಡಿದ ಮಹಾಭೂತ ಸನ್ನಿವೇಶವೇ ದ್ರವ್ಯವನ್ನುಂಟುಮಾಡಿದ್ದರೆ ಆ ದ್ರವ್ಯವು 'ಸಮಾನ ಪ್ರತ್ಯಯಾರಬ್ಧ' ವೆಂದೂ ಇಲ್ಲವಾದರೆ 'ವಿಚಿತ್ರಪ್ರತ್ಯಯಾರಬ್ಧ' ವೆಂದೂ ಕರೆಯಲ್ಪಡುತ್ತವೆ. ಈ 'ವಿಚಿತ್ರಪ್ರತ್ಯಯಾರಬ್ಧ' ದ್ರವ್ಯಗಳ ರಸಾದಿಗಳ ಕರ್ಮಗಳು 'ಪೂರ್ವದಲ್ಲಿ ಹೇಳಿದ ರಸಾದಿಗಳ ಕರ್ಮಗಳಂತೆ ಇರುವದಿಲ್ಲ. ಆದ್ದರಿಂದ ಅವುಗಳ ರಸಾದಿಗಳಿಂದ ಅವುಗಳ ಕಾರ್ಯವು ತಿಳಿಯಲು ಮಾರ್ಗವಿಲ್ಲದ್ದರಿಂದ ಅಂಥ ದ್ರವ್ಯದ ಕರ್ಮಗಳನ್ನು ಮುಖದಿಂದಲೇ ಹೇಳಬೇಕಾಗುವದು. (೨೮॥)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ದ್ರವ್ಯಾದಿ ವಿಜ್ಞಾನೀಯೋ ನಾಮ ನವಮೋಽಧ್ಯಾಯಃ ಸಮಾಪ್ತಃ ।**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ '**ರಹಸ್ಯಪ್ರಕಾಶಿನೀ**' ಎಂಬ '**ಅಷ್ಟಾಂಗಹೃದಯ**' ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ **ದ್ರವ್ಯಾದಿ ವಿಜ್ಞಾನೀಯ** ಎಂಬ ೯ನೆಯ ಅಧ್ಯಾಯವು ಮುಗಿದುದು.



# ೧೦ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ 'ರಸ ಭೇದಗಳನ್ನು ಮುಂದೆ ಹೇಳುವೆವು' ಎಂದು ಹೇಳಿದ ಪ್ರಕಾರ ರಸಭೇದಗಳನ್ನು ಹೇಳುತ್ತಾರೆ.

**ಅಥಾತೋ ರಸಭೇದೀಯಮಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥ:— ಇನ್ನು ಮೇಲೆ ರಸಭೇದೀಯ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ**

ಅರ್ಥ:— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದ್ದಾರೆ.

**ಕ್ಷ್ಮಾಂಭೋಽಗ್ನಿಕ್ಷ್ಮಾಂಬುತೇಜಃಖವಾಯ್ವಗ್ನ್ಯನಿಲಗೋಽನಿಲೈಃ ॥**
**ದ್ವಯೋಲ್ಬಣೈಃ ಕ್ರಮಾದ್ಭೂತೈರ್ಮಧುರಾದಿರಸೋದ್ಭವಃ ॥೧॥**

ಅರ್ಥ:— ಭೂ ಮತ್ತು ಜಲಗಳು ಹೆಚ್ಚಾಗಿಯುಳ್ಳ ಪಂಚಭೂತಗಳಿಂದ ಮಧುರ ರಸವೂ, ಭೂಮಿ ಅಗ್ನಿಗಳು ಹೆಚ್ಚಾಗಿಯುಳ್ಳ ಅವುಗಳಿಂದ ಅಮ್ಲರಸವೂ, ನೀರು ಅಗ್ನಿ ಹೆಚ್ಚಾಗಿಯುಳ್ಳ ಅವುಗಳಿಂದ ಉಪ್ಪು ರಸವೂ, ಆಕಾಶವಾಯು ಹೆಚ್ಚಾಗಿಯುಳ್ಳ ಅವುಗಳಿಂದ ಕಹಿ ರಸವೂ, ಅಗ್ನಿ ವಾಯುಗಳು ಬಹಳವಾಗಿಯುಳ್ಳ ಅವುಗಳಿಂದ ಕಾರ ರಸವೂ, ಪೃಥ್ವಿವಾಯುಗಳು ಬಹಳವಾಗಿಯುಳ್ಳ ಅವುಗಳಿಂದ ಒಗರು ರಸವೂ ಉಂಟಾಗುತ್ತದೆ.

**ಟಿಪ್ಪಣಿ:—** ಭೂಮಿ ಜಲ ಹೆಚ್ಚಿದ್ದರೆ, ಮಧುರ
ಭೂಮಿ ಅಗ್ನಿ ಹೆಚ್ಚಿದ್ದರೆ, ಹುಳಿ
ಜಲ ಅಗ್ನಿ ಹೆಚ್ಚಿದ್ದರೆ, ಉಪ್ಪು
ಆಕಾಶ ವಾಯು ಹೆಚ್ಚಿದ್ದರೆ, ಕಹಿ
ಅಗ್ನಿ ವಾಯು ಹೆಚ್ಚಿದ್ದರೆ, ಕಾರ
ಪೃಥ್ವಿ ವಾಯು ಹೆಚ್ಚಿದ್ದರೆ, ಒಗರು (೧)

ತೇಷಾಂ ವಿದ್ಯಾದ್ರಸಂ ಸ್ವಾದುಂ ಯೋ ವಕ್ತ್ರಮನುಲಿಂಪತಿ ॥
ಆಸ್ವಾದ್ಯಮಾನೋ ದೇಹಸ್ಯ ಹ್ಲಾದನೋಽಕ್ಷಪ್ರಸಾದನಃ ॥೨॥

ಪ್ರಿಯಃ ಪಿಪೀಲಿಕಾದೀನಾಮಮ್ಲಃ ಕ್ಷಾಲಯತೇ ಮುಖಮ್
ಹರ್ಷಣೋ ರೋಮದಂತಾನಾಮಕ್ಷಿಭ್ರುವನಿಕೋಚನಃ ॥೩॥

ಲವಣಃ ಸ್ಯಂದಯತ್ಯಾಸ್ಯಂ ಕಪೋಲಗಲದಾಹಕೃತ್ ॥
ತಿಕ್ತೋ ವಿಶದಯತ್ಯಾಸ್ಯಂ †ರಸನಂ ಪ್ರತಿಹಂತಿ ಚ ॥೪॥

ಅರ್ಥ:— ಅವುಗಳಲ್ಲಿ ಬಾಯಿಗೆ ಲೇಪಿಸುವದೂ, ತಿನ್ನುವಾಗ್ಗೆ ದೇಹಕ್ಕೆ ಆನಂದ ಕೊಡುವದೂ, ಇಂದ್ರಿಯಗಳನ್ನು ಪ್ರಸನ್ನಮಾಡುವದೂ, ಇರುವೆ ಮುಂತಾದವುಗಳಿಗೆ ಪ್ರಿಯವಾಗಿರುವದೂ ಮಧುರ ರಸವು ಎಂದು ತಿಳಿಯಬೇಕು. ಹುಳಿಯು ಬಾಯಿಯನ್ನು ಸ್ರವಿಸುವದು, ರೋಮಾಂಚವನ್ನುಂಟುಮಾಡುವದು, ಹಲ್ಲುಗಳನ್ನು ಚಿಗಳಿಸುವದು ಮತ್ತು ಕಣ್ಣು ಹುಬ್ಬುಗಳನ್ನು ಸಂಕೋಚಪಡಿಸುವದು. ಉಪ್ಪು ಬಾಯಿಗೆ ನೀರು ಬಿಡಿಸುವದು, ಗಲ್ಲ ಗಂಟಲುಗಳ ದಾಹಮಾಡುವದು. ಕಹಿಯು, ಬಾಯಿಯ ಜಿಗಟನ್ನು ಕಳೆಯುವದು ಮತ್ತು ಎರಡನೆಯ ರಸದ ಗ್ರಹಣ ಶಕ್ತಿಯನ್ನು ನಾಶಪಡಿಸುವದು.

**ಟಿಪ್ಪಣಿ:**— ಹೇಮಾದ್ರಿಯು 'ರಸನಾಂ' ಎಂಬ ಪಾಠ ಹಿಡಿದು 'ನಾಲಿಗೆಯನ್ನು ಕುಂಠಿತಮಾಡುತ್ತದೆ' ಎಂದು ಅರ್ಥ ಹೇಳುವನು. (೪)

ಉದ್ವೇಜಯತಿ ಜಿಹ್ವಾಗ್ರಂ ಕುರ್ವಂಶ್ಚಿಮಚಿಮಾಂ ಕಟುಃ ॥
ಸ್ರಾವಯತ್ಯಕ್ಷಿನಾಸಾಸ್ಯಂ ಕಪೋಲಂ ದಹತೀವ ಚ ॥೫॥

ಅರ್ಥ:— ಖಾರವು ನಾಲಿಗೆಯ ತುದಿಗೆ ಜುಣುಜುಣುವನ್ನುಂಟುಮಾಡಿ ಉರಿಸುವದು, ಕಣ್ಣು ಮೂಗು ಬಾಯಿಗಳಲ್ಲಿ ನೀರು ಬರಿಸುವದು, ಗಲ್ಲಗಳಲ್ಲಿ ದಾಹವನ್ನುಂಟುಮಾಡುವದು. (೫)

† 'ರಸನಾಂ' ಎಂದು ಹೇಮಾದ್ರಿಯ ಪಾಠವು.

ಕಷಾಯೋ ಜಡಯೇಜ್ಜಿಹ್ವಾಂ ಕಂಠಸ್ರೋತೋವಿಬಂಧಕೃತ್ ॥
ರಸಾನಾಮಿತಿ ರೂಪಾಣಿ; ಕರ್ಮಾಣಿ,..............................

ಅರ್ಥ:— ಒಗರು ರಸವು ನಾಲಿಗೆಯನ್ನು ಜಡ ಮಾಡುವದು, ಕಂಠ ಮತ್ತು ಸ್ರೋತಸ್ಸುಗಳ ಸಂಕೋಚ ಮಾಡುವದು. ಇವು ರಸಗಳ ಲಕ್ಷಣಗಳು. ಇನ್ನು ಅವುಗಳ ಕಾರ್ಯವನ್ನು ಹೇಳುತ್ತೇವೆ. (೫|||)

..............................................ಮಧುರೋ ರಸಃ ॥೬॥

ಆಜನ್ಮಸಾತ್ಮ್ಯಾತ್ಕುರುತೇ ಧಾತೂನಾಂ ಪ್ರಬಲಂ ಬಲಮ್ ॥
ಬಾಲವೃದ್ಧಕ್ಷತಕ್ಷೀಣವರ್ಣಕೇಶೇಂದ್ರಿಯೌಜಸಾಮ್ ॥೭॥

ಪ್ರಶಸ್ತೋ ಬೃಂಹಣಃ ಕಂಠ್ಯಃ ಸ್ತನ್ಯಸಂಧಾನಕೃದ್ಗುರುಃ ॥
ಆಯುಷ್ಯೋ ಜೀವನಃ ಸ್ನಿಗ್ಧಃ ಪಿತ್ತಾನಿಲವಿಷಾಪಹಃ ॥೮॥

ಕುರುತೇಽತ್ಯುಪಯೋಗೇನ ಸ ಮೇದಃಶ್ಲೇಷ್ಮಜಾನ್ಗದಾನ್ ॥
ಸ್ಥೌಲ್ಯಾಗ್ನಿಸಾದಸನ್ಯಾಸಮೇಹಗಂಡಾರ್ಬುದಾದಿಕಾನ್ ॥೯॥

ಅರ್ಥ:— ಜನ್ಮದಿಂದಲೇ ಮಧುರ ರಸದ ರೂಢಿಯಿರುವದರಿಂದ ಧಾತುಗಳಿಗೆ ಪ್ರಬಲವಾದ ಶಕ್ತಿಯನ್ನು ಕೊಡುತ್ತದೆ. ಬಾಲ, ವೃದ್ಧ, ಗಾಯವುಳ್ಳ, ಕ್ಷೀಣರಾದ ಜನರಿಗೂ ಬಣ್ಣ, ಕೂದಲು, ಇಂದ್ರಿಯ, ಓಜಸ್ಸುಗಳಿಗೂ ಹಿತಕರವು. ಸ್ತನ್ಯ (ಮೊಲೆಹಾಲು) ವರ್ಧಕ, ಪುಷ್ಟಿಕರ, ಕಂಠಕ್ಕೆ ಹಿತ, ವ್ರಣ-ಅಸ್ಥಿಭಂಗಗಳ ಸಂಧಾನ (ಕೂಡಿಸೋಣ) ಕರ, ಜಡ, ಆಯುಷ್ಯವರ್ಧಕ, ಜೀವನೀಯ, ಸ್ನಿಗ್ಧವಿದ್ದು ವಾತ ಪಿತ್ತ ವಿಷನಾಶಕ ಇರುತ್ತದೆ. ಇದನ್ನು ಹೆಚ್ಚು ಉಪಯೋಗಿಸುವದರಿಂದ ಮೇದ ಮತ್ತು ಕಫದಿಂದುಂಟಾಗುವ ಸ್ಥೌಲ್ಯ, ಅಗ್ನಿಮಾಂದ್ಯ, ಸನ್ಯಾಸ ( ಮೂರ್ಛಾಭೇದ), ಮೇಹ, ಕುರುವು, ಅರ್ಬುದ (ವಾಳ) ಮುಂತಾದ ರೋಗಗಳನ್ನು ಉಂಟು ಮಾಡುತ್ತದೆ.

**ಟಿಪ್ಪಣಿ:—** ಆಯುಷ್ಯವೆಂದರೆ "ಆಯುಷ್ಯವನ್ನು ಹೆಚ್ಚು ಮಾಡುವದು. ಜೀವನವೆಂದರೆ ಇದ್ದ ಆಯುಷ್ಯವನ್ನು ಕಡಿಮೆಮಾಡಗೊಡದಿರುವದು. ಹೇಮಾದ್ರಿಯು ಜೀವನವೆಂದರೆ ಮೂರ್ಛಾದಿಹರ" ಎಂದು ಹೇಳುವನು. (೯)

ಅಮ್ಲೋಽಗ್ನಿದೀಪ್ತಿಕೃತ್ಸ್ನಿಗ್ಧೋ ಹೃದ್ಯಃ ಪಾಚನರೋಚನಃ ।
ಉಷ್ಣವೀರ್ಯೋ ಹಿಮಸ್ಪರ್ಶಃ ಪ್ರೀಣನಃ ಕ್ಲೇದನೋ ಲಘುಃ ॥೧೦॥

ಕರೋತಿ ಕಫಪಿತ್ತಾಸ್ರಂ ಮೂಢವಾತಾನುಲೋಮನಮ್ ॥
ಸೋಽತ್ಯಭ್ಯಸ್ತಸ್ತನೋಃ ಕುರ್ಯಾಚ್ಛೈಥಿಲ್ಯಂ ತಿಮಿರಂ ಭ್ರಮಮ್ ॥೧೧॥

ಕಂಡೂಪಾಂಡುತ್ವವೀಸರ್ಪಶೋಫವಿಸ್ಫೋಟತೃಡ್ಜ್ವರಾನ್ ॥

ಅರ್ಥಃ— ಹುಳಿಯು ಅಗ್ನಿದೀಪಕ, ಸ್ನಿಗ್ಧ, ಹೃದ್ಯ, ಪಾಚಕ, ರುಚಿಕರ, ಉಷ್ಣವೀರ್ಯ, ಸ್ಪರ್ಶದಲ್ಲಿ ಶೀತ, ತೃಪ್ತಿಕರ, ಕ್ಲೇದವರ್ಧಕ, ಲಘು ಇದ್ದು ಕಫ, ಪಿತ್ತ, ರಕ್ತಗಳನ್ನೂ, ಮೂಢ (ತಡೆದು ಹಿಡಿದ) ವಾತದ ಅನುಲೋಮನವನ್ನೂ ಮಾಡುತ್ತದೆ. ಹೆಚ್ಚಾಗಿ ತಿಂದರೆ ಅದು ಶರೀರದ ಶೈಥಿಲ್ಯ, ತಿಮಿರ (ನೇತ್ರರೋಗ), ಭ್ರಮ, ತುರಿಸೋಣ, ಪಾಂಡುತ್ವ, ವಿಸರ್ಪ (ಇಸಬು), ಬಾವು, ಬಕ್ಕೆ, ನೀರಡಿಕೆ, ಜ್ವರಗಳನ್ನು ಉಂಟುಮಾಡುತ್ತದೆ. (೧೧॥)

ಲವಣಃ ಸ್ತಂಭಸಂಘಾತಬಂಧವಿಧ್ಮಾಪನೋಽಗ್ನಿಕೃತ್ ॥೧೨॥

ಸ್ನೇಹನಃ ಸ್ವೇದನಸ್ತೀಕ್ಷ್ಣೋ ರೋಚನಶ್ಛೇದಭೇದಕೃತ್ ॥
ಸೋಽತಿಯುಕ್ತೋಽಸ್ರಪವನಂ ಖಲಿತಂ ಪಲಿತಂ ವಲಿಮ್ ॥೧೩॥

ತೃಟ್ಕುಷ್ಠವಿಷವೀಸರ್ಪಾಞ್ಜನಯೇತ್ ಕ್ಷಪಯೇದ್ಬಲಮ್

ಅರ್ಥಃ— ಉಪ್ಪು ರಸವು ನಿಶ್ಚಲತ್ವ ಗಟ್ಟಿತನ ಸ್ರೋತಸ್ಸುಗಳ ಸಂಕೋಚಗಳನ್ನು ಕಳೆಯುವದು, ಅಗ್ನಿದೀಪಕ, ಸ್ನೇಹ-ಸ್ವೇದಕಾರಕ, ತೀಕ್ಷ್ಣ, ರುಚಿಕರ, ವ್ರಣ ಮಾಂಸ ಬಾವು ಮುಂತಾದವುಗಳ ಛೇದ ಭೇದಗಳನ್ನು ಮಾಡುವದು. ಅತಿ ಸೇವನದಿಂದ ಅದು ವಾತರಕ್ತ, ಕೂದಲು ಬೆಳ್ಳಗಾಗೋಣ, ಕೂದಲು ಉದುರೋಣ, ತೊಗಲು ಸಿರಿಗೆ ಬೀಳೋಣ, ನೀರಡಿಕೆ, ಕುಷ್ಠ, ವಿಷವೃದ್ಧಿ ವಿಸರ್ಪಗಳನ್ನುಂಟುಮಾಡುತ್ತದೆ. ಮತ್ತು ಬಲವನ್ನು ನಾಶಮಾಡುತ್ತದೆ. (೧೩॥)

ತಿಕ್ತಃ ಸ್ವಯಮರೋಚಿಷ್ಣುರರುಚಿಂ ಕೃಮಿತೃಡ್ವಿಷಮ್ ||೧೪||

ಕುಷ್ಠಮೂರ್ಛಾಜ್ವರೋತ್ಕ್ಲೇಶದಾಹಪಿತ್ತಕಫಾಞ್ಜಯೇತ್ ||
ಕ್ಲೇದಮೇದೋವಸಾಮಜ್ಜಶಕೃನ್ಮೂತ್ರೋಪಶೋಷಣಃ

ಲಘುರ್ಮೇಧ್ಯೋ ಹಿಮೋ ರೂಕ್ಷಃ ಸ್ತನ್ಯಕಂಠವಿಶೋಧನಃ ||
ಧಾತುಕ್ಷಯಾನಿಲವ್ಯಾಧೀನತಿಯೋಗಾತ್ಕರೋತಿ ಸಃ ||೧೬||

ಅರ್ಥ:— ಕಹಿರಸವು ಸ್ವತಃ ಕೆಟ್ಟದ್ದರೂ ಅರುಚಿಯನ್ನು ನಾಶ ಮಾಡುತ್ತದೆ. ಕ್ರಿಮಿ ನೀರಡಿಕೆ ವಿಷ ಕುಷ್ಠ ಮೂರ್ಛೆ ಜ್ವರ ವಾಕರಿಕೆ ದಾಹ ಪಿತ್ತ ಕಫಗಳನ್ನು ನಾಶ ಮಾಡುತ್ತದೆ. ಕ್ಲೇದ ( ಶರೀರದಲ್ಲಿಯ ದ್ರವಾಂಶ), ಮೇದ, ನೆಣ, ಮಜ್ಜೆ, ಶಕೃತ್ (ಮಲ), ಮೂತ್ರಗಳನ್ನು ಒಣಗಿಸುವದು. ಲಘು, ಬುದ್ಧಿವರ್ಧಕ, ಶೀತ, ರುಕ್ಷ, ಸ್ತನ್ಯ ಮತ್ತು ಕಂಠ ವನ್ನು ಸ್ವಚ್ಛ ಮಾಡುವದು. ಇದನ್ನು ಹೆಚ್ಚಾಗಿ ಉಪಯೋಗಿಸಿದರೆ ಧಾತು ಕ್ಷಯ, ವಾತರೋಗಗಳನ್ನುಂಟುಮಾಡುತ್ತದೆ. (೧೬)

ಕಟುರ್ಗಲಾಮಯೋದರ್ದಕುಷ್ಠಾಲಸಕಶೋಫಜಿತ್ ||
ವ್ರಣಾವಸಾದನಃ ಸ್ನೇಹಮೇದಃಕ್ಲೇದೋಪಶೋಷಣಃ ||೧೭||

ದೀಪನಃ ಪಾಚನೋ ರುಚ್ಯಃ ಶೋಧನೋಽನ್ನಸ್ಯ ಶೋಷಣಃ ||
ಛಿನತ್ತಿ ಬಂಧಾನ್ ಸ್ರೋತಾಂಸಿ ವಿವೃಣೋತಿ ಕಫಾಪಹಃ ||೧೮||
ಕುರುತೇ ಸೋಽತಿಯೋಗೇನ ತೃಷ್ಣಾಂ ಶುಕ್ರಬಲಕ್ಷಯಮ್ ||
ಮೂರ್ಛಾಮಾಕುಂಚನಂ ಕಂಪಂ ಕಟಿಪೃಷ್ಠಾದಿಷು ವ್ಯಥಾಮ್ ||೧೯||

ಅರ್ಥ:— ಖಾರವು ಕಂಠರೋಗ, ಹೈದಿಕೆ (ಗಾದರಿ), ಕುಷ್ಠ, ಅಲಸಕ, ಬಾವುಗಳನ್ನು ನಾಶಮಾಡುವದು; ವ್ರಣದ ಎತ್ತರವನ್ನು ಕಡಿಮೆ ಮಾಡುವದು; ಸ್ನೇಹ ಮೇದ ಕ್ಲೇದಗಳನ್ನು ಕಡಿಮೆ ಮಾಡುವದು. ದೀಪಕ, ಪಾಚಕ, ರುಚಿಕರ, ಶೋಧಕ, ಅನ್ನದ ಶೋಷಕ, ಸಂಧಿ ಶೈಥಿಲ್ಯಕಾರಕ, ಸ್ರೋತಸ್ಸುಗಳ ಪ್ರಸರಣಕರ, ಕಫನಾಶಕವಿರುತ್ತದೆ. ಇದನ್ನು ಹೆಚ್ಚಿಗೆ ಉಪ ಯೋಗಿಸುವದರಿಂದ ನೀರಡಿಕೆ,ಶುಕ್ರಬಲಗಳನಾಶ, ಮೂರ್ಛೆ, ಸಿರೆಗಳ ಆಕುಂ ಚನ, ನಡುಗು, ಟೊಂಕ ಮುಂತಾದವುಗಳಲ್ಲಿ ವೇದನೆಗಳು ಉಂಟಾಗುತ್ತವೆ. (೧೯)

ಕಷಾಯಃ ಪಿತ್ತಕಫಹಾ ಗುರುರಸ್ರವಿಶೋಧನಃ ॥
ಪೀಡನೋ ರೋಪಣಃ ಶೀತಃ ಕ್ಲೇದಮೇದೋವಿಶೋಷಣಃ ॥೨೦॥

ಆಮಸಂಸ್ತಂಭನೋ ಗ್ರಾಹೀ ರೂಕ್ಷೋಽತಿತ್ವಕ್ಪ್ರಸಾದನಃ ॥
ಕರೋತಿ ಶೀಲಿತಃ ಸೋಽತಿ ವಿಷ್ಟಂಭಾಧ್ಮಾನಹೃದ್ರುಜಃ ॥೨೧॥

ತೃಟ್ಕಾರ್ಶ್ಯಪೌರುಷಭ್ರಂಶಸ್ರೋತೋರೋಧಮಲಗ್ರಹಾನ್ ॥

ಅರ್ಥಃ— ಒಗರು ರಸವು ಪಿತ್ತ ಕಫನಾಶಕ, ಗುರು, ರಕ್ತಶುದ್ಧಿಕರ, ಲೇಪ ಮಾಡಿದರೆ ವ್ರಣವನ್ನು ಹಿಚುಕುವದು, ರೋಪಣ (ಮಾಯಿಸುವದು), ಶೀತ, ಕ್ಲೇದ-ಮೇದಗಳನ್ನು ಒಣಗಿಸುವದು, ಆಮ-ಪಚನ-ಪ್ರತಿಬಂಧಕ, ಮಲಬಂಧಕ, ರುಕ್ಷ, ತ್ವಚೆಯನ್ನು ಬಹಳ ಸ್ವಚ್ಛ ಮಾಡುವದು ಇರುವದು. ಹೆಚ್ಚಾಗಿ ಉಪಯೋಗಿಸಿದರೆ ವಾತಾವರೋಧ, ಹೊಟ್ಟೆಯುಬ್ಬು, ಹೃದ್ರೋಗ, ನೀರಡಿಕೆ, ಕೃಶತ್ವ, ಶುಕ್ರನಾಶ, ಸ್ರೋತಸ್ಸುಗಳ ಅವರೋಧ, ಮಲಗ್ರಹ ವನ್ನುಂಟುಮಾಡುತ್ತದೆ. (೨೧॥)

ಘೃತಹೇಮಗುಡಾಕ್ಷೋಡಮೋಚಚೋಚಪರೂಷಕಮ್ ॥೨೨॥

ಅಭೀರುವೀರಾಪನಸರಾಜಾದನಬಲಾತ್ರಯಮ್ ॥

ಮೇದೇ ಚತಸ್ರಃ ಪರ್ಣಿನ್ಯೋ ಜೀವಂತೀ ಜೀವಕರ್ಷಭೌ ॥೨೩॥

ಮಧೂಕಂ ಮಧುಕಂ ಬಿಂಬೀ ವಿದಾರೀ ಶ್ರಾವಣೀಯುಗಮ್ ॥

ಕ್ಷೀರಶುಕ್ಲಾ ತುಗಾಕ್ಷೀರೀ ಕ್ಷೀರಿಣ್ಯೌ ಕಾಶ್ಮರೀ ಸಹೇ ॥೨೪॥
ಕ್ಷೀರೇಕ್ಷುಗೋಕ್ಷುರಕ್ಷಾದ್ರದ್ರಾಕ್ಷಾದಿರ್ಮಧುರೋ ಗಣಃ ॥

ಅರ್ಥಃ— ತುಪ್ಪ, ಬಂಗಾರ, ಬೆಲ್ಲ, ಅಕ್ರೋಡ, ಬಾಳಿ, ತೆಂಗು, ದಡಸಲಹಣ್ಣು, ಶತಾವರಿ, ಕಾಕೋಲಿ, ಹಲಸು ರಾಜಾದನ್ನ, ಮೂರು ತರದ ಬಲಾ (ಬಲಾ, ಅತಿ ಬಲಾ, ಮಹಾಬಲಾ ಎಂಬ ಕಳ್ಳಂಗಡ್ಲೆಯ ಭೇದ ಗಳು ), ಮೇದಾ, ಮಹಾಮೇದಾ, ಮೂರೆಲೆ, ಹೊನ್ನೆ, ಅಡವಿಉದ್ದು, ಅಡವಿ ಹೆಸರು, ಸೀಹಾಲೆ, ಜೀವಕ, ವೃಷಭಕ, ಇಪ್ಪಿಹೂ, ಜ್ಯೇಷ್ಠಮಧು, ತೊಂಡಿ, ನೆಲಗುಂಬಳ, ಶ್ರಾವಣಿ (ಮುಂಡಿ), ಮಹಾಶ್ರಾವಣಿ,

(ಮಹಾಮುಂಡಿ), ಹಾಲುಸೆಲಗುಂಬಳ; ವಂಶಲೋಚನ (ಬಿದರು ಸುಣ್ಣ), ಕ್ಷೀರಕಾಕೋಲಿ, ಮುಗ್ಧಿಕಾ, ಕಾಶ್ಮರಿ (ಶಿವನಿ ಹಣ್ಣು), ಎರಡು ತರದ ಸಹಾ (ಕ್ಷುದ್ರ ಸಹಾ, ಮಹಾ ಸಹಾ), ಹಾಲು, ಕಬ್ಬು, ಸೆಗ್ಗಲಿಮುಳ್ಳು, ಜೇನತುಪ್ಪ, ದ್ರಾಕ್ಷೆ ಮುಂತಾದವು ಮಧುರ ವರ್ಗದವು. (೨೪||)

**ಅಮ್ಲೋ ಧಾತ್ರೀಫಲಾಮ್ಲಿಕಾ ಮಾತುಲುಂಗಾಮ್ಲವೇತಸಮ್ ||೨೫||**
**ದಾಡಿಮಂ ರಜತಂ ತಕ್ರಂ ಚುಕ್ರಂ ಪಾಲೇವತಂ ದಧಿ ||**

**ಆಮ್ರಮಾಮ್ರಾತಕಂ ಭವ್ಯಂ ಕಪಿತ್ಥಂ ಕರಮರ್ದಕಮ್ ||೨೬||**

ಅರ್ಥ:— ನೆಲ್ಲಿ, ಹುಣಸಿ, ಮಾಳುಂಗ (ಮಾದಾಳ), ಅಮ್ಲವೇತಸ, ದಾಳಿಂಬ, ಬೆಳ್ಳಿ, ಮಜ್ಜಿಗೆ, ಚುಕ್ರ (ಶುಕ್ತ), ಪಾಲೇವತ, ಮೊಸರು, ಮಾವು, ಪುಂಡಿ, ಸಿಂಪೆ, ಬೆಳವಲಕಾಯಿ, ಕವಳಿ ಇವು ಅಮ್ಲ ವರ್ಗದವು. (೨೬)

**ವರಂ ಸೌವರ್ಚಲಂ ಕೃಷ್ಣಂ ಬಿಡಂ ಸಾಮುದ್ರಮೌದ್ಭಿದಮ್ ||**
**ರೋಮಕಂ ಪಾಂಸುಜಂ ಶೀಸಂ ಕ್ಷಾರಶ್ಚ ಲವಣೋ ಗಣಃ ||೨೭||**

ಅರ್ಥ:— ಸೈಂಧವ ಕಾಚಲವಣ ಕೃಷ್ಣ ಬಿಡ ಸಾಮುದ್ರ ಔದ್ಭಿದ ರೋಮಕ ಪಾಂಸುಜ ಲವಣಗಳೂ, ಸೀಸ ಧಾತುವೂ, ಮತ್ತು ಕ್ಷಾರಗಳೂ ಲವಣ ವರ್ಗದವು. (೨೭)

**ತಿಕ್ತಃ ಪಟೋಲೀ ತ್ರಾಯಂತೀ ವಾಲಕೋಶೀರಚಂದನಮ್ ||**
**ಭೂನಿಂಬನಿಂಬಕಟುಕಾತಗರಾಗರುವತ್ಸಕಮ್ ||೨೮||**

**ನಕ್ತಮಾಲದ್ವಿರಜನೀಮುಸ್ತಮೂರ್ವಾಟರೂಷಕಮ್ ||**
**ಪಾಠಾಪಾಮಾರ್ಗಕಾಂಸ್ಯಾಯೋಗುಡೂಚೀಧನ್ವಯಾಸಕಮ್ ||೨೯||**

**ಪಂಚಮೂಲಂ ಮಹದ್ವ್ಯಾಘ್ರ್ಯೌ ವಿಶಾಲಾಽತಿವಿಷಾ ವಚಾ ||**

ಅರ್ಥ:— ಕಹಿ ಪಡುವಲ, ತ್ರಾಯಮಾಣ, ಬಿಳೇ ಮತ್ತು ಕರೇ ವಾಳದ ಬೇರು, ಚಂದನ, ಚಿರಾಯತ, ಬೇವು, ಕಟುಕರೋಣಿ, ತಗರ,

ಅಗರು, ಹಲಗತ್ತಿ, ಹುಲಗಲಿ, ಅರಿಷಣ, ಮರಅರಿಷಣ, ಜೇಕು, ಹೆಗ್ಗುರುಟಿಗೆ, ಅಡಸಲ, ಅಗಳ ಸುಂಠಿ, ಉತ್ತರಾಣಿ, ಕಂಚು, ಕಪ್ಪಿಣ, ಅಮೃತಬಳ್ಳಿ, ನೆಲಿ ಇಂಗಳ, ಬೃಹತ್‌ಪಂಚಮೂಲಿ, ನೆಲಗುಳ್ಳ, ಹೆಬ್ಬುಗುಳ್ಳ, ಕಾಡಕವಡಿ, ಅತಿಬಜಿ, ಬಜಿ–ಇವು ಕಹಿ ವರ್ಗದವು. (೨೯||)

**ಕಟುಕೋ ಹಿಂಗುಮರಿಚಕೃಮಿಜಿತ್ಪಂಚಕೋಲಕಮ್ ||೩೦||**
**ಕುಠೇರಾದ್ಯಾ ಹರಿತಕಾಃ ಪಿತ್ತಂ ಮೂತ್ರಮರುಷ್ಕರಮ್ ||**

ಅರ್ಥಃ— ಇಂಗು, ಮೆಣಸು, ವಾಯುವಡಂಗ, ಶುಂಠಿ, ಚವಕ, ಚಿತ್ರಕ, ಹಿಪ್ಪಲಿ, ಮೋಡಿ ಕಡ್ಡಿ, ಪಿತ್ತ, ಮೂತ್ರ, ಕೇರುಗಳೂ ಕುಠೇರ ಮೊದಲಾದ ಹರಿತಕ ವರ್ಗದ ಪಲ್ಲೆಗಳೂ ಖಾರವರ್ಗದವು. (೩೦||)

**ವರ್ಗಃ ಕಷಾಯಃ ಪಥ್ಯಾಕ್ಷಂ ಶಿರೀಷಃ ಖದಿರೋ ಮಧು ||೩೧||**

**ಕದಂಬೋದುಂಬರಂ ಮುಕ್ತಾಪ್ರವಾಲಾಂಜನಗೈರಿಕಮ್ ||**
**ಬಾಲಂ ಕಪಿತ್ಥಂ ಖರ್ಜೂರಂ ಬಿಸಪದ್ಮೋತ್ಪಲಾದಿ ಚ ||೩೨||**

ಅರ್ಥಃ— ಅಳಲೇಕಾಯಿ, ತಾರೀಕಾಯಿ, ಸಿರಸಲ, ಖದಿರ (ತರೆ), ಜೇನತುಪ್ಪ, ಕದಂಬ, ಅತ್ತಿ, ಮುತ್ತು, ಹವಳ, ಅಂಜನ, ಗೈರಿಕ (ಕಾವಿ), ಎಳೇ ಬೆಳವಲಕಾಯಿ, ಸಣ್ಣ ಉತ್ತತ್ತಿ, ಕಮಲದೇಟು, ಬಿಳೇ ಕಪ್ಪು ಕಮಲ, ಮುಂತಾದವುಗಳು ಒಗರು ವರ್ಗದವು. (೩೨)

ಇನ್ನು ಮೇಲೆ ರಸಗಳ ಗುಣಗಳನ್ನು ಹೇಳುತ್ತಾರೆ.

**ಮಧುರಂ ಶ್ಲೇಷ್ಮಲಂ ಪ್ರಾಯೋ ಜೀರ್ಣಾಚ್ಛಾಲಿಯವಾದೃತೇ ||**
**ಮುದ್ಗಾದ್ಗೋಧೂಮತಃ ಕ್ಷೌದ್ರಾತ್ಸಿತಾಯಾ ಜಾಂಗಲಾಮಿಷಾತ್**

ಅರ್ಥಃ— ಹಳೇ ಅಕ್ಕಿ, ಜವೆ, ಹೆಸರು, ಗೋದಿ, ಜೇನುತುಪ್ಪ, ಸಕ್ಕರೆ, ಜಾಂಗಲ ಮಾಂಸ ಇವುಗಳ ಹೊರತಾಗಿ ಮಧುರಪದಾರ್ಥಗಳು ಬಹುಶಃ ಕಫಕಾರಕವಿರುತ್ತವೆ. (೩೩)

ಪ್ರಾಯೋಽಮ್ಲಂ ಪಿತ್ತಜನನಂ ದಾಡಿಮಾಮಲಕಾದೃತೇ ||
ಅಪಥ್ಯಂ ಲವಣಂ ಪ್ರಾಯಶ್ಚಕ್ಷುಷೋಽನ್ಯತ್ರ ಸೈಂಧವಾತ್ ||೩೪||

ತಿಕ್ತಂ ಕಟು ಚ ಭೂಯಿಷ್ಠಮವೃಷ್ಯಂ ವಾತಕೋಪನಮ್ ||
ಋತೇಽಮೃತಾಪಟೋಲೀಭ್ಯಾಂ ಶುಂಠೀಕೃಷ್ಣಾರಸೋನತಃ ||೩೫||

ಕಷಾಯಂ ಪ್ರಾಯಶಃ ಶೀತಂ ಸ್ತಂಭನಂ ಚಾಭಯಾಂ ವಿನಾ ||

ಅರ್ಥ:— ದಾಳಿಂಬ, ನೆಲ್ಲಿಗಳ ಹೊರ್ತಾಗಿ ಉಳಿದ ಎಲ್ಲ ಹುಳಿ ಪದಾರ್ಥಗಳು ಬಹುತರವಾಗಿ ಪಿತ್ತಜನಕವಿರುತ್ತವೆ. ಸೈಂಧವದ ಹೊರ್ತಾಗಿ ಉಳಿದ ಉಪ್ಪು ಪದಾರ್ಥಗಳು ಬಹುಶಃ ಕಣ್ಣಿಗೆ ಅಪಥ್ಯವಿರುತ್ತವೆ. ಅಮೃತಬಳ್ಳಿ, ಕಹಿಪಡುವಲ, ಶುಂಠಿ, ಹಿಪ್ಪಲಿ, ಬಳ್ಳೊಳ್ಳಿಗಳ ಹೊರ್ತಾಗಿ ಉಳಿದ ಕಹಿ ಕಾರ ಪದಾರ್ಥಗಳು ಬಹುತರವಾಗಿ ಶುಕ್ರ-ನಾಶಕ, ವಾತ-ಕೋಪಕವಾಗಿರುವವು. ಅಣಲೇಕಾಯಿ ಹೊರ್ತಾಗಿ ಉಳಿದ ಒಗರು ಪದಾರ್ಥಗಳು ಬಹುತರವಾಗಿ ಶೀತವೂ ಸ್ತಂಭಕವೂ ಆಗಿರುತ್ತವೆ. (೩೫||)

ಇನ್ನು ರಸ-ಗುಣಗಳ ತಾರತಮ್ಯಗಳನ್ನು ಹೇಳುತ್ತಾರೆ.

ರಸಾಃ ಕಟ್ವಮ್ಲಲವಣಾ ವೀರ್ಯೇಣೋಷ್ಣಾ ಯಥೋತ್ತರಮ್
||೩೬||
ತಿಕ್ತಃ ಕಷಾಯೋ ಮಧುರಸ್ತದ್ವದೇವ ಚ ಶೀತಲಾಃ ||
ತಿಕ್ತಃ ಕಟುಃ ಕಷಾಯಶ್ಚ ರೂಕ್ಷಾ ಬದ್ಧಮಲಾಸ್ತಥಾ ||೩೭||

ಪಟ್ವಮ್ಲಮಧುರಾಃ ಸ್ನಿಗ್ಧಾಃ ಸೃಷ್ಟವಿಣ್ಮೂತ್ರಮಾರುತಾಃ ||
ಪಟೋಃ ಕಷಾಯಸ್ತಸ್ಮಾಚ್ಚ ಮಧುರಃ ಪರಮಂ ಗುರುಃ ||೩೮||

ಲಘುರಮ್ಲಃ ಕಟುಸ್ತಸ್ಮಾತ್ತಸ್ಮಾದಪಿ ಚ ತಿಕ್ತಕಃ ||

ಅರ್ಥ:— ಕಾರ, ಹುಳಿ, ಉಪ್ಪು ರಸಗಳು ಒಂದಕ್ಕಿಂತ ಒಂದು ಹೆಚ್ಚು ಉಷ್ಣ-ವೀರ್ಯವಾಗಿರುತ್ತವೆ. ಇದರಂತೆ ಕಹಿ, ಒಗರು, ಮಧುರ ರಸಗಳು ಕ್ರಮದಿಂದ ಒಂದಕ್ಕಿಂತ ಒಂದು ಶೀತವಾಗಿರುವವು. ಕಹಿ, ಕಾರ, ಒಗರು ರಸಗಳು ಕ್ರಮದಿಂದ ಒಂದಕ್ಕಿಂತ ಒಂದು ಹೆಚ್ಚು ರುಕ್ಷವೂ ಮಲ

ಬಂಧಕವೂ ಆಗಿವೆ. ಉಪ್ಪು, ಹುಳಿ, ಸಿಹಿ ರಸಗಳು ಸ್ನಿಗ್ಧ, ಮಲಮೂತ್ರ ವಾಯುಗಳ ಪ್ರವರ್ತಕವಾಗುತ್ತವೆ. ಉಪ್ಪಿನಸಕಿಂತ ಒಗರೂ, ಒಗರಿನಕಿಂತ ಮಧುರವೂ ಹೆಚ್ಚು ಜಡವಿರುತ್ತವೆ. ಅಮ್ಲವು ಲಘು, ಅದಕ್ಕಿಂತ ಕಾರವು ಹೆಚ್ಚು ಲಘು, ಕಹಿಯು ಅದಕ್ಕಿಂತ ಹೆಚ್ಚು ಲಘು ಇರುತ್ತದೆ. (೩೮)

**ಸಂಯೋಗಾಃ ಸಪ್ತಪಂಚಾಶತ್ಕಲ್ಪನಾ ತು ತ್ರಿಷಷ್ಟಿಧಾ ||೩೯||**
**ರಸಾನಾಂ ಯೌಗಿಕತ್ವೇನ ಯಥಾಸ್ಥೂಲಂ ವಿಭಜ್ಯತೇ ||**

ಅರ್ಥ:— ಇನ್ನು ಸ್ಥೂಲರೂಪದಿಂದ ಆಗುವ ರಸಗಳ ೫೭ ಸಂಯೋಗಗಳೂ ಆರು ರಸಗಳೂ ಕೂಡಿ ಉಂಟಾಗುವ ೬೩ ಕಲ್ಪಗಳು ಔಷಧೋಪಯೋಗಿಯಾದ್ದರಿಂದ ವಿಭಾಗ ಮಾಡಿ (ಮುಂದೆ) ಹೇಳಲ್ಪಡುತ್ತವೆ.

**ಟಿಪ್ಪಣೀ:—** ರಸ, ಅನುರಸವೆಂದೂ, ಅವುಗಳಲ್ಲಿ ಪುನಃ ಹೆಚ್ಚು ಕಡಿಮೆ (ತಾರತಮ್ಯ) ಗಳನ್ನೂ ಕಲ್ಪಿಸಿ ಮಾಡಿದ ಸಂಯೋಗಗಳು ಅನಂತವಾಗುವದರಿಂದ 'ಸ್ಥೂಲರೂಪದಿಂದ' (ವ್ಯಕ್ತರಸದಿಂದ ಮಾತ್ರ) ಎಂದು ಹೇಳಿರುವರು. (೩೯)

**ಏಕೈಕಹೀನಾಸ್ತಾನ್ಪಂಚದಶ ಯಾಂತಿ ರಸಾ ದ್ವಿಕೇ ||೪೦||**

**ತ್ರಿಕೇ ಸ್ವಾದುರ್ದಶಾಮ್ಲಃ ಷಟ್ ತ್ರೀನ್ಪಟುಸ್ತಿಕ್ತ ಏಕಕಮ್ ||**
**ಚತುಷ್ಕೇಷು ದಶ ಸ್ವಾದುಶ್ಚತುರೋಽಮ್ಲಃ ಪಟುಃ ಸಕೃತ್ ||೪೧||**

**ಪಂಚಕೇಷ್ವೇಕಮೇವಾಮ್ಲೋ ಮಧುರಃ ಪಂಚ ಸೇವತೇ ||**
**ದ್ರವ್ಯಮೇಕಂ ಷಡಾಸ್ವಾದಮಸಂಯುಕ್ತಾಶ್ಚ ಷಡ್ರಸಾಃ ||೪೨||**

ಅರ್ಥ:— ರಸಾಧಾರವಾದ ಎರಡು ದ್ರವ್ಯಗಳ ಸಂಯೋಗದಲ್ಲಿ ಒಂದೊಂದರಿಂದ ಕಡಿಮೆಯಾದ ೫ ರಸಗಳು ಪರ್ಯಾಯದಿಂದ ಒಂದೊಂದರಂತೆ ಕಡಿಮೆಯಾದ ಐದು ರಸಗಳೊಡನೆ ಕೂಡಿ ೧೫ ಭೇದಗಳನ್ನು ಮಾಡುತ್ತವೆ. ಮೂರು ದ್ರವ್ಯಗಳ ಸಂಯೋಗದಲ್ಲಿ ಮಧುರವು ೧೦, ಅಮ್ಲವು ೬, ಉಪ್ಪು ೩, ಕಹಿಯು ೧, ಹೀಗೆ ೨೦ ಭೇದಗಳನ್ನು ಮಾಡುವದು. ನಾಲ್ಕು ದ್ರವ್ಯಗಳ ಸಂಯೋಗದಲ್ಲಿ ಮಧುರವು ೧೦, ಅಮ್ಲವು ೪, ಉಪ್ಪು ೧, ಹೀಗೆ ೧೫ ಭೇದಗಳನ್ನು ಮಾಡುವದು. ಐದು ದ್ರವ್ಯಗಳ ಸಂಯೋಗದಲ್ಲಿ ಅಮ್ಲವು ೧, ಮಧುರವು ೫,

ಇಂತಹ ೬೩ ಸಂಯೋಗಗಳನ್ನು ಮಾಡುವದು. ಆರು ದ್ರವ್ಯಗಳ ಸಂಯೋಗದಲ್ಲಿ ಆರು ರಸಗಳ ಒಂದು ಸಂಯೋಗವಿರುವದು ಕೂಡದೇ ಇದ್ದ ಬೇರೆ ಬೇರೆ ಆರು ರಸಗಳು ಇರುವವು. ಹೇಗೆಂದರೆ—

### ಎರಡರ ಸಂಯೋಗದಲ್ಲಿ ೧೫ ಭೇದಗಳು

| | | |
|---|---|---|
| ೧ ಸಿಹಿ ಹುಳಿ | ೬ ಹುಳಿ ಉಪ್ಪು | ೧೧ ಉಪ್ಪು ಕಾರ |
| ೨ ಸಿಹಿ ಉಪ್ಪು | ೭ ಹುಳಿ ಕಹಿ | ೧೨ ಉಪ್ಪು ಒಗರು |
| ೩ ಸಿಹಿ ಕಹಿ | ೮ ಹುಳಿ ಕಾರ | ೧೩ ಕಹಿ ಕಾರ |
| ೪ ಸಿಹಿ ಕಾರ | ೯ ಹುಳಿ ಒಗರು | ೧೪ ಕಹಿ ಒಗರು |
| ೫ ಸಿಹಿ ಒಗರು | ೧೦ ಉಪ್ಪು ಕಹಿ | ೧೫ ಕಾರ ಒಗರು |

### ಮೂರರ ಸಂಯೋಗದಲ್ಲಿ ೨೦ ಭೇದಗಳು

**ಅವುಗಳಲ್ಲಿಯೂ ಸಿಹಿ ರಸದಿಂದ ೧೦ ಹುಳಿಯಿಂದ ೬**

| | |
|---|---|
| ೧ ಸಿಹಿ ಹುಳಿ ಉಪ್ಪು | ೧ ಹುಳಿ ಉಪ್ಪು ಕಹಿ |
| ೨ ಸಿಹಿ ಹುಳಿ ಕಹಿ | ೨ ಹುಳಿ ಉಪ್ಪು ಕಾರ |
| ೩ ಸಿಹಿ ಹುಳಿ ಕಾರ | ೩ ಹುಳಿ ಉಪ್ಪು ಒಗರು |
| ೪ ಸಿಹಿ ಹುಳಿ ಒಗರು | ೪ ಹುಳಿ ಕಹಿ ಕಾರ |
| ೫ ಸಿಹಿ ಉಪ್ಪು ಕಹಿ | ೫ ಹುಳಿ ಕಹಿ ಒಗರು |
| ೬ ಸಿಹಿ ಉಪ್ಪು ಕಾರ | ೬ ಹುಳಿ ಕಾರ ಒಗರು |
| ೭ ಸಿಹಿ ಉಪ್ಪು ಒಗರು | **ಉಪ್ಪಿನಿಂದ ೩** |
| ೮ ಸಿಹಿ ಕಹಿ ಕಾರ | ೧ ಉಪ್ಪು ಕಹಿ ಕಾರ |
| ೯ ಸಿಹಿ ಕಹಿ ಒಗರು | ೨ ಉಪ್ಪು ಕಹಿ ಒಗರು |
| | ೩ ಉಪ್ಪು ಕಾರ ಒಗರು |
| | **ಕಹಿಯಿಂದ ೧** |
| ೧೦ ಸಿಹಿ ಕಾರ ಒಗರು | ೧ ಕಹಿ ಕಾರ ಒಗರು |

## ನಾಲ್ಕರ ಸಂಯೋಗದಲ್ಲಿ ೧೫ ಭೇದಗಳು

**ಸಿಹಿಯಿಂದ ೧೦**

ಸಿಹಿ ಹುಳಿ ಉಪ್ಪು ಕಹಿ

ಸಿಹಿ ಹುಳಿ ಉಪ್ಪು ಕಾರ

ಸಿಹಿ ಹುಳಿ ಉಪ್ಪು ಒಗರು

೪ ಸಿಹಿ ಹುಳಿ ಕಹಿ ಕಾರ

೫ ಸಿಹಿ ಹುಳಿ ಕಹಿ ಒಗರು

೬ ಸಿಹಿ ಹುಳಿ ಕಾರ ಒಗರು

೭ ಸಿಹಿ ಉಪ್ಪು ಕಹಿ ಕಾರ

೮ ಸಿಹಿ ಉಪ್ಪು ಕಹಿ ಒಗರು

೯ ಸಿಹಿ ಉಪ್ಪು ಕಾರ ಒಗರು

೧೦ ಸಿಹಿ ಕಹಿ ಕಾರ ಒಗರು

**ಹುಳಿಯಿಂದ ೪**

೧ ಹುಳಿ ಉಪ್ಪು ಕಹಿ ಕಾರ

೨ ಹುಳಿ ಉಪ್ಪು ಕಹಿ ಒಗರು

೩ ಹುಳಿ ಉಪ್ಪು ಕಾರ ಒಗರು

೪ ಹುಳಿ ಕಹಿ ಕಾರ ಒಗರು

**ಉಪ್ಪಿನಿಂದ ೧**

೧ ಉಪ್ಪು ಕಹಿ ಕಾರ ಒಗರು

## ಐದು ರಸಗಳ ಸಂಯೋಗದಿಂದ ಆರು ಭೇದಗಳು

೧ ಹುಳಿ ಉಪ್ಪು ಕಹಿ ಕಾರ ಒಗರು

೨ ಸಿಹಿ ಉಪ್ಪು ಕಹಿ ಕಾರ ಒಗರು

೩ ಸಿಹಿ ಹುಳಿ ಕಹಿ ಕಾರ ಒಗರು

೪ ಸಿಹಿ ಹುಳಿ ಉಪ್ಪು ಕಾರ ಒಗರು

೫ ಸಿಹಿ ಹುಳಿ ಉಪ್ಪು ಕಹಿ ಒಗರು

೬ ಸಿಹಿ ಹುಳಿ ಉಪ್ಪು ಕಹಿ ಕಾರ

ಹೀಗೆ ೫೬ ಸಂಯೋಗಗಳು, ಎಲ್ಲಾ (ಆರೂ) ರಸ ಕೂಡಿ ಆದ ಸಂಯೋಗವು ಒಂದು. ಹೀಗೆ ಒಟ್ಟು ೫೭ ಸಂಯೋಗಗಳು ಆದವು.

ಸಂಯೋಗ ಹೊಂದದ ಆರು ರಸಗಳು ಬೇರೆ ಇರುವವು. ಅಂತೂ ಒಟ್ಟು ೬೩ ಕಲ್ಪಗಳು ಆಗುವವು.

**ಟಿಪ್ಪಣಿ:—** ಒಂದೇ ದ್ರವ್ಯದಲ್ಲಿಯೂ ಅನೇಕ ರಸಗಳು ಇರುವವು. ಕರೇಚಿಗರೆಯಲ್ಲಿ ೬, ಅಣಲೆಯಲ್ಲಿ ೫, ಎಳ್ಳಿನಲ್ಲಿ ೪, ಔಡಲ ಎಣ್ಣೆಯಲ್ಲಿ ೩, ಜೇನಿನಲ್ಲಿ ೨, ತುಪ್ಪದಲ್ಲಿ ೧ ರಸವಿರುವದು. (೪೨)

ಷಟ್ಪಂಚಕಾಃ ಷಟ್ ಚ ಪೃಥಗ್ರಸಾಃ ಸ್ಯು

ಶ್ಚತುರ್ದ್ವಿಕೌ ಪಂಚದಶಪ್ರಕಾರೌ ||

ಭೇದಾಸ್ತ್ರಿಕಾ ವಿಂಶತಿರೇಕಮೇವ

ದ್ರವ್ಯಂ ಷಡಾಸ್ವಾದಮಿತಿ ತ್ರಿಷಷ್ಟಿಃ ||೪೩||

ಅರ್ಥ:— ಐದು ರಸಗಳ ಸಂಯೋಗವು ೬, ಬೇರೆ ಬೇರೆ ಅಸಂಯುಕ್ತ ರಸಗಳು ೬, ನಾಲ್ಕು ರಸಗಳ ಸಂಯೋಗಗಳು ೧೫ ಮತ್ತು ಎರಡು ರಸಗಳ ಸಂಯೋಗಗಳು ೧೫, ಮೂರು ರಸಗಳ ಸಂಯೋಗಗಳು ೨೦, ಆರು ರಸಗಳ ಸಂಯೋಗವು ೧, ಹೀಗೆ ೬೩ ಕಲ್ಪಗಳು ಆಗುವವು. (೪೩)

ತೇ ರಸಾನುರಸತೋ ರಸಭೇದಾಸ್ತಾರತಮ್ಯಪರಿಕಲ್ಪನಯಾ ಚ ಸಂಭವಂತಿ ಗಣನಾಂ ಸಮತೀತಾ ದೋಷಭೇಷಜವಶಾದುಪ

ಯೋಜ್ಯಾಃ ||೪೪||

ಅರ್ಥ:— ಆ ರಸಭೇದಗಳು ರಸ ಅನುರಸ ಎಂಬ ಭೇದದಿಂದ ಮತ್ತು ಅವುಗಳ ತರತಮಭಾವದ ಕಲ್ಪನೆಯಿಂದ ಗಣನೆಯನ್ನು ಮೀರುವವು. ಇವುಗಳನ್ನು ಆಯಾ ದೋಷ ಅಥವಾ ಔಷಧಕ್ಕೆ ತಕ್ಕಂತೆ ಉಪಯೋಗಿಸಬೇಕು.

**ಟಿಪ್ಪಣಿ**— ದೋಷಕ್ಕೆ ತಕ್ಕಂತೆ ಅಂದರೆ ಕೇವಲ ವಾತವಿದ್ದರೆ ಹುಳಿ, ಪಿತ್ತಯುಕ್ತ ವಾತವಿದ್ದರೆ ಹುಳಿ, ಕಹಿ. ಕಫಯುಕ್ತ ವಾತವಿದ್ದರೆ ಹುಳಿ, ಕಾರ. ಇತ್ಯಾದಿ. ಔಷಧಕ್ಕೆ ತಕ್ಕಂತೆ ಎಂದರೆ—ರೇಚನದಲ್ಲಿ ಒಂದೇ ರಸವು ರುಚಿಯಾಗದು ಎಂದು ಎರಡು ಮೂರು ರಸ ಕೂಡಿಸಿ ಕೊಡುವದು. (೪೪)

ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ರಸಭೇದೀಯೋ ನಾಮ ದಶಮೋಽಧ್ಯಾಯಃ ಸಮಾಪ್ತಃ |

ಇತಿ ಶ್ರೀಮದಾದ್ಯ ಪಾದಾಚಾರ್ಯ ಪೂಜ್ಯಪಾದ ಶಿಷ್ಯ ಅದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗಹೃದಯದ ಸೂತ್ರಸ್ಥಾನದಲ್ಲಿಯ ರಸಭೇದೀಯವೆಂಬ ೧೦ನೇ ಅಧ್ಯಾಯದ ಟೀಕೆಯು ಮುಗಿದುದು.

# ೧೧ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ 'ದೋಷಭೇಷಜವಶಾತ್' (ದೋಷ ಮತ್ತು ಭೇಷ ಜಗಳಿಗೆ ತಕ್ಕಂತೆ) ರಸಗಳನ್ನು ಉಪಯೋಗಿಸಲು ಹೇಳಿದರು. ಈಗ್ಗೆ ಆ ದೋಷ ಗಳ (ಪ್ರಾಕೃತ, ವೈಕೃತ) ಸ್ವರೂಪವನ್ನು ತೋರಿಸುವದಕ್ಕಾಗಿ ಈ ಅಧ್ಯಾಯ ವನ್ನು ಹೇಳುತ್ತಾರೆ. ಪ್ರಸಂಗತಃ ಅವುಗಳ ಆಧಾರವಾದ ಧಾತು ಮಲಗಳನ್ನೂ ಹೇಳುತ್ತಾರೆ.

**ಅಥಾತೋ ದೋಷಾದಿವಿಜ್ಞಾನೀಯಮಧ್ಯಾಯಂ**
**ವ್ಯಾಖ್ಯಾಸ್ಯಾಮಃ ||**

ಅರ್ಥಃ— ಇನ್ನು ಮೇಲೆ ದೋಷ ಧಾತು ಮಲಗಳ ಸ್ವರೂಪಜ್ಞಾನ ವನ್ನು ಮಾಡುವ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ |**

ಅರ್ಥಃ— ಆತ್ರೇಯಾದಿ ಮಹರ್ಷಿಗಳು ಹೀಗೆ ಹೇಳಿದ್ದಾರೆ.

ವಿಕೃತ ದೋಷಗಳ ಜ್ಞಾನವಾಗಬೇಕಾದರೆ ಅವಿಕೃತ (ಪ್ರಾಕೃತ) ದೋಷಗಳ ಜ್ಞಾನವು ಅವಶ್ಯವಾದದ್ದರಿಂದ ಅದನ್ನೇ ಮೊದಲು ಹೇಳುತ್ತಾರೆ.

**ದೋಷಧಾತುಮಲಾ ಮೂಲಂ ಸದಾ ದೇಹಸ್ಯ ತಂ ಚಲಃ ||**
**ಉತ್ಸಾಹೋಚ್ಛ್ವಾಸನಿಶ್ವಾಸಚೇಷ್ಟಾವೇಗಪ್ರವರ್ತನೈಃ ||೧||**

**ಸಮ್ಯಗ್ಗತ್ಯಾ ಚ ಧಾತೂನಾಮಕ್ಷಾಣಾಂ ಪಾಟವೇನ ಚ |**
**ಅನುಗೃಹ್ಣಾತ್ಯವಿಕೃತಃ............................... ||**

ಅರ್ಥಃ— ( ಸಾಮ್ಯಾವಸ್ಥೆಯಲ್ಲಿರುವ ) ವಾತಾದಿದೋಷ, ರಸಾದಿ ಧಾತು, ಮತ್ತು ಪುರೀಷಾದಿ ಮಲಗಳು ಯಾವಾಗಲೂ ದೇಹದ ಮೂಲ ಗಳಾಗಿವೆ. ( ಅವುಗಳಲ್ಲಿ ) ವಿಕೃತವಾಗದ ವಾಯುವು ಉತ್ಸಾಹ, ಉಚ್ಛ್ವಾಸ (ಶ್ವಾಸಬಿಡೋಣ), ನಿಶ್ವಾಸ (ಶ್ವಾಸ ತೆಗೆದುಕೊಳ್ಳೋಣ), (ಕಾಯಿಕ ವಾಚಿಕ ಮಾನಸಿಕ) ಕ್ರಿಯೆ,ಮಲಮೂತ್ರಾದಿ ವೇಗಗಳ ಪ್ರವೃತ್ತಿ

ಧಾತುಗಳಿಗೆ (ಸಂಚಾರಾದ) ಗತಿ, ಇಂದ್ರಿಯಗಳಿಗೆ (ವಿಷಯಗ್ರಹಣದಲ್ಲಿ) ಸಾಮರ್ಥ್ಯ ಕೊಡೋಣ ಮುಂತಾದ ಕರ್ಮಗಳಿಂದ ದೇಹವನ್ನು ಸಾಗಿಸುತ್ತದೆ. (೧||)

**.................. ...............ಪಿತ್ತಂ ಪಕ್ತ್ಯೂಷ್ಮದರ್ಶನೈಃ ||೩||**
**ಕ್ಷುತ್ತೃಡ್ರುಚಿಪ್ರಭಾಮೇಧಾಧೀಶೌರ್ಯತನುಮಾರ್ದವೈಃ ||**

ಅರ್ಥಃ— ವಿಕೃತವಾಗದ ಪಿತ್ತವು, ಪಚನ, ಉಷ್ಣತೆ, ನೋಡೋಣ, ಹಸಿವೆ, ನೀರಡಿಕೆ, ರುಚಿ, ಕಾಂತಿ, ಧಾರಣಾಶಕ್ತಿ, ಜ್ಞಾನ, ಶೂರತ್ವ, ಶರೀರಕ್ಕೆ ಮೃದುತ್ವಗಳನ್ನು ಉಂಟುಮಾಡಿ ಶರೀರವನ್ನು ಸಾಗಿಸುತ್ತದೆ.

ಟಿಪ್ಪಣಿಃ— ಹೇಮಾದ್ರಿಯು 'ತನುಮಾರ್ದವೈಃ' ಎಂಬ ಪದದಲ್ಲಿಯ 'ತನು' ಎಂಬ ಶಬ್ದಕ್ಕೆ 'ಅಸ್ಥೂಲ' ಎಂದು ಅರ್ಥ ಹೇಳುವನು. (೩||)

**ಶ್ಲೇಷ್ಮಾ ಸ್ಥಿರತ್ವಸ್ನಿಗ್ಧತ್ವಸಂಧಿಬಂಧಕ್ಷಮಾದಿಭಿಃ ||೪||**

ಅರ್ಥಃ— ಅವಿಕೃತವಾದ ಕಫವು ದಾರ್ಢ್ಯ, ಸ್ನಿಗ್ಧತ್ವ, ಸಂಧಿಗಳ ಬಂಧನ, ಸಹನ ಮುಂತಾದ ಗುಣಗಳಿಂದ ಶರೀರವನ್ನು ಸಾಗಿಸುತ್ತದೆ. (೪)

ಇನ್ನು ಧಾತುಗಳ ಕಾರ್ಯವನ್ನು ಹೇಳುತ್ತಾರೆ.

**ಪ್ರೀಣನಂ ಜೀವನಂ ಲೇಪಃ ಸ್ನೇಹೋ ಧಾರಣಪೂರಣೇ ||**
**ಗರ್ಭೋತ್ಪಾದಶ್ಚ ಧಾತೂನಾಂ ಶ್ರೇಷ್ಠಂ ಕರ್ಮ ಕ್ರಮಾತ್ ಸ್ಮೃತಂ ||೫||**

ಅರ್ಥಃ— ಅವಿಕೃತವಾದ ರಸವು ತೃಪ್ತಿಯನ್ನೂ, ಅವಿಕೃತ ರಕ್ತವು ಪ್ರಾಣಧಾರಣವನ್ನೂ, ಅವಿಕೃತ ಮಾಂಸವು ಅಸ್ತಿಗಳ ಚಲನವಲನಕ್ಕಾಗಿ ಅವುಗಳಿಗೆ ಲೇಪವನ್ನೂ, ಅವಿಕೃತವಾದ ಮೇದವು ಸ್ನಿಗ್ಧತ್ವವನ್ನೂ, ಅವಿಕೃತವಾದ ಅಸ್ಥಿಯು ದೇಹವು ಕುಸಿಬೀಳದಂತೆ ಅದನ್ನು ಎತ್ತಿ ಹಿಡಿಯುವದನ್ನೂ, ಅವಿಕೃತವಾದ ಮಜ್ಜವು ಅಸ್ಥಿಪೂರಣವನ್ನೂ, ಅವಿಕೃತವಾದ ಶುಕ್ರವು ಗರ್ಭೋತ್ಪತ್ತಿಯನ್ನೂ ಮುಖ್ಯವಾಗಿ ಉಂಟುಮಾಡುವವು.

ಟಿಪ್ಪಣೀ:— ಇವು ಮುಖ್ಯವಾದ ಕರ್ಮಗಳು. ಇವುಗಳ ಹೊರ್ತಾಗಿ ತನ್ನ ಮುಂದಿನ ಧಾತುಗಳ ಪೋಷಣ ಮುಂತಾದ ಅಮುಖ್ಯ ಕಾರ್ಯಗಳನ್ನೂ ಇವು ಮಾಡುತ್ತವೆ. (೪)

ಇನ್ನು ಮೇಲೆ ಮಲಗಳ ಕಾರ್ಯವನ್ನು ಹೇಳುತ್ತಾರೆ.

**ಅವಷ್ಟಂಭಃ ಪುರೀಷಸ್ಯ, ಮೂತ್ರಸ್ಯ ಕ್ಲೇದವಾಹನಮ್**
**ಸ್ವೇದಸ್ಯ *ಕ್ಲೇದವಿಧೃತಿಃ..............................**

ಅರ್ಥಃ— ದೇಹಧಾರಣವು ಮಲದ ಮುಖ್ಯ ಕಾರ್ಯವು. ನೀರನ್ನು ಹೊರಗೆ ಹಾಕುವದು ಮೂತ್ರದ ಮುಖ್ಯ ಕಾರ್ಯವು. ಹಸಿಯನ್ನು ಹಿಡಿದು ಕೊಳ್ಳುವದು ಸ್ವೇದದ ಮುಖ್ಯ ಕಾರ್ಯವು.

ಟಿಪ್ಪಣೀ:— ಅಮುಖ್ಯವಾದ ಬೇರೆ ಕಾರ್ಯಗಳನ್ನೂ ಮಾಡುತ್ತವೆ. (೪||)

ಇದು ವರೆಗೆ ಅವಿಕೃತವಾದ ದೋಷಧಾತುಮಲಗಳ ಕಾರ್ಯಗಳನ್ನು ಹೇಳಿ ಇನ್ನು ಮೇಲೆ ವಿಕೃತವಾದ ಅವುಗಳ ಕಾರ್ಯಗಳನ್ನು ಹೇಳುತ್ತಾರೆ.

ವಿಕೃತಿಯು ವೃದ್ಧಿ, ಕ್ಷಯ ಎಂದು ಎರಡು ವಿಧವಾಗಿದೆ. ಅವೆರಡರ ಕಾರ್ಯವನ್ನು ಕ್ರಮವಾಗಿ ಹೇಳುತ್ತಾರೆ.

**............................ವೃದ್ಧಸ್ತು ಕುರುತೇಽನಿಲಃ ||೫||**

**ಕಾರ್ಶ್ಯಕಾರ್ಷ್ಣ್ಯೋಷ್ಣಕಾಮಿತ್ವಕಂಪಾನಾಹಶಕೃದ್ಗ್ರಹಾನ್ ।**
**ಬಲನಿದ್ರೇಂದ್ರಿಯಭ್ರಂಶಪ್ರಲಾಪಭ್ರಮದೀನತಾಃ ।೬।**

ಅರ್ಥಃ— ವಾತವು ಹೆಚ್ಚಾದರೆ ಕೃಶತ್ವ, ಕಪ್ಪು ಬಣ್ಣ, ಉಷ್ಣತೆಯ ಅಭಿಲಾಷೆ, ನಡಗು, ಹೊಟ್ಟೆಯುಬ್ಬು, ಮಲಬಂಧ, ಶಕ್ತಿನಾಶ, ನಿದ್ರಾನಾಶ, ಇಂದ್ರಿಯಗಳಿಗೆ ದೌರ್ಬಲ್ಯ, ಬಡಬಡಿಸೋಣ, ಮೈತಿರಗೋಣ, ದೈನ್ಯಗಳುಂಟಾಗುವವು. ೬)

* 'ಕೇಶವಿಧೃತಿ' ಎಂದು ಹೇಮಾದ್ರಿಯ ಪಾಠವಿದೆ.

ಪೀತವಿಣ್ಮೂತ್ರನೇತ್ರತ್ವಕ್ ಕ್ಷುತ್ತೃಡ್ದಾಹಾಲ್ಪನಿದ್ರತಾಃ ॥
ಪಿತ್ತಂ..........................................

ಅರ್ಥಃ— ಪಿತ್ತವು ಹೆಚ್ಚಾದರೆ ಮಲ ಮೂತ್ರ ಕಣ್ಣು ತ್ವಚೆಗಳು ಹಳದಿಯಾಗುತ್ತವೆ; ಹಸಿವೆ ನೀರಡಿಕೆಗಳು ಬಹಳವಾಗುತ್ತವೆ; ದಾಹ ವುಂಟಾಗುತ್ತದೆ; ನಿದ್ರೆಯು ಕಡಿಮೆಯಾಗುತ್ತದೆ. (೭|||)

................ಶ್ಲೇಷ್ಮಾಗ್ನಿಸದನಪ್ರಸೇಕಾಲಸ್ಯಗೌರವಮ್ ॥೭॥

ಶ್ವೈತ್ಯಶೈತ್ಯಶ್ಲಥಾಂಗತ್ವಂ, ಶ್ವಾಸಕಾಸಾತಿನಿದ್ರತಾಃ ॥

ಅರ್ಥಃ— ಕಫವು ಹೆಚ್ಚಾದರೆ ಅಗ್ನಿಮಾಂದ್ಯ, ಜೊಲ್ಲು ಸೋರೋಣ, ಆಲಸ್ಯ, ಜಡತ್ವ, ಬಿಳೀಬಣ್ಣ, ಚಳಿ, ಅವಯವಗಳಿಗೆ ಶೈಥಿಲ್ಯ, ಕೆಮ್ಮು, ದಮ್ಮು, ಅತಿ ನಿದ್ರೆಗಳು ಉಂಟಾಗುವವು. (೭||)

ರಸೋಽಪಿ ಶ್ಲೇಷ್ಮವತ್.................................

ಅರ್ಥಃ— ಹೆಚ್ಚಾದ ರಸವೂ ಕೂಡ ಅಗ್ನಿಮಾಂದ್ಯ ಮುಂತಾದ ಕಫದ ಕಾರ್ಯಗಳನ್ನು ಮಾಡುತ್ತದೆ.

ಟಿಪ್ಪಣಿ:— ಇದರಂತೆ ರಕ್ತವು ಪಿತ್ತದ ಕಾರ್ಯಗಳನ್ನೂ, ಮಾಂಸ ಮೇದಗಳು ಕಫದ ಕಾರ್ಯಗಳನ್ನೂ ಮಾಡುತ್ತವೆ ಎಂದು ಹೇಮಾದ್ರಿಯು ಹೇಳಿರುವನು. (೭||)

........ ...........ರಕ್ತಂ ವಿಸರ್ಪಪ್ಲೀಹವಿದ್ರಧೀನ್ ॥೮॥

ಕುಷ್ಠವಾತಾಸ್ರಪಿತ್ತಾಸ್ರಗುಲ್ಮೋಪಕುಶಕಾಮಲಾಃ ॥
ವ್ಯಂಗಾಗ್ನಿನಾಶಸಮ್ಮೋಹರಕ್ತತ್ವಙ್ನೇತ್ರಮೂತ್ರತಾಃ ॥೯॥

ಅರ್ಥಃ— ರಕ್ತವು ಹೆಚ್ಚಾದರೆ ಇಸಬು, ನೀರುಬಿಲ್ಲೆ, ಕುರು, ಕುಷ್ಠ, ವಾತರಕ್ತ, ರಕ್ತಪಿತ್ತ, ಗುಲ್ಮ, ಉಪಕುಶ (ದಂತರೋಗ ಭೇದ), ಕಾಮಣಿ, ವ್ಯಂಗ (ಒಂದು ಕ್ಷುದ್ರ ರೋಗ), ಅಗ್ನಿಮಾಂದ್ಯ, ಮೂರ್ಛೆಗಳು ಉಂಟಾಗುವವು. ತ್ವಚೆ, ಕಣ್ಣು, ಮೂತ್ರಗಳು ಕೆಂಪಾಗುವವು. (೯)

ಮಾಂಸಂ ಗಂಡಾರ್ಬುದಗ್ರಂಥಿ ಗಂಡೋರೂದರವೃದ್ಧತಾಃ ।
ಕಂಠಾದಿಷ್ವಧಿಮಾಂಸಂ ಚ..............................

ಅರ್ಥಃ— ಮಾಂಸವು ಹೆಚ್ಚಾದರೆ ಗಂಡಮಾಲೆ ಗಲಗಂಡ ಅರ್ಬುದ ಗ್ರಂಥಿಗಳುಂಟಾಗುವವು. ಗಲ್ಲ ತೊಡೆ ಹೊಟ್ಟೆಗಳು ದಪ್ಪಾಗುವವು. ಗಂಟಲ ಅಂಗಳ ನಾಲಿಗೆ ಮುಂತಾದವುಗಳ ಮೇಲೆ ಮಾಂಸವು ಬೆಳೆಯುವದು.

..............................ತದ್ವನ್ಮೇದಸ್ತಥಾ ಶ್ರಮಮ್ ॥೧೦॥
ಅಲ್ಪೇऽಪಿ ಚೇಷ್ಟಿತೇ ಶ್ವಾಸಂ ಸ್ಫಿಕ್‌ಸ್ತನೋದರಲಂಬನಮ್ ॥

ಅರ್ಥಃ— ಮೇದವು ಹೆಚ್ಚಾದರೆ ಮಾಂಸ ವೃದ್ಧಿಯ ಕಾರ್ಯಗಳನ್ನು ಮಾಡುವದು ಮತ್ತು ಸ್ವಲ್ಪು ಕೆಲಸ ಮಾಡಿದ ಕೂಡಲೆ ಶ್ರಮ ವಾಗುವದು. ದಮ್ಮು ಬರುವದು. ತಿಗ ಸ್ತನ ಹೊಟ್ಟೆಗಳು ದಪ್ಪಾಗಿ ಜೋತಾಡುವವು. (೧೦॥)

ಅಸ್ಥ್ಯಧ್ಯಸ್ಥ್ಯಧಿದಂತಾಂಶ್ಚ..............................

ಅರ್ಥಃ— ಎಲಬಿನ ವೃದ್ಧಿಯಿಂದ ಎಲುಬಿನ ಮೇಲೆ ಎಲುಬುಗಳು, ಹಲ್ಲಿನ ಮೇಲೆ ಹಲ್ಲುಗಳು ಬರುತ್ತವೆ. (೧೦॥।)

..............................ಮಜ್ಜಾ ನೇತ್ರಾಂಗಗೌರವಮ್ ॥೧೧॥
ಪರ್ವಸು ಸ್ಥೂಲಮೂಲಾನಿ ಕುರ್ಯಾತ್‌ಕೃಚ್ಛ್ರಾಣ್ಯರೂಂಷಿ ಚ ॥

ಅರ್ಥಃ— ಮಜ್ಜೆಯ ವೃದ್ಧಿಯಿಂದ ಎಲ್ಲ ಅವಯವಗಳು-ವಿಶೇಷವಾಗಿ ಕಣ್ಣು-ಜಡವಾಗುವದು. ಮತ್ತು ಬೆರಳು ಮುಂತಾದವುಗಳ ಸಂಧಿಗಳಲ್ಲಿ ಕಷ್ಟದಾಯಕ, ಮೂಲದಲ್ಲಿ ದಪ್ಪಾದ ಬಕ್ಕೆ (ವ್ರಣ) ಗಳಾಗುವವು. (೧೧॥)

ಅತಿಸ್ತ್ರೀಕಾಮತಾಂ ವೃದ್ಧಂ ಶುಕ್ರಂ ಶುಕ್ರಾಶ್ಮರೀಮಪಿ ॥೧೨॥

ಅರ್ಥಃ— ಶುಕ್ರದ ವೃದ್ಧಿಯಾದರೆ ಕಾಮವಿಕಾರವು ಹೆಚ್ಚುವದು ಶುಕ್ರದಲ್ಲಿ ಹರಳುಗಳು ಉಂಟಾಗುವವು. (೧೨)

**ಕುಕ್ಷ್ಯಾಧ್ಮಾನಮಾಟೋಪಂ ಗೌರವಂ ವೇದನಾಂ ಶಕೃತ್ ||**

ಅರ್ಥ:— ಮಲವು ಹೆಚ್ಚಿದರೆ ಹೊಟ್ಟೆಯಲ್ಲಿ ಗುರು ಗುರು ಶಬ್ದ, ಭಾರ, ಉಬ್ಬೋಣ, ವೇದನೆಗಳುಂಟಾಗುವವು. (೧೨)

**ಮೂತ್ರಂ ತು ಬಸ್ತಿನಿಸ್ತೋದಂ ಕೃತೇಽಪ್ಯಕೃತಸಂಜ್ಞತಾಮ್ ||೧೩||**

ಅರ್ಥ:— ಮೂತ್ರವು ಹೆಚ್ಚಾದರೆ ಮೂತ್ರಾಶಯದಲ್ಲಿ ನೋಯು ಮೂತ್ರವನ್ನು ಮಾಡಿದರೂ ಮಾಡದಂತೆ ಅನಿಸುವದು (೧೩)

**ಸ್ವೇದೋಽತಿಸ್ವೇದದೌರ್ಗಂಧ್ಯಕಂಡೂಃ.**

ಅರ್ಥ:— (ಶರೀರದಲ್ಲಿ) ಬೆವರು ಹೆಚ್ಚಾದರೆ (ಮೈಮೇಲೆ) ಬೆವರು ಬಹಳ ಬರುವದು. ಮೈಯು ಬಹಳ ಹೊಲಸು ನಾರುವದು, ಮತ್ತು ತುರಿಸುವದು. (೧೩)

**............................ಏವಂ ಚ ಲಕ್ಷಯೇತ್ ||**
**ದೂಷಿಕಾದೀನಪಿ ಮಲಾನ್ ಬಾಹುಲ್ಯಗುರುತಾದಿಭಿಃ ||೧೪||**

ಅರ್ಥ:— ಇದರಂತೆ ಬಹಳ ಬರುವಿಕೆ, ಜಡತ್ವ, ತುರಿಕೆ ಮುಂತಾದವುಗಳಿಂದ ಪಿಚ್ಚು, ಕೂಗಣಿ ಮುಂತಾದ ಮಲಗಳು ಹೆಚ್ಚಾಗಿವೆ ಎಂದು ತಿಳಿಯಬೇಕು. (೧೪)

ಇಲ್ಲಿಯವರೆಗೆ ಹೆಚ್ಚಾದ ವಾತಾದಿಗಳ ಲಕ್ಷಣಗಳನ್ನು ಹೇಳಿ ಇನ್ನು ಮೇಲೆ ಕ್ಷೀಣವಾದ ವಾತಾದಿಗಳ ಲಕ್ಷಣಗಳನ್ನು ಹೇಳುತ್ತಾರೆ.

**ಲಿಂಗಂ ಕ್ಷೀಣೇಽನಿಲೇಽಂಗಸ್ಯ ಸಾದೋಽಲ್ಪಂ ಭಾಷಿತೇಹಿತಮ್ ||**
**ಸಂಜ್ಞಾಮೋಹಸ್ತಥಾ ಶ್ಲೇಷ್ಮವೃದ್ಧ್ಯುಕ್ತಾಮಯಸಂಭವಃ ||೧೫||**

ಅರ್ಥ:— ವಾತವು (ಪ್ರಮಾಣಕ್ಕಿಂತ) ಕಡಿಮೆಯಾಗಲು ಅವಯವಗಳು ದುರ್ಬಲವಾಗುವವು. ಭಾಷಣ ಮತ್ತು ಕೆಲಸ ಮಾಡುವ ಶಕ್ತಿಗಳು ಕಡಿಮೆಯಾಗುವವು. ಬುದ್ಧಿಮಾಂದ್ಯವುಂಟಾಗುವದು. ಮತ್ತು

ಕಫವೃದ್ಧಿಯಿಂದಾಗುವ ( ಅಗ್ನಿಮಾಂದ್ಯ ಮುಂತಾದ ) ರೋಗಗಳುಂಟಾಗುವವು. (೧೫)

**ಪಿತ್ತೇ ಮಂದೋಽನಲಃ ಶೀತಂ ಪ್ರಭಾಹಾನಿಃ......... .....**

ಅರ್ಥ:— ಪಿತ್ತವು (ಪ್ರಮಾಣಕ್ಕಿಂತ) ಕಡಿಮೆಯಾಗಲು ಅಗ್ನಿ-ಮಾಂದ್ಯ, ಚಳಿ, ಮತ್ತು ಕಾಂತಿನಾಶವಾಗುವದು. (೧೫)

**.................................ಕಫೇ ಭ್ರಮಃ ||**
**ಶ್ಲೇಷ್ಮಾಶಯಾನಾಂ ಶೂನ್ಯತ್ವಂ ಹೃದ್ದ್ರವಃ ಶ್ಲಥಸಂಧಿತಾ ||೧೬||**

ಅರ್ಥಃ— ಕಫವು ಕಡಿಮೆಯಾದರೆ ಮೈತಿರುಗೋಣ, ಕಫಸ್ಥಾನಗಳು (ಎದೆ, ತಲೆ, ಮುಂತಾದವುಗಳು) ಬರಿದಾಗುವವು. ಎದೆ ಹೆಚ್ಚು ಹಾರುವದು. ಸಂಧಿಗಳು ಸಡಿಲಾಗುವವು. (೧೬)

**ರಸೇ ರೌಕ್ಷ್ಯಂ ಶ್ರಮಃ ಶೋಷೋ ಗ್ಲಾನಿಃ ಶಬ್ದಾಸಹಿಷ್ಣುತಾ ||**

ಅರ್ಥಃ— ರಸವು ಕಡಿಮೆಯಾದರೆ ರುಕ್ಷತೆ, ಶ್ರಮ, (ಬಾಯಿ ಮುಂತಾದವುಗಳು) ಒಣಗೋಣ, ಗ್ಲಾನಿ, ಶಬ್ದ ಸಹನವಾಗದೆ ಇರುವದು, ಇವು ಉಂಟಾಗುವವು. (೧೬||)

**ರಕ್ತೇಽಮ್ಲಶಿಶಿರಪ್ರೀತಿಶಿರಾಶೈಥಿಲ್ಯರೂಕ್ಷತಾಃ ||೧೭||**

ಅರ್ಥಃ— ರಕ್ತವು ಕಡಿಮೆಯಾಗಲು ಹುಳಿ ಮತ್ತು ತಣ್ಣಗಿನ ಪದಾರ್ಥಗಳ ಮೇಲೆ ಅಭಿಲಾಷೆ, ಸಿರೆಗಳ ಶೈಥಿಲ್ಯ, ರುಕ್ಷತೆಗಳು ಉಂಟಾಗುವವು. (೧೭)

**ಮಾಂಸೇಽಕ್ಷಗ್ಲಾನಿಗಂಡಸ್ಫಿಕ್‌ಶುಷ್ಕತಾಸಂಧಿವೇದನಾಃ ||**

ಅರ್ಥಃ—ಮಾಂಸವು ಕಡಿಮೆಯಾಗಲು ಇಂದ್ರಿಯಗಳಿಗೆ ದೌರ್ಬಲ್ಯ, ಗಲ್ಲ ಮತ್ತು ಠಿಗಗಳಿಗೆ ಶುಷ್ಕತೆ ಸಂಧಿಗಳಲ್ಲಿ ನೋವುಗಳುಂಟಾಗುವವು. (೧೭||)

ಮೇದಸಿ ಸ್ವಪನಂ ಕಟ್ಯಾಃ ಪ್ಲೀಹ್ನೋಃ ವೃದ್ಧಿಃ ಕೃಶಾಂಗತಾ ||೧೮||

ಅರ್ಥಃ— ಮೇದವು ಕಡಿಮೆಯಾಗಲು ಟೊಂಕದ ಸ್ಪರ್ಶಜ್ಞಾನವು ಹೋಗುವದು. ಸೀರುಬಿಲ್ಲೆಯು ಬೆಳೆಯುವದು. ಶರೀರವು ಕೃಶವಾಗುವದು. (೧೮)

ಅಸ್ಥ್ನ್ಯಸ್ಥಿತೋದಃ ಶದನಂ ದಂತಕೇಶನಖಾದಿಷು.||

ಅರ್ಥಃ— ಎಲಬು ಕಡಿಮೆಯಾಗಲು ಎಲಬುಗಳು ನೋಯುವವು. ಮತ್ತು ಹಲ್ಲು, ಕೂದಲು, ಉಗುರು, ರೋಮಾಂಚಗಳು ಉದುರುವವು. (೧೮||)

ಅಸ್ಥ್ನಾಂ ಮಜ್ಜನಿ ಸೌಷಿರ್ಯಂ ಭ್ರಮಸ್ತಿಮಿರದರ್ಶನಮ್ ||೧೯||

ಅರ್ಥಃ— ಮಜ್ಜೆಯು (ಪ್ರಮಾಣಕ್ಕಿಂತ) ಕಡಿಮೆಯಾಗಲು ಎಲಬುಗಳು ಪೊಳ್ಳಾಗುವವು, ಮೈತಿರಗುವದು, ಕಣ್ಣಿಗೆ ಕತ್ತಲೆ ಬರುವದು. (೧೯)

ಶುಕ್ರೇ ಚಿರಾತ್ ಪ್ರಸಿಚ್ಯೇತ ಶುಕ್ರಂ ಶೋಣಿತಮೇವ ವಾ ।
ತೋದೋಽತ್ಯರ್ಥಂ ವೃಷಣಯೋರ್ಮೇಢ್ರಂ ಧೂಮಾಯತೀವ ಚ ||೨೦||

ಅರ್ಥಃ— ಶುಕ್ರವು (ಪ್ರಮಾಣಕ್ಕಿಂತ) ಕಡಿಮೆಯಾಗಲು ಅದು (ಸಂಭೋಗದಲ್ಲಿ) ತಡವಾಗಿ ಬೀಳುವದು. ಅಥವಾ ಅದರ ಬದಲು ರಕ್ತವೇ ಬೀಳುವದು. ವೃಷಣಗಳಲ್ಲಿ ನೋವು ಉಂಟಾಗುವದು. ಶಿಶ್ನದಿಂದ ಹೊಗೆ ಹೊರಟಂತಾಗುವದು. (೨೦)

ಪುರೀಷೇ ವಾಯುರನ್ತ್ರಾಣಿ ಸಶಬ್ದೋ ವೇಷ್ಟಯನ್ನಿವ ॥
ಕುಕ್ಷೌ ಭ್ರಮತಿ ಯಾತ್ಯೂರ್ಧ್ವಂ ಹೃತ್ಪಾರ್ಶ್ವೇ ಪೀಡಯನ್ ಭೃಶಮ್ ||೨೧||

ಅರ್ಥಃ— ಪುರೀಷ (ಶೌಚ)ವು (ಪ್ರಮಾಣಕ್ಕಿಂತ) ಕಡಿಮೆಯಾಗಲು ವಾತವು ಶಬ್ದಮಾಡುತ್ತ ಕರುಳುಗಳನ್ನು ಸುತ್ತುವಂತೆ ಹೊಟ್ಟೆಯಲ್ಲಿ ತಿರುಗುವದು. ಮತ್ತು ಎದೆ, ಪಕ್ಕೆಗಳನ್ನು ಬಹಳವಾಗಿ ಪೀಡಿಸುತ್ತ ಮೇಲಕ್ಕೇರುವದು. (೨೧)

**ಮೂತ್ರೇಽಲ್ಪಂ ಮೂತ್ರಯೇತ್ಕೃಚ್ಛ್ರಾದ್ವಿವರ್ಣಂ ಸಾಸ್ರಮೇವ ವಾ ॥**

ಅರ್ಥ:— ಮೂತ್ರವು (ಪ್ರಮಾಣಕ್ಕಿಂತ) ಕಡಿಮೆಯಾಗಲು ಬಹಳ ಕಷ್ಟದಿಂದ ಸ್ವಲ್ಪ ಮಾತ್ರ ಮೂತ್ರವಾಗುವದು. ಮತ್ತು ಅದು ರಕ್ತದ ಬಣ್ಣದಿಂದ ಅಥವಾ ರಕ್ತದಿಂದಲೇ ಕೂಡಿದ್ದಾಗಿರುವದು. (೨೧॥)

**ಸ್ವೇದೇ ರೋಮಚ್ಯುತಿಃ ಸ್ತಬ್ಧರೋಮತಾ ಸ್ಫುಟನಂ ತ್ವಚಃ ॥೨೨**

ಅರ್ಥ.— ಸ್ವೇದವು (ಬೆವರು) (ಪ್ರಮಾಣಕ್ಕಿಂತ) ಕಡಿಮೆಯಾಗಲು ಕೂದಲುಗಳು ಉದುರುವವು. ಅಥವಾ ಸೆಟೆಯುವವು. ತ್ವಚೆಯು ಬಿರಿಯುವದು. (೨೨)

**ಮಲಾನಾಮತಿಸೂಕ್ಷ್ಮಾಣಾಂ ದುರ್ಲಕ್ಷ್ಯಂ ಲಕ್ಷಯೇತ್ ಕ್ಷಯಮ್॥**
**ಸ್ವಮಲಾಯನಸಂಶೋಷತೋದಶೂನ್ಯತ್ವಲಾಘವೈಃ ॥೨೩॥**

ಅರ್ಥ:— ಅತಿ ಸ್ವಲ್ಪವಿರುವವರಿಂದ ತಿಳಿಯಲು ಕಠಿಣವಾದ ಪಿಚ್ಚು ಮೊದಲಾದ ಮಲಗಳ ಕ್ಷಯವನ್ನು ಆಯಾ ಮಲಗಳಿಗೆ ಆಶ್ರಯವಾದ ಇಂದ್ರಿಯಗಳ ಶೋಷ, ನೋವು, ಶೂನ್ಯತೆ, ಲಘುತ್ವಗಳಿಂದ ತಿಳಿಯಬೇಕು. (೨೩)

ಇಲ್ಲಿಯ ವರೆಗೆ ದೋಷ ಧಾತು ಮಲಗಳ ಕ್ಷಯವೃದ್ಧಿಗಳ ಲಕ್ಷಣಗಳನ್ನು ವಿಸ್ತಾರದಿಂದ ಹೇಳಿ ಈಗ್ಗೆ ಸಂಕ್ಷೇಪದಿಂದ ಹೇಳುತ್ತಾರೆ.

**ದೋಷಾದೀನಾಂ ಯಥಾಸ್ವಂ ಚ ವಿದ್ಯಾದ್ವೃದ್ಧಿಕ್ಷಯೌ ಭಿಷಕ್॥**
**ಕ್ಷಯೇಣ ವಿಪರೀತಾನಾಂ ಗುಣಾನಾಂ ವರ್ಧನೇನ ಚ ॥೨೪॥**

**ವೃದ್ಧಿಂ ಮಲಾನಾಂ ಸಂಗಾಚ್ಚ, ಕ್ಷಯಂ ಚಾತಿವಿಸರ್ಗತಃ ॥**

ಅರ್ಥ:— ಆಯಾ ದೋಷ ಧಾತು ಮಲಗಳ ವಿಪರೀತವಾದ ಗುಣಗಳ ಕ್ಷಯದಿಂದ ಆಯಾ ದೋಷಾದಿಗಳ ವೃದ್ಧಿಯಾಗಿದೆಯೆಂದೂ ಆ ವಿಪರೀತ ಗುಣಗಳ ವೃದ್ಧಿಯಿಂದ ಅವುಗಳ ಕ್ಷಯವಾಗಿದೆಯೆಂದೂ ವೈದ್ಯನು ತಿಳಿಯತಕ್ಕದ್ದು. ಅದರಂತೆ ಮಲಗಳು ಹೆಚ್ಚಾಗಿ ಶರೀರದಲ್ಲಿ ಕೂಡುವದ

ಿಂದ ಅವುಗಳ ವೃದ್ಧಿಯನ್ನೂ ಅತಿಯಾಗಿ ಹೊರಬೀಳುವದರಿಂದ ಅವುಗಳ ಕ್ಷಯವನ್ನೂ ತಿಳಿಯಬೇಕು.

ಟಿಪ್ಪಣಿ:— ವಾತದ ಗುಣಗಳಾದ ರುಕ್ಷ, ಲಘು, ಶೀತ ಮುಂತಾದವುಗಳ ವಿರುದ್ಧವಾದ ಸ್ನಿಗ್ಧ, ಗುರು, ಉಷ್ಣ ಮೊದಲಾದ ಗುಣಗಳು ಕಡಿಮೆಯಾದರೆ ವಾತವು ಹೆಚ್ಚಾಗಿದೆಯೆಂದೂ ಆ ಗುಣಗಳು ಹೆಚ್ಚಾಗಿದ್ದರೆ ವಾತವು ಕಡಿಮೆಯಾಗಿದೆಯೆಂದೂ ತಿಳಿಯಬೇಕು. ಇದರಂತೆ ಪಿತ್ತ ಕಫಗಳ ವೃದ್ಧಿ ಕ್ಷಯಗಳನ್ನು ತಿಳಿದುಕೊಳ್ಳಬೇಕು.

ಯೋಗ್ಯ ಕಾಲದಲ್ಲಿ ಶೋಧನಮಾಡದ್ದರಿಂದಲೂ ವೇಗಧಾರಣದಿಂದಲೂ ಮಲಬಂಧಕರ ಆಹಾರ - ವಿಹಾರಗಳಿಂದಲೂ ಮಲಗಳು ಶರೀರದಲ್ಲಿ ಉಳಿದು ಹೆಚ್ಚಾಗುವವು. ಅದರಂತೆ ಬಹಳ ಶೋಧನದಿಂದ ವೇಗಗಳ ಉದೀರಣಗಳಿಂದ ಸಾರಕ ಆಹಾರ ವಿಹಾರಗಳ ಸೇವನೆಯಿಂದ, ಮಲಗಳು ಹೆಚ್ಚಾಗಿ ಹೊರಬಿದ್ದು ಹೋಗಿ ಅವುಗಳ ಕ್ಷಯವಾಗುವದು. (೨೪॥)

**ಮಲೋಚಿತತ್ವಾದ್ದೇಹಸ್ಯ ಕ್ಷಯೋ ವೃದ್ಧೇಸ್ತು ಪೀಡನಃ ॥೨೫॥**

ಅರ್ಥ:— ವೃದ್ಧಿ ಕ್ಷಯಗಳು ಎರಡೂ ಪೀಡಾಕರವಿದ್ದರೂ ದೇಹಕ್ಕೆ ದೋಷ ಧಾತು ಮಲಗಳ ಅಭ್ಯಾಸವೇ ಯಾವಾಗಲೂ ಇರುವದರಿಂದ ವೃದ್ಧಿಗಿಂತ ಕ್ಷಯವು ಅದನ್ನು ಹೆಚ್ಚು ಪೀಡಿಸುತ್ತದೆ. (೨೫)

ವೃದ್ಧಿ ಕ್ಷಯಗಳ ಹೇತುವನ್ನು ತಿಳಿಸುವದಕ್ಕಾಗಿ ದೋಷ ದೂಷ್ಯಗಳ ಆಶ್ರಯಾಶ್ರಯಿಭಾವವನ್ನು ಹೇಳುತ್ತಾರೆ.

**ತತ್ರಾಸ್ಥನಿ ಸ್ಥಿತೋ ವಾಯುಃ, ಪಿತ್ತಂ ತು ಸ್ವೇದರಕ್ತಯೋಃ ॥**
**ಶ್ಲೇಷ್ಮಾ ಶೇಷೇಷು, ತೇನೈಷಾಮಾಶ್ರಯಾಶ್ರಯಿಣಾಂ ಮಿಥಃ ॥೨೬॥**

**ಯದೇಕಸ್ಯ ತದನ್ಯಸ್ಯ ವರ್ಧನಕ್ಷಪಣೌಷಧಮ್ ॥**
**ಅಸ್ಥಿಮಾರುತಯೋರ್ನೈವಂ, ಪ್ರಾಯೋ ವೃದ್ಧಿರ್ಹಿ ತರ್ಪಣಾತ್ ॥೨೭॥**

**ಶ್ಲೇಷ್ಮಣಾಽನುಗತಾ ತಸ್ಮಾತ್ ಸಂಕ್ಷಯಸ್ತದ್ವಿಪರ್ಯಯಾತ್ ॥**
**ವಾಯುನಾಽನುಗತೋಽಸ್ಮಾಚ್ಚ ವೃದ್ಧಿಕ್ಷಯಸಮುದ್ಭವಾನ್ ॥೨೮॥**

**ವಿಕಾರಾನ್ ಸಾಧಯೇಚ್ಛೀಘ್ರಂ ಕ್ರಮಾಲ್ಲಂಘನಬೃಂಹಣೈಃ ||**

ಅರ್ಥಃ— ಇವುಗಳಲ್ಲಿ ವಾತವು ಅಸ್ಥಿಯಲ್ಲಿಯೂ, ಪಿತ್ತವು ಸ್ವೇದ ರಕ್ತಗಳಲ್ಲಿಯೂ, ಕಫವು ಉಳಿದ ರಸ ಮಾಂಸ ಮೇದ ಮಜ್ಜೆ ಶುಕ್ರ ಮೂತ್ರ ಮಲ ಮುಂತಾದವುಗಳಲ್ಲಿಯೂ ಇರುತ್ತದೆ. ಆದ್ದರಿಂದ ಈ ಆಶ್ರಿತ ಆಶ್ರಯಗಳಲ್ಲಿ ಆಶ್ರಯದ ವರ್ಧನ ಔಷಧವು ಅದರ ಆಶ್ರಿತವನ್ನು ವರ್ಧಿಸುತ್ತದೆ. ಆಶ್ರಿತದ ವರ್ಧನದ ಔಷಧವು ಅದರ ಆಶ್ರಯವನ್ನು ವರ್ಧಿಸುತ್ತದೆ. ಅದರಂತೆ ಆಶ್ರಯವನ್ನು ಕ್ಷಯಿಸುವ ಔಷಧವು ಅದರ ಆಶ್ರಿತವನ್ನು ಕ್ಷಯಿಸುತ್ತದೆ. ಆಶ್ರಿತವನ್ನು ಕ್ಷಯಿಸುವ ಔಷಧವು ಅದರ ಆಶ್ರಯವನ್ನು ಕ್ಷಯಿಸುತ್ತದೆ. ಆದರೆ ಅಸ್ಥಿವಾಯುಗಳು ಇದಕ್ಕೆ ಅಪವಾದವಾಗಿವೆ. ಅಂದರೆ ವಾಯುವನ್ನು ವೃದ್ಧಿ ಮಾಡುವ ರುಕ್ಷಾದಿ ಗುಣಗಳು ಅದಕ್ಕೆ ಆಶ್ರಯವಾದ ಅಸ್ಥಿಯನ್ನು ಕ್ಷಯಿಸುತ್ತವೆ. ಅಸ್ಥಿಯನ್ನು ವೃದ್ಧಿ ಮಾಡುವ ಸ್ನಿಗ್ಧಾದಿಗುಣಗಳು ಅದಕ್ಕೆ ಆಶ್ರಿತವಾದ ವಾಯುವನ್ನು ಕ್ಷಯಿಸುತ್ತವೆ. ಅಸ್ಥಿಯವೃದ್ಧಿಗೆ ಬೃಂಹಣ ಔಷಧವಾದರೆ ವಾತದ ವೃದ್ಧಿಗೆ ಲಂಘನವು ಔಷಧವು. ಅಸ್ಥಿಕ್ಷಯಕ್ಕೆ ಲಂಘನ ಔಷಧವಾಗಿದ್ದರೆ ವಾತಕ್ಷಯಕ್ಕೆ ಬೃಂಹಣವು ಔಷಧವಾಗಿರುತ್ತದೆ.

ಈ ವೃದ್ಧಿ ಕ್ಷಯಗಳಿಂದ ಉಂಟಾದ ವಿಕಾರಗಳನ್ನು ಕ್ರಮವಾಗಿ ಲಂಘನ ಮತ್ತು ಬೃಂಹಣ, ಚಿಕಿತ್ಸೆಯಿಂದ ಗೆಲ್ಲಬೇಕು. ಏಕೆಂದರೆ ಬಹುತರ ಎಲ್ಲ ದೋಷ ಧಾತುಗಳ ವೃದ್ಧಿಯು ಸಂತರ್ಪಣದಿಂದ ಆಗುವದು. ಮತ್ತು ವೃದ್ಧಿಯಲ್ಲಿ ಕಫವಿರುವದು. ಇದರ ವಿರುದ್ಧವಾದ ಕ್ಷಯವು ಅರ್ಥಾತ್ ಲಂಘನದಿಂದ ಉಂಟಾಗಿರುವದು. ಅದರಲ್ಲಿ ವಾತವಿರುವದು. ಆದ್ದರಿಂದ ವೃದ್ಧಿಯಿಂದ ಆದ ವಿಕಾರಗಳಿಗೆ ಹೇತು (ಬೃಂಹಣ) ವಿಪರೀತವಾದ ಮತ್ತು ವ್ಯಾಧಿ (ಕಫ) ವಿಪರೀತವಾದ ಲಂಘನ ಚಿಕಿತ್ಸೆಯು ಯೋಗ್ಯವು. ಅದರಂತೆ ಕ್ಷಯದಿಂದಾದ ವಿಕಾರಗಳಿಗೆ ಹೇತು (ಲಂಘನ) ವಿಪರೀತವಾದ ಮತ್ತು ವ್ಯಾಧಿ (ವಾತ) ವಿಪರೀತವಾದ ಬೃಂಹಣ ಚಿಕಿತ್ಸೆಯು ಯೋಗ್ಯವು. (೨೮)

**ವಾಯೋರನ್ಯತ್ರ ತಜ್ಜಾಂಸ್ತು ತೈರೇವೋತ್ಕ್ರಮಯೋಜಿತೈಃ ||೨೯||**

ಅರ್ಥಃ— ಈ ನಿಯಮವು ವಾತದ ಹೊರ್ತಾಗಿ· ವಾತಕ್ಕೆ ಇದರ ವಿಪರೀತವಾಗಿ ಅಂದರೆ ವಾತವೃದ್ಧಿಯ ವಿಕಾರಗಳಿಗೆ ಬೃಂಹಣ ಚಿಕಿತ್ಸೆಯನ್ನೂ ವಾತಕ್ಷಯ ವಿಕಾರಗಳಿಗೆ ಲಂಘನ ಚಿಕಿತ್ಸೆಯನ್ನೂ ಮಾಡಬೇಕು. (೨೯)

ದೋಷಗಳ ವಿಶೇಷ ಚಿಕಿತ್ಸೆಯನ್ನು ಮುಂದೆ (ಹದಿಮೂರನೇ ಅಧ್ಯಾಯದಲ್ಲಿ) ಹೇಳುವರು. ಈಗ್ಗೆ ಕೆಲವು ಧಾತು ಮಲಗಳ ವಿಶೇಷ ಚಿಕಿತ್ಸೆಯನ್ನು ಹೇಳುತ್ತಾರೆ.

**ವಿಶೇಷಾದ್ರಕ್ತ ವೃದ್ಧ್ಯುತ್ಥಾನ್ ರಕ್ತಸ್ರುತಿವಿರೇಚನೈಃ ॥**
**ಮಾಂಸವೃದ್ಧಿಭವಾನ್ ರೋಗಾನ್ ಶಸ್ತ್ರಕ್ಷಾರಾಗ್ನಿಕರ್ಮಭಿಃ ॥೩೦॥**

**ಸ್ಥೌಲ್ಯಕಾರ್ಶ್ಯೋಪಚಾರೇಣ ಮೇದೋಜಾನಸ್ಥಿಸಂಕ್ಷಯಾತ್ ॥**
**ಜಾತಾನ್ ಕ್ಷೀರಘೃತೈಸ್ತಿಕ್ತಸಂಯುಕ್ತೈರ್ಬಸ್ತಿಭಿಸ್ತಥಾ ॥೩೧॥**

**ವಿಡ್ವೃದ್ಧಿಜಾನತೀಸಾರಕ್ರಿಯಯಾ, ವಿಟ್‌ಕ್ಷಯೋದ್ಭವಾನ್ ॥**
**ಮೇಷಾಜಮಧ್ಯಕುಲ್ಮಾಷಯವಮಾಷದ್ವಯಾದಿಭಿಃ ॥೩೨॥**

**ಮೂತ್ರವೃದ್ಧಿಕ್ಷಯೋತ್ಥಾಂಶ್ಚ ಮೇಹಕೃಚ್ಛ್ರಚಿಕಿತ್ಸಯಾ ॥**
**ವ್ಯಾಯಾಮಾಭ್ಯಂಜನಸ್ವೇದಮದ್ಯೈಃ ಸ್ವೇದಕ್ಷಯೋದ್ಭವಾನ್ ॥೩೩॥**

ಅರ್ಥ:— ವೃದ್ಧಿ ಕ್ಷಯಗಳಿಗೆ ಮೇಲೆ ಹೇಳಿದ ನಿಯಮವು ಸಾಮಾನ್ಯವಾಗಿ. ವಿಶೇಷವಾಗಿ ರಕ್ತವೃದ್ಧಿಯಿಂದಾದ ವಿಕಾರಗಳ ಮೇಲೆ ರಕ್ತಸ್ರಾವ, ವಿರೇಚನಗಳನ್ನೂ, ಮಾಂಸ ವೃದ್ಧಿಯಿಂದುಂಟಾದ ರೋಗಗಳ ಮೇಲೆ ಶಸ್ತ್ರ ಕ್ಷಾರ ಅಗ್ನಿ ಕರ್ಮಗಳನ್ನೂ, ಮೇದೋವೃದ್ಧಿಯಿಂದಾದ ವಿಕಾರಗಳ ಮೇಲೆ (ದ್ವಿವಿಧೋಪಕ್ರಮಣೀಯ ಅಧ್ಯಾಯದಲ್ಲಿ ಹೇಳಿದ) ಸ್ಥೌಲ್ಯದ ಉಪಚಾರವನ್ನೂ, ಮೇದಃಕ್ಷಯದ ವಿಕಾರಗಳ ಮೇಲೆ ಕೃಶತ್ವದ ಉಪಚಾರವನ್ನೂ, ಅಸ್ಥಿಕ್ಷಯದ ವಿಕಾರದ ಮೇಲೆ ಕಹಿ ರಸ ಕೂಡಿದ ಕ್ಷೀರ, ಘೃತ, ಬಸ್ತಿಗಳನ್ನೂ, ಮಲವೃದ್ಧಿ ವಿಕಾರದ ಮೇಲೆ ಅತಿಸಾರ ಚಿಕಿತ್ಸೆಯನ್ನೂ ಮಲ ಕ್ಷಯದ ವಿಕಾರಗಳಿಗೆ ಕುರಿ ಆಡು ಇವುಗಳ ಹೊಟ್ಟೆಯ ಮಾಂಸ, ಉಸಳೆ, ಉದ್ದು, ಜವೆ, ಅಲಸಂದಿಗಳನ್ನೂ, ಮೂತ್ರವೃದ್ಧಿಯ ಮೇಲೆ ಪ್ರಮೇಹ ಚಿಕಿತ್ಸೆಯನ್ನೂ, ಮೂತ್ರಕ್ಷಯದ ಮೇಲೆ ಮೂತ್ರಕೃಚ್ಛ್ರಚಿಕಿತ್ಸೆಯನ್ನೂ ಸ್ವೇದಕ್ಷಯದ ವಿಕಾರಗಳ ಮೇಲೆ ವ್ಯಾಯಾಮ, ಅಭ್ಯಂಗ, ಸ್ವೇದ, ಮದ್ಯಪಾನಗಳನ್ನೂ ಉಪಯೋಗಿಸಬೇಕು. (೩೩)

**ಸ್ವಸ್ಥಾನಸ್ಥಸ್ಯ ಕಾಯಾಗ್ನೇರಂಶಾ ಧಾತುಷು ಸಂಶ್ರಿತಾಃ ॥**
**ತೇಷಾಂ ಸಾದಾತಿದೀಪ್ತಿಭ್ಯಾಂ ಧಾತುವೃದ್ಧಿಕ್ಷಯೋದ್ಭವಃ ॥೩೪॥**

**ಪೂರ್ವೋ ಧಾತುಃ ಪರಂ ಕುರ್ಯಾದ್ವೃದ್ಧಃ ಕ್ಷೀಣಶ್ಚ ತದ್ವಿಧಮ್ ॥**

ಅರ್ಥ:— ಗ್ರಹಣೀ ಸ್ಥಾನದಲ್ಲಿ ಇರುವ ಜಾಠರಾಗ್ನಿಯ ಅಂಶಗಳು ರಸಾದಿಧಾತುಗಳಲ್ಲಿಯೂ ಇವೆ. ಅವು ಪ್ರದೀಪ್ತವಾಗಿದ್ದರೆ ಧಾತುಕ್ಷಯವೂ ಅವು ಮಂದವಾಗಿದ್ದರೆ ಧಾತುವೃದ್ಧಿಯೂ ಆಗುವದು. ಹಿಂದಿನ ಧಾತುವು ಹೆಚ್ಚಾದರೆ ಮುಂದಿನ ಧಾತುವೂ ಹೆಚ್ಚುವದು. ಕ್ಷೀಣವಾದರೆ ಮುಂದಿನ ಧಾತುವೂ ಕ್ಷೀಣವಾಗುವದು.

ಟಿಪ್ಪಣಿ:— ರಸಧಾತುಗತವಾದ ಅಗ್ನಿಯು ಹೆಚ್ಚಲು ರಸವು ಪಚನವಾಗಿ ರಕ್ತವಾಗುವದರಿಂದ ರಸಧಾತುವು ಕಡಿಮೆ ಆಗುತ್ತದೆ. ಇದರಂತೆ ರಕ್ತಾದಿಧಾತು ಗತ ಅಗ್ನಿಯು ಹೆಚ್ಚಲು ರಕ್ತವು ಪಚನವಾಗಿ ಮಾಂಸ ರೂಪವನ್ನು ಹೊಂದುತ್ತದೆ. ಆದರಿಂದ ರಕ್ತಧಾತುವು ಕಡಿಮೆಯಾಗುವದು. ಇದರಂತೆ ರಸಾದಿಧಾತುಗತ ಅಗ್ನಿಯು ಮಂದವಾಗಲು ಅವು ಮುಂದಿನ ರಕ್ತಾದಿ ಧಾತುಗಳಾಗಿ ಪರಿಣಮಿಸದೇ ಇರುವದರಿಂದ ಹಾಗೇ ಉಳಿದು ಹೆಚ್ಚುವವು ಎಂಬ ಭಾವವು. (೩೪॥)

ವೃದ್ಧಿಕ್ಷಯಗಳಾಗುವ ಬಗೆಯನ್ನು ಹೇಳುತ್ತಾರೆ.

**ದೋಷಾ ದುಷ್ಟಾ ರಸೈರ್ಧಾತೂನ್ ದೂಷಯಂತ್ಯುಭಯೇ**
**ಮಲಾನ್ ॥೩೫॥**
**ಅಧೋ ದ್ವೇ, ಸಪ್ತ ಶಿರಸಿ, ಖಾನಿ ಸ್ವೇದವಹಾನಿ ಚ ॥**
**ಮಲಾ ಮಲಾಯನಾನಿ ಸ್ಯುರ್ಯಥಾಸ್ವಂ ತೇಷ್ವತೋ ಗದಾಃ ॥೩೬॥**

ಅರ್ಥ:— ಹೀನಯೋಗ, ಅತಿಯೋಗ, ಮಿಥ್ಯಾಯೋಗಗಳಿಂದ ಸೇವಿಸಿದ ( ಸಮ್ಯಗ್ಯೋಗವಿಲ್ಲದ ) ರಸಗಳಿಂದ ದುಷ್ಟವಾದ ದೋಷಗಳು ಧಾತುಗಳನ್ನೂ, ಅವೆರಡೂ ಮಲಗಳನ್ನೂ ದೂಷಿಸುವವು. ಆಯಾ ಮಲಗಳು ತಮ್ಮ ಮಲ ಮಾರ್ಗಗಳನ್ನು ದೂಷಿಸುವವು. ಆದ್ದರಿಂದ ಅವುಗಳಲ್ಲಿ ರೋಗಗಳುಂಟಾಗುವವು. ಕೆಳಗೆ ಮೂತ್ರದ್ವಾರ ಮತ್ತು ಗುದ ಎಂದು ಎರಡು, ತಲೆಯಲ್ಲಿ ಎರಡು ಕಿವಿ, ಎರಡು ಮೂಗಿನ ಹೊರಳೆ, ಎರಡು ಕಣ್ಣು, ಒಂದು ಬಾಯಿ ಎಂದು ಏಳು ಮತ್ತು ರೋಮ ರಂಧ್ರಗಳು- ಇಷ್ಟು ಮಲ ಮಾರ್ಗಗಳು ಶರೀರದಲ್ಲಿ ಇರುತ್ತವೆ.

ಟಿಪ್ಪಣಿ:— ವಾತವು ಯಾವ ಯಾವ ಸ್ಥಾನಗಳಲ್ಲಿ ಯಾವ ಯಾವ ದೋಷಗಳನ್ನುಂಟುಮಾಡುವದೆಂಬುದನ್ನು ವಾತರೋಗನಿದಾನದಲ್ಲಿ ಮುಂದೆ

ಹೇಳಿದೆ. ಇಲ್ಲಿ ಪಿತ್ತ ಕಫಗಳ ವಿಷಯವಾಗಿ ಹೇಳುತ್ತೇವೆ. ಪಿತ್ತವು ತ್ವಚೆಯಲ್ಲಿ ಇದ್ದರೆ ವಿಸ್ಫೋಟಕ ಪಿತ್ತಗಳನ್ನೂ, ರಕ್ತದಲ್ಲಿದ್ದರೆ ಇಸಬು ದಾಹಗಳನ್ನೂ, ಮಾಂಸದಲ್ಲಿದ್ದರೆ ಮಾಂಸದ ಪಾಕ ಮತ್ತು ಕೊಳೆಗಳನ್ನೂ, ಮೇದದಲ್ಲಿದ್ದರೆ ದಾಹಯುಕ್ತವಾದ ಗ್ರಂಥಿ ಬೆವರು ವಾಂತಿ ನೀರಡಿಕೆಗಳನ್ನೂ ಅಸ್ಥಿಯಲ್ಲಿದ್ದರೆ ಬಿಸಿಳ ದಾಹವನ್ನೂ, ಮಜ್ಜೆಯಲ್ಲಿದ್ದರೆ ಉಗುರು ಕಣ್ಣುಗಳಿಗೆ ಹಳದೀ ಬಣ್ಣವನ್ನೂ, ಶುಕ್ರದಲ್ಲಿದ್ದರೆ ದುರ್ಗಂಧ ನಾರುವ ಹಳದೀ ಬಣ್ಣದ ಶುಕ್ರವನ್ನೂ, ಸಿರೆಯಲ್ಲಿದ್ದರೆ ಕ್ರೋಧ ಮತ್ತು ಬಡಬಡಿಕೆಯನ್ನೂ, ಸ್ನಾಯುವಿನಲ್ಲಿದ್ದರೆ ನೀರಡಿಕೆಯನ್ನೂ, ಹೊಟ್ಟೆಯಲ್ಲಿದ್ದರೆ ಮದ ನೀರಡಿಕೆ, ದಾಹ ಇನ್ನೂ ಬೇರೆ ರೋಗಗಳನ್ನೂ ಉಂಟುಮಾಡುವದು. ಕಫವು ತ್ವಚೆಯಲ್ಲಿದ್ದರೆ ಅದಕ್ಕೆ ಬಿಳಿ ಬಣ್ಣವನ್ನೂ, ರಕ್ತದಲ್ಲಿದ್ದರೆ ಪಾಂಡುರೋಗವನ್ನೂ, ಮಾಂಸದಲ್ಲಿದ್ದರೆ ಅರ್ಬುದ ಗಂಡಮಾಲೆ ಅತಿ ಜಡತ್ವಗಳನ್ನೂ, ಮೇದದಲ್ಲಿದ್ದರೆ ಸ್ಥೂಲತ್ವ ಪ್ರಮೇಹಗಳನ್ನೂ, ಅಸ್ಥಿಯಲ್ಲಿದ್ದರೆ ಅದಕ್ಕೆ ಸ್ತಬ್ಧತೆಯನ್ನೂ, ಮಜ್ಜೆಯಲ್ಲಿದ್ದರೆ ಕಣ್ಣಿನಲ್ಲಿ ಬಿಳೀ ಬಣ್ಣವನ್ನೂ, ಶುಕ್ರದಲ್ಲಿದ್ದರೆ ಶುಕ್ರಸಂಚಯವನ್ನೂ, ಸಿರೆಗಳಲ್ಲಿದ್ದರೆ ಶರೀರಕ್ಕೆ ಜಡತ್ವ, ಸ್ತಬ್ಧತೆಗಳನ್ನೂ, ಸ್ನಾಯುವಿನಲ್ಲಿದ್ದರೆ ಸ್ನಾಯುಗಳ ಸ್ಥೂಲತೆಯನ್ನೂ, ಹೊಟ್ಟೆಯಲ್ಲಿದ್ದರೆ ಹೊಟ್ಟೆಯುಬ್ಬು ಅರುಚಿ ಅಪಚನೆ ಮತ್ತು ಬೇರೆ ಕಫ ರೋಗಗಳನ್ನೂ ಉಂಟುಮಾಡುತ್ತದೆ. (೩೬॥)

ಮಲದ ಸಂಗತಿಯಿಂದ ಶುಕ್ರದಮಲವಾದ ಓಜವನ್ನು ಹೇಳುತ್ತಾರೆ.

**ಓಜಸ್ತು ತೇಜೋ ಧಾತೂನಾಂ ಶುಕ್ರಾಂತಾನಾಂ ಪರಂ ಸ್ಮೃತಮ್॥**
**ಹೃದಯಸ್ಥಮಪಿ ವ್ಯಾಪಿ ದೇಹಸ್ಥಿತಿನಿಬಂಧನಮ್ ॥೩೭॥**

**ಸ್ನಿಗ್ಧಂ ಸೋಮಾತ್ಮಕಂ ಶುದ್ಧಮೀಷಲ್ಲೋಹಿತಪೀತಕಮ್ ॥**
**ಯನ್ನಾಶೇ ನಿಯತಂ ನಾಶೋ ಯಸ್ಮಿಂಸ್ತಿಷ್ಠತಿ ತಿಷ್ಠತಿ ॥೩೮॥**

**ನಿಷ್ಪದ್ಯಂತೇ ಯತೋ ಭಾವಾ ವಿವಿಧಾ ದೇಹಸಂಶ್ರಯಾಃ ॥**

ಅರ್ಥ:— ರಸದಿಂದ ಶುಕ್ರದವರೆಗೆ ಎಲ್ಲ ಧಾತುಗಳ ಶ್ರೇಷ್ಠವಾದ ತೇಜವೇ ಓಜವು. ಅದು ಹೃದಯದಲ್ಲಿ ಇದ್ದರೂ ಸರ್ವ ದೇಹವನ್ನು ವ್ಯಾಪಿಸಿ ಇದೆ. ಜೀವನದ ಅಸ್ತಿತ್ವಕ್ಕೆ ಮೂಲ ಕಾರಣವಿದೆ. ಅದು ಸ್ನಿಗ್ಧ, ಶೀತ, ಶುದ್ಧ, ಸ್ವಲ್ಪ ಕೆಂಪು ಹಳದಿ ಬಣ್ಣದ್ದು. ಇದು ನಾಶವಾಗಲು ನಿಶ್ಚಿತವಾಗಿ ಶರೀರವು ನಷ್ಟವಾಗುವದು. ಇದು ಇರಲು ಶರೀರವು ಇರುವದು. ಇದರಿಂದ ಶರೀರದೊಳಗಿನ ಅನೇಕ ಪದಾರ್ಥಗಳು ಉಂಟಾಗುತ್ತವೆ.

ಟಿಪ್ಪಣೀ:— ಕಫಃ ಪಿತ್ತಂ ಮಲಾಃ ಖೇಷು ಪ್ರಸ್ವೇದೋ ನಖರೋಮ ಚ ।
ಸ್ನೇಹೋಽಕ್ಷಿತ್ವಗ್ವಿಶಾಮೋಜೋ ಧಾತೂನಾಂ ಕ್ರಮಶೋ ಮಲಾಃ ॥

( ಅ. ಹೃ. ಶಾರೀರ ಅ. ೩।೬೪ )

ಎಂದು ಓಜವು ಶುಕ್ರದ ಮಲವಾಗಿ ಎಣಿಸಲ್ಪಟ್ಟಿದೆ. ವಸ್ತುತಃ ಗಂಡಸಿನ ಶರೀರದಲ್ಲಿರುವ ಶುಕ್ರದ ಸಾರವು ಓಜವು. ಇದು ಅತ್ಯಂತ ಶುದ್ಧವಾಗಿರುವದರಿಂದ ಇದಕ್ಕೆ ಮಲತ್ವವೇ ಇಲ್ಲ. ಪಾಕವೂ ಇಲ್ಲ. ಆದರೆ ಸಂಭೋಗದಿಂದ ಸ್ತ್ರೀಗರ್ಭಾಶಯಗತವಾದ, ಅಲ್ಲಿಯ ಆರ್ತವದೊಡನೆ ಕೂಡಿದ ಜೀವಾಧಿಷ್ಠಿತ ಶುಕ್ರದ ಪಾಕವಾಗಿ ಸಾರವು ಗರ್ಭವಾಗಿಯೂ ಮಲವು ಓಜವಾಗಿಯೂ ಉಳಿಯುತ್ತದೆ. ಈ ಓಜವು ಗರ್ಭದ ಹೃದಯವನ್ನು ಸೇರಿ ಜೀವಶೋಣಿತವೆಂದು ಕರೆಯಲ್ಪಡುತ್ತದೆ. ಎಂಟು ಹನಿಯಿದ್ದ ಈ ಜೀವರಕ್ತವು ಸಮಾನಗುಣವಾದ ಆಹಾರ ರಸದಿಂದ ವೃದ್ಧಿಹೊಂದಿ 'ಅರ್ಧಅಂಜಲಿ'ಯಾಗಿ ಸರ್ವ ದೇಹವನ್ನೂ ವ್ಯಾಪಿಸುವದು. ಇದಕ್ಕೆ 'ರಸಾತ್ಮಕ ಓಜ'ವೆಂಬ ಹೆಸರು. (೩೮॥)

**ಓಜಃ ಕ್ಷೀಯೇತ ಕೋಪಕ್ಷುದ್ಧ್ಯಾನಶೋಕಶ್ರಮಾದಿಭಿಃ ॥೩೯॥**

**ಬಿಭೇತಿ ದುರ್ಬಲೋಽಭೀಕ್ಷ್ಣಂ ಧ್ಯಾಯತಿ ವ್ಯಥಿತೇಂದ್ರಿಯಃ ।**
**ದುಶ್ಛಾಯೋ ದುರ್ಮನಾ ರೂಕ್ಷೋ ಭವೇತ್ ಕ್ಷಾಮಶ್ಚ ತತ್ ಕ್ಷಯೇ ॥೪೦॥**

**ಜೀವನೀಯೌಷಧಕ್ಷೀರರಸಾದ್ಯಾಸ್ತತ್ರ ಭೇಷಜಮ್ ॥**

ಅರ್ಥಃ— ಓಜವು, ಹಸಿವೆ ಸಿಟ್ಟು ಚಿಂತೆ ಶೋಕ ಭಯ ಮುಂತಾದವುಗಳಿಂದ ಕ್ಷೀಣವಾಗುವದು. ಅದರ ಕ್ಷಯವಾಗಲು ಮನುಷ್ಯನು ಅಂಜುಬುರುಕನೂ ಅಶಕ್ತನೂ ಯಾವಾಗಲೂ ಚಿಂತಾಕ್ರಾಂತನೂ ಕಾಂತಿಹೀನನೂ, ಉತ್ಸಾಹರಹಿತನೂ, ರುಕ್ಷನೂ ಕೃಶನೂ ಆಗುವನು. ಎಲ್ಲ ಅವಯವಗಳಲ್ಲಿ ನೋವು ಉಂಟಾಗುವದು. ಓಜದ ನಾಶಕ್ಕೆ ಜೀವನೀಯ ವನಸ್ಪತಿಗಳೂ ಹಾಲು ಮಾಂಸರಸ ಮುಂತಾದವುಗಳೂ ಔಷಧಗಳು.

ಟಿಪ್ಪಣೀ:— ಜೀವನೀಯ ಔಷಧಗಳೆಂದರೆ (೧) ಜೀವಂತಿ (೨) ಕಾಕೋಲೀ (೩) ಕ್ಷೀರಕಾಕೋಲೀ (೪) ಮೇದಾ (೫) ಮಹಾಮೇದಾ (೬) ಮುದ್ಗಪರ್ಣೀ (೭) ಮಾಷಪರ್ಣೀ (೮) ವೃಷಭಕ (೯) ಜೀವಕ (೧೦) ಮಧುಕ ಎಂದು ೧೫ನೇ ಅಧ್ಯಾಯದಲ್ಲಿ ಹೇಳಿದ ವನಸ್ಪತಿಗಳು. (೪೦॥)

**ಓಜೋವೃದ್ಧೌ ಹಿ ದೇಹಸ್ಯ ತುಷ್ಟಿಪುಷ್ಟಿಬಲೋದಯಃ ||೪೧||**

ಅರ್ಥ:— ಓಜದ ವೃದ್ಧಿಯಿಂದಾಗಲು ಆನಂದ, ಪುಷ್ಟಿ, ಬಲಗಳು ಉಂಟಾಗುವವು. (೪೧)

ವೃದ್ಧಿ ಕ್ಷಯಗಳ ಔಷಧಗಳನ್ನು ಸಂಕ್ಷೇಪವಾಗಿ ಹೇಳುತ್ತಾರೆ.

**ಯದನ್ನಂ ದ್ವೇಷ್ಟಿ ಯದಪಿ ಪ್ರಾರ್ಥಯೇತಾವಿರೋಧಿ ತು |**
**ತತ್ತತ್ತ್ಯಜನ್ ಸಮಶ್ನಂಶ್ಚ ತೌ ತೌ ವೃದ್ಧಿಕ್ಷಯೌ ಜಯೇತ್ ||೪೨||**

ಅರ್ಥ:— ಯಾವ ಯಾವ ಅನ್ನವು ಬೇಡಾಗುತ್ತದೋ ಅದನ್ನು ಬಿಡುವುದರಿಂದ ಮತ್ತು ಯಾವ ಯಾವ ಅನ್ನವು ಬೇಕೆಂದು ಅನಿಸುತ್ತದೋ ಅಪಥ್ಯವಲ್ಲದ ಆ ಅನ್ನವನ್ನು ತಿನ್ನುವದರಿಂದ ದೋಷಗಳ ಆಯಾ ವೃದ್ಧಿ ಕ್ಷಯಗಳ ನಾಶವಾಗುವವು. (೪೨)

ಬೇಡಾದ ಅನ್ನ ಬಿಡುವುದರಿಂದ, ಬೇಕಾದ ಅನ್ನ ತಿನ್ನುವದರಿಂದ ದೋಷಗಳ ವೃದ್ಧಿಕ್ಷಯಗಳ ನಾಶವಾಗಲು ಕಾರಣವನ್ನು ಹೇಳುತ್ತಾರೆ.

**ಕುರ್ವತೇ ಹಿ ರುಚಿಂ ದೋಷಾ ವಿಪರೀತಸಮಾನಯೋಃ ||**
**ವೃದ್ಧಾಃ ಕ್ಷೀಣಾಶ್ಚ ಭೂಯಿಷ್ಠಂ ಲಕ್ಷಯಂತ್ಯಬುಧಾಸ್ತು ನ ||೪೩||**

ಅರ್ಥ:— ವಾತಾದಿ ದೋಷಗಳು ಹೆಚ್ಚಾದರೆ ಬಹಳಮಾಡಿ ತಮ್ಮ ಗುಣದ ವಿಪರೀತ ಗುಣಗಳಲ್ಲಿ ಅಭಿಲಾಷೆಯನ್ನುಂಟುಮಾಡುತ್ತವೆ. ಕಡಿಮೆಯಾದರೆ ತಮ್ಮ ಸಮಾನ ಗುಣಗಳಲ್ಲಿ ಪ್ರೀತಿಯನ್ನುಂಟು ಮಾಡುತ್ತವೆ. ಅಪಂಡಿತರು ಇದನ್ನು (ಚೆನ್ನಾಗಿ) ಅರಿಯರು.

**ಟಿಪ್ಪಣಿ:—** ಹೇಮಾದ್ರಿಯು ''ಹೆಚ್ಚಾದ ದೋಷಗಳು ವಿಪರೀತಗಳಲ್ಲಿ ರುಚಿಯನ್ನುಂಟುಮಾಡುವಂತೆ ಸಮಾನಗಳಲ್ಲಿ ದ್ವೇಷವನ್ನು ಉಂಟುಮಾಡುತ್ತವೆ. ಮತ್ತು ಕಡಿಮೆಯಾದವು ಸಮಾನಗಳಲ್ಲಿ ಪ್ರೀತಿಯನ್ನುಂಟುಮಾಡುವಂತೆ ವಿಪರೀತಗಳಲ್ಲಿ ದ್ವೇಷವನ್ನುಂಟುಮಾಡುತ್ತವೆ'' ಎಂದು ಅರ್ಥ ಹೇಳುವನು. ಇದು ಮೇಲಿನ ಶ್ಲೋಕಕ್ಕೆ ಹೆಚ್ಚು ಅನುಗುಣವಾಗಿದೆ.

ವಾತವು ಹೆಚ್ಚಾದರೆ ಅದರ ವಿಪರೀತ ಗುಣಗಳಾದ (ಅರ್ಥಾತ್ ಅದನ್ನು ನಾಶಮಾಡುವ) ಸ್ನಿಗ್ಧ, ಅಮ್ಲ, ಮಧುರ ಮುಂತಾದ ರಸಗಳನ್ನು ತಿನ್ನುವದರಿಂದ

ವಾತವು ನಾಶಹೊಂದುವದು, ಮತ್ತು ತನ್ನ ಸಮಾನವಾದ ರುಕ್ಷಾದಿ ಗುಣಗಳನ್ನು ಬಿಡುವದರಿಂದ ಹೊಸದಾಗಿ ವಾತವು ಉತ್ಪನ್ನವಾಗದು. ಈ ರೀತಿಯಾಗಿ ವಾಯುವಿನ ವೃದ್ಧಿಯು ನಾಶವಾಗುತ್ತದೆ. ಯಾವಾಗ್ಗೆ ವಾಯುವಿನ ಕ್ಷಯವಾಗುತ್ತದೋ ಆಗ್ಗೆ ಅದರ ಸಮಾನವಾದ ರುಕ್ಷಾದಿ ಗುಣಗಳನ್ನು ಸೇವಿಸುವದರಿಂದ ಅದರ ವೃದ್ಧಿಯು ಆಗುತ್ತದೆ. ಮತ್ತು ತನ್ನ ವಿಪರೀತವಾದ ಸ್ನಿಗ್ಧಾದಿಗುಣಗಳನ್ನು ಬಿಡುವದರಿಂದ ಹೊಸದಾಗಿ ಅದರ ಕ್ಷಯವುಂಟಾಗದು. ಹೀಗೆ ಇಷ್ಟದ ಸೇವನೆ, ಅನಿಷ್ಟದ ತ್ಯಾಗಗಳಿಂದ ವಾತದ ವೃದ್ಧಿಕ್ಷಯಗಳ ನಾಶವಾಗುವವು. ಇದರಂತೆ ಪಿತ್ತಾದಿಗಳಲ್ಲಿ ತಿಳಿಯಬೇಕು. ಆದರೆ ದೋಷಾದಿಗಳು ಸಮವಿದ್ದರೆ ಇದರ ವಿಪರೀತವಾಗಿ ರುಚಿ ದ್ವೇಷಗಳು ಆಗುವವು.; ಆದ್ದರಿಂದ ಮೂಲದಲ್ಲಿ 'ಭೂಯಿಷ್ಠಂ' (ಬಹಳ ಮಾಡಿ) ಎಂದು ಹೇಳಿರುವರು.

ಈ ಶ್ಲೋಕದಲ್ಲಿಯ 'ದೋಷ' ಶಬ್ದದಿಂದ ದೋಷಧಾತುಮಲಗಳನ್ನು ತಕ್ಕೊಳ್ಳಬೇಕೆಂದು ಹೇಮಾದ್ರಿಯ ಅಭಿಪ್ರಾಯವು. (೪೩)

ಮೇಲೆ ಹೇಳಿದಂತೆ ವಿಪರೀತ ಗುಣಗಳಲ್ಲಿ ಇಚ್ಛೆ, ಸಮಾನಗುಣಗಳಲ್ಲಿ ದ್ವೇಷ ಉಂಟಾಗಲು ಯುಕ್ತಿಯನ್ನು ಹೇಳುತ್ತಾರೆ.

**ಯಥಾಬಲಂ ಯಥಾಸ್ವಂ ಚ ದೋಷಾ ವೃದ್ಧಾ ವಿತನ್ವತೇ ||**
**ರೂಪಾಣಿ, ಜಹತಿ ಕ್ಷೀಣಾಃ, ಸಮಾಃ ಸ್ವಂ ಕರ್ಮ ಕುರ್ವತೇ ||೪೪||**

ಅರ್ಥ:— ದೋಷಗಳು ಬೆಳೆದರೆ ತಮ್ಮ ಶಕ್ತಿಯಂತೆ ತಮ್ಮ ಗುಣ ಕರ್ಮ ಲಕ್ಷಣಗಳನ್ನು ಹೆಚ್ಚಿಸುತ್ತವೆ. ಕ್ಷೀಣವಾದರೆ ಗುಣ ಕರ್ಮ ಲಕ್ಷಣಗಳನ್ನು ಕಡಿಮೆ ಮಾಡುತ್ತವೆ. ಸಮವಿದ್ದರೆ ಸಮವಾಗಿಡುತ್ತವೆ.

**ಟಿಪ್ಪಣೀ**— ಶರೀರದಲ್ಲಿ ಯಾವ ಯಾವ ಗುಣವು ಹೆಚ್ಚುತ್ತದೋ ಅದರಲ್ಲಿ ದ್ವೇಷವುಂಟಾಗುತ್ತದೆ. ಯಾವದು ಕಡಿಮೆಯಾಗುತ್ತದೋ ಅದರಲ್ಲಿ ಇಚ್ಛೆಯುಂಟಾಗುತ್ತದೆ. ಉದಾ:— ವಾಯುವು ಬೆಳೆಯಲು ರುಕ್ಷಾದಿ ಗುಣಗಳು ಶರೀರದಲ್ಲಿ ಬೆಳೆಯುವದರಿಂದ ಅವುಗಳಲ್ಲಿ ದ್ವೇಷವುಂಟಾಗುತ್ತದೆ. ವಾಯುವು ಕ್ಷೀಣವಾಗಲು ರುಕ್ಷಾದಿ ಗುಣಗಳು ಕ್ಷೀಣವಾಗುತ್ತವೆ. ಆದ್ದರಿಂದ ಅವುಗಳಲ್ಲಿ ಪ್ರೀತಿಯುಂಟಾಗುತ್ತದೆ. ಇದರಂತೆ ಪಿತ್ತ ಮುಂತಾದ ವಿಷಯಗಳಲ್ಲಿ ತಿಳಿಯಬೇಕು. (೪೪)

ದೋಷಗಳ ಸಾಮ್ಯಾವಸ್ಥೆಯ ಮಹತ್ವವನ್ನು ಹೇಳುತ್ತಾರೆ.

**ಯ ಏವ ದೇಹಸ್ಯ ಸಮಾ ವಿವೃದ್ಧ್ಯೈ**
**ತ ಏವ ದೋಷಾ ವಿಷಮಾ ವಧಾಯ ||**

ಯಸ್ಮಾದತಸ್ತೇ ಹಿತಚರ್ಯಯೈವ
ಕ್ಷಯಾದ್ವಿವೃದ್ಧೇರಿವ ರಕ್ಷಣೀಯಾಃ ||೪೫||

ಅರ್ಥ:— ಯಾವ ದೋಷಗಳು ಸಮವಿದ್ದಾಗ್ಗೆ ಶರೀರವನ್ನು ಬೆಳೆಸುವವೋ ಅವೇ ದೋಷಗಳು ವಿಷಮವಾದರೆ ಶರೀರವನ್ನು ಕೊಲ್ಲುವವು. ಆದ್ದರಿಂದ ಹಿತಕರವಾದ ಆಹಾರ-ವಿಹಾರಗಳಿಂದ ಅವುಗಳ ಕ್ಷಯ ಅಥವಾ ವೃದ್ಧಿಯಾಗದಂತೆ ನೋಡಿಕೊಳ್ಳಬೇಕು. (೪೫)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ದೋಷಾದಿವಿಜ್ಞಾನೀಯೋ ನಾಮ ಏಕಾದಶೋಽಧ್ಯಾಯಃ ಸಮಾಪ್ತಃ।**

ಶ್ರೀ ಪುವಾಷ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ '**ರಹಸ್ಯಪ್ರಕಾಶಿನೀ**' ಎಂಬ '**ಅಷ್ಟಾಂಗಹೃದಯ**'ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ **ದೋಷಾದಿವಿಜ್ಞಾನೀಯ** ಎಂಬ ೧೧ನೆಯ ಅಧ್ಯಾಯವು ಮುಗಿದುದು.



# ೧೨ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ ಹೇಳಿದ ದೋಷ-ವಿಜ್ಞಾನವು ದೋಷ-ಭೇದಗಳನ್ನು ಹೇಳದೆ ಪೂರ್ಣವಾಗದು ಎಂದು ದೋಷ-ಭೇದವನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ.

**ಅಥಾತೋ ದೋಷಭೇದೀಯಾಧ್ಯಾಯಂ ವ್ಯಾಖ್ಯಾಸ್ಯಾಮಃ**

ಅರ್ಥಃ – ಇನ್ನು ಮೇಲೆ ದೋಷಗಳ (ಸ್ಥಾನ, ಕರ್ಮ, ಅವಸ್ಥೆ, ಹೇತು, ಸ್ವರೂಪ, ಸಾಧನ, ಸಂಯೋಗಗಳಿಂದಾಗುವ) ಭೇದಗಳನ್ನು ಹೇಳಿದ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ।**

ಅರ್ಥಃ— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿದ್ದಾರೆ.

**ಪಕ್ವಾಶಯಕಟೀಸಕ್ಥಿಶ್ರೋತ್ರಾಸ್ಥಿಸ್ಪರ್ಶನೇಂದ್ರಿಯಮ್ ॥**
**ಸ್ಥಾನಂ ವಾತಸ್ಯ, ತತ್ರಾಪಿ ಪಕ್ವಾಧಾನಂ ವಿಶೇಷತಃ ॥೧॥**

ಅರ್ಥಃ— ಪಕ್ವಾಶಯ ಟೊಂಕ ತೊಡೆ ಕಿವಿ ಅಸ್ಥಿ ಸ್ಪರ್ಶನೇಂದ್ರಿಯ (ತ್ವಚ), ಇವು ವಾತದ ಸ್ಥಾನಗಳು. ಅದರಲ್ಲಿಯೂ ಪಕ್ವಾಶಯವು ವಾತದ ಮುಖ್ಯ ಸ್ಥಾನವು. (೧)

**ನಾಭಿರಾಮಾಶಯಃ ಸ್ವೇದೋ ಲಸೀಕಾ ರುಧಿರಂ ರಸಃ ॥**
**ದೃಕ್ ಸ್ಪರ್ಶನಂ ಚ ಪಿತ್ತಸ್ಯ, ನಾಭಿರತ್ರ ವಿಶೇಷತಃ ॥೨॥**

ಅರ್ಥಃ— ಹೊಕ್ಕಳು, ಆಮಾಶಯ, ಸ್ವೇದ, ಲಸಿಕೆ, ರಕ್ತ, ರಸ, ಕಣ್ಣು, ತ್ವಚೆ—ಇವು ಪಿತ್ತದ ಸ್ಥಾನಗಳು. ಅದರಲ್ಲಿಯೂ ಹೊಕ್ಕಳು ಪಿತ್ತದ ಮುಖ್ಯ ಸ್ಥಾನವು.

**ಟಿಪ್ಪಣಿ—** ಇಲ್ಲಿ ರಸ ಶಬ್ದದಿಂದ ಅದರ ಆಧಾರವಾದ ಹೃದಯವನ್ನು ತಿಳಿದುಕೊಳ್ಳಬೇಕು. 'ಲಸಿಕೆ' ಎಂದರೆ ತ್ವಚೆಗೆ ಘರ್ಷಣವಾಗಲು ಹೊರಡುವ ನೀರಿನಂಥಹ ಪದಾರ್ಥವು. (೨)

ಉರಃಕಂಠಶಿರಃಕ್ಲೋಮಪರ್ವಾಣ್ಯಾಮಾಶಯೋ ರಸಃ ।
ಮೇದೋ ಘ್ರಾಣಂ ಚ ಜಿಹ್ವಾ ಚ ಕಫಸ್ಯ, ಸುತರಾಮುರಃ ॥೩॥

ಅರ್ಥ:— ಎದೆ, ಕುತ್ತಿಗೆ, ತಲೆ, ಕ್ಲೋಮ, ಸಂಧಿ, ಆಮಾಶಯ, ರಸ, ಮೇದ, ಮೂಗು ಮತ್ತು ನಾಲಿಗೆ-ಇವು ಕಫದ ಸ್ಥಾನಗಳು. ಇವರಲ್ಲಿಯೂ ಎದೆಯು ಮುಖ್ಯಸ್ಥಾನವು.

ಟಿಪ್ಪಣಿ:— ಕ್ಲೋಮವೆಂದರೆ ಎದೆಯ ಕೆಳಗೆ ಇರುವ ಉದಕಸ್ರೋತದ ಮೂಲವಾದ ಗ್ರಂಥಿ ಎಂದು ಹೇಮಾದ್ರಿಯು ಹೇಳುವನು. ಅದು ತಿಲ (Pancreas) ಎಂದು ಕೆಲವರು, ಗಂಟಲದಲ್ಲಿಯ ಗ್ರಂಥಿ-ವಿಶೇಷವೆಂದು ಕೆಲವರೂ ಹೇಳುವರು. ಈ ವಿಷಯದಲ್ಲಿ ವಿದ್ವಾಂಸರಲ್ಲಿ ಮತಭೇದವುಂಟು. (೩)

ಪ್ರಾಣಾದಿಭೇದಾತ್ಪಂಚಾತ್ಮಾ ವಾಯುಃ.

ಅರ್ಥ:— ವಾಯುವು ಪ್ರಾಣ, ಉದಾನ, ವ್ಯಾನ, ಸಮಾನ ಅಪಾನ ಎಂದು ೫ ಪ್ರಕಾರ.

................................ಪ್ರಾಣೋಽತ್ರ ಮೂರ್ಧಗಃ ॥
ಉರಃಕಂಠಚರೋ ಬುದ್ಧಿಹೃದಯೇಂದ್ರಿಯಚಿತ್ತಧೃಕ್ ॥೪॥
ಷ್ಠೀವನಕ್ಷವಥೂದ್ಗಾರನಿಶ್ವಾಸಾನ್ನಪ್ರವೇಶಕೃತ್ ॥

ಅರ್ಥ:— ಇವುಗಳಲ್ಲಿ ಪ್ರಾಣವು ತಲೆಯಲ್ಲಿ ಇದ್ದುಕೊಂಡು ಎದೆ ಕುತ್ತಿಗೆಗಳಲ್ಲಿ ತಿರುಗುತ್ತ ಬುದ್ಧಿ, ಹೃದಯ, ಮನಸ್ಸು ಮತ್ತು ನೇತ್ರಾದಿ ಇಂದ್ರಿಯಗಳ ಪ್ರೇರಕವಾಗಿದೆ. ಉಗುಳು, ಸೀನು, ತೇಗು, ನಿಶ್ವಾಸ, ಅನ್ನ ಪ್ರವೇಶ ಈ ಕಾರ್ಯಗಳನ್ನು ಮಾಡುತ್ತದೆ. (೪॥)

ಉರಃಸ್ಥಾನಮುದಾನಸ್ಯ ನಾಸಾನಾಭಿಗಲಾಂಶ್ಚರೇತ್ ।೫।
ವಾಕ್ಪ್ರವೃತ್ತಿಪ್ರಯತ್ನೋರ್ಜಾಬಲವರ್ಣಸ್ಮೃತಿಕ್ರಿಯಃ ॥

ಅರ್ಥ:— ಉದಾನವು ಎದೆಯಲ್ಲಿ ಇದ್ದು ಮೂಗು, ನಾಭಿ, ಕುತ್ತಿಗೆಗಳಲ್ಲಿ ಚರಿಸುತ್ತದೆ. ಮಾತಾಡೋಣ, ಪ್ರಯತ್ನ, ಕಾಂತಿ, ಶಕ್ತಿ, ಕೆಂಪು ಮುಂತಾದ ವರ್ಣ, ಸ್ಮೃತಿಗಳನ್ನು ಉಂಟುಮಾಡುತ್ತದೆ. (೫॥)

ವ್ಯಾನೋ ಹೃದಿ ಸ್ಥಿತಃ ಕೃತ್ಸ್ನದೇಹಚಾರೀ ಮಹಾಜವಃ ॥೬
ಗತ್ಯಪಕ್ಷೇಪಣೋತ್ಕ್ಷೇಪನಿಮೇಷೋನ್ಮೇಷಣಾದಿಕಾಃ ॥
ಪ್ರಾಯಃ ಸರ್ವಾಃ ಕ್ರಿಯಾಸ್ತಸ್ಮಿನ್ಪ್ರತಿಬದ್ಧಾಃ ಶರೀರಿಣಾಮ್ ॥೭॥

ಅರ್ಥಃ— ವ್ಯಾನವು ಹೃದಯದಲ್ಲಿ ಇದ್ದುಕೊಂಡು ಬಹಳ ವೇಗದಿಂದ ಎಲ್ಲ ದೇಹವನ್ನು ಸಂಚಾರಮಾಡುತ್ತದೆ. ಶರೀರದ ಗತಿ, ಮೇಲೆ ಹಾರೋಣ, ಕೆಳಗೆ ಬೀಳೋಣ, ಕಣ್ಣು ಮುಚ್ಚೋಣ ತೆರೆಯೋಣ ಮುಂತಾದ ಬಹುತರ ಎಲ್ಲ ಕ್ರಿಯೆಗಳು ಇವರಿಂದಲೇ ಆಗುತ್ತವೆ. (೭)

ಸಮಾನೋಽಗ್ನಿಸಮೀಪಸ್ಥಃ ಕೋಷ್ಠೇ ಚರತಿ ಸರ್ವತಃ ॥
ಅನ್ನಂ ಗೃಹ್ಣಾತಿ ಪಚತಿ ವಿವೇಚಯತಿ ಮುಂಚತಿ ॥೮॥

ಅರ್ಥಃ— ಸಮಾನವಾಯುವು, ಪಾಚಕಾಗ್ನಿ ಸಮೀಪದಲ್ಲಿ ಇದ್ದು ಕೋಷ್ಠದಲ್ಲಿ ಎಲ್ಲ ಕಡೆಯೂ ತಿರುಗುತ್ತದೆ. ಅನ್ನವನ್ನು ತಕ್ಕೊಂಡು ಅದನ್ನು ಪಚನಮಾಡಿ ಅದರ ಪೃಥಕ್ಕರಣವನ್ನು ಮಾಡಿ ಅವರಲ್ಲಿಯ ತ್ಯಾಜ್ಯ ಅಂಶವನ್ನು ಕೆಳಗೆ ಬಿಟ್ಟುಬಿಡುತ್ತದೆ. (೮)

ಅಪಾನೋಽಪಾನಗಃ ಶ್ರೋಣಿಬಸ್ತಿಮೇಢ್ರೋರುಗೋಚರಃ ॥
ಶುಕ್ರಾರ್ತವಶಕೃನ್ಮೂತ್ರಗರ್ಭನಿಷ್ಕ್ರಮಣಕ್ರಿಯಃ ॥೯॥

ಅರ್ಥಃ— ಅಪಾನವಾಯುವು ಗುದಸ್ಥಾನದಲ್ಲಿದ್ದು ತಿಗ, ಮೂತ್ರಾಶಯ, ಶಿಶ್ನ, ತೊಡೆಗಳಲ್ಲಿ ತಿರುಗುತ್ತದೆ. ಶುಕ್ರ, ಆರ್ತವ, ಮಲ, ಮೂತ್ರ, ಗರ್ಭಗಳನ್ನು ಹೊರದೂಡುವ ಕೆಲಸವನ್ನು ಮಾಡುತ್ತದೆ. (೯)

ಇನ್ನು ಪಿತ್ತದ ಭೇದಗಳನ್ನು ಹೇಳುತ್ತಾರೆ.

ಪಿತ್ತಂ ಪಂಚಾತ್ಮಕಂ ತತ್ರ ಪಕ್ವಾಮಾಶಯಮಧ್ಯಗಮ್ ॥
ಪಂಚಭೂತಾತ್ಮಕತ್ವೇಽಪಿ ಯತ್ತೈಜಸಗುಣೋದಯಾತ್ ॥೧೦॥

ತ್ಯಕ್ತದ್ರವತ್ವಂ ಪಾಕಾದಿಕರ್ಮಣಾಽನಲಶಬ್ದಿತಮ್ ॥

**ಪಚತ್ಯನ್ನಂ ವಿಭಜತೇ ಸಾರಕಿಟ್ಟೌ ಪೃಥಕ್ತಥಾ ||೧೧||**

**ತತ್ರಸ್ಥಮೇವ ಪಿತ್ತಾನಾಂ ಶೇಷಾಣಾಮಪ್ಯನುಗ್ರಹಮ್ ||**

**ಕರೋತಿ ಬಲದಾನೇನ ಪಾಚಕಂ ನಾಮ ತತ್ಸ್ಮೃತಮ್ ||೧೨||**

ಅರ್ಥಃ— ಪಿತ್ತವು ಪಾಚಕ, ರಂಜಕ, ಸಾಧಕ, ಆಲೋಚಕ, ಭ್ರಾಜಕ ಎಂಬ ೫ ಪ್ರಕಾರ ಇರುತ್ತದೆ. ಅವುಗಳಲ್ಲಿ ಪಕ್ವಾಶಯ ಆಮಾಶಯಗಳ ಮಧ್ಯದಲ್ಲಿ ಇರುವ (ಪಾಚಕ) ಪಿತ್ತವು ಪಂಚಭೂತಾತ್ಮಕವಿದ್ದರೂ ತೈಜಸಗುಣವು ಹೆಚ್ಚಿರುವದರಿಂದ ತನ್ನ ದ್ರವರೂಪವನ್ನು ಬಿಟ್ಟಿರುವದು. ಪಾಕ, ದಾಹ ಮುಂತಾದ ಕ್ರಿಯೆಗಳಿಂದ ಅಗ್ನಿಯೆಂದು ಕರೆಯಲ್ಪಡುವದು. ಇದು ಅನ್ನವನ್ನು ಜೀರ್ಣಿಸುವದು. ಅನ್ನದ ವಿಭಾಗವನ್ನು ಮಾಡಿ ಸಾರ ಮತ್ತು ಕಿಟ್ಟಗಳನ್ನು ಬೇರೆ ತೆಗೆಯುವದು. ತನ್ನ ಸ್ಥಾನದಲ್ಲಿಯೇ ಇದ್ದುಕೊಂಡು ತನ್ನ ಶಕ್ತಿಯನ್ನು ಕೊಟ್ಟು ಉಳಿದ ಪಿತ್ತಗಳಿಗೆ ಸಹಾಯವನ್ನು ಮಾಡುವದು. ಇದಕ್ಕೆ (ಅನ್ನಪಚನಮಾಡುವದರಿಂದ) 'ಪಾಚಕ' ಪಿತ್ತವೆಂಬ ಹೆಸರು. (೧೨)

**ಆಮಾಶಯಾಶ್ರಯಂ ಪಿತ್ತಂ ರಂಜಕಂ ರಸರಂಜನಾತ್ ||**

ಅರ್ಥಃ— ಆಮಾಶಯದಲ್ಲಿರುವ ಪಿತ್ತವು ರಸಧಾತುವಿಗೆ ಬಣ್ಣ (ರಂಜನ)ವನ್ನು ಕೊಡುವದರಿಂದ'ರಂಜಕ'ವೆಂದು ಕರೆಯಲ್ಪಡುತ್ತದೆ.(೧೨||)

**ಬುದ್ಧಿಮೇಧಾಭಿಮಾನಾದ್ಯೈರಭಿಪ್ರೇತಾರ್ಥಸಾಧನಾತ್ ||೧೩||**

**ಸಾಧಕಂ ಹೃದ್ಗತಂ ಪಿತ್ತಮ್......................**

ಅರ್ಥಃ— ಹೃದಯದಲ್ಲಿರುವ ಪಿತ್ತವು ಬುದ್ಧಿ, ಧಾರಣಾಶಕ್ತಿ, ಅಭಿಮಾನ ಮುಂತಾದವುಗಳಿಂದ ಇಷ್ಟ ಕಾರ್ಯವನ್ನು ಸಾಧಿಸುವದರಿಂದ 'ಸಾಧಕ' ವೆಂದು ಹೇಳಲ್ಪಡುತ್ತದೆ. (೧೩|)

**.ರೂಪಾಲೋಚನತಃ ಸ್ಮೃತಮ್ ||**

**ದೃಕ್ಸ್ಥಮಾಲೋಚಕಂ.**

ಅರ್ಥ:— ಕಣ್ಣಿನಲ್ಲಿರುವ ಪಿತ್ತಕ್ಕೆ ರೂಪವನ್ನು (ಆಲೋಚನ) ನೋಡೋಣವದರಿಂದ 'ಆಲೋಚಕ'ವೆಂಬ ಹೆಸರು ಬಂದಿದೆ. (೧೩½)

.................ತ್ವಕ್ಸ್ಥಂ ಭ್ರಾಜಕಂ ಭ್ರಾಜನಾತ್ತ್ವಚಃ ॥೧೪॥

ಅರ್ಥ:— ತ್ವಚೆಯಲ್ಲಿರುವ ಪಿತ್ತವು ತ್ವಗಿಂದ್ರಿಯವನ್ನು ಬೆಳಗು (ಭ್ರಾಜನಮಾಡು)ವದರಿಂದ ಭ್ರಾಜಕವೆಂಬ ಹೆಸರು ಪಡೆದಿದೆ. (೧೪)

ಇನ್ನು ಕಫದ ಭೇದಗಳನ್ನು ಹೇಳುತ್ತಾರೆ.

ಶ್ಲೇಷ್ಮಾ ತು ಪಂಚಧಾ..................................

ಅರ್ಥ:— ಕಫವೂ ಅವಲಂಬಕ, ಕ್ಲೇದಕ, ಬೋಧಕ, ತರ್ಪಕ, ಶ್ಲೇಷಕ ಎಂದು ಐದು ಪ್ರಕಾರದ್ದು. (೧೪)

....................ಉರಃಸ್ಥಃ ಸ ತ್ರಿಕಸ್ಯ ಸ್ವವೀರ್ಯತಃ ॥
ಹೃದಯಸ್ಯಾನ್ನವೀರ್ಯಾಚ್ಚ ತತ್ಸ್ಥ ಏವಾಂಬುಕರ್ಮಣಾ ॥೧೫॥

ಕಫಧಾಮ್ನಾಂ ಚ ಶೇಷಾಣಾಂ ಯತ್ಕರೋತ್ಯವಲಂಬನಮ್ ॥
ಅತೋಽವಲಂಬಕಃ ಶ್ಲೇಷ್ಮಾ......................................

ಅರ್ಥ:— ಅವುಗಳಲ್ಲಿ ಎದೆಯಲ್ಲಿದ್ದ ಕಫವು ತನ್ನ ವೀರ್ಯದಿಂದ ತ್ರಿಕಕ್ಕೂ, ಅನ್ನದ ವೀರ್ಯ ಮತ್ತು ತನ್ನ ವೀರ್ಯದಿಂದ ಹೃದಯಕ್ಕೂ, ತನ್ನ ಸ್ಥಾನದಲ್ಲಿದ್ದುಕೊಂಡೇ ನೀರಿನ ಕರ್ಮದಿಂದ ಉಳಿದ ಕಫಸ್ಥಾನಗಳಿಗೂ ಆಧಾರ(ಅವಲಂಬನ)ವಾಗಿರೋಣದರಿಂದ 'ಅವಲಂಬಕ' ವೆಂದು ಕರೆಯಲ್ಪಡುವದು. (೧೫½)

.ಯಸ್ತ್ವಾಮಾಶಯಸಂಸ್ಥಿತಃ ॥೧೬॥
ಕ್ಲೇದಕಃ ಸೋಽನ್ನಸಂಘಾತಕ್ಲೇದನಾತ್..

ಅರ್ಥ:— ಆಮಾಶಯದಲ್ಲಿರುವ ಕಫವು ಅನ್ನದ ಮುದ್ದೆಯನ್ನು ತೊಯಿಸೋಣ(ಕ್ಲೇದನ)ದರಿಂದ 'ಕ್ಲೇದಕ'ವೆಂದು ಕರೆಯಲ್ಪಡುತ್ತದೆ(೧೬)

..................................................ರಸಬೋಧನಾತ್ ।
ಬೋಧಕೋ ರಸನಾಸ್ಥಾಯೀ,

ಅರ್ಥ:— ನಾಲಿಗೆಯಲ್ಲಿದ್ದ ಕಫವು ರಸಜ್ಞಾನ (ಬೋಧನ)ವನ್ನು ಮಾಡುವದರಿಂದ 'ಬೋಧಕ'ವು ಎಂದು ಕರೆಯಲ್ಪಡುತ್ತದೆ. (೧೬।।)

ಶಿರಃಸಂಸ್ಥೋಽಕ್ಷತರ್ಪಣಾತ್ ।।೧೭।।

ತರ್ಪಕಃ,

ಅರ್ಥ:— ತಲೆಯಲ್ಲಿರುವ ಕಫವು ಎಲ್ಲ ಇಂದ್ರಿಯಗಳನ್ನು ತಣಿಸು (ತರ್ಪಣ ಮಾಡು)ವದರಿಂದ 'ತರ್ಪಕ'ವೆಂದು ಹೇಳಲ್ಪಡುತ್ತದೆ. (೧೭।)

.ಸಂಧಿಸಂಶ್ಲೇಷಾತ್ ಶ್ಲೇಷಕಃ ಸಂಧಿಷು ಸ್ಥಿತಃ ॥

ಅರ್ಥ:— ಸಂಧಿಗಳಲ್ಲಿರುವ ಕಫವು ಸಂಧಿಗಳ ಕೂಡಿಸೋಣ (ಶ್ಲೇಷಣ) ದರಿಂದ 'ಶ್ಲೇಷಕ' ವೆಂದು ಕರೆಯಲ್ಪಡುತ್ತದೆ. (೧೭।।)

ಇತಿ ಪ್ರಾಯೇಣ ದೋಷಾಣಾಂ ಸ್ಥಾನಾನ್ಯವಿಕೃತಾತ್ಮನಾಂ ।।೧೮।।
ವ್ಯಾಪಿನಾಮಪಿ ಜಾನೀಯಾತ್ಕರ್ಮಾಣಿ ಚ ಪೃಥಕ್ಪೃಥಕ್ ॥

ಅರ್ಥ:— ಸರ್ವದೇಹದಲ್ಲಿ ವ್ಯಾಪಿಸಿ ಇದ್ದರೂ ಅವು ವಿಕೃತವಾಗದ ಇದ್ದಾಗ್ಗೆ ಹೆಚ್ಚಾಗಿ ಇರುವ ಅವುಗಳ ಸ್ಥಾನ ಮತ್ತು ಕರ್ಮಗಳು ಈ ರೀತಿಯಾಗಿ ಬೇರೆ ಬೇರೆಯಾಗಿರುವವು ಎಂದು ತಿಳಿಯಬೇಕು. (೧೮।।)

ದೋಷಗಳ ಸ್ಥಾನ ಕರ್ಮಗಳನ್ನು ಹೇಳಿ ಇನ್ನು ಮೇಲೆ ಅವುಗಳ ವಿಕೃತಿಯನ್ನು ಹೇಳುತ್ತಾರೆ. ವಿಕೃತಿಯು ಎರಡು ಪ್ರಕಾರ–ವೃದ್ಧಿ ಮತ್ತು ಕ್ಷಯ ಎಂದು. ವೃದ್ಧಿಯೂ ಚಯ, ಕೋಪವೆಂದು ಎರಡು ವಿಧ. ದೋಷಾದಿವಿಜ್ಞಾನೀಯದಲ್ಲಿ ವೃದ್ಧಿ ಕ್ಷಯ ಲಕ್ಷಣಗಳನ್ನು ಸಾಮಾನ್ಯವಾಗಿ ಹೇಳಿದ್ದಾರೆ. ಈಗ್ಗೆ ವೃದ್ಧಿಯ ಭೇದಗಳಾದ ಚಯ, ಕೋಪಗಳ ಕಾರಣಗಳನ್ನು ಸಂಕ್ಷೇಪವಾಗಿ ಹೇಳುತ್ತಾರೆ.

ಉಷ್ಣೇನ ಯುಕ್ತಾ ರೂಕ್ಷಾದ್ಯಾ ವಾಯೋಃಕುರ್ವಂತಿ ಸಂಚಯಮ್
।।೧೯।।

**ಶೀತೇನ ಕೋಪಮುಷ್ಣೇನ ಶಮಂ ಸ್ನಿಗ್ಧಾದಯೋ ಗುಣಾಃ ||**

ಅರ್ಥ:— ಉಷ್ಣದಿಂದ ಕೂಡಿದ ರುಕ್ಷ, ಲಘು, ಶೀತ, ಖರ, ಸೂಕ್ಷ್ಮ, ಚಲ ಎಂಬ ಗುಣಗಳು ವಾತದ ಸಂಚಯವನ್ನು ಮಾಡುತ್ತವೆ. ಆದರೆ ಅವು ಶೀತದಿಂದ ಕೂಡಿದರೆ ಕೋಪವನ್ನು ಉಂಟುಮಾಡುತ್ತವೆ. ಸ್ನಿಗ್ಧ, ಗುರು, ಸ್ಥೂಲ ಅಚಲ ಮುಂತಾದ (ವಾತದ ವಿರುದ್ಧ) ಗುಣಗಳು ಉಷ್ಣದಿಂದ ಕೂಡಿದರೆ ವಾತದ ಶಮನವನ್ನು ಮಾಡುತ್ತವೆ. (೨೯||)

**ಶೀತೇನ ಯುಕ್ತಾಸ್ತೀಕ್ಷ್ಣಾದ್ಯಾಶ್ಚಯಂ ಪಿತ್ತಸ್ಯ ಕುರ್ವತೇ** ||೩೦||

**ಉಷ್ಣೇನ ಕೋಪಂ, ಮಂದಾದ್ಯಾಃ ಶಮಂ ಶೀತೋಪಸಂಹಿತಾಃ ||**

ಅರ್ಥ:— ತೀಕ್ಷ್ಣ, ಲಘು, ದುರ್ಗಂಧ, ಸಾರಕ, ದ್ರವ ಮುಂತಾದ (ಪಿತ್ತದ) ಗುಣಗಳು ಶೀತದಿಂದ ಕೂಡಿದರೆ ಪಿತ್ತದ ಸಂಚಯವನ್ನೂ, ಉಷ್ಣದಿಂದ ಕೂಡಿದರೆ ಕೋಪವನ್ನೂ ಉಂಟುಮಾಡುವವು. ಮಂದ, ಗುರು, ರುಕ್ಷ, ಸ್ಥಿರ, ಸಾಂದ್ರ ಮುಂತಾದ ಪಿತ್ತದ ವಿರುದ್ಧಗುಣಗಳು ಶೀತಗುಣದಿಂದ ಯುಕ್ತವಾದರೆ ಅದರ ಶಮನವನ್ನು ಮಾಡುತ್ತವೆ. (೩೦||)

**ಶೀತೇನ ಯುಕ್ತಾಃ ಸ್ನಿಗ್ಧಾದ್ಯಾಃ ಕುರ್ವತೇ ಶ್ಲೇಷ್ಮಣಶ್ಚಯಮ್** ||೩೧||

**ಉಷ್ಣೇನ ಕೋಪಂ, ತೇನೈವ ಗುಣಾ ರೂಕ್ಷಾದಯಃ ಶಮಮ್ ||**

ಅರ್ಥ:— ಸ್ನಿಗ್ಧ, ಗುರು, ಮಂದ ಶ್ಲಕ್ಷ್ಣ, ಸ್ಥಿರ ಮುಂತಾದ (ಕಫದ) ಗುಣಗಳು ಶೀತದಿಂದ ಕೂಡಿದರೆ ಕಫದ ಸಂಚಯವನ್ನು ಉಷ್ಣದಿಂದ ಕೂಡಿದರೆ ಅದರ ಕೋಪವನ್ನೂ ಉಂಟುಮಾಡುವವು. ರುಕ್ಷ ಲಘು, ತೀಕ್ಷ್ಣ, ಖರ, ಚಲ ಮುಂತಾದ (ಕಫದ ವಿರುದ್ಧ) ಗುಣಗಳು ಉಷ್ಣದಿಂದ ಕೂಡಿದರೆ ಕಫದ ಶಮನವನ್ನು ಮಾಡುತ್ತವೆ.

**ಟಿಪ್ಪಣಿ:**— ಇದರ ತತ್ತ್ವವೇನೆಂದರೆ 'ವೃದ್ಧಿಃಸಮಾನೈಃ' ಎಂಬ ನ್ಯಾಯದಿಂದ ರುಕ್ಷಾದಿ ಗುಣಗಳು ವಾತವನ್ನು ಹೆಚ್ಚಿಸುವವು· ಆವು ವಾತ ವಿರುದ್ಧವಾದ ಉಷ್ಣ ವೀರ್ಯದಿಂದ ಯುಕ್ತವಾಗಲು ಅದರ ಪ್ರತಿಬಂಧದಿಂದ ಕೋಪವನ್ನು ಮಾಡಲು ಅಸಮರ್ಥವಾಗುವವು. ಇದರಂತೆ ಪಿತ್ತದ ಗುಣಗಳಾದ ತೀಕ್ಷ್ಣ

ಮುಂತಾದವುಗಳು ಪಿತ್ತದ ಗುಣಗಳನ್ನು ಉಂಟುಮಾಡಿದರೂ ಪಿತ್ತ ವಿರುದ್ಧವಾದ ಶೀತ ವೀರ್ಯದಿಂದ ಪ್ರತಿಬಂಧವಾಗಲು ಅದರ ಕೋಪವನ್ನು ಮಾಡಲು ಅಸಮರ್ಥವಾಗುವವು. ಆದರೆ ಈ ರೂಕ್ಷಾದಿ ಮತ್ತು ತೀಕ್ಷ್ಣಾದಿ ಗುಣಗಳು ಶೀತ ಮತ್ತು ಉಷ್ಣ ವೀರ್ಯಗಳಿಂದ ಕ್ರಮವಾಗಿ ಕೂಡಿದರೆ ವಾತ ಮತ್ತು ಪಿತ್ತದ ಕೋಪಗಳನ್ನು ಉಂಟುಮಾಡುವವು. ಸ್ನಿಗ್ಧಾದಿ ಕಫದ ಗುಣಗಳು ಕಫ ಗುಣವಾದ ಶೀತ-ವೀರ್ಯದಿಂದ ಕೂಡಿದ್ದರೂ ಕೋಪವನ್ನು ಉಂಟುಮಾಡಲಾರವು. ಏಕೆಂದರೆ ಹೆಚ್ಚು ಶೀತ ಗುಣದಿಂದ ಕಫವು ಗಟ್ಟಿಯಾಗುವದರಿಂದ ಸ್ಥಾನಾಂತರಗಮನವೆಂಬ ಕೋಪವು ಶಕ್ಯವಿಲ್ಲ. ಇದರ ವಿರುದ್ಧವಾಗಿ ಕಫ ವಿರುದ್ಧವಾದ ಉಷ್ಣ-ವೀರ್ಯದಿಂದ ಕೂಡಿದಾಗಲೇ ಅದರ ಕೋಪವಾಗುತ್ತದೆ. ಕಾರಣವೇನೆಂದರೆ ಅದರಿಂದ ಕಫವು ಕರಗಿ ಅದು ಸ್ಥಾನಾಂತರವನ್ನು ಸೇರುವದು. (೨೧||)

**ಚಯೋ ವೃದ್ಧಿಃ ಸ್ವಧಾಮ್ನ್ಯೇವ ಪ್ರದ್ವೇಷೋ ವೃದ್ಧಿಹೇತುಷು ||೨೨||**

**ವಿಪರೀತಗುಣೇಚ್ಛಾ ಚ...............................**

ಅರ್ಥ:— ಚಯವೆಂದರೆ ತನ್ನ ಸ್ಥಾನದಲ್ಲಿಯೇ ಹೆಚ್ಚಾಗೋಣ. ಆಗ್ಗೆ ವೃದ್ಧಿಯನ್ನು ಮಾಡುವ ತನ್ನ ಸಮಾನಗುಣಗಳಲ್ಲಿ ದ್ವೇಷವೂ ತನ್ನ ವಿಪರೀತ ಗುಣಗಳಲ್ಲಿ ಅಭಿಲಾಷೆಯೂ ಉಂಟಾಗುತ್ತದೆ.

**ಟಿಪ್ಪಣಿ:**— ಒಮ್ಮೊಮ್ಮೆ ವಾತ ದೋಷವು ಸಮ ಅಥವಾ ಕ್ಷೀಣವಾಗಿದ್ದಾಗ್ಯೂ ಕೂಡ ವಾತ ವೃದ್ಧಿಕರಗಳಾದ ರೂಕ್ಷ ಮುಂತಾದ ಗುಣಗಳನ್ನು ದ್ವೇಷಿಸದೆ ಅದನ್ನು ಇಚ್ಛಿಸುವದುಂಟು. ಯಾಕೆಂದರೆ ಅದು ಸಾತ್ಮ್ಯವಾಗಿರುತ್ತದೆ. ಆದ್ದರಿಂದ ವೃದ್ಧಿಕರಗಳಲ್ಲಿ ದ್ವೇಷವು, ವಿಪರೀತ ಗುಣಗಳಲ್ಲಿ ಅಭಿಲಾಷೆಯು, ಹೀಗೆ ಎರಡೂ ಇದ್ದರೆ ಸಂಚಯವಾಗಿದೆಯೆಂದು ತಿಳಿಯಬೇಕು. (೨೨)

**.... .. ..................ಕೋಪಸ್ತೂನ್ಮಾರ್ಗಗಾಮಿತಾ ||**

**ಲಿಂಗಾನಾಂ ದರ್ಶನಂ ಸ್ವೇಷಾಮಸ್ವಾಸ್ಥ್ಯಂ ರೋಗಸಂಭವಃ ||೨೩||**

**ಸ್ವಸ್ಥಾನಸ್ಥಸ್ಯ ಸಮತಾ ವಿಕಾರಾಸಂಭವಃ ||**

ಅರ್ಥ:— ಕೋಪವೆಂದರೆ ತನ್ನ ಮಾರ್ಗ ಬಿಟ್ಟು ಹೋಗೋಣವು. ಆಗ್ಗೆ ಆಯಾ ದೋಷಲಕ್ಷಣಗಳು ಕಾಣುವವು. ಅಸ್ವಾಸ್ಥ್ಯ ಮತ್ತು

ರೋಗೋತ್ಪನ್ನವಾಗುವದು. ಶಮವೆಂದರೆ ದೋಷಗಳು ಸ್ವಸ್ಥಾನದಲ್ಲಿ ಸಾಮ್ಯಾವಸ್ಥೆಯಲ್ಲಿಯೇ ಇರುವದು ಮತ್ತು ರೋಗವಾಗದೆ ಇರೋಣ. (೨೩)

ಇನ್ನು ಹೀಗೆ ದೋಷಗಳ ಚಯ, ಪ್ರಕೋಪ, ಶಮನಗಳ ಕಾಲಗಳನ್ನು ಹೇಳುತ್ತಾರೆ.

**ಚಯಪ್ರಕೋಪಪ್ರಶಮಾ ವಾಯೋರ್ಗ್ರೀಷ್ಮಾದಿಷು ತ್ರಿಷು ||೨೪||**

**ವರ್ಷಾದಿಷು ತು ಪಿತ್ತಸ್ಯ ಶ್ಲೇಷ್ಮಣಃ ಶಿಶಿರಾದಿಷು ||**

ಅರ್ಥಃ— ಗ್ರೀಷ್ಮ ಕಾಲದಲ್ಲಿ ವಾತದ ಸಂಚಯವು, ವರ್ಷಾಕಾಲದಲ್ಲಿ ಅದರ ಪ್ರಕೋಪವು, ಶರತ್ ಕಾಲದಲ್ಲಿ ಅದರ ಶಮನವು ಆಗುತ್ತದೆ. ಇದರಂತೆ ವರ್ಷಾ ಶರತ್ ಹೇಮಂತ ಋತುಗಳಲ್ಲಿ ಕ್ರಮವಾಗಿ ಪಿತ್ತದ ಚಯ, ಕೋಪ, ಶಮನಗಳೂ; ಶಿಶಿರ, ವಸಂತ ಗ್ರೀಷ್ಮ ಋತುಗಳಲ್ಲಿ ಕಫದ ಚಯ, ಕೋಪ, ಶಮನಗಳೂ ಆಗುತ್ತವೆ. (೨೪||),

ಗ್ರೀಷ್ಮ ವರ್ಷಾ ಶಿಶಿರ ಋತುಗಳಲ್ಲಿ ಕ್ರಮವಾಗಿ ವಾತ ಪಿತ್ತ ಕಫಗಳು ಕುಪಿತವಾಗದಿರಲು ಕಾರಣವನ್ನು ಹೇಳುತ್ತಾರೆ.

**ಚೀಯತೇ ಲಘುರೂಕ್ಷಾಭಿರೋಷಧೀಭಿಃ ಸಮೀರಣಃ ||೨೫||**

**ತದ್ವಿಧಸ್ತದ್ವಿಧೇ ದೇಹೇ ಕಾಲಸ್ಯೌಷ್ಣ್ಯಾನ್ನ ಕುಪ್ಯತಿ ||**
**ಅದ್ಭಿರಮ್ಲವಿಪಾಕಾಭಿರೋಷಧೀಭಿಶ್ಚ ತಾದೃಶಮ್ || ||೨೬||**

**ಪಿತ್ತಂ ಯಾತಿ ಚಯಂ, ಕೋಪಂ ನ ತು ಕಾಲಸ್ಯ ಶೈತ್ಯತಃ ||**
**ಚೀಯತೇ ಸ್ನಿಗ್ಧಶೀತಾಭಿರುದಕೌಷಧಿಭಿಃ ಕಫಃ ||೨೭||**

**ತುಲ್ಯೇಽಪಿ ಕಾಲೇ ದೇಹೇ ಚ ಸ್ಕನ್ನತ್ವಾನ್ನ ಪ್ರಕುಪ್ಯತಿ ||**

ಅರ್ಥಃ— ಗ್ರೀಷ್ಮ ಕಾಲದಲ್ಲಿ ಲಘು ರುಕ್ಷ ವನಸ್ಪತಿಗಳಿಂದ, (ಆದಾನ ಕಾಲದಿಂದ) ಲಘು ರುಕ್ಷವಾದ ದೇಹದಲ್ಲಿ, ಲಘು ರುಕ್ಷ ಸ್ವಭಾವದ ವಾತವು ಹೆಚ್ಚುತ್ತದೆ. ಆದರೆ ಕಾಲವು ಉಷ್ಣವಾದ್ದರಿಂದ ಅದು ಕುಪಿತವಾಗುವದಿಲ್ಲ. ಇದರಂತೆ ವರ್ಷಾಕಾಲದಲ್ಲಿ ಅಮ್ಲ ವಿಪಾಕದ ನೀರು ಮತ್ತು ಔಷಧಗಳಿಂದ ಅದೇ ಗುಣವುಳ್ಳ ಪಿತ್ತವು ಸಂಚಿತವಾಗುತ್ತದೆ. ಆದರೆ

ಕಾಲವು ಶೀತವಾಗಿರುವದರಿಂದ ಕುಪಿತವಾಗುವದಿಲ್ಲ. ಶಿಶಿರ ಕಾಲದಲ್ಲಿ ಸ್ನಿಗ್ಧ ಶೀತಗುಣದ ನೀರು ವಸ್ತುಗಳಿಂದ ಅವರಂತೆ ಸ್ನಿಗ್ಧ ಶೀತ ಇರುವ ದೇಹದಲ್ಲಿ ಕಫವು ಸಂಚಯವನ್ನು ಮಾತ್ರ ಹೊಂದುತ್ತದೆ. ಆದರೆ ಆ ಕಾಲದಲ್ಲಿ ಕಫವು ಗಟ್ಟಿಯಾದ್ದರಿಂದ ಕೋಪವನ್ನು ಹೊಂದುವದಿಲ್ಲ. (೨೭॥)

ಇತಿ ಕಾಲಸ್ವಭಾವೋಽಯಮ್

ಅರ್ಥ:— ಇದು ಕಾಲದ ಸ್ವಭಾವವು (೨೭॥)

.ಆಹಾರಾದಿವಶಾತ್ಪುನಃ ॥೨೮॥

**ಚಯಾದೀನ್ಯಾಂತಿ ಸದ್ಯೋಽಪಿ ದೋಷಾಃ ಕಾಲೇಽಪಿ ವಾ ನ ತು ॥**

ಅರ್ಥ:— ಆದರೆ ಆಹಾರ ವಿಹಾರಗಳಿಂದ ದೋಷಗಳು ಬೇರೆ ಕಾಲದಲ್ಲಿಯೂ ಕೂಡಲೇ ಚಯ, ಕೋಪ, ಶಮನಗಳನ್ನು ಹೊಂದುವವು. ಮತ್ತು ಮೇಲೆ ಹೇಳಿದ (ಸ್ವಾಭಾವಿಕ) ಕಾಲದಲ್ಲಿಯೂ ಅವನ್ನು ಹೊಂದವು. (೨೮॥)

**ವ್ಯಾಪ್ನೋತಿ ಸಹಸಾ ದೇಹಮಾಪಾದತಲಮಸ್ತಕಮ್ ॥೨೯॥**

**ನಿವರ್ತತೇ ತು ಕುಪಿತೋ ಮಲೋಽಲ್ಪಾಲ್ಪಂ ಜಲೌಘವತ್ ॥**

ಅರ್ಥ:— ಕುಪಿತ ದೋಷಗಳು ಒಮ್ಮೆಲೇ ತಲೆಯಿಂದ ಕಾಲಿನವರೆಗೆ ಶರೀರವನ್ನು ವ್ಯಾಪಿಸುವವು. ಆದರೆ ಹೋಗುವಾಗ್ಗೆ ಮಾತ್ರ ನೀರಿನ ಪ್ರವಾಹದಂತೆ ಸ್ವಲ್ಪ ಸ್ವಲ್ಪವಾಗಿಯೇ ಹೋಗುವವು. (೨೯॥)

**ನಾನಾರೂಪೈರಸಂಖ್ಯೇಯೈರ್ವಿಕಾರೈಃ ಕುಪಿತಾ ಮಲಾಃ ॥೩೦॥**

**ತಾಪಯಂತಿ ತನುಂ ತಸ್ಮಾತ್ತದ್ಧೇತ್ವಾಕೃತಿಸಾಧನಮ್ ॥**

**ಶಕ್ಯಂ ನೈಕೈಕಶೋ ವಕ್ತುಮತಃ ಸಾಮಾನ್ಯಮುಚ್ಯತೇ ॥೩೧॥**

ಅರ್ಥ:— ಕುಪಿತನಾದ ದೋಷಗಳು ವಿವಿಧ ಲಕ್ಷಣಗಳುಳ್ಳ ಅಸಂಖ್ಯ ರೋಗಗಳಿಂದ ಶರೀರವನ್ನು ಪೀಡಿಸುತ್ತವೆ. ಅವೆಲ್ಲವುಗಳ ಕಾರಣ, ಲಕ್ಷಣ,

ಚಿಕಿತ್ಸೆಗಳನ್ನು ಬೇರೆಬೇರೆಯಾಗಿ ಹೇಳುವದು ಶಕ್ಯವಿಲ್ಲದ್ದರಿಂದ ಸಾಮಾನ್ಯ ವಾಗಿ ಹೇಳುತ್ತೇನೆ. (೩೧)

ದೋಷಾ ಏವ ಹಿ ಸರ್ವೇಷಾಂ ರೋಗಾಣಾಮೇಕಕಾರಣಮ್ ॥
ಯಥಾ ಪಕ್ಷೀ ಪರಿಪತನ್ ಸರ್ವತಃ ಸರ್ವಮಪ್ಯಹಃ ॥೩೨॥

ಛಾಯಾಮತ್ಯೇತಿ ನಾತ್ಮೀಯಾಂ, ಯಥಾ ವಾ ಕೃತ್ಸ್ನಮಪ್ಯದಃ ॥
ವಿಕಾರಜಾತಂ ವಿವಿಧಂ ತ್ರೀನ್ಗುಣಾನ್ನಾತಿವರ್ತತೇ ॥೩೩॥

ತಥಾ ಸ್ವಧಾತುವೈಷಮ್ಯನಿಮಿತ್ತಮಪಿ ಸರ್ವದಾ ॥
ವಿಕಾರಜಾತಂ ತ್ರೀನ್ ದೋಷಾನ್.............................

ಅರ್ಥ:— ಎಲ್ಲ ರೋಗಗಳಿಗೆ ದೋಷಗಳೇ ಮೂಲ ಕಾರಣ ವಾಗಿರುತ್ತವೆ. ಹೇಗೆ ಪಕ್ಷಿಯು ಇಡೀ ಹಗಲು ಎಲ್ಲ ಕಡೆಗೆ ತಿರುಗುತ್ತಿದ್ದರೂ ತನ್ನ ನೆರಳನ್ನು ಬಿಟ್ಟಿರಲಾರದೋ ಅಥವಾ ಈ ವಿವಿಧ ಸ್ಥಾವರ ಜಂಗಮ ಜಗತ್ತು ಸತ್ವ ರಜ ತಮ ಎಂಬ ಮೂರು ಗುಣಗಳನ್ನು ಬಿಟ್ಟು ಇರುವದಿಲ್ಲವೋ ಅದರಂತೆ ತಮ್ಮ ತಮ್ಮ ಧಾತುಗಳ ವೈಷಮ್ಯದಿಂದ ಉಂಟಾದ ರೋಗ ಸಮೂಹವೂ ಕೂಡ ಮೂರು ದೋಷಗಳನ್ನು ಬಿಟ್ಟಿರಲಾರದು. (ದೋಷಜ ವಂತೂ ಬಿಟ್ಟಿರುವ ಸಂಭವವೇ ಇಲ್ಲ.) (೩೩)

ದೋಷಗಳ ಕೋಪಕ್ಕೆ ಹಿಂದೆ ಹೇಳಿದ ರುಕ್ಷಾದಿಗುಣಗಳಲ್ಲದೆ ಬೇರೆ ಕಾರಣ ಗಳನ್ನು ಹೇಳುತ್ತಾರೆ.

.............................ತೇಷಾಂ ಕೋಪೇ ತು ಕಾರಣಂ ॥೩೪॥

ಅರ್ಥೈರಸಾತ್ಮ್ಯೈಃ ಸಂಯೋಗಃ ಕಾಲಃ ಕರ್ಮ ಚ ದುಷ್ಕೃತಮ್॥
ಹೀನಾತಿಮಿಥ್ಯಾಯೋಗೇನ ಭಿದ್ಯತೇ ತತ್ಪುನಸ್ತ್ರಿಧಾ ॥೩೫॥

ಅರ್ಥ:— ಅವುಗಳ ಕೋಪಕ್ಕೆ ಅನುಚಿತವಾದ ಶಬ್ದ ಸ್ಪರ್ಶ ರೂಪ ರಸ ಗಂಧಗಳ ಸಂಯೋಗವೂ ದುಷ್ಟವಾದ ಬೇಸಿಗೆ ಚಳಿಗಾಲ ಮಳೆಗಾಲ ಗಳೂ ಹಿಂದಿನ ಮತ್ತು ಈ ಜನ್ಮದಲ್ಲಿ ಮಾಡಿದ ದುಷ್ಕೃತಿಗಳೂ ಕಾರಣವು.

ಈ ಮೂರೂ ಹೀನಯೋಗ, ಅತಿಯೋಗ, ಮಿಥ್ಯಾಯೋಗ ಎಂದು ಪುನಃ ಮೂರು ವಿಧವಾಗಿದೆ. (೩೫)

ಆ ಹೀನಯೋಗ, ಅತಿಯೋಗ, ಮಿಥ್ಯಾಯೋಗಗಳನ್ನು ಹೇಳುತ್ತಾರೆ.

**ಹೀನೋಽರ್ಥೇನೇಂದ್ರಿಯಸ್ಯಾಲ್ಪಃ ಸಂಯೋಗಃ ಸ್ವೇನ ನೈವ ವಾ ||**
**ಅತಿಯೋಗೋಽತಿಸಂಸರ್ಗಃ, ಸೂಕ್ಷ್ಮಭಾಸುರಭೈರವಮ್ ||೩೬||**

**ಅತ್ಯಾಸನ್ನಾತಿದೂರಸ್ಥಂ ವಿಪ್ರಿಯಂ ವಿಕೃತಾದಿ ಚ ||**
**ಯದಕ್ಷ್ಣಾ ವೀಕ್ಷ್ಯತೇ ರೂಪಂ ಮಿಥ್ಯಾಯೋಗಃ ಸುದಾರುಣಃ ||೩೭||**

**ಏವಮುತ್ಯಾಚ್ಛಶ್ರೋತ್ರಾದೀನಿಂದ್ರಿಯಾರ್ಥಾನ್ ಯಥಾಯಥಮ್ ||**

ಅರ್ಥಃ— ವಿಷಯದೊಡನೆ ಇಂದ್ರಿಯದ ಅಲ್ಪ ಸಂಯೋಗವು ಅಥವಾ ಏನೂ ಸಂಯೋಗವಾಗದಿರುವಿಕೆಯು ಹೀನಯೋಗವು. ಹೆಚ್ಚು ಸಂಯೋಗವು ಅತಿಯೋಗವು. ಅತಿ ಸೂಕ್ಷ್ಮ, ಅತಿ ಹೊಳೆಯುವ, ಅತಿ ಭಯಂಕರವಾದ, ಬಹಳ ಸಮೀಪದ, ಬಹಳ ದೂರದ, ಅಪ್ರಿಯ, ಅಥವಾ ವಿಕೃತವಾದ ರೂಪವನ್ನು ಕಣ್ಣಿನಿಂದ ನೋಡುವದು ಮಿಥ್ಯಾಯೋಗವು. ಇದರಂತೆ ಬಹಳ ದೊಡ್ಡ, ಕರ್ಕಶ, ಅಥವಾ ಅನಿಷ್ಟ ಶಬ್ದಗಳ ಸಂಯೋಗವು ಶ್ರವಣೇಂದ್ರಿಯದ ಮಿಥ್ಯಾಯೋಗವು. ಅತಿ ಹೊಲಸು ಮುಂತಾದ ಗಂಧಗಳ ಸಂಯೋಗವು ಘ್ರಾಣೇಂದ್ರಿಯದ ಮಿಥ್ಯಾಯೋಗವು. ಹೀಗೆಯೇ ಎಲ್ಲ ಇಂದ್ರಿಯಗಳ ಮಿಥ್ಯಾಯೋಗವನ್ನು ತಿಳಿದುಕೊಳ್ಳಬೇಕು. ಮಿಥ್ಯಾಯೋಗವು ಎಲ್ಲವುಗಳಿಗಿಂತ ಭಯಂಕರವು. (೩೬-೩೮)

**............ಕಾಲಸ್ತು ಶೀತೋಷ್ಣವರ್ಷಾಭೇದಾತ್ತ್ರಿಧಾ ಮತಃ ||೩೮||**

**ಸ ಹೀನೋ ಹೀನಶೀತಾದಿರತಿಯೋಗೋಽತಿಲಕ್ಷಣಃ ||**
**ಮಿಥ್ಯಾಯೋಗಸ್ತು ನಿರ್ದಿಷ್ಟೋ ವಿಪರೀತಸ್ವಲಕ್ಷಣಃ ||೩೯||**

ಅರ್ಥಃ— ಕಾಲವು ಚಳಿಗಾಲ, ಬೇಸಿಗೆ, ಮಳೆಗಾಲವೆಂದು ಮೂರು ವಿಧವಾಗಿದೆ. ಹೇಮಂತ, ಶಿಶಿರ ಕಾಲಗಳಲ್ಲಿ ಶೀತವು ಕಡಿಮೆಯಾದರೆ ಹೀನ

ಯೋಗವು, ಅತಿಯಾದರೆ ಅತಿಯೋಗವು. ಶೀತದ ವಿಪರೀತ ಲಕ್ಷಣವಿದ್ದರೆ ಮಿಥ್ಯಾಯೋಗವು. ಇದರಂತೆ ಬೇಸಿಗೆ ಮಳೆಗಾಲಗಳಲ್ಲಿಯೂ ಬಿಸಿಲು ಮಳೆಗಳು ಕಡಿಮೆ ಇದ್ದರೆ ಹೀನಯೋಗವೆಂದೂ ಅತಿ ಇದ್ದರೆ ಅತಿಯೋಗವೆಂದೂ ವಿರುದ್ಧ ಲಕ್ಷಣಗಳು ಅಂದರೆ ಬೇಸಿಗೆಯಲ್ಲಿ ಚಳಿ, ಮಳೆಗಾಲದಲ್ಲಿ ಬಿಸಿಲು ಇದ್ದರೆ ಅದು ಮಿಥ್ಯಾಯೋಗವೆಂದೂ ಹೇಳಲ್ಪಡುವವು. (೩೯)

**ಕಾಯವಾಕ್ಚಿತ್ತಭೇದೇನ ಕರ್ಮಾಪಿ ವಿಭಜೇತ್ ತ್ರಿಧಾ ।**

**ಕಾಯಾದಿಕರ್ಮಣೋ ಹೀನಾ ಪ್ರವೃತ್ತಿರ್ಹೀನಸಂಜ್ಞಕಃ ॥೪೦॥**

**ಅತಿಯೋಗೋಽತಿವೃತ್ತಿಸ್ತು, ವೇಗೋದೀರಣಧಾರಣಮ್ ।**

**ವಿಷಮಾಂಗಕ್ರಿಯಾರಂಭಪತನಸ್ಖಲನಾದಿಕಮ್ ॥೪೧॥**

**ಭಾಷಣಂ ಸಾಮಿಭುಕ್ತಸ್ಯ ರಾಗದ್ವೇಷಭಯಾದಿ ಚ ।**

**ಕರ್ಮ ಪ್ರಾಣಾತಿಪಾತಾದಿ ದಶಧಾ ಯಚ್ಚ ನಿಂದಿತಮ್ ॥೪೨॥**

**ಮಿಥ್ಯಾಯೋಗಃ ಸಮಸ್ತೋಽಸಾವಿಹ ವಾಽಮುತ್ರ ವಾ ಕೃತಮ್ ॥**

ಅರ್ಥಃ— ಕರ್ಮವೂ ಕೂಡ ಕಾಯಿಕ, ವಾಚಿಕ, ಮಾನಸಿಕವೆಂದು ಮೂರು ವಿಧವಾಗಿದೆ. ದೇಹ, ವಾಕ್, ಮನಸ್ಸುಗಳ ಹೀನ ಪ್ರವೃತ್ತಿಯು ಹೀನಯೋಗವು, ಅತಿಪ್ರವೃತ್ತಿಯು ಅತಿಯೋಗವು, ವೇಗಗಳ ಬಲುಮೆಯ ಪ್ರವೃತ್ತಿ ನಿವೃತ್ತಿಗಳೂ, ಅವಯವಗಳನ್ನು ಸರಿಯಾಗಿ ಇಡದೆ ಕೆಲಸ ಮಾಡೋಣ ಬೀಳೋಣ ಎಡವೋಣ ಮುಂತಾದವುಗಳೂ ಕಾಯಿಕ ಕರ್ಮದ ಮಿಥ್ಯಾಯೋಗವು. ಊಟಮಾಡುವಾಗ್ಗೆ ಮಾತಾಡೋಣವೂ, ವಾಚಿಕ ಕರ್ಮದ ಮಿಥ್ಯಾಯೋಗವು. ಆಸಕ್ತಿ, ದ್ವೇಷ, ಭಯ ಮುಂತಾದವೂ ಇಹದಲ್ಲಿ ಅಥವಾ ಪರದಲ್ಲಿ ಮಾಡಿದ ಪ್ರಾಣಘಾತ ಮುಂತಾದ (ದಿನಚರ್ಯಾಧ್ಯಾಯದಲ್ಲಿ ಹೇಳಿದ) ಹತ್ತು ಕರ್ಮಗಳೂ ಮಿಥ್ಯಾಯೋಗವು. (೪೨)

**ನಿದಾನಮೇತದ್ದೋಷಾಣಾಂ ಕುಪಿತಾಸ್ತೇನ ನೈಕಧಾ ॥೪೩॥**

**ಕುರ್ವಂತಿ ವಿವಿಧಾನ್ ವ್ಯಾಧೀನ್ ಶಾಖಾಕೋಷ್ಠಾಸ್ಥಿಸಂಧಿಷು ॥**

ಅರ್ಥ:— ದೋಷಗಳ ಕೋಪದಲ್ಲಿ ಇವು ಮೂರು ಕಾರಣಗಳು. ಇವುಗಳಿಂದ ಅನೇಕ ರೀತಿಯಾಗಿ ಕುಪಿತವಾದ ದೋಷಗಳು ಅನೇಕ ತರದ ವೇದನೆಗಳನ್ನು ಶಾಖಾ, ಕೋಷ್ಠ, ಅಸ್ಥಿ ಮತ್ತು ಸಂಧಿಗಳಲ್ಲಿ ಉಂಟು ಮಾಡುತ್ತವೆ.

'ಶಾಖಾ' ಅಂದರೆ ಏನೆಂಬುದನ್ನು ಹೇಳುತ್ತಾರೆ.

**ಶಾಖಾ ರಕ್ತಾದಯಸ್ತ್ವಕ್ಚ ಬಾಹ್ಯರೋಗಾಯನಂ ಹಿ ತತ್ ||೪೪||**

**ತದಾಶ್ರಯಾ ಮಷವ್ಯಂಗಗಂಡಾಲಜ್ಯರ್ಬುದಾದಯಃ ||**
**ಬಹಿರ್ಭಾಗಾಶ್ಚ ದುರ್ನಾಮಗುಲ್ಮಶೋಫಾದಯೋ ಗದಾಃ ||೪೫||**

ಅರ್ಥ:— ರಕ್ತ ಮೊದಲಾದ ಆರು ಧಾತುಗಳು ಮತ್ತು ತ್ವಚೆ— ಇವುಗಳಿಗೆ ಶಾಖೆ ಎನ್ನುತ್ತಾರೆ. ಅದು ಬಾಹ್ಯರೋಗ ಮಾರ್ಗವು. ಇದರಲ್ಲಿ ಮಷ (ಎಳ್ಳಿನಂಥ ಕರೇಕಲೆ), ವ್ಯಂಗ (ಮೋರೆಯ ಮೇಲಿನ ಕಪ್ಪು ಕಲೆ), ಗಂಡಾಲಜೀ (ಗಲ್ಲದ ಮೇಲಿನ ಕೀವುಳ್ಳ ಸಣ್ಣ ಬಕ್ಕೆ), ಅರ್ಬುದ (ವಾಳ) ಮುಂತಾದವುಗಳು ಮತ್ತು ಹೊರಭಾಗದಲ್ಲಿ ಆಗುವ ಮೂಲವ್ಯಾಧಿ, ಗುಲ್ಮ, ಬಾವು ಮುಂತಾದವುಗಳು ಇರುತ್ತವೆ. (೪೫)

**ಅಂತಃಕೋಷ್ಠೋ ಮಹಾಸ್ರೋತ ಆಮಪಕ್ವಾಶಯಾಶ್ರಯಃ ||**
**ತತ್ಸ್ಥಾನಾಶ್ಛರ್ದ್ಯತೀಸಾರಕಾಸಶ್ವಾಸೋದರಜ್ವರಾಃ ||೪೬||**

**ಅಂತರ್ಭಾಗಂ ಚ ಶೋಫಾರ್ಶೋಗುಲ್ಮವೀಸರ್ಪವಿದ್ರಧಿ ||**

ಅರ್ಥ:— ಮಹಾಸ್ರೋತವು ಅಂತಃಕೋಷ್ಠವು. ಅದು ಆಮಾಶಯ ಪಕ್ವಾಶಯಗಳಿಗೆ ಆಶ್ರಯವಾಗಿದೆ. ಅದರಲ್ಲಿ ವಮನ ಅತಿಸಾರ ಕಾಸ ಶ್ವಾಸ ಉದರ ಜ್ವರಗಳೂ ಒಳಭಾಗದಲ್ಲಿ ಆಗುವ ಬಾವು ಮೂಲವ್ಯಾಧಿ ಗುಲ್ಮ ವಿಸರ್ಪ ಕುರುವುಗಳೂ ಇರುತ್ತವೆ. (೪೬||)

**ಶಿರೋಹೃದಯಬಸ್ತ್ಯಾದಿಮರ್ಮಾಣ್ಯಸ್ಥ್ನಾಂ ಚ ಸಂಧಯಃ ||೪೭||**

**ತನ್ನಿಬದ್ಧಾಃ ಶಿರಾಸ್ನಾಯುಕಂಡರಾದ್ಯಾಶ್ಚ ಮಧ್ಯಮಃ ||**
**ರೋಗಮಾರ್ಗಃ, ಸ್ಥಿತಾಸ್ತತ್ರ ಯಕ್ಷ್ಮಪಕ್ಷವಧಾರ್ದಿತಾಃ ||೪೮||**

ಮೂರ್ಧಾದಿರೋಗಾಃ ಸಂಧ್ಯಸ್ಥಿತ್ರಿಕಶೂಲಗ್ರಹಾದಯಃ ॥

ಅರ್ಥಃ— ತಲೆ, ಎದೆ, ಬಸ್ತಿ ಮುಂತಾದ ಮರ್ಮಗಳೂ ಅಸ್ಥಿಗಳ ಸಂಧಿಗಳೂ ಅವುಗಳಲ್ಲಿ ಕಟ್ಟಿದ—ಸಿರಾ, ಸ್ನಾಯು, ಕಂಡರಾ ಮುಂತಾದವುಗಳೂ ಮಧ್ಯಮ ರೋಗ ಮಾರ್ಗವು. ಇದರಲ್ಲಿ ಕ್ಷಯ ಪಕ್ಷವಧ (ಅರ್ಧಾಂಗ ವಾತ), ಅರ್ದಿತ, ತಲೆಶೂಲಿ, ಸಂಧಿ ಎಲವು ತಿಗ ಮುಂತಾದವುಗಳ ಹಿಡತ ಮತ್ತು ಶೂಲಿ ಮುಂತಾದವುಗಳು ಇರುತ್ತವೆ. (೪೮॥)

ಕುಪಿತವಾಯುವಿನ ಕಾರ್ಯಗಳನ್ನು ಹೇಳುತ್ತಾರೆ.

ಸ್ರಂಸವ್ಯಾಸವ್ಯಧಸ್ವಾಪಸಾದರುಕ್ತೋದಭೇದನಮ್ ॥೪೯॥

ಸಂಗಾಂಗಭಂಗಸಂಕೋಚವರ್ತಹರ್ಷಣತರ್ಷಣಮ್ ॥

ಕಂಪಪಾರುಷ್ಯಸೌಷಿರ್ಯಶೋಷಸ್ಪಂದನವೇಷ್ಟನಮ್ ॥೫೦॥

ಸ್ತಂಭಃ ಕಷಾಯರಸತಾ ವರ್ಣಃ ಶ್ಯಾವೋಽರುಣೋಽಪಿ ವಾ ॥

ಕರ್ಮಾಣಿ ವಾಯೋಃ.

ಅರ್ಥಃ— ಕೆಳಗೆ ಸರಿಯೋಣ, ಜಗ್ಗೋಣ, ಚುಚ್ಚೋಣ, ಸ್ಪರ್ಶ-ಜ್ಞಾನನಾಶ, ಬಲಹೀನತೆ, ನೋವು, ಬಡಿದಂತೆ ಸೀಳಿದಂತೆ ವೇದನೆ, ಮಲ ಮೂತ್ರಾದಿಗಳ ಪ್ರತಿಬಂಧ, ಮೈ ಮುರಿಯೋಣ, ಸಂಕೋಚ, ಮಲಾದಿಗಳು ಮುದ್ದೆಯಾಗೋಣ, ರೋಮಾಂಚ, ನೀರಡಿಕೆ, ನಡುಗು, ರುಕ್ಷತೆ, ಸರಂಧ್ರತೆ, ಶುಷ್ಕತೆ, ಸ್ಫುರಣ, ಹಿಂಡಿದಂತೆ ಆಗೋಣ, ಸೆಟೆಯೋಣ, ಬಾಯಿಯಲ್ಲಿ ಒಗುರು ರಸ, ಮೈಗೆ ಕಪ್ಪು ಅಥವಾ ನಸುಗೆಂಪು ಬಣ್ಣ—ಇವು ಕುಪಿತ ವಾಯುವಿನ ಕರ್ಮಗಳು. (೫೦॥)

ಕುಪಿತ ಪಿತ್ತದ ಕರ್ಮಗಳನ್ನು ಹೇಳುತ್ತಾರೆ.

..........................ಪಿತ್ತಸ್ಯ ದಾಹರಾಗೋಷ್ಮಪಾಕಿತಾಃ ॥೫೧॥

ಸ್ವೇದಃ ಕ್ಲೇದಃ ಸ್ರುತಿಃ ಕೋಥಃ ಸದನಂ ಮೂರ್ಛನಂ ಮದಃ ॥

ಕಟುಕಾಮ್ಲೌ ರಸೌ ವರ್ಣಃ ಪಾಂಡುರಾರುಣವರ್ಜಿತಃ ॥೫೨॥

ಅರ್ಥ:— ಸರ್ವಾಂಗದಾಹ, ಕೆಂಪು ಬಣ್ಣ, ಉಷ್ಣತೆ, ಪಚನ, ಬೆವರು, ಆರ್ದ್ರತ್ವ, ಸ್ರಾವ, ಕೊಳೆಯೋಣ, ದೌರ್ಬಲ್ಯ, ಮೂರ್ಛೆ, ಮದಗಳೂ, ಬಾಯಲ್ಲಿ ಕಟು, ಹುಳಿ, ರಸಗಳೂ ಮೈಗೆ ಬಿಳೀ ಮತ್ತು ನಸುಗೆಂಪು ಹೊರತಾದ ಉಳಿದ ಬಣ್ಣಗಳೂ ಕುಪಿತ ಪಿತ್ತದ ಕಾರ್ಯಗಳು. (೫೨)

ಕುಪಿತ ಕಫದ ಕಾರ್ಯಗಳನ್ನು ಹೇಳುತ್ತಾರೆ.

**ಶ್ಲೇಷ್ಮಣಃ ಸ್ನೇಹಕಾಠಿನ್ಯಕಂಡೂಶೀತತ್ವಗೌರವಮ್ ||**
**ಬಂಧೋಪಲೇಪಸ್ತೈಮಿತ್ಯಶೋಫಾಪಕ್ತ್ಯತಿನಿದ್ರತಾಃ ||೫೩||**

**ವರ್ಣಃ ಶ್ವೇತೋ ರಸೌ ಸ್ವಾದುಲವಣೌ ಚಿರಕಾರಿತಾ ||**

ಅರ್ಥ:— ಸ್ನಿಗ್ಧತ್ವ, ಕಠಿಣತ್ವ, ತುರಿಕೆ, ಶೈತ್ಯ, ಜಡತ್ವ, ಸ್ರೋತಸ್ಸುಗಳ ಪ್ರತಿಬಂಧ, ಲೇಪ, ಮಾಂದ್ಯ, ಬಾವು, ಅಪಚನ, ಅತಿನಿದ್ರೆಗಳೂ, ಶರೀರಕ್ಕೆ ಬಿಳೀ ಬಣ್ಣವೂ, ಬಾಯಲ್ಲಿ ಮಧುರ, ಉಪ್ಪು ರಸಗಳೂ, ಸಾವಕಾಶ ಕ್ರಿಯೆಯೂ ಕುಪಿತ ಕಫದ ಕಾರ್ಯವು. (೫೩)

**ಇತ್ಯಶೇಷಾಮಯವ್ಯಾಪಿ ಯದುಕ್ತಂ ದೋಷಲಕ್ಷಣಮ್ ||೫೪||**
**ದರ್ಶನಾದ್ಯೈರವಹಿತಸ್ತತ್ಸಮ್ಯಗುಪಲಕ್ಷಯೇತ್ ||**

**ವ್ಯಾಧ್ಯವಸ್ಥಾವಿಭಾಗಜ್ಞಃ ಪಶ್ಯನ್ನಾರ್ತಾನ್ ಪ್ರತಿಕ್ಷಣಮ್ ||೫೫||**

ಅರ್ಥ:— ಈ ಪ್ರಕಾರ ಎಲ್ಲ ಬೇನೆಗಳಲ್ಲಿ ವ್ಯಾಪಿಸಿ ಇರುವ ಮೇಲೆ ಹೇಳಿದ ದೋಷ-ಲಕ್ಷಣಗಳನ್ನು ಬೇನೆಯ ಬೇರೆ ಬೇರೆ ಅವಸ್ಥೆಗಳ ಜ್ಞಾನವುಳ್ಳ ವೈದ್ಯನು ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚೆ, ಪ್ರಶ್ನೆ, ಅನುಮಾನ ಮುಂತಾದ ಸಾಧನಗಳಿಂದ ಪ್ರತಿಕ್ಷಣವೂ ರೋಗಿಗಳನ್ನು ನೋಡುತ್ತ ಚನ್ನಾಗಿ ಲಕ್ಷ್ಯಗೊಟ್ಟು ತಿಳಿದುಕೊಳ್ಳಬೇಕು.

ಟಿಪ್ಪಣಿ:— ವಾತ-ಪಿತ್ತ-ಕಫಗಳ ಎಲ್ಲ ವಿಕಾರಗಳನ್ನು ಸಂಗ್ರಹಕಾರರು ಹೇಳಿದ್ದಾರೆ. ವಿದ್ಯಾರ್ಥಿಗಳಿಗಾಗಿ ಅಲ್ಲಿಯ ಶ್ಲೋಕಗಳನ್ನೇ ಕೊಡುತ್ತೇವೆ. (೫೫)

ಅಶೀತಿರ್ವಾತಜಾ ರೋಗಾಶ್ಚತ್ವಾರಿಂಶಚ್ಚ ಪಿತ್ತಜಾಃ
ವಿಂಶತಿಃ ಶ್ಲೇಷ್ಮಜಾಶ್ಚೈವ ಪ್ರೋಕ್ತಾ ನಾನಾತ್ಮಜಾ ಇತಾಃ ॥

ನಖಭೇದಃ ಪಾದಶೂಲಂ ಸುಪ್ತಿರ್ಭ್ರಂಶೋ ವಿಪಾದಿಕಾ ।
ಖುಡೋ ಗುಲ್ಫಗ್ರಹೋ ಜಾನುವಿಶ್ಲೇಷೋ ಜಾನುಕುಂಚನಮ್ ॥
ಪಿಂಡಿಕೋದ್ವೇಷ್ಟನಂ ಪಾದಶ್ಚೋರ್ವೋಃ ಸ್ತಂಭಶ್ಚ ಗೃಧ್ರಸೀ
ಪಾಂಗುಲ್ಯಂ ಭ್ರಂಶಶೂಲಂ ಚ ಗುದೇ ಸ್ತಂಭಸ್ತು ಮೇಹನೇ ॥
ಮುಷ್ಕಾಕ್ಷೇಪಃ ಶ್ರೋಣಿಭೇದೋ ವಂಕ್ಷಣಾನಾಹ ಏವ ಚ ।
ಉದಾವರ್ತೋಽಥ ವಿಕ್ಷೇಪಃ ಪಾರ್ಶ್ವಪೃಷ್ಠತ್ರಿಕಗ್ರಹಾಃ ।
ಖಂಜವಾಮನಕುಬ್ಜತ್ವಂ ಹೃದ್ದ್ರವೋದರವೇಷ್ಟಕೌ
ಹೃನ್ಮೋಹೋ ವಕ್ಷನಿಸ್ತೋದಃ ಶೋಷೋದ್ಘಾತೌ ತಥೋರಸಃ ॥
ಬಾಹುಶೋಷೋ ಹನುಗ್ರೀವಮನ್ಯಾಸ್ತಂಭೌಷ್ಠಭೇದನಮ್
ದಂತಭೇದೋಽಥ ಶೈಥಿಲ್ಯಂ ಕಂಠೋದ್ಧ್ವಂಸೋಽಥ ವಾಗ್ಗ್ರಹಃ ॥

ಕಷಾಯಾಸ್ಯತ್ವಮೂಕತ್ವೇ ಮುಖಶೋಷೋ ರಸಾಜ್ಞತಾ ।
ಘ್ರಾಣನಾಶೋಽಜ್ಞತಾ ಗಂಧೇಽಶಬ್ದೋಚ್ಚೈಃಶ್ರವಣಂ ತಥಾ ॥
ಬಾಧಿರ್ಯಂ ಕರ್ಣಶೂಲಂ ಚ ವರ್ತ್ಮಸ್ತಂಭನಕುಂಚನಮ್ ।
ತಿಮಿರಂ ಚಾಕ್ಷಿಶೂಲಂ ಚ ಭ್ರೂವ್ಯುದಾಸೋಽಥ ನೇತ್ರಯೋಃ ॥

ಲಲಾಟಶಂಖಭೇದೌ ಚ ಕೇಶಭೂಸ್ಫುಟನಂ ತಥಾ ।
ಶಿರೋರುಜಾರ್ದಿತಂ ಜೃಂಭಾ ಪ್ರಲಾಪೋ ವೇಪಥುರ್ಭ್ರಮಃ ॥
ಏಕಾಂಗವ್ಯಾಧಿರಾಯಾಮಃ ಪಕ್ಷಾಘಾತೋಽಪತಂತ್ರಕಃ ॥
ದಂಡಕಃ ಸ್ವಪ್ನನಾಶಶ್ಚ ಗ್ಲಾನಿಃ ಪರುಷರೂಕ್ಷತಾ ।

ವಿಷಾದೋಽಥಾನವಸ್ಥಾನಮರುಣಶ್ಯಾಮವರ್ಣತಾ ।
ಇತ್ಯಶೀತಿಃ ಸಮಾಖ್ಯಾತಾಃ ರೋಗಾ ವಾತಸಮುದ್ಭವಾಃ ॥

ಅಂತರ್ದಾಹೋ ವಿದಾಹಶ್ಚ ಪ್ಲೋಷೋಷ್ಮೌ ದವಥುರ್ದ್ರವಃ ।
ಅತ್ಯೂಷ್ಮಾ ಚಾಂಸದಾಹಶ್ಚ ಸ್ವೇದೋಽತ್ಯಮ್ಲಕಧೂಮಕೌ ॥

ರಕ್ತಕ್ಲೇದೋಽಂಗಗಂಧಶ್ಚ ಗಾತ್ರಾವಯವಶಾತನಮ್
ತ್ವಙ್ಮಾಂಸದರಣಂ ಮಾಂಸಕ್ಲೇದಶ್ಚರ್ಮದಲಂ ತಥಾ ॥

ರಕ್ತವಿಸ್ಫೋಟಕಃ ಕೋಠಃ ಪಿತ್ತಾಸೃಗ್ರಕ್ತಮಂಡಲೇ
ನೀಲಿಕಾ ಕಾಮಲಾ ಕಕ್ಷ್ಯಾ ಗಾತ್ರೇ ಹರಿತಪೀತತಾ ॥

ಪೂತಿತಿಕ್ತಾಸ್ಯತಾ ತೃಷ್ಣಾ ಲೋಹಗಂಧಾಸ್ಯತಾ ತಥಾ
ಜೀವಾದಾನಮತೃಪ್ತಿಶ್ಚ ಪ್ರವೇಶಸ್ತಮಸಸ್ತಥಾ

ಗಲಾಸ್ಯಗುದಮೇಢ್ರಾಕ್ಷಿಪಾಕೋ ಹಾರಿದ್ರತಾಽಪಿ ಚ ।
ನಖಾಕ್ಷಿಮೂತ್ರಶಕೃತಾಂ ಚತ್ವಾರಿಂಶತ್ತು ಪಿತ್ತಜಾಃ ॥

ಸ್ತೈಮಿತ್ಯಂ ಗೌರವಂ ತೃಪ್ತಿರಾಲಸ್ಯಮತಿನಿದ್ರತಾ ।
ತಂದ್ರಾಸ್ಯಸ್ರಾವಮಾಧುರ್ಯೇ ಪ್ರಲೇಪೋ ಹೃದಯಸ್ಯ ಚ ॥

ಸಾದಃ ಕಂಠಪ್ರಲೇಪಶ್ಚ ಶ್ಲೇಷ್ಮೋದ್ಗಿರಣಮೇವ ಚ ।
ಮಲಾಧಿಕ್ಯಮತಿಸ್ಥೌಲ್ಯಂ ಧಮನೀಪ್ರತಿಸಂಚಯಮ್ ॥

ಉದರ್ದೋ ಗಲಗಂಡಶ್ಚ ಶೈತ್ಯಂ ಶ್ವೇತಾವಭಾಸತಾ ।
ವಿಣ್ಮೂತ್ರನಖನೇತ್ರಾಣಾಂ ಶುಕ್ಲತಾ ಚ ಕಫಾಮಯಾಃ ॥

ಯಥಾಸ್ಥೂಲಂ ವಿಕಾರಾಣಾಂ ಚತ್ವಾರಿಂಶದಿದಂ ಶತಮ್

ರೋಗಿಗಳನ್ನು ಮೇಲೆ ಮೇಲೆ ನೋಡಲು ಕಾರಣವನ್ನು ಹೇಳುತ್ತಾರೆ.

**ಅಭ್ಯಾಸಾತ್ಪ್ರಾಪ್ಯತೇ ದೃಷ್ಟಿಃ ಕರ್ಮಸಿದ್ಧಿಪ್ರಕಾಶಿನೀ ॥**
**ರತ್ನಾದಿಸದಸಜ್ಜ್ಞಾನಂ ನ ಶಾಸ್ತ್ರಾದೇವ ಜಾಯತೇ** ॥೫೬॥

ಅರ್ಥ:— ರತ್ನ ಮುತ್ತು ಮುಂತಾದವುಗಳ ಚಲೋ ಕೆಟ್ಟ ಜ್ಞಾನವು ಕೇವಲ ಶಾಸ್ತ್ರದಿಂದ ತಿಳಿಯಲಾರದು. ಅದಕ್ಕೆ ಅಭ್ಯಾಸಬೇಕು. ಅದರಂತೆ ಚಿಕಿತ್ಸೆಯಲ್ಲಿ ಜಯವನ್ನು ಕೊಡುವ ಜ್ಞಾನವು (ಕೇವಲ ಶಾಸ್ತ್ರದಿಂದ ಸಿಗದೆ) ಅಭ್ಯಾಸದಿಂದ ದೊರಕುತ್ತದೆ. (೫೬)

ಬೇನೆಗಳ ಭೇದಗಳನ್ನು ಹೇಳುತ್ತಾರೆ.

ದೃಷ್ಟಾಪರಾಧಜಃ ಕಶ್ಚಿತ್ ಕಶ್ಚಿತ್ಪೂರ್ವಾಪರಾಧಜಃ ॥
ತತ್ಸಂಕರಾದ್ಭವತ್ಯನ್ಯೋ ವ್ಯಾಧಿರೇವಂ ತ್ರಿಧಾ ಸ್ಮೃತಃ ॥೫೭॥

ಅರ್ಥಃ— ಕೆಲವು ಬೇನೆಗಳು ಇಲ್ಲಿ ಮಾಡಿದ ಅಪರಾಧದಿಂದಲೂ ಕೆಲವು ಹಿಂದಿನ ಜನ್ಮದ ಅಪರಾಧದಿಂದಲೂ ಕೆಲವು ಎರಡರ ಮಿಶ್ರಣ ದಿಂದಲೂ ಹುಟ್ಟುವದರಿಂದ ಮೂರು ತೆರನಾಗಿವೆ. (೫೭)

ಯಥಾನಿದಾನಂ ದೋಷೋತ್ಥಃ ಕರ್ಮಜೋ ಹೇತುಭಿರ್ವಿನಾ ॥
ಮಹಾರಂಭೋಽಲ್ಪಕೇ ಹೇತಾವಾತಂಕೋ ದೋಷಕರ್ಮಜಃ ॥೫೮॥

ಅರ್ಥಃ— ಇಲ್ಲಿ ಮಾಡಿದ ಕಾರಣಕ್ಕೆ ಅನುರೂಪವಾಗಿ ಉತ್ಪನ್ನವಾದ ಬೇನೆಯು ದೋಷಜನ್ಯವೆಂದೂ, ಪ್ರತ್ಯಕ್ಷ ಕಾರಣವಿಲ್ಲದ ಬೇನೆಯು ಕರ್ಮಜವೆಂದೂ, ಕಾರಣ ಸ್ವಲ್ಪವಿದ್ದು ಬೇನೆಯು ದೊಡ್ಡದಾಗಿದ್ದರೆ ದೋಷಕರ್ಮಜವೆಂದೂ ತಿಳಿಯಬೇಕು. (೫೮)

ವಿಪಕ್ಷಶೀಲನಾತ್ಪೂರ್ವಃ, ಕರ್ಮಜಃ ಕರ್ಮಸಂಕ್ಷಯಾತ್॥
ಗಚ್ಛತ್ಯುಭಯಜನ್ಮಾ ತು ದೋಷಕರ್ಮಕ್ಷಯಾತ್ ಕ್ಷಯಮ್ ॥೫೯॥

ಅರ್ಥಃ— ದೋಷಜನ್ಯ ರೋಗವು ಅದರ ವಿರುದ್ಧ ಸೇವನೆಯಿಂದಲೂ, ಕರ್ಮಜನ್ಯರೋಗವು ಕರ್ಮಕ್ಷಯದಿಂದಲೂ, ದೋಷ ಮತ್ತು ಕರ್ಮದಿಂದ ಉಂಟಾದ ಬೇನೆಯು ಅವೆರಡರ ಕ್ಷಯದಿಂದಲೂ ಹೋಗುವದು. (೫೯)

ದ್ವಿಧಾ ಸ್ವಪರತಂತ್ರತ್ವಾದ್ವ್ಯಾಧಯೋಽಂತ್ಯಾಃ ಪುನರ್ದ್ವಿಧಾ ॥
ಪೂರ್ವಜಾಃ ಪೂರ್ವರೂಪಾಖ್ಯಾ ಜಾತಾಃ ಪಶ್ಚಾದುಪದ್ರವಾಃ ॥೬೦॥

ಅರ್ಥಃ— ಬೇನೆಗಳಲ್ಲಿ ಸ್ವತಂತ್ರ ಪರತಂತ್ರವೆಂದು ಎರಡು ಪ್ರಕಾರ. ಪರತಂತ್ರವು ಪುನಃ ಎರಡು ಪ್ರಕಾರ ಮೊದಲು ಹುಟ್ಟಿದವು ಪೂರ್ವರೂಪವೆಂದೂ ಹಿಂದುಗಡೆ ಹುಟ್ಟಿದವು ಉಪದ್ರವವೆಂದೂ ಕರೆಯಲ್ಪಡುವವು. (೬೦)

ಯಥಾಸ್ವಜನ್ಮೋಪಶಯಾಃ ಸ್ವತಂತ್ರಾಃ ಸ್ಪಷ್ಟಲಕ್ಷಣಾಃ ||
ವಿಪರೀತಾಸ್ತ್ವತೋಽನ್ಯೇ ತು ವಿದ್ಯಾದೇವಂ ಮಲಾನಪಿ ||೬೧||

ಅರ್ಥ— ತಮ್ಮ ಕಾರಣಗಳಿಂದ ಉತ್ಪನ್ನವಾಗಿ, ತಮ್ಮ ಉಪಚಾರಗಳಿಂದ ನಷ್ಟವಾಗುವ ಸ್ಪಷ್ಟ ಲಕ್ಷಣಗಳುಳ್ಳ ರೋಗಗಳು ಸ್ವತಂತ್ರಗಳು. ಇದಕ್ಕೆ ವಿಪರೀತವಾದವು ಪರತಂತ್ರಗಳು. ಇದರಂತೆಯೇ ಮಲಗಳಲ್ಲಿಯೂ ಸ್ವತಂತ್ರ ಪರತಂತ್ರ ಎಂಬ ಭೇದವನ್ನು ತಿಳಿಯಬೇಕು. (೬೧)

ತಾಂಲ್ಲಕ್ಷಯೇದವಹಿತೋ ವಿಕಾರಾಣಾಂ ಪ್ರತಿಜ್ವರಮ್ ||

ಅರ್ಥಃ— ಪ್ರತಿರೋಗದಲ್ಲಿ ವಿಕಾರ ಹೊಂದುವ ಆ ದೋಷಗಳನ್ನು ವೈದ್ಯನು ಲಕ್ಷಗೊಟ್ಟು ನೋಡಬೇಕು. (೬೧||)

ತೇಷಾಂ ಪ್ರಧಾನಪ್ರಶಮೋ ಪ್ರಶಮೋಽಶಾಮ್ಯತಸ್ತಥಾ ||೬೨
ಪಶ್ಚಾಚ್ಚಿಕಿತ್ಸೇತ್ತೂರ್ಣಂ ವಾ ಬಲವಂತಮುಪದ್ರವಮ್ ||
ವ್ಯಾಧಿಕ್ಲಿಷ್ಟಶರೀರಸ್ಯ ಪೀಡಾಕರತರೋ ಹಿ ಸಃ ||೬೩||

ಅರ್ಥಃ— ಅವುಗಳಲ್ಲಿ ಮುಖ್ಯ ರೋಗದ ಶಮನವಾಗಲು ಅಮುಖ್ಯ ರೋಗವು ತಾನಾಗಿಯೇ ಶಮನ ಹೊಂದುವದು. ಆಗ್ಯೆ ಶಮನ ಹೊಂದದಿದ್ದರೆ ಅದರ ಚಿಕಿತ್ಸೆಯನ್ನು ಹಿಂದುಗಡೆ ಮಾಡಬೇಕು. ಆದರೆ ಉಪದ್ರವವೇ ಬಲಿಷ್ಠವಿದ್ದರೆ ಅವರ ಪ್ರತೀಕಾರವನ್ನು ಮೊದಲಿಗೆ ಮಾಡಬೇಕು. ಯಾಕೆಂದರೆ ಬೇನೆಯಿಂದ ಪೀಡಿತವಾದ ಶರೀರಕ್ಕೆ ಅದು ಹೆಚ್ಚು ದುಃಖವನ್ನು ಕೊಡುತ್ತಿರುತ್ತದೆ. (೬೩)

ವಿಕಾರನಾಮಾಕುಶಲೋ ನ ಜಿಹ್ರೀಯಾತ್ಕದಾಚನ ||
ನ ಹಿ ಸರ್ವವಿಕಾರಾಣಾಂ ನಾಮತೋಽಸ್ತಿ ಧ್ರುವಾ ಸ್ಥಿತಿಃ ||೬೪||

ಅರ್ಥಃ— ರೋಗದ ಹೆಸರು ತಿಳಿಯಲಿಲ್ಲೆಂದು ವೈದ್ಯನು ಎಂದೂ ನಾಚುವ ಕಾರಣವಿಲ್ಲ. ಯಾಕೆಂದರೆ ಎಲ್ಲ ರೋಗಗಳಿಗೂ ಹೆಸರುಗಳು ಇದ್ದೇ ಇರುತ್ತವೆ ಎಂಬ ನಿಯಮವಿಲ್ಲ. (೬೪)

**ಸ ಏವ ಕುಪಿತೋ ದೋಷಃ ಸಮುತ್ಥಾನವಿಶೇಷತಃ ।**
**ಸ್ಥಾನಾಂತರಾಣಿ ಚ ಪ್ರಾಪ್ಯ ವಿಕಾರಾನ್ ಕುರುತೇ ಬಹೂನ್ ॥೬೫॥**

ಅರ್ಥ:— ಒಂದೇ ದೋಷವು ಬೇರೆ ಬೇರೆ ಕಾರಣಗಳಿಂದ ಕುಪಿತವಾಗಿ ಬೇರೆ ಬೇರೆ ಸ್ಥಾನಗಳನ್ನು ಸೇರಿ ಅನೇಕ ರೋಗಗಳನ್ನುಂಟುಮಾಡುವದು(೬೫)

**ತಸ್ಮಾದ್ವಿಕಾರಪ್ರಕೃತೀರಧಿಷ್ಠಾನಾಂತರಾಣಿ ಚ ॥**
**ಬುದ್ಧ್ವಾ ಹೇತುವಿಶೇಷಾಂಶ್ಚ ಶೀಘ್ರಂ ಕುರ್ಯಾದುಪಕ್ರಮಂ ॥೬೬॥**

ಅರ್ಥ:— ಆದ್ದರಿಂದ ವಿಕಾರದ ಮೂಲ ಕಾರಣವಾದ ದೋಷಗಳನ್ನೂ ಅವುಗಳ ಆಶ್ರಯವನ್ನೂ ವಿಶಿಷ್ಟ ಕಾರಣಗಳನ್ನೂ ತಿಳಿದುಕೊಂಡು ಶೀಘ್ರ ಚಿಕಿತ್ಸೆ ಮಾಡಬೇಕು. (೬೬)

ಇಷ್ಟರಿಂದಲೇ ಚಿಕಿತ್ಸೆಯಲ್ಲಿ ಯಶ ಸಿಗದು. ಆದ್ದರಿಂದ ವೈದ್ಯನು ಇನ್ನೂ ಕೆಲವು ಸಂಗತಿಗಳನ್ನು ನಿರೀಕ್ಷಿಸತಕ್ಕದ್ದು ಎಂದು ಹೇಳುತ್ತಾರೆ.

**ದೂಷ್ಯಂ ದೇಶಂ ಬಲಂ ಕಾಲಮನಲಂ ಪ್ರಕೃತಿಂ ವಯಃ ॥**
**ಸತ್ವಂ ಸಾತ್ಮ್ಯಂ ತಥಾಹಾರಮವಸ್ಥಾಶ್ಚ ಪೃಥಗ್ವಿಧಾಃ ॥೬೭॥**

**ಸೂಕ್ಷ್ಮಸೂಕ್ಷ್ಮಾಃ ಸಮೀಕ್ಷ್ಯೈಷಾಂ ದೋಷೌಷಧನಿರೂಪಣೇ ॥**
**ಯೋ ವರ್ತತೇ ಚಿಕಿತ್ಸಾಯಾಂ ನ ಸ ಸ್ಖಲತಿ ಜಾತುಚಿತ್ ॥೬೮॥**

ಅರ್ಥ:—ದೋಷ ಮತ್ತು ಔಷಧ ವಿಚಾರ ಕಾಲದಲ್ಲಿ ಯಾವ ವೈದ್ಯನು ದೂಷ್ಯ (ಧಾತು ಮತ್ತು ಮಲಗಳು), ದೇಶ (ದೇಹ ಮತ್ತು ಪ್ರದೇಶ), ಶಕ್ತಿ, ಕಾಲ, ಅಗ್ನಿ, ಪ್ರಕೃತಿ, ವಯಸ್ಸು, ಮನಸ್ಸು, ಸಾತ್ಮ್ಯ, ಆಹಾರ, ಮತ್ತು ದೂಷ್ಯಗಳ ಸೂಕ್ಷ್ಮ ಸೂಕ್ಷ್ಮವಾದ ಅವಸ್ಥೆಗಳನ್ನು ನಿರೀಕ್ಷಿಸಿ ಚಿಕಿತ್ಸೆ ಮಾಡುವನೋ ಅವನು ಎಂದೂ ತಪ್ಪುವದಿಲ್ಲ.

**ಟಿಪ್ಪಣಿ:—**

ದೂಷ್ಯ =ಸಪ್ತ ಧಾತುಗಳು ಮತ್ತು ಮಲಗಳು.
ದೇಶ= ದೇಹ, ಮತ್ತು ಜಾಂಗಲ, ಆನೂಪ, ಸಾಧಾರಣ ಎಂಬ ಪ್ರದೇಶಗಳು
ಬಲ– ಸಹಜ, ಕಾಲಕೃತ, ಯುಕ್ತಿಕೃತ ಸಾಮರ್ಥ್ಯಗಳು

ಕಾಲ = ಚಳಿಗಾಲ, ಬೇಸಿಗೆ, ಮಳೆಗಾಲ

ಅಗ್ನಿ = ಸಮ, ವಿಷಮ, ತೀಕ್ಷ್ಣ, ಮತ್ತು ಮಂದ

ಪ್ರಕೃತಿ = ವಾತಿಕಾದಿ ಏಳು ಪ್ರಕೃತಿಗಳು

ವಯಸ್ಸು = ಬಾಲ್ಯ, ತಾರುಣ್ಯ, ವಾರ್ಧಕ್ಯ

ಮನಸ್ಸು = ಸಾತ್ವಿಕ, ರಾಜಸ, ತಾಮಸ

ಸಾತ್ಮ್ಯ = ಉತ್ತಮ, ಮಧ್ಯಮ, ಅಧಮ

ಆಹಾರ = ಹಿತ, ಅಹಿತ (೬೮)

ಇದರಹೊರತು ರೋಗದ ಅಲ್ಪತ್ವ ಮಹತ್ವಗಳನ್ನು ಕೂಡ ಅವಶ್ಯವಾಗಿ ಪರೀಕ್ಷಿಸಬೇಕೆಂದು ಹೇಳುತ್ತಾರೆ.

**ಗುರ್ವಲ್ಪವ್ಯಾಧಿಸಂಸ್ಥಾನಂ ಸತ್ವದೇಹಬಲಾಬಲಾತ್ ||**
**ದೃಶ್ಯತೇಽಪ್ಯನ್ಯಥಾಕಾರಂ ತಸ್ಮಿನ್ನವಹಿತೋ ಭವೇತ್** ||೬೯||

ಅರ್ಥ:— ರೋಗಿಯ ಮನಸ್ಸು ಮತ್ತು ದೇಹದ ಪ್ರಾಬಲ್ಯ ದೌರ್ಬಲ್ಯಗಳಿಂದ ಬೇನೆಯ ಸ್ವರೂಪವು ವಿಪರೀತವಾಗಿ ಅಂದರೆ ಸಣ್ಣದಾಗಿದ್ದರೆ ದೊಡ್ಡದಾಗಿಯೂ, ದೊಡ್ಡದಾಗಿದ್ದರೆ ಸಣ್ಣದಾಗಿಯೂ ಕಾಣುತ್ತದೆ. ಕಾರಣ ಅಲ್ಲಿ ಹೆಚ್ಚು ಲಕ್ಷ್ಯಕೊಡಬೇಕು. (೬೯)

**ಗುರುಂ ಲಘುಮಿತಿ ವ್ಯಾಧಿಂ ಕಲ್ಪಯಂಸ್ತು ಭಿಷಗ್ಬ್ರುವಃ ||**
**ಅಲ್ಪದೋಷಾಕಲನಯಾ ಪಥ್ಯೇ ವಿಪ್ರತಿಪದ್ಯತೇ** ||೭೦||

**ತತೋಽಲ್ಪಮಲ್ಪವೀರ್ಯಂ ವಾ ಗುರುವ್ಯಾಧೌ ಪ್ರಯೋಜಿತಮ್ ||**
**ಉದೀರಯೇತ್ತರಾಂ ರೋಗಾನ್ಸಂಶೋಧನಮಯೋಗತಃ** ||೭೧||

ಅರ್ಥ:— ಈ ರೀತಿಯಾಗಿ ದೊಡ್ಡ ಬೇನೆಯನ್ನು ಸಣ್ಣದೆಂದು ಬಗೆದ ದಡ್ಡ ವೈದ್ಯನು ಸ್ವಲ್ಪ ದೋಷವೆಂಬ ಕಲ್ಪನೆಯಿಂದ ಚಿಕಿತ್ಸೆಯಲ್ಲಿ ತಪ್ಪುತ್ತಾನೆ. ಆಗ್ಗೆ ದೊಡ್ಡ ಬೇನೆಯಲ್ಲಿ ಕೊಟ್ಟ ಸ್ವಲ್ಪ ಅಥವಾ ಸ್ವಲ್ಪ ವೀರ್ಯದ ಶೋಧನವು ಹೀನಯೋಗವಾದ್ದರಿಂದ ರೋಗವನ್ನು ಮತ್ತಷ್ಟು ಹೆಚ್ಚಿಸುವದು. (೭೧)

ಶೋಧನಂ ತ್ವತಿಯೋಗೇನ ವಿಪರೀತಂ ವಿಪರ್ಯಯೇ ॥
ಕ್ಷಿಣುಯಾನ್ನ ಮಲಾನೇವ ಕೇವಲಂ ವಪುರಸ್ಯತಿ ॥೨೨॥

ಅರ್ಥ:— ಇದಕ್ಕೆ ವಿಪರೀತವಾಗಿ ಸಣ್ಣ ಜೇನೆಯಲ್ಲಿ ಕೊಟ್ಟ ಬಹಳ ಅಥವಾ ಬಹಳ ವೀರ್ಯದ ಶೋಧನವು ಅತಿಯೋಗದಿಂದ ಕೇವಲ ಮಲವ ನ್ನಷ್ಟೇ ಕಳೆಯದೆ ಶರೀರವನ್ನೂ ಕಳೆಯುವದು. (೨೨)

ಅತೋಽಭಿಯುಕ್ತಃ ಸತತಂ ಸರ್ವಮಾಲೋಚ್ಯ ಸರ್ವಥಾ ॥
ತಥಾ ಯುಂಜೀತ ಭೈಷಜ್ಯಮಾರೋಗ್ಯಾಯ ಯಥಾ ಧ್ರುವಮ್ ॥೨೩॥

ಅರ್ಥ:— ಆ ಕಾರಣ ಆಯುರ್ವೇದಜ್ಞನಾದ ವೈದ್ಯನು ಯಾವಾ ಗಲೂ ಎಲ್ಲವನ್ನೂ ಪೂರ್ಣವಾಗಿ ಆಲೋಚಿಸಿ, ಹೇಗಾದರೆ ಆರೋಗ್ಯವು ನಿಶ್ಚಿತವಾಗಿ ಉಂಟಾಗುವದು ಹಾಗೆ ಯೋಜನೆ ಮಾಡಬೇಕು. (೨೩)

ವಕ್ಷ್ಯಂತೇಽತಃಪರಂ ದೋಷಾ ವೃದ್ಧಿಕ್ಷಯವಿಭೇದತಃ ।
ಪೃಥಕ್ತ್ರೀನ್ವಿದ್ಧಿ, ಸಂಸರ್ಗಸ್ತ್ರಿಧಾ, ತತ್ರ ತು ತಾನ್ನವ ॥೨೪॥
ತ್ರೀನೇವ ಸಮಯಾ ವೃದ್ಧ್ಯಾ, ಷಡೇಕಸ್ಯಾತಿಶಾಯನೇ ॥

ಅರ್ಥ:— ಇನ್ನು ಮೇಲೆ ವೃದ್ಧಿಯ ಭೇದದಿಂದ ಆಗುವ ದೋಷ ಭೇದಗಳನ್ನು ಹೇಳುತ್ತೇವೆ. ಬೇರೆ ಬೇರೆ ದೋಷಗಳ ವೃದ್ಧಿಯಿಂದ ಮೂರು. ಸಂಸರ್ಗವು (ವಾತ ಪಿತ್ತ, ಕಫಪಿತ್ತ ಮತ್ತು ವಾತಕಫ ಎಂದು) ಮೂರು ವಿಧವಾಗಿದೆ. ಅವುಗಳಲ್ಲಿ ಸಮವೃದ್ಧಿಯಿಂದ ಮೂರು, ಒಂದರ ಆಧಿಕ್ಯದಿಂದ ಆರು, ಹೀಗೆ ಒಂಭತ್ತು ಭೇದಗಳು ಆಗುತ್ತವೆ.

**ಟಿಪ್ಪಣಿ:—** ಒಂದರ ವೃದ್ಧಿಯಿಂದಾಗುವ ಮೂರು ಭೇದಗಳು

೧ ವಾತವೃದ್ಧ ೨ ಪಿತ್ತವೃದ್ಧ ೩ ಕಫವೃದ್ಧ

ಸಂಸರ್ಗದಲ್ಲಿಯ ಒಂಭತ್ತು ಭೇದಗಳು

ಸಮವೃದ್ಧಿಯಿಂದ
- ೧ ವಾತವೃದ್ಧ, ಪಿತ್ತವೃದ್ಧ
- ೨ ವಾತವೃದ್ಧ, ಕಫವೃದ್ಧ
- ೩ ಪಿತ್ತವೃದ್ಧ, ಕಫವೃದ್ಧ

| | |
|---|---|
| ಒಂದರ ಆಧಿಕ್ಯದಿಂದ | ೪. ವಾತ ವೃದ್ಧ, ಪಿತ್ತ ವೃದ್ಧತರ. |
| | ೫. ಪಿತ್ತ ವೃದ್ಧ, ವಾತ ವೃದ್ಧತರ. |
| | ೬. ಕಫ ವೃದ್ಧ. ಪಿತ್ತ ವೃದ್ಧತರ. |
| | ೭. ಪಿತ್ತ ವೃದ್ಧ, ಕಫ ವೃದ್ಧತರ. |
| | ೮. ಕಫ ವೃದ್ಧ, ವಾತ ವೃದ್ಧತರ. |
| | ೯. ವಾತ ವೃದ್ಧ ಕಫ ವೃದ್ಧತರ. |

**ತ್ರಯೋದಶ ಸಮಸ್ತೇಷು, ಷಡ್ ದ್ವ್ಯೇಕಾತಿಶಯೇನ ತು** ॥೨೫
**ಏಕಂ ತುಲ್ಯಾಧಿಕ್ಯೈಃ, ಷಟ್ ಚ ತಾರತಮ್ಯವಿಕಲ್ಪನಾತ್ ॥**

ಅರ್ಥ:— ಮೂರೂ ದೋಷಗಳ ಮಿಶ್ರಣದಲ್ಲಿ ಎರಡರ ಹೆಚ್ಚುವಿಕೆಯಿಂದ ಮೂರು, ಒಂದರ ಹೆಚ್ಚುವಿಕೆಯಿಂದ ಮೂರು, ಮೂರೂ ಸಮನಾಗಿ ವೃದ್ಧವಿರಲು ಒಂದು, ಹೀಗೆ ಏಳು; ಮತ್ತು ಇವುಗಳಲ್ಲಿ ತಾರತಮ್ಯ ಕಲ್ಪನೆಯಿಂದ ಆರು, ಹೀಗೆ ಒಟ್ಟು ಸನ್ನಿಪಾತದಲ್ಲಿ ಹದಿಮೂರು ಭೇದಗಳುಂಟು.

**ಟಿಪ್ಪಣಿ:—**

**ಸನ್ನಿಪಾತದಲ್ಲಿ ಎರಡರ ಆಧಿಕ್ಯದಿಂದ ಮೂರು ಭೇದಗಳು**

೧. ಕಫ ವೃದ್ಧ, ವಾತ ಪಿತ್ತಗಳು ವೃದ್ಧತರ.
೨. ಪಿತ್ತ ವೃದ್ಧ, ವಾತ ಕಫಗಳು ವೃದ್ಧತರ.
೩. ವಾತ ವೃದ್ಧ. ಪಿತ್ತ ಕಫಗಳು ವೃದ್ಧತರ.

**ಒಂದರ ಆಧಿಕ್ಯದಿಂದ ಮೂರು ಭೇದಗಳು**

೪. ಪಿತ್ತ ಕಫಗಳು ವೃದ್ಧ, ವಾತವು ವೃದ್ಧತರ.
೫. ವಾತ ಕಫಗಳು ವೃದ್ಧ, ಪಿತ್ತವು ವೃದ್ಧತರ.
೬. ವಾತ ಪಿತ್ತಗಳು ವೃದ್ಧ, ಕಫವು ವೃದ್ಧತರ.

**ಸಮವೃದ್ಧಿಯಿಂದ ಒಂದು**

೭. ವಾತಪಿತ್ತಕಫಗಳು ವೃದ್ಧ.

**ಸನ್ನಿಪಾತದಲ್ಲಿ ತಾರತಮ್ಯದಿಂದ ಆರು ಭೇದಗಳು**

೮. ವಾತ ವೃದ್ಧ, ಪಿತ್ತ ವೃದ್ಧತರ, ಕಫ ವೃದ್ಧತಮ.
೯. ವಾತ ವೃದ್ಧ, ಕಫ ವೃದ್ಧತರ, ಪಿತ್ತವೃದ್ಧತಮ.
೧೦. ಪಿತ್ತ ವೃದ್ಧ, ಕಫ ವೃದ್ಧತರ, ವಾತ ವೃದ್ಧತಮ.

೧೧. ಪಿತ್ತ ವೃದ್ಧ, ವಾತ ವೃದ್ಧತರ, ಕಫ ವೃದ್ಧತಮ.
೧೨. ಕಫ ವೃದ್ಧ, ವಾತ ವೃದ್ಧತರ, ಪಿತ್ತ ವೃದ್ಧತಮ.
೧೩. ಕಫ ವೃದ್ಧ, ಪಿತ್ತ ವೃದ್ಧತರ, ವಾತ ವೃದ್ಧತಮ.

ಚರಕ ಚಿಕಿತ್ಸಾಸ್ಥಾನದಲ್ಲಿ (೩-೮೮) ಈ ಹದಿಮೂರು ಸನ್ನಿಪಾತಗಳ ಲಕ್ಷಣಗಳನ್ನು ಹೇಳಿದ್ದಾರೆ. ಪಾಠಕರಿಗಾಗಿ ಆ ಶ್ಲೋಕಗಳನ್ನೇ ಇಲ್ಲಿ ಉದ್ಧರಿಸಲಾಗಿದೆ.

೧. ಭ್ರಮಃ ಪಿಪಾಸಾ ದಾಹಶ್ಚ ಗೌರವಂ ಶಿರಸೋಽತಿರುಕ್
ವಾತಪಿತ್ತೋಲ್ಬಣೇ ವಿದ್ಯಾಲ್ಲಿಂಗಂ ಮಂದಕಫೇ ಜ್ವರೇ ॥೧॥

೨. ಶೈತ್ಯಂ ಕಾಸೋಽರುಚಿಸ್ತಂದ್ರಾ ಪಿಪಾಸಾ ದಾಹರುಗ್ವ್ಯಥಾಃ
ವಾತಶ್ಲೇಷ್ಮೋಲ್ಬಣೇ ವ್ಯಾಧೌ ಲಿಂಗಂ ಪಿತ್ತಾವರೇ ವಿದುಃ ॥೨॥

೩. ಛರ್ದಿಃ ಶೈತ್ಯಂ ಮುಹುರ್ದಾಹಸ್ತೃಷ್ಣಾ ಮೋಹೋಽಸ್ಥಿವೇದನಾ ।
ಮಂದವಾತೇ ವ್ಯವಸ್ಯಂತಿ ಲಿಂಗಂ ಪಿತ್ತಕಫೋಲ್ಬಣೇ ॥೩॥

೪. ಸಂಧ್ಯಸ್ಥಿಶಿರಸಃ ಶೂಲಂ ಪ್ರಲಾಪೋ ಗೌರವಂ ಭ್ರಮಃ
ವಾತೋಲ್ಬಣೇ ಸ್ಯಾದ್ದ್ವ್ಯನುಗೇ ತೃಷ್ಣಾ ಕಂಠಾಸ್ಯಶುಷ್ಕತಾ ॥೪॥

೫. ರಕ್ತವಿಣ್ಮೂತ್ರತಾ ದಾಹಃ ಸ್ವೇದಸ್ತೃಡ್ಬಲಸಂಕ್ಷಯಃ ।
ಮೂರ್ಛಾ ಚೇತಿ ತ್ರಿದೋಷೇ ಸ್ಯಾಲ್ಲಿಂಗಂ ಪಿತ್ತಗರೀಯಸಿ ॥೫॥

೬. ಆಲಸ್ಯಾರುಚಿಹೃಲ್ಲಾಸದಾಹವಮ್ಯರತಿಭ್ರಮೈಃ ।
ಕಫೋಲ್ಬಣಂ ಸನ್ನಿಪಾತಂ ತಂದ್ರಾಕಾಸೇನ ಚಾದಿಶೇತ್ ॥೬॥

೭. ಸಮಂ ದೋಷೈಸ್ತ್ರಿಭಿರ್ವೃದ್ಧೈಃ ಸನ್ನಿಪಾತಸ್ಯ ಲಕ್ಷಣಮ್ ।
ಮುಹುರ್ದಾಹೋ ಮುಹುಃ ಶೀತಂ ಕರ್ಣಕ್ಷ್ವೇಡನಪಾರ್ಶ್ವರುಕ್ ॥೭॥

ಮೋಹಶ್ಛರ್ದಿರ್ದಿವಾ ನಿದ್ರಾ ರಾತ್ರೌ ಜಾಗರಣಂ ತಥಾ ।
೮. ಪ್ರತಿಶ್ಯಾಯಶ್ಛರ್ದಿರಾಲಸ್ಯಂ ತಂದ್ರಾರುಚ್ಯಗ್ನಿಮಾರ್ದವಮ್ ॥೮॥

ಹೀನವಾತೇ ಪಿತ್ತಮಧ್ಯೇ ಚಿಹ್ನಂ ಶ್ಲೇಷ್ಮಾಧಿಕೇ ಮತಮ್ ।
೯. ಹಾರಿದ್ರಮೂತ್ರನೇತ್ರತ್ವಗ್ದಾಹಸ್ತೃಷ್ಣಾ ಭ್ರಮೋಽರುಚಿಃ । ॥೯॥

ಹೀನವಾತೇ ಮಧ್ಯಕಫೇ ಲಿಂಗಂ ವಾತಾಧಿಕೇ ಮತಮ್ ।
೧೦. ಶಿರೋರುಗ್ವೇಪಥುಃ ಶ್ವಾಸಃ ಪ್ರಲಾಪಶ್ಛರ್ದ್ಯರೋಚಕೌ ॥೧೦॥

ಹೀನಪಿತ್ತೇ ಮಧ್ಯಕಫೇ ಲಿಂಗಂ ವಾತಾಧಿಕೇ ಮತಮ್ ।
೧೧. ಶೀತಕಂ ಗೌರವಂ ತಂದ್ರಾ ಪ್ರಲಾಪೋಽಸ್ಥಿಶಿರೋಽತಿರುಕ್ ॥೧೧॥

ಹೀನಪಿತ್ತೇ ವಾತಮಧ್ಯೇ ಲಿಂಗಂ ಶ್ಲೇಷ್ಮಾಧಿಕೇ ವಿದುಃ ।
೧೨. ವರ್ಚೋಭೇದೋಽಗ್ನಿದೌರ್ಬಲ್ಯಂ ತೃಷ್ಣಾ ದಾಹೋಽರುಚಿರ್ಭ್ರಮಃ ॥೧೨॥

೧೩ ಕಫಪೀನೇ ವಾತಸಂಕ್ಷೀಣೇ ಲಿಂಗಂ ಪಿತ್ತಾಧಿಕೇ ಮತಮ್ ||
ಶ್ವಾಸಃ ಕಾಸಃ ಪ್ರತಿಶ್ಯಾಯೋ ಮುಖಶೋಷೋಽತಿಪಾರ್ಶ್ವರುಕ್ ||೧೩||
೧೪ ಕಫಪೀನೇ ಪಿತ್ತಸಂಕ್ಷೀಣೇ ಲಿಂಗಂ ವಾತಾಧಿಕೇ ಸ್ಮೃತಂ ||೭೫||

**ಪಂಚವಿಂಶತಿಮಿತ್ಯೇವಂ ವೃದ್ಧ್ಯೈ..............................**

ಅರ್ಥ:— ಈ ಪ್ರಕಾರ ವೃದ್ಧಿಯಿಂದ ೨೫ ಭೇದಗಳನ್ನು ತಿಳಿಯಬೇಕು.

**.....................................................ಕ್ಷೀಣೈಶ್ಚ ತಾವತಃ** ||೭೬||

ಅರ್ಥ:— ಇದರಂತೆ ದೋಷಗಳ ಕ್ಷಯದಿಂದಲೂ ಇಪ್ಪತ್ತೈದು ಭೇದಗಳನ್ನು ತಿಳಿಯಬೇಕು.

**ಟಿಪ್ಪಣಿ:—**

**ಬೇರೆ ಬೇರೆ ದೋಷಗಳ ಕ್ಷಯದಿಂದ ಮೂರು ಭೇದಗಳು**

**೧ ವಾತ ಕ್ಷೀಣ ೨ ಪಿತ್ತ ಕ್ಷೀಣ ೩ ಕಫ ಕ್ಷೀಣ**

**ಸಂಸರ್ಗದಲ್ಲಿಯು ಒಂಭತ್ತು ಭೇದಗಳು**

| | | | |
|---|---|---|---|
| ಸಮಕ್ಷಯದಿಂದ | ೧ | ವಾತಕ್ಷೀಣ, | ಪಿತ್ತ ಕ್ಷೀಣ |
| | ೨ | ವಾತಕ್ಷೀಣ, | ಕಫ ಕ್ಷೀಣ |
| | ೩ | ಪಿತ್ತಕ್ಷೀಣ, | ಕಫಕ್ಷೀಣ |
| ಒಂದರ ಕ್ಷಯಾಧಿಕ್ಯದಿಂದ | ೪ | ವಾತ ಕ್ಷೀಣ, | ಪಿತ್ತಕ್ಷೀಣತರ |
| | ೫ | ಪಿತ್ತ ಕ್ಷೀಣ, | ವಾತ ಕ್ಷೀಣತರ |
| | ೬ | ಕಫ ಕ್ಷೀಣ | ಪಿತ್ತ ಕ್ಷೀಣತರ |
| | ೭ | ಪಿತ್ತ ಕ್ಷೀಣ, | ಕಫ ಕ್ಷೀಣತರ |
| | ೮ | ಕಫ ಕ್ಷೀಣ, | ವಾತ ಕ್ಷೀಣಕರ |
| | ೯ | ವಾತ ಕ್ಷೀಣ, | ಕಫ ಕ್ಷೀಣತರ |

**ಸನ್ನಿಪಾತದಲ್ಲಿ ಒಟ್ಟು ಹದಿಮೂರು ಭೇದಗಳು**

**ಅವುಗಳಲ್ಲಿ ಎರಡರ ಕ್ಷಯದಿಂದ ಮೂರು**

**೧ ವಾತವು ಕ್ಷೀಣ, ಪಿತ್ತ ಕಫಗಳು ಕ್ಷೀಣತರ**

೨. ಪಿತ್ತವು ಕ್ಷೀಣ, ವಾತಕಫಗಳು ಕ್ಷೀಣತರ
೩. ಕಫವು ಕ್ಷೀಣ, ವಾತಪಿತ್ತಗಳು ಕ್ಷೀಣತರ

ಎರಡೆರಡರ ಕ್ಷಯಾಧಿಕ್ಯದಿಂದ ಮೂರು

೪. ವಾತಪಿತ್ತಗಳು ಕ್ಷೀಣ, ಕಫವು ಕ್ಷೀಣತರ
೫. ಪಿತ್ತಕಫಗಳು ಕ್ಷೀಣ, ವಾತವು ಕ್ಷೀಣತರ
೬. ವಾತಕಫಗಳು ಕ್ಷೀಣ, ಪಿತ್ತವು ಕ್ಷೀಣತರ

ಸಮಕ್ಷಯದಿಂದ ಒಂದು

೭. ವಾತ ಪಿತ್ತ ಕಫಗಳು ಕ್ಷೀಣ

ಮೂರೂ ದೋಷಗಳ ತಾರತಮ್ಯದಿಂದ ಆರು

೮. ವಾತ ಕ್ಷೀಣ, ಪಿತ್ತ ಕ್ಷೀಣತರ, ಕಫ ಕ್ಷೀಣತಮ
೯. ಪಿತ್ತ ಕ್ಷೀಣ, ವಾತ ಕ್ಷೀಣತರ, ಕಫ ಕ್ಷೀಣತಮ
೧೦. ಕಫ ಕ್ಷೀಣ, ಪಿತ್ತ ಕ್ಷೀಣತರ, ವಾತ ಕ್ಷೀಣತಮ
೧೧. ವಾತ ಕ್ಷೀಣ, ಕಫ ಕ್ಷೀಣತರ, ಪಿತ್ತ ಕ್ಷೀಣತಮ
೧೨. ಪಿತ್ತ ಕ್ಷೀಣ, ಕಫ ಕ್ಷೀಣತರ, ವಾತ ಕ್ಷೀಣತಮ
೧೩. ಕಫ ಕ್ಷೀಣ, ವಾತ ಕ್ಷೀಣತರ, ಪಿತ್ತ ಕ್ಷೀಣತಮ (೬೬)

**ಏಕೈಕವೃದ್ಧಿಸಮತಾಕ್ಷಯೈಃ ಷಟ್ ತೇ........................**

ಅರ್ಥ:— ಒಂದೊಂದರ ವೃದ್ಧಿ, ಸಾಮ್ಯ, ಕ್ಷಯಗಳಿಂದ ದೋಷಗಳು ಆರು ಪ್ರಕಾರ.

**ಟಿಪ್ಪಣಿ:—**

೧. ವಾತ ವೃದ್ಧಿ, ಪಿತ್ತ ಸಮ, ಕಫ ಕ್ಷೀಣ
೨. ಪಿತ್ತ ವೃದ್ಧಿ, ವಾತ ಸಮ, ಕಫ ಕ್ಷೀಣ
೩. ಕಫ ವೃದ್ಧಿ, ಪಿತ್ತ ಸಮ, ವಾತ ಕ್ಷೀಣ
೪. ವಾತ ವೃದ್ಧಿ, ಕಫ ಸಮ, ಪಿತ್ತ ಕ್ಷೀಣ
೫. ಪಿತ್ತ ವೃದ್ಧಿ, ಕಫ ಸಮ, ವಾತ ಕ್ಷೀಣ
೬. ಕಫ ವೃದ್ಧಿ, ವಾತ ಸಮ, ಪಿತ್ತ ಕ್ಷೀಣ

**..................................................ಪುನಶ್ಚ ಷಟ್ ॥**

**ಏಕಕ್ಷಯದ್ವಂದ್ವವೃದ್ಧ್ಯಾ ಸವಿಪರ್ಯಯಯಾಪಿ ತೇ** ॥೬೭॥

ಭೇದಾಃ ದ್ವಿಷಷ್ಟಿರ್ನಿರ್ದಿಷ್ಟಾಃ ತ್ರಿಷಷ್ಟಿಃ ಸ್ವಾಸ್ಥ್ಯಕಾರಣಮ್ ॥

ಅರ್ಥ:— ಒಂದರ ಕ್ಷಯ, ಎರಡರ ವೃದ್ಧಿಯಿಂದ ಮೂರು, ಎರಡರ ಕ್ಷಯ ಒಂದರ ವೃದ್ಧಿಯಿಂದ ಮೂರು, ಹೀಗೆ ಇವು ಮೂರು ಆರು ಪ್ರಕಾರ. ಈ ರೀತಿಯಾಗಿ ಒಟ್ಟು ೬೨ ಭೇದಗಳು ಹೇಳಲ್ಪಟ್ಟವು. ೬೩ನೆಯ ಭೇದವು ಆರೋಗ್ಯಕ್ಕೆ ಕಾರಣವಿದೆ.

**ಟಿಪ್ಪಣಿ:—**

ಒಂದರ ಕ್ಷಯ ಎರಡರ ವೃದ್ಧಿಯಿಂದ ಆದ ಭೇದಗಳು:

೧. ವಾತ ಕ್ಷೀಣ, ಪಿತ್ತ ಕಫಗಳು ವೃದ್ಧ
೨. ಪಿತ್ತ ಕ್ಷೀಣ, ವಾತ ಕಫಗಳು ವೃದ್ಧ.
೩. ಕಫ ಕ್ಷೀಣ, ವಾತ ಪಿತ್ತಗಳು ವೃದ್ಧ.

ಎರಡರ ಕ್ಷಯ ಒಂದರ ವೃದ್ಧಿಯಿಂದ ಆದ ಭೇದಗಳು:

೪. ವಾತ ಪಿತ್ತ ಕ್ಷೀಣ, ಕಫ ವೃದ್ಧ.
೫. ವಾತ, ಕಫ ಕ್ಷೀಣ, ಪಿತ್ತ ವೃದ್ಧ
೬. ಪಿತ್ತ ಕಫ ಕ್ಷೀಣ, ವಾತ ವೃದ್ಧ,

೬೩ನೇದು:— ಮೂರೂ ದೋಷಗಳು ಸಮ. ಇದು ಸ್ವಾಸ್ಥ್ಯಕ್ಕೆ ಕಾರಣವು. (೭೭॥)

ಸಂಸರ್ಗಾದ್ರಸರುಧಿರಾದಿಭಿಸ್ತಥೈಷಾಮ್
ದೋಷಾಂಸ್ತು ಕ್ಷಯಸಮತಾವಿವೃದ್ಧಿಭೇದೈಃ ॥೭೮॥
ಆನಂತ್ಯಂ ತರತಮಯೋಗತಶ್ಚ ಯಾತಾನ್ ॥
ಜಾನೀಯಾದವಹಿತಮಾನಸೋ ಯಥಾಸ್ವಮ್ ॥

ಅರ್ಥ:— ಇದರ ಹೊರತು ರಸ ರಕ್ತಾದಿ ಧಾತುಗಳ ಮತ್ತು ಮಲಗಳ ಸಂಯೋಗದಿಂದಲೂ ದೋಷಗಳ ಕ್ಷಯ, ಸಾಮ್ಯ, ವೃದ್ಧಿ ಭೇದಗಳಿಂದಲೂ ಅವುಗಳ ತಾರತಮ್ಯಗಳಿಂದಲೂ ಅನಂತ ಭೇದಗಳನ್ನು ಹೊಂದುವವೆಂಬುದನ್ನು ಮನಸ್ಸಿಗೊಟ್ಟು ತಿಳಕೊಳ್ಳತಕ್ಕದ್ದು. (೭೮॥)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ದೋಷಭೇದೀಯೋ ನಾಮ ದ್ವಾದಶೋಽಧ್ಯಾಯಃ ಸಮಾಪ್ತಃ ॥**

ಇತಿ ಶ್ರೀ [illegible] ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ ದೋಷಾದಿವಿಜ್ಞಾನೀಯವೆಂಬ ೧೨ನೇ ಅಧ್ಯಾಯದ ಟೀಕೆಯು ಮುಗಿದುದು.

# ೧೩ನೆಯ ಅಧ್ಯಾಯವು

ಹಿಂದಿನ ಎರಡು ಅಧ್ಯಾಯಗಳಲ್ಲಿ ದೋಷಗಳ ಲಕ್ಷಣಗಳನ್ನು ಹೇಳಿ ಇನ್ನು ಅವುಗಳ ಚಿಕಿತ್ಸಾ ಕ್ರಮವನ್ನು ಹೇಳುತ್ತಾರೆ.

**ಅಥಾತೋ ದೋಷೋ†ಪಕ್ರಮಣೀಯಮಧ್ಯಾಯಂ ವ್ಯಾಖ್ಯಾಸ್ಯಾಮಃ**

ಅರ್ಥಃ— ಇನ್ನು ಮೇಲೆ ದೋಷ ಚಿಕಿತ್ಸೆಯ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ।**

ಅರ್ಥಃ—ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ವಾತಸ್ಯೋಪಕ್ರಮಃ ಸ್ನೇಹಃ ಸ್ವೇದಃ ಸಂಶೋಧನಂ ಮೃದು ॥**
**ಸ್ವಾದ್ವಮ್ಲಲವಣೋಷ್ಣಾನಿ ಭೋಜ್ಯಾನ್ಯಭ್ಯಂಗಮರ್ದನಮ್ ॥೧॥**

**ವೇಷ್ಟನಂ ತ್ರಾಸನಂ ಸೇಕೋ ಮದ್ಯಂ ಪೈಷ್ಟಿಕಗೌಡಿಕಮ್ ॥**
**ಸ್ನಿಗ್ಧೋಷ್ಣಾ ಬಸ್ತಯೋ ಬಸ್ತಿನಿಯಮಃ ಸುಖಶೀಲತಾ ॥೨॥**

**ದೀಪನೈಃ ಪಾಚನೈಃ ಸಿದ್ಧಾಃ ಸ್ನೇಹಾಶ್ಚಾನೇಕಯೋನಯಃ ॥**
**ವಿಶೇಷಾನ್ಮೇದ್ಯಪಿಶಿತರಸತೈಲಾನುವಾಸನಮ್ ।೩॥**

ಅರ್ಥಃ— ವಾತದ ಚಿಕಿತ್ಸೆಯೆಂದರೆ:- ಸ್ನೇಹ, ಸ್ವೇದ, ಮೃದು-ಶೋಧನ, ಸಿಹಿ, ಹುಳಿ, ಉಪ್ಪಾದ ಉಷ್ಣ ಆಹಾರ, ಅಭ್ಯಂಗ, ಮರ್ದನ, (ಬಿಚ್ಚಗಿರುವಂತೆ) ಬಟ್ಟೆ ಸುತ್ತೋಣ, ಅಂಜಿಸೋಣ, ಕಷಾಯ ಮುಂತಾದವುಗಳನ್ನು ಸುರುವೋಣ, ಮದ್ಯ (ಹಿಟ್ಟಿನಿಂದ ಅಥವಾ ಬೆಲ್ಲದಿಂದ ಮಾಡಿದ್ದು), ಸ್ನಿಗ್ಧ ಉಷ್ಣವಾದಂಥ ಬಸ್ತಿಗಳು, ಬಸ್ತಿನಿಯಮ, ಆರಾಮವಿರೋಣ, ದೀಪಕ ಮತ್ತು ಪಾಚಕ ಔಷಧಗಳಿಂದ ಸಿದ್ಧವಾದ ಅನೇಕ ತರದ ಸ್ನೇಹಗಳು,

† ಈ ದೋಷೋಪಕ್ರಮಣವು ಚರಕ ಚಿ. ೨೮ನೇ ಸುಶ್ರುತ ಸೂ ೩೩ನೇ ಅಷ್ಟಾಂಗ ಸಂಗ್ರಹ ಸೂತ್ರ ೨೧ ಮತ್ತು ೨೨ನೇ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ

ಅವರಲ್ಲಿಯೂ.. ಕೊಬ್ಬಿದ ಪ್ರಾಣಿಯ ಮಾಂಸರಸ ಮತ್ತು ತೈಲ, ಅನುವಾಸನ ಬಸ್ತಿಯೂ ಇವು ಮುಖ್ಯ ಉಪಚಾರಗಳು.

ಟಿಪ್ಪಣಿ:— ಬಸ್ತಿಯುಗಳೆಂದರೆ— 'ಪ್ರಾಕ್ಸ್ನೇಹ ಏಕಃ ಪಂಚಾಂತೇ ದ್ವಾದಶಾಸ್ಥಾಪನಾನಿ ಚ, ಸಾನ್ವಾಸನಾನಿ ಕರ್ಮೈವಂ ಬಸ್ತಯಸ್ತ್ರಿಂಶದೀರಿತಾಃ' ಎಂದು ಮುಂತಾದ್ದಾಗಿ (೧೯ನೆಯ ಅಧ್ಯಾಯದ ೬೪|೬೫ ಶ್ಲೋಕದಲ್ಲಿ) ಹೇಳಿದ ಕರ್ಮ, ಕಾಲ, ಯೋಗವೆಂಬ ಬಸ್ತಿಗಳು. (೩)

**ಪಿತ್ತಸ್ಯ ಸರ್ಪಿಷಃ ಪಾನಂ ಸ್ವಾದುಶೀತೈರ್ವಿರೇಚನಮ್ ॥**
**ಸ್ವಾದುತಿಕ್ತಕಷಾಯಾಣಿ ಭೋಜನಾನ್ಯೌಷಧಾನಿ ಚ ।೪॥**

**ಸುಗಂಧಿಶೀತಹೃದ್ಯಾನಾಂ ಗಂಧಾನಾಮುಪಸೇವನಮ್ ॥**
**ಕಂಠೇ ಗುಣಾನಾಂ ಹಾರಾಣಾಂ ಮಣೀನಾಮುರಸಾ ಧೃತಿಃ ॥೫॥**

**ಕರ್ಪೂರಚಂದನೋಶೀರೈರನುಲೇಪಃ ಕ್ಷಣೇ ಕ್ಷಣೇ ॥**
**ಪ್ರದೋಷಶ್ಚಂದ್ರಮಾಃ ಸೌಧಂ ಹಾರಿ ಗೀತಂ ಹಿಮೋಽನಿಲಃ ॥೬॥**

**ಅಯಂತ್ರಣಸುಖಂ ಮಿತ್ರಂ ಪುತ್ರಃ ಸಂದಿಗ್ಧಮುಗ್ಧವಾಕ್ ॥**
**ಛಂದಾನುವರ್ತಿನೋ ದಾರಾಃ ಪ್ರಿಯಾಃ ಶೀಲವಿಭೂಷಿತಾಃ ॥೭॥**

**ಶೀತಾಂಬುಧಾರಾಗರ್ಭಾಣಿ ಗೃಹಾಣ್ಯುದ್ಯಾನದೀರ್ಘಿಕಾಃ ॥**
**ಸುತೀರ್ಥವಿಪುಲಸ್ವಚ್ಛಸಲಿಲಾಶಯಸೈಕತೇ ॥೮॥**

**ಸಾಂಭೋಜಜಲತೀರಾಂತೇ ಕಾಯಮಾನೇ ದ್ರುಮಾಕುಲೇ ॥**
**ಸೌಮ್ಯಾ ಭಾವಾಃ ಪಯಃ ಸರ್ಪಿರ್ವಿರೇಕಶ್ಚ ವಿಶೇಷತಃ ॥೯॥**

ಅರ್ಥ:— ಪಿತ್ತದ ಉಪಚಾರವೆಂದರೆ ತುಪ್ಪ ಕುಡಿಯೋಣ, ಮಧುರ ಶೀತ ದ್ರವ್ಯಗಳಿಂದ ರೇಚನ, ಸಿಹಿ ಕಹಿ ಒಗರು ರಸಗಳ ಊಟ ಮತ್ತು ಔಷಧ, ಸುಗಂಧ ಶೀತ ಮನೋಹರ ಗಂಧ ಸೇವನ, ಕೊರಳಲ್ಲಿ ಅನೇಕ ಎಳೆಗಳುಳ್ಳ ಹಾರಗಳಲ್ಲಿ ಹಾಕಿದ ರತ್ನಗಳನ್ನು ಧರಿಸುವದು, ಆಗಾಗ್ಗೆ ಕರ್ಪೂರ, ಚಂದನ, ಲಾಳದ ಬೇರುಗಳ ಲೇಪನ, ಪ್ರದೋಷಕಾಲ, ಚಂದ್ರ (ಬೆಳದಿಂಗಳು); ಗಚ್ಚಿನಮನೆ, ಮನೋಹರ ಗಾಯನ, ತಂಗಾಳಿ ( ಇವುಗಳ

ಸೇವನ), ಅಪ್ರತಿಬಂಧ ಸುಖ ಕೊಡುವ ಮಿತ್ರರು, ಅಸ್ಪಷ್ಟ ಮಧುರ ಮಾತಾಡುವ ಮಗನು, ಹೇಳಿದಂತೆ ಕೇಳುವ ಸುಶೀಲ ಪ್ರಿಯಳಾದ ಹೆಂಡತಿಯು, ತಣ್ಣೀರಿನ ಕಾರಂಜಿಗಳುಳ್ಳ ಮನೆಗಳು, ಮನೆಯೊಳಗಿನಲ್ಲಿರುವ ಸರೋವರಗಳು, ಜಲೋಪಾವಟಿಗೆಗಳುಳ್ಳ ವಿಪುಲ ಸ್ವಚ್ಛವಾದ ಜಲಾಶಯದ ಕಮಲಗಳುಳ್ಳ ನೀರಿನ ದಡಗೆ ಹೊಂದಿ ಉಸುಕಿನಲ್ಲಿ ಕಟ್ಟಿದ, ಗಿಡಗಳಿಂದ ಸುತ್ತುಗಟ್ಟಿದ ಗುಡಿಸಲು ಇವುಗಳ ಸೇವನೆಯು. ಅವರಲ್ಲಿಯೂ ವಿಶೇಷವಾಗಿ ಸೌಮ್ಯ ಪದಾರ್ಥಗಳು ಮತ್ತು ಹಾಲು ತುಪ್ಪ ರೇಚನಗಳು ಮುಖ್ಯವಾದವು. (೯)

**ಶ್ಲೇಷ್ಮಣೋ ವಿಧಿನಾ ಯುಕ್ತಂ ತೀಕ್ಷ್ಣಂ ವಮನರೇಚನಮ್ ।**
**ಅನ್ನಂ ರೂಕ್ಷಾಲ್ಪತೀಕ್ಷ್ಣೋಷ್ಣಂ ಕಟುತಿಕ್ತಕಷಾಯಕಮ್ ॥೧೦॥**

**ದೀರ್ಘಕಾಲಸ್ಥಿತಂ ಮದ್ಯಂ ರತಿಪ್ರೀತಿಃ ಪ್ರಜಾಗರಃ ।**
**ಅನೇಕರೂಪೋ ವ್ಯಾಯಾಮಶ್ಚಿಂತಾ ರೂಕ್ಷಂ ವಿಮರ್ದನಮ್ ॥೧೧॥**

**ವಿಶೇಷಾದ್ವಮನಂ ಯೂಷಃ ಕ್ಷೌದ್ರಂ ಮೇದೋಘ್ನಮೌಷಧಮ್ ।**
**ಧೂಮೋಪವಾಸಗಂಡೂಷಾ ನಿಃಸುಖತ್ವಂ ಸುಖಾಯ ಚ ॥೧೨॥**

ಅರ್ಥ:— ಕಫದ ಉಪಚಾರವು:— ವಿಧಿ ಪ್ರಕಾರ ತೀಕ್ಷ್ಣವಾದ ವಮನ, ರೇಚನ, ರೂಕ್ಷ ಅಲ್ಪ ತೀಕ್ಷ್ಣ ಉಷ್ಣವಾದ, ಕಹಿ ಖಾರ ಒಗರು ರಸಗಳುಳ್ಳ ಅನ್ನ, ಹಳೇಮದ್ಯ, ಸಂಭೋಗದಲ್ಲಿ ಆಸಕ್ತಿ, ಜಾಗರಣೆ, ಅನೇಕ ತರದ ವ್ಯಾಯಾಮ, ಚಿಂತೆ, ಎಣ್ಣೆ ಹಚ್ಚದೆ ಮೈ ಒತ್ತೋಣ ಮುಂತಾದವು. ಅವರಲ್ಲಿಯೂ ವಿಶೇಷವಾಗಿ ವಮನ, ಧಾನ್ಯಗಳ ಕಟ್ಟು, ಜೇನುತುಪ್ಪ, ಮೇದನಾಶಕ (ಗುಗ್ಗುಲು ಮುಂತಾದ) ಔಷಧ ಧೂಮಸೇವನ, ಉಪವಾಸ ಗಂಡೂಷ, ಸುಖಾಭಾವ ಮುಂತಾದವು ಹಿತಕರಗಳು. (೧೨)

**ಉಪಕ್ರಮಃ ಪೃಥಗ್ದೋಷಾಣಾಂ ತ್ರಯಮುದ್ದಿಶ್ಯ ಕೀರ್ತಿತಃ ।**
**ಸಂಸರ್ಗಸನ್ನಿಪಾತೇಷು ತಂ ಯಥಾಸ್ವಂ ವಿಕಲ್ಪಯೇತ್ ॥೧೩॥**

ಅರ್ಥ:— ಬೇರೆ ಬೇರೆ ದೋಷಗಳಿಗೆ ಹೇಳಿದ ಈ ಉಪಚಾರಗಳನ್ನು ಅವುಗಳ ಸಂಸರ್ಗ ಮತ್ತು ಸನ್ನಿಪಾತಗಳಲ್ಲಿ ಅವುಗಳಿಗೆ ಅನುರೂಪವಾಗುವಂತೆ ಯೋಜಿಸತಕ್ಕದ್ದು. (೧೩)

**ಗ್ರೈಷ್ಮಃ ಪ್ರಾಯೋ ಮರುತ್ಪಿತ್ತೇ ವಾಸಂತಃ ಕಫಮಾರುತೇ ॥**
**ಮರುತೋ ಯೋಗವಾಹಿತ್ವಾತ್ಕಫಪಿತ್ತೇ ತು ಶಾರದಃ ॥೧೪॥**

ಅರ್ಥ:— ಎರಡು. ವಾತಪಿತ್ತಗಳಲ್ಲಿ ಗ್ರೀಷ್ಮ ಋತುವಿನ ಉಪಚಾರವನ್ನೂ ಕಫವಾತದಲ್ಲಿ ವಸಂತ ಋತುವಿನ ಉಪಚಾರವನ್ನೂ ಮಾಡಬೇಕು. ಕಾರಣವೇನೆಂದರೆ ವಾಯುವು ಯೋಗವಾಹಿಯಾಗಿರುವದು. ಕಫಪಿತ್ತದಲ್ಲಿ ಶರತ್ಕಾಲದ ಉಪಚಾರ ಮಾಡಬೇಕು.

**ಟಿಪ್ಪಣಿ:—** ಗ್ರೀಷ್ಮ ಕಾಲದಲ್ಲಿ ಶೀತ ಉಪಚಾರವನ್ನೂ, ವಸಂತಕಾಲದಲ್ಲಿ ತೀಕ್ಷ್ಣ ವಮನ ನಸ್ಯಗಳನ್ನೂ ಹೇಳಿರುವರು. ಇವೆರಡೂ ವಾತವನ್ನು ಹೆಚ್ಚಿಸುವದರಿಂದ ವಾತ ಪಿತ್ತ ಮತ್ತು ಕಫವಾತಗಳಿಗೆ ಉಪಚಾರವು ಹೇಗಾಗುವದು ಎಂಬ ಶಂಕೆಯನ್ನು ಕಳೆಯುವದಕ್ಕಾಗಿ 'ಮರುತೋ ಯೋಗವಾಹಿತ್ವಾತ್' ಎಂದು ಹೇಳಿರುವರು. ವಾತಕ್ಕೆ ಪಿತ್ತಸಂಸರ್ಗವಿರಲು ಪಿತ್ತದ ಚಿಕಿತ್ಸೆಯನ್ನು ಕಫದ ಸಂಸರ್ಗವಿರಲು ಕಫದ ಚಿಕಿತ್ಸೆಯನ್ನು ಮಾಡಲು ವಾತವು ಶಮನವಾಗುವದು ಎಂಬ ಅಭಿಪ್ರಾಯವು. (೧೪)

**ಚಯ ಏವ ಜಯೇದ್ದೋಷಂ ಕುಪಿತಂ ತ್ವವಿರೋಧಯನ್ ॥**
**ಸರ್ವಕೋಪೇ ಬಲೀಯಾಂಸಂ ಶೇಷದೋಷಾವಿರೋಧತಃ ॥೧೫॥**

ಅರ್ಥ:— ಕುಪಿತ ದೋಷಗಳಿಗೆ ವಿರೋಧವಾಗದಂತೆ ಚಯಕಾಲದಲ್ಲಿಯೇ ದೋಷಗಳನ್ನು ಗೆಲ್ಲಬೇಕು. ಎಲ್ಲವೂ ಕುಪಿತವಾಗಿದ್ದರೆ, ಬಲಿಷ್ಠವಾದದ್ದನ್ನು ಇತರ ದೋಷಗಳಿಗೆ ವಿರೋಧವಾಗದಂತೆ ಗೆಲ್ಲಬೇಕು.

**ಟಿಪ್ಪಣಿ:—** ಪರಾಶರ ಋಷಿಗಳು "ಎಲ್ಲವೂ ಕುಪಿತವಾಗಿರಲು ಮೊದಲು ವಾತವನ್ನೇ ಕಳೆಯಬೇಕು; ಏಕೆಂದರೆ ವಾತ ಪಿತ್ತ ಕಫಗಳಲ್ಲಿ ವಾತವು ಎಲ್ಲಕ್ಕೂ ಬಲಿಷ್ಠ; ಅದರ ಹಿಂದೆ ಪಿತ್ತ, ಅದರ ಹಿಂದೆ ಕಫವಿದೆ. ಸೇನಾಪತಿಯನ್ನೇ ಹೊಡೆಯಲು ಹೇಗೆ ಎಲ್ಲ ಸೈನ್ಯದ ಪರಾಜಯವಾಗುವದೋ ಅದರಂತೆ." ಎಂದು ಹೇಳುವರು.

ಬೇರೆ ಕೆಲವರು— "ಸ್ಥಾನಕ್ಕೆ ಮಹತ್ವಕೊಟ್ಟು ಕಫವನ್ನು ಮೊದಲು ಗೆಲ್ಲಬೇಕು. ಏಕೆಂದರೆ ತಲೆ ಎದೆ ಕಂಠಗಳು ಕಫದಿಂದ ಲಿಪ್ತವಾಗಿರಲು ಅನ್ನಕ್ಕೆ ರುಚಿಯು ಬಾರದು. ಊಟ ಹೋಗದು. ಊಟಹೋಗದೆ ದೋಷಗಳ ನಾಶವು ಹೇಗೆ ಆಗುವದು? ಆದ್ದರಿಂದ ಶರೀರ ಮಾರ್ಗದ ಅಗಳಿಯಂತೆ ಇರುವ ಕಫವನ್ನು ಮೊದಲು ಗೆಲ್ಲಬೇಕು. ಆಮೇಲೆ ಮಧ್ಯದಲ್ಲಿದ್ದು ವಾತಕ್ಕೆ ಪುಷ್ಟಿಯನ್ನು ಕೊಡುವ ಪಿತ್ತವನ್ನು ಆಮೇಲೆ ಅದರ ಕೆಳಗಿರುವ ವಾತವನ್ನು ಗೆಡೆಯಬೇಕು." ಎನ್ನುವರು.

ಬೇರೆ ಕೆಲವರು ನೆರವಲು ಚಿತ್ತವನ್ನು ಆಪೋಶಿ ವಾತ ಕಫಗಳನ್ನು ಎಂದು ಹೇಳುವರು.

ಆದರೆ ಸುಶ್ರುತಾಚಾರ್ಯರು ಎಲ್ಲ ಕಡೆಯಲ್ಲಿ ಒಂದೇ ರೀತಿಯು ಉಪ ಯೋಗವಾಗುವದಿಲ್ಲ. ದೋಷಗಳ ಉದ್ರೇಕ ಅವುಗಳ ಬಲಗಳ ವಿಚಾರಮಾಡಿ ಯುಕ್ತವೆಂದು ಕಂಡ ಕ್ರಮವನ್ನು ಅವಲಂಬಿಸಬೇಕು. ಎಂದು ಹೇಳುವರು. (೧೫)

**ಪ್ರಯೋಗಃ ಶಮಯೇದ್ವ್ಯಾಧಿಂ ಯೋಽನ್ಯಮನ್ಯಮುದೀರಯೇತ್ ।**
**ನಾಽಸೌ ವಿಶುದ್ಧಃ ಶುದ್ಧಸ್ತು ಶಮಯೇದ್ಯೋ ನ ಕೋಪಯೇತ್ ॥೧೬॥**

ಅರ್ಥ:— ಯಾವ ಉಪಚಾರವು ಒಂದು ಬೇನೆಯನ್ನು ಕಳೆಯುತ್ತದೆ ಆದರೆ ಬೇರೊಂದನ್ನು ಉಂಟುಮಾಡುತ್ತದೆ ಅದು ಶುದ್ಧವಲ್ಲ. ಯಾವದು ಒಂದನ್ನು ಕಳೆಯುವದು ಆದರೆ ಬೇರೊಂದನ್ನು ಉಂಟುಮಾಡುವದಿಲ್ಲವೋ ಅದು ಶುದ್ಧವು.

**ಟಿಪ್ಪಣಿ:—** ಸತ್ವ ರಜ ತಮಗಳಲ್ಲಿ ಹೇಗೆ ಒಂದು ಗುಣವು ಬೇರೊಂದನ್ನು ನಾಶಮಾಡಲಾರದೋ ಅದರಂತೆ ವಾತಪಿತ್ತಕಫಗಳಲ್ಲಿ ಒಂದನ್ನು ಇನ್ನೊಂದು ನಾಶ ಮಾಡಲಾರದು.

**ಆರಂಭಕಂ ವಿರೋಧೇಽಪಿ ಮಿಥೋ ಯದ್ವದ್ಗುಣತ್ರಯಮ್ ।**
**ವಿಶ್ವಸ್ಯ ದೃಷ್ಟಂ ಯುಗಪದ್ವ್ಯಾಧೇರ್ದೋಷತ್ರಯಂ ತಥಾ ॥** (೧೭)

**ವ್ಯಾಯಾಮಾದೂಷ್ಮಣಸ್ತೈಕ್ಷ್ಣ್ಯಾದಹಿತಾಚರಣಾದಪಿ ॥**
**ಕೋಷ್ಠಾಚ್ಛಾಖಾಸ್ಥಿಮರ್ಮಾಣಿ ದ್ರುತತ್ವಾನ್ಮಾರುತಸ್ಯ ಚ ॥೧೮॥**

**ದೋಷಾ ಯಾಂತಿ.................................**

ಅರ್ಥ:— ದೋಷಗಳು ವ್ಯಾಯಾಮದಿಂದಲೂ ಉಷ್ಣತೆಯ ತೀಕ್ಷ್ಣತೆಯಿಂದಲೂ ಅಹಿತ ಆಹಾರದಿಂದಲೂ ವಾಯುವಿನ ವೇಗದಿಂದಲೂ ಕೋಷ್ಠದಿಂದ, ಶಾಖಾ (ಬಾಹ್ಯ ರೋಗ ಮಾರ್ಗ) ಮತ್ತು ಅಸ್ಥಿಮರ್ಮ (ಮಧ್ಯ ರೋಗಮಾರ್ಗ) ಗಳನ್ನು ಸೇರುತ್ತವೆ. (೧೮)

**............ತಥಾ ತೇಭ್ಯಃ ಸ್ರೋತೋಮುಖವಿಶೋಧನಾತ್ ॥**
**ವೃದ್ಧ್ಯಾಽಭಿಷ್ಯಂದನಾತ್ಪಾಕಾತ್ಕೋಷ್ಠಂ ವಾಯೋಶ್ಚ ನಿಗ್ರಹಾತ್ ॥೧೯॥**

ಅರ್ಥ:— ಅದರಂತೆ ಸ್ರೋತಸ್ಸುಗಳ ಮುಖದ ಶೋಧನದಿಂದಲೂ ದೋಷಗಳ ವೃದ್ಧಿ ಅಭಿಷ್ಯಂದ ಪಾಕ ಮತ್ತು ವಾಯುವಿನ ನಿಗ್ರಹದಿಂದಲೂ ಆ ಸ್ಥಾನಗಳಿಂದ ಕೋಷ್ಠಕ್ಕೆ ತಿರುಗಿ ಬರುತ್ತವೆ. (೧೮)

**ತತ್ರಸ್ಥಾಶ್ಚ ವಿಲಂಬೇರನ್ ಭೂಯೋ ಹೇತುಪ್ರತೀಕ್ಷಿಣಃ ॥**
**ತೇ ಕಾಲಾದಿಬಲಂ ಲಬ್ಧ್ವಾ ಕುಪ್ಯಂತ್ಯನ್ಯಾಶ್ರಯೇಷ್ವಪಿ ॥೧೯॥**

ಅರ್ಥ:— ಆ ಸ್ಥಳದಲ್ಲಿ (ಕೋಷ್ಠದಲ್ಲಿ) ಕೂತು ಕೋಪ ಕಾರಣವ ಹಾದಿ ನೋಡುವವು. ಕಾಲ ದೇಶಗಳ ಬಲವು ಸಿಕ್ಕ ಕೂಡಲೇ ತಮ್ಮ ಸ್ಥಳವಿರದಿದ್ದರೂ ಕೂಡ ಅಲ್ಲಿ ಕುಪಿತವಾಗುವವು. (೨೦)

**ತತ್ರಾನ್ಯಸ್ಥಾನಸಂಸ್ಥೇಷು ತದೀಯಾಮಬಲೇಷು ತು ॥**
**ಕುರ್ಯಾಚ್ಚಿಕಿತ್ಸಾಂ ಸ್ವಾಮೇವ ಬಲೇನಾನ್ಯಾಭಿಭಾವಿಷು ॥೧೯॥**

ಅರ್ಥ:— ಎರಡನೇ ದೋಷದ ಸ್ಥಾನದಲ್ಲಿರುವ ದೋಷಗಳು ದುರ್ಬಲವಿದ್ದರೆ ಸ್ಥಾನಿದೋಷದ ಚಿಕಿತ್ಸೆಯನ್ನು ಮಾಡಬೇಕು. ಆದರೆ ಅವು ತಮ್ಮ ಸಾಮರ್ಥ್ಯದಿಂದ ಎರಡನೆಯದನ್ನು ಗೆಲ್ಲುವಂಥದು (ಪ್ರಬಲ) ಇದ್ದರೆ ಅವರ (ಆಗಂತುವಿನ) ಚಿಕಿತ್ಸೆಯನ್ನೇ ಮಾಡಬೇಕು. (೨೦)

**ಆಗಂತುಂ ಶಮಯೇದ್ದೋಷಂ ಸ್ಥಾನಿನಂ ಪ್ರತಿಕೃತ್ಯ ವಾ ॥**

ಅರ್ಥ:— ಅಥವಾ ಸ್ಥಾನೀದೋಷವು ಆಗಂತುದೋಷ ಶಮನಕ್ಕೆ ಬಾಧಕವಾಗದಂತೆ ಮೊದಲು ಅದರ ಪ್ರತೀಕಾರ ಮಾಡಿ ಆಗಂತುವನ್ನು ಶಮನ ಮಾಡಬಹುದು. (೨೦।)

**ಪ್ರಾಯಸ್ತಿರ್ಯಗ್ಗತಾ ದೋಷಾಃ ಕ್ಲೇಶಯಂತ್ಯಾತುರಾಂಶ್ಚಿರಮ್॥೨೧॥**
**ಕುರ್ಯಾನ್ನ ತೇಷು ತ್ವರಯಾ ದೇಹಾಗ್ನಿಬಲವಿತ್ ಕ್ರಿಯಾಮ್ ॥**

ಅರ್ಥ:— ಶೋಧನ ಮಾರ್ಗ ಬಿಟ್ಟು ಅಡ್ಡ ಹೋದ ದೋಷಗಳು ರೋಗಿಗಳನ್ನು ಬಹುಕಾಲ ಪೀಡಿಸುವವು. ಕಾರಣ ಅವುಗಳ ಪ್ರತೀಕಾರವನ್ನು ತ್ವರೆಯಿಂದ ಮಾಡದೆ ರೋಗಿಯ ದೇಹ ಅಗ್ನಿಬಲವನ್ನು ವಿಚಾರಿಸಿ ಮಾಡಬೇಕು. (೨೧॥)

**ಶಮಯೇತ್ತತ್ರಸ್ಥ ಯೋಗೇನ ಸುಖಂ ವಾ ಕೋಷ್ಠಮಾನಯೇತ್ ॥೨೨**

**ಜ್ಞಾತ್ವಾ ಕೋಷ್ಠಪ್ರಪನ್ನಾಂಶ್ಚ ಯಥಾಸನ್ನಂ ವಿನಿರ್ಹರೇತ್ ॥**

ಅರ್ಥ:-- ಅವುಗಳನ್ನು ಅಲ್ಲಿಯೇ ಉಪಚರಿಸಿ ಶಮನಮಾಡಬೇಕು. ಅಥವಾ ತ್ರಾಸವಾಗದಂತೆ ಕೋಷ್ಠಕ್ಕೆ ತರಬೇಕು. ಕೋಷ್ಠಕ್ಕೆ ಬಂದವನ್ನು ನೋಡಿ ಸಮೀಪದ ಮಾರ್ಗದಿಂದ ಹೊರಗೆ ಹಾಕಬೇಕು. (೨೨)

**ಸ್ರೋತೋರೋಧಬಲಭ್ರಂಶಗೌರವಾನಿಲಮೂಢತಾಃ ॥೨೩॥**

**ಆಲಸ್ಯಾಪಕ್ತಿನಿಷ್ಠೀವಮಲಸಂಗಾರುಚಿಕ್ಲಮಾಃ ॥**

**ಲಿಂಗಂ ಮಲಾನಾಂ ಸಾಮಾನಾಂ ನಿರಾಮಾಣಾಂ ವಿಪರ್ಯಯಃ ॥೨೪॥**

ಅರ್ಥ:— ಸ್ರೋತಸ್ಸುಗಳ ಅವರೋಧ, ಬಲಹಾನಿ, ಜಡತ್ವ, ವಾಯು ಪ್ರತಿಬಂಧ, ಆಲಸ್ಯ, ಅಪಚನ, ಬಾಯಿಗೆ ನೀರು ಬಿಡೋಣ, ಮಲ ಬಂಧ, ಅರುಚಿ, ಗ್ಲಾನಿ—ಇವು ಸಾಮದೋಷಗಳ ಲಕ್ಷಣಗಳು. ನಿರಾಮ ದೋಷದ ಲಕ್ಷಣಗಳು ಇವರ ವಿಪರೀತವಾಗಿರುವವು. (೨೪)

**ಊಷ್ಮಣೋಽಲ್ಪಬಲತ್ವೇನ ಧಾತುಮಾದ್ಯಮಪಾಚಿತಮ್ ॥**

**ದುಷ್ಟಮಾಮಾಶಯಗತಂ ರಸಮಾಮಂ ಪ್ರಚಕ್ಷತೇ ॥೨೫॥**

ಅರ್ಥಃ— ಅಗ್ನಿಯ ದೌರ್ಬಲ್ಯದಿಂದ ಪಚನವಾಗದ, ಮೊದಲನೇ ಧಾತುವಾದ (ವಾತಾದಿಗಳಿಂದ) ದುಷ್ಟವಾದ ಆಮಾಶಯದಲ್ಲಿದ್ದ ರಸವನ್ನು ಆಮವೆಂದು ಹೇಳುವರು. (೨೫)

**ಅನ್ಯೇ ದೋಷೇಭ್ಯ ಏವಾತಿದುಷ್ಟೇಭ್ಯೋಽನ್ಯೋನ್ಯಮೂರ್ಛನಾತ್॥**

**ಕೋದ್ರವೇಭ್ಯೋ ವಿಷಸ್ಯೇವ ವದಂತ್ಯಾಮಸ್ಯ ಸಂಭವಮ್ ॥೨೬॥**

ಅರ್ಥಃ—ಕೆಲವರು ಅತಿ ದುಷ್ಟವಾದಂಥ ದೋಷಗಳು ಒಂದಕ್ಕೊಂದು ಕೂಡಿ ಕೋದ್ರವ ಧಾನ್ಯಗಳಿಂದ ವಿಷ ಉಂಟಾಗುವಂತೆ ಆಮ ಉಂಟಾಗುವದೆಂದು ಹೇಳುತ್ತಾರೆ. (೨೬)

ಆಮೇನ ತೇನ ಸಂಪೃಕ್ತಾ ದೋಷಾ ದೂಷ್ಯಾಶ್ಚ ದೂಷಿತಾಃ ||
ಸಾಮಾ ಇತ್ಯುಪದಿಶ್ಯಂತೇ ಯೇ ಚ ರೋಗಾಸ್ತದುದ್ಭವಾಃ ||೨೬

ಅರ್ಥ:— ಆಮದಿಂದ ಕೂಡಿದ ದೋಷಗಳೂ ಮತ್ತು ಅವುಗಳಿಂದ ದೂಷಿತವಾದ ದೂಷ್ಯಗಳೂ ಮತ್ತು ಸಾಮದೋಷ ದೂಷ್ಯಗಳಿಂದ ಉಂಟಾದ ರೋಗಗಳೂ ಸಾಮ ಎಂದು ಕರೆಯಲ್ಪಡುತ್ತವೆ.

ಟಿಪ್ಪಣಿ:— ಸಾಮ, ನಿರಾಮ ದೋಷಾದಿಗಳ ಲಕ್ಷಣಗಳನ್ನು ಸಂಗ್ರಹಕಾರರು ಹೇಳಿದ್ದಾರೆ.

ವಾಯುಃ ಸಾಮೋ ವಿಬಂಧಾಗ್ನಿಸಾದಸ್ತಂಭಾಂತ್ರಕೂಜನೈಃ ।
ವೇದನಾಶೋಥನಿಸ್ತೋದೈಃ ಕ್ರಮಶೋಽಂಗಾನಿ ಪೀಡಯನ್ ॥

ವಿಚರೇದ್ಯುಗಪಚ್ಚಾಪಿ ಗೃಹ್ಣಾತಿ ಕುಪಿತೋ ಭೃಶಮ್ ।
ಸ್ನೇಹಾದ್ಯೈರ್ವೃದ್ಧಿಮಾಯಾತಿ ಸೂರ್ಯಮೇಘೋದಯೇ ನಿಶಿ ॥

ನಿರಾಮೋ ವಿಶದೋ ರೂಕ್ಷೋ ನಿರ್ವಿಬಂಧೋಽಲ್ಪವೇದನಃ ।
ವಿಪರೀತಗುಣೈಃ ಶಾಂತಿಂ ಸ್ನಿಗ್ಧೈರ್ಯಾತಿ ವಿಶೇಷತಃ ॥

ದುರ್ಗಂಧಿ ಹರಿತಂ ಶ್ಯಾವಂ ಪಿತ್ತಮಮ್ಲಂ ಘನಂ ಗುರು ।
ಅಮ್ಲಿಕಾಕಂಠಹೃದ್ದಾಹಕರಂ ಸಾಮಂ ವಿನಿರ್ದಿಶೇತ್ ॥

ಆತಾಮ್ರಪೀತಮತ್ಯುಷ್ಣಂ ರಸೇ ಕಟುಕಮಸ್ಥಿರಮ್
ಪಕ್ವಂ ವಿಗಂಧಿ ವಿಜ್ಞೇಯಂ ರುಚಿವಹ್ನಿಬಲಪ್ರದಮ್ ॥

ಆವಿಲಸ್ತಂತುಲಃ ಸ್ತ್ಯಾನಃ ಕಂಠದೇಶೇಽವತಿಷ್ಠತೇ ॥
ಸಾಮೋ ಬಲಾಸೋ ದುರ್ಗಂಧಿಃ ಕ್ಷುದುದ್ಗಾರವಿಘಾತಕೃತ್ ॥

ಫೇನವಾನ್ಪಿಂಡಿತಃ ಪಾಂಡುರ್ನಿಃಸಾರೋಽಗಂಧ ಏವ ಚ ॥
ಪಕ್ವಃ ಸ ಏವ ವಿಜ್ಞೇಯಶ್ಛೇದವಾನ್ ವಕ್ತ್ರಶುದ್ಧಿದಃ ॥

ಸರ್ವದೇಹಪ್ರವಿಸೃತಾನ್ಸಾಮಾನ್ ದೋಷಾನ್ನ ನಿರ್ಹರೇತ್ ||
ಲೀನಾನ್ಧಾತುಷ್ವನುತ್ಕ್ಲಿಷ್ಟಾನ್ ಫಲಾದಾಮಾದ್ರಸಾನಿವ ||೨೭||
ಆಶ್ರಯಸ್ಯ ಹಿ ನಾಶಾಯ ತೇ ಸ್ಯುರ್ದುರ್ನಿರ್ಹರತ್ವತಃ ||

ಅರ್ಥ:— ಸರ್ವ ದೇಹಗಳಲ್ಲಿ ಪಸರಿಸಿದ್ದ, ಧಾತುಗಳಲ್ಲಿ ಸೇರಿದ್ದ, ಸ್ವಸ್ಥಾನದಿಂದ ಚಲಿತವಾಗದಿದ್ದ ಸಾಮ ದೋಷಗಳನ್ನು ತೆಗೆಯಬಾರದು. ಅಪಕ್ವ ಫಲದಿಂದ ರಸ ತೆಗೆಯ ಹೋದರೆ ಅದು ಹೊರಡದೆ ಫಲವು ಮಾತ್ರ ಹೇಗೆ ನಾಶವಾಗುವದೋ ಅದರಂತೆ ಸಾಮ ದೋಷಗಳು ಹೊರಡುವದು ಅಶಕ್ಯವಿದ್ದದರಿಂದ ಅವುಗಳ ನಾಶವಾಗದೇ ಅವುಗಳಿದ್ದ ಧಾತುಗಳ ನಾಶವು ಮಾತ್ರ ಆಗುವದು. (೨೮॥)

**ಪಾಚನೈರ್ದೀಪನೈಃ ಸ್ನೇಹೈಸ್ತಾನ್ಸ್ವೇದೈಶ್ಚ ಪರಿಷ್ಕೃತಾನ್ ॥೨೯॥**
**ಶೋಧಯೇಚ್ಛೋಧನೈಃ ಕಾಲೇ ಯಥಾಸನ್ನಂ ಯಥಾಬಲಮ್ ।**

ಅರ್ಥ:— ಪಾಚನ ದೀಪನಗಳಾದ ಸ್ನೇಹ ಸ್ವೇದಗಳಿಂದ ಅವಕ್ಕೆ ಸಂಸ್ಕಾರಮಾಡಿ ಅವುಗಳ ಬಲದ ವಿಚಾರಮಾಡಿ ಯೋಗ್ಯಕಾಲದಲ್ಲಿ ಸಮೀಪ ಮಾರ್ಗದಿಂದ ಶೋಧಿಸಬೇಕು. (೨೯॥)

**ಹಂತ್ಯಾಶು ಯುಕ್ತಂ ವಕ್ತ್ರೇಣ ದ್ರವ್ಯಮಾಮಾಶಯಾನ್ಮಲಾನ್ ॥೩೦॥**
**ಘ್ರಾಣೇನ ಚೋರ್ಧ್ವಜತ್ರೂತ್ಥಾನ್ ಪಕ್ವಾಧಾನಾದ್ಗುದೇನ ಚ ॥**

ಅರ್ಥ:— ಬಾಯಿಯಿಂದ ಕೊಟ್ಟ ಔಷಧವು ಆಮಾಶಯದಲ್ಲಿದ್ದ ಮಲಗಳನ್ನೂ, ಮೂಗಿನಿಂದ ಕೊಟ್ಟ ಔಷಧವು ಕಂಠದ ಮೇಲಿನ ದೋಷಗಳನ್ನೂ, ಗುದದಿಂದ ಕೊಟ್ಟ ಔಷಧವು ಪಕ್ವಾಶಯದ ದೋಷಗಳನ್ನೂ ಶೀಘ್ರ ಗೆಲ್ಲುವವು. (೩೦॥)

**ಉತ್ಕ್ಲಿಷ್ಟಾನಧ ಊರ್ಧ್ವಂ ವಾ ನ ಚಾಮಾನ್ವಹತಃ ಸ್ವಯಮ್ ॥೩೧॥**
**ಧಾರಯೇದೌಷಧೈರ್ದೋಷಾನ್, ವಿಧೃತಾಸ್ತೇ ಹಿ ರೋಗದಾಃ ॥**

**ಪ್ರವೃತ್ತಾನ್ಪ್ರಾಗತೋ ದೋಷಾನುಪೇಕ್ಷೇತ ಹಿತಾಶಿನಃ ॥೩೨॥**
**ವಿಬದ್ಧಾನ್ಪಾಚನೈಸ್ತೈಸ್ತೈಃ ಪಾಚಯೇನ್ನಿರ್ಹರೇತ ವಾ ॥**

ಅರ್ಥ:— ಸ್ಥಾನ ಬಿಟ್ಟು ಮೇಲೆ ಅಥವಾ ಕೆಳಗೆ ತಾವಾಗಿಯೇ ಹೊರ ಹೋಗಲೆತ್ನಿಸುವ ಸಾಮದೋಷಗಳನ್ನು ಔಷಧಗಳಿಂದ ಪ್ರತಿಬಂಧಿಸಬಾರದು.

ಯಾಕೆಂದರೆ ಹೀಗೆಮಾಡಿದರೆ ಅವು ಶರೀರದೊಳಗೆಯೇ ಪರರೋಗವನ್ನುಂಟು ಮಾಡುತ್ತವೆ. ಅದ್ದರಿಂದ ರೋಗಿಯನ್ನು ಪಥ್ಯದ ಮೇಲಿಟ್ಟು ಹೊರಗೆ ಬರುವ ಅವುಗಳನ್ನು ಮೊದಲು ಹೋಗಗೊಡಬೇಕು. ಅವು ಹೊರಗೆ ಹೋಗದಿದ್ದರೆ ಮಾತ್ರ ಅನೇಕ ಪಾಚಕ ಕ್ರಿಯೆಗಳಿಂದ ಅವನ್ನು ಪಕ್ವಮಾಡಬೇಕು. ಅಥವಾ ಶೋಧನ ಕೊಟ್ಟು ಹೊರಗೆ ಹಾಕಬೇಕು. (೩೨||)

**ಶ್ರಾವಣೇ ಕಾರ್ತಿಕೇ ಚೈತ್ರೇ ಮಾಸಿ ಸಾಧಾರಣೇ ಕ್ರಮಾತ್ ||೩೩||**
**ಗ್ರೀಷ್ಮವರ್ಷಾಹಿಮಚಿತಾನ್ ವಾಯ್ವಾದೀನಾಶು ನಿರ್ಹರೇತ್ ||**

ಅರ್ಥ:— ಗ್ರೀಷ್ಮ ಋತುವಿನಲ್ಲಿ ಸಂಚಿತವಾದ ವಾತವನ್ನು ಶ್ರಾವಣದಲ್ಲಿಯೂ, ವರ್ಷಾ ಋತುವಿನಲ್ಲಿ ಸಂಚಿತವಾದ ಪಿತ್ತವನ್ನು ಕಾರ್ತಿಕದಲ್ಲಿಯೂ, ಹೇಮಂತ ಶಿಶಿರದಲ್ಲಿ ಸಂಚಿತವಾದ ಕಫವನ್ನು ಚೈತ್ರದಲ್ಲಿಯೂ ಕಳೆಯಬೇಕು. ಯಾಕೆಂದರೆ ಈ ಮಾಸಗಳು ಸಾಧಾರಣ ಅಂದರೆ ಬಹಳ ಶೀತ ಅಥವಾ ಉಷ್ಣ ಅಥವಾ ಮಳೆಯುಳ್ಳವು ಇರುವದಿಲ್ಲ. (೩೩||)

**ಅತ್ಯುಷ್ಣವರ್ಷಶೀತಾ ಹಿ ಗ್ರೀಷ್ಮವರ್ಷಾಹಿಮಾಗಮಾಃ ||೩೪||**

**ಸಂಧೌ ಸಾಧಾರಣೇ ತೇಷಾಂ ದುಷ್ಟಾನ್ದೋಷಾನ್ವಿಶೋಧಯೇತ್ ||**
**ಸ್ವಸ್ಥವೃತ್ತಮಭಿಪ್ರೇತ್ಯ, ವ್ಯಾಧೌ ವ್ಯಾಧಿವಶೇನ ತು ||೩೫||**

ಅರ್ಥ:— ಗ್ರೀಷ್ಮ ವರ್ಷಾ ಹೇಮಂತ ಋತುಗಳು ಕ್ರಮವಾಗಿ ಅತ್ಯಂತ ಉಷ್ಣ ಮಳೆ ಶೀತವುಳ್ಳವು ಇರೋಣದರಿಂದ ಇವುಗಳ ಅತಿರೇಕ ವಿರದ ಈ ಸಂಧಿಕಾಲದಲ್ಲಿ ದುಷ್ಟದೋಷಗನ್ನು ಶೋಧಿಸಬೇಕು. ನಿರೋಗಿ ಮನುಷ್ಯನಿಗಾಗಿ ಈ ಕಾಲ ಹೇಳಿದ್ದು. ರೋಗವಿದ್ದರೆ ಕೂಡಲೇ ರೋಗವನ್ನು ಅನುಸರಿಸಿ ಶೋಧವನ್ನು ಮಾಡಬೇಕು. ( ಆ ಋತುಪಳನ್ನು ನಿರೀಕ್ಷಿಸುತ್ತ ಕೂಡ್ರಬಾರದು.) (೩೫

ಅಗ್ಗೆ ಶೀತ ಉಷ್ಣ ಮಳೆಗಳು ಹೆಚ್ಚಾಗಿದ್ದರೆ ಏನು ಮಾಡಬೇಕು? ಎಂಬ ಪ್ರಶ್ನಕ್ಕೆ ಉತ್ತರವನ್ನು ಹೇಳುತ್ತಾರೆ.

**ಕೃತ್ವಾ ಶೀತೋಷ್ಣವೃಷ್ಟೀನಾಂ ಪ್ರತೀಕಾರಂ ಯಥಾಯಥಮ್ ||**
**ಪ್ರಯೋಜಯೇತ್ಕ್ರಿಯಾಂ ಪ್ರಾಪ್ತಾಂ ಕ್ರಿಯಾಕಾಲಂ ನ**
**ಹಾಪಯೇತ್ ||೩೬||**

ಅರ್ಥ:— ಶೀತ, ಉಷ್ಣ, ಮಳೆಗಳ ಜೋರಿನ ಪ್ರಕೋಪವನ್ನು ಮಾಡಿ ಪ್ರಸ್ತುತವಾದ ಕಾರ್ಯವನ್ನು ಮಾಡಬೇಕೆಂದು ಹೇಳಿದೆ. ಚಿಕಿತ್ಸಾಕಾಲವನ್ನು ತಪ್ಪಿಸಬಾರದು. (೩೬)

ಔಷಧ ತಕ್ಕೊಳ್ಳುವ ಕಾಲಗಳನ್ನು ಹೇಳುತ್ತಾರೆ.

**ಯುಂಜ್ಯಾದನನ್ನಮನ್ನಾದೌ ಮಧ್ಯೇಽಂತೇ ಕವಲಾಂತರೇ ।**
**ಗ್ರಾಸೇ ಗ್ರಾಸೇ ಮುಹುಃ ಸಾನ್ನಂ ಸಾಮುದ್ಗಂ ನಿಶಿ ಚೌಷಧಮ್ ॥೩೭॥**

ಅರ್ಥ:—೧. ಊಟಕ್ಕಿಂತ ಮೊದಲೇ ಔಷಧವು ಪಚನವಾಗುವಂತೆ ೨. ಊಟಕ್ಕಿಂತ ಮೊದಲು, ೩. ಊಟದ ಮಧ್ಯದಲ್ಲಿ, ೪. ಊಟದ ನಂತರ, ೫. ತುತ್ತಿನ ನಡುವೆ, ೬. ತುತ್ತುತುತ್ತಿಗೆ, ೭. ಮೇಲಿಂದ ಮೇಲೆ,೮. ಅನ್ನದೊಳಗೆ ೯. ಊಟದ ಮೊದಲು ಮತ್ತು ಅನಂತರ, ೧೦. ರಾತ್ರಿಯಲ್ಲಿ, ಹೀಗೆ ಔಷಧ ತಕ್ಕೊಳ್ಳುವ ಕಾಲವು ೧೦ ಪ್ರಕಾರವಿದೆ. (೩೭)

**ಕಫೋದ್ರೇಕೇ ಗದೇಽನನ್ನಂ ಬಲಿನೋ ರೋಗರೋಗಿಣೋಃ ॥**

ಅರ್ಥ:— ರೋಗ ಮತ್ತು ರೋಗಿಯು ಬಲಿಷ್ಠರಿದ್ದು ಕಫಾಧಿಕ್ಯವಿರಲು ಹಸಿದ ಹೊಟ್ಟೆಯಲ್ಲಿ ಔಷಧ ಕೊಡಬೇಕು (೩೭|)

**ಅನ್ನಾದೌ ವಿಗುಣೇಽಪಾನೇ..................................**

ಅರ್ಥ:— ಅಪಾನವಾಯು ಕುಪಿತವಾಗಿರಲು ಊಟಕ್ಕೆ ಕೂಡ್ರುವಾಗ ಕೊಡಬೇಕು. (೩೭||)

**............ ...................ಸಮಾನೇ ಮಧ್ಯ ಇಷ್ಯತೇ ॥೩೮॥**

ಅರ್ಥ:— ಸಮಾನವಾಯುವು ಕುಪಿತವಾಗಿದ್ದರೆ ಊಟದ ನಡುವೆ ಕೊಡಬೇಕು. (೩೮)

**ವ್ಯಾನೇಽಂತೇ ಪ್ರಾತರಾಶಸ್ಯ.................................. ....**

ಅರ್ಥ:— ವ್ಯಾನವಾಯುವು ಕುಪಿತವಾಗಿದ್ದರೆ ಮುಂಜಾವಿನ ಊಟದ ನಂತರ ಕೊಡಬೇಕು. (೩೮।)

.ಸಾಯಮಾಶಸ್ಯ ಚೋತ್ತರೇ

ಅರ್ಥ:— ಉದಾನವಾಯುವಿನ ಕೋಪವಿದ್ದರೆ ರಾತ್ರಿ ಊಟದ ನಂತರ ಕೊಡಬೇಕು. (೩೮। )

**ಗ್ರಾಸಗ್ರಾಸಾಂತಯೋಃ ಪ್ರಾಣೇ ಪ್ರದುಷ್ಟೇ ಮಾತರಿಶ್ವನಿ ||೩೯||**

ಅರ್ಥ:— ಪ್ರಾಣವಾಯುವು ಕುಪಿತವಾಗಿದ್ದರೆ ಪ್ರತಿ ತುತ್ತಿನ ನಂತರ ಕೊಡಬೇಕು. (೩೯)

**ಮುಹುರ್ಮುಹುರ್ವಿಷಚ್ಛರ್ದಿಹಿಧ್ಮಾತೃಟ್‌ಶ್ವಾಸಕಾಸಿಷು ||**

ಅರ್ಥ:— ವಿಷ ವಾಂತಿ ಬಿಕ್ಕು ನೀರಡಿಕೆ ದಮ್ಮು ಕೆಮ್ಮುಗಳಲ್ಲಿ ಆಗಾಗ್ಗೆ ಔಷಧ ಕೊಡಬೇಕು. (೩೯।।)

**ಯೋಜ್ಯಂ ಸಭೋಜ್ಯಂ ಭೈಷಜ್ಯಂ ಭೋಜ್ಯೈಶ್ಚಿತ್ರೈರರೋಚಕೇ ||೪೦||**

ಅರ್ಥ:— ಅರುಚಿಯಲ್ಲಿ ತರತರದ ತಿಂಡಿಗಳೊಡನೆ ಮಿಶ್ರಮಾಡಿ ಔಷಧ ಕೊಡಬೇಕು.

**ಕಂಪಾಕ್ಷೇಪಕಹಿಧ್ಮಾಸು ಸಾಮುದ್ಗಂ ಲಘುಭೋಜಿನಾಮ್ ||**

ಅರ್ಥ— ಕಂಪ, ಆಕ್ಷೇಪಕ, ಬಿಕ್ಕುಗಳಲ್ಲಿ ಲಘುಭೋಜನ ಮಾಡು-ತ್ತಿರುವವರಿಗೆ ... ಸುತ್ತ ಊಟದ ಮೊದಲು ಮತ್ತು ಊಟವಾದ ಮೇಲೆ ಕೊಡಬೇಕು(೪೦।।)

**ಊರ್ಧ್ವಜತ್ರುವಿಕಾರೇಷು ಸ್ವಪ್ನಕಾಲೇ ಪ್ರಶಸ್ಯತೇ ||೪೧||**

ಅರ್ಥ:— ಕುತ್ತಿಗೆಯ ಮೇಲಿನ ವಿಕಾರಗಳಲ್ಲಿ ರಾತ್ರಿ ಮಲಗುವ ಕಾಲಕ್ಕೆ ಔಷಧ ಕೊಡಬೇಕು.

ಟಿಪ್ಪಣೀ:— ಸಂಗ್ರಹದಲ್ಲಿ ಚಿಕಿತ್ಸೆಯ ವಿಷಯವಾಗಿ ಹೇಳಿದ ಕೆಲವು ಮಹತ್ವದ ವಿಷಯಗಳನ್ನು ಇಲ್ಲಿ ಹೇಳುವೆವು.

ಮೊದಲು ರೋಗವನ್ನು ಪರೀಕ್ಷಿಸಿ ಅದಕ್ಕೆ ಔಷಧವನ್ನು ಆಲೋಚಿಸಿ ವೈದ್ಯನು ಚಿಕಿತ್ಸೆಮಾಡಬೇಕು. ಬೆಂಕಿಯ ಕಿಡಿಯು ಸ್ವಲ್ಪವೇ ಉಳಿದರೂ ಅದು ಹೇಗೆ ಪುನಃ ಹೆಚ್ಚಾಗುವದೋ ಅದರಂತೆ ಬೇನೆಯ ಶೇಷವು ಮುಂದೆ ಹೆಚ್ಚಾಗುವದು. ಕಾರಣ ಬೇನೆಯನ್ನು ನಿಶ್ಶೇಷಮಾಡಬೇಕು. ಒಂದೇ ಸವನೇ ಅದೇ ಪಥ್ಯವನ್ನು ಮಾಡ್ರುವದರಿಂದ ಹೇಸಿಕೆಯಾಗುವದು. ಆದ್ದರಿಂದ ಅವನ್ನೇ ಬೇರೆ ಬೇರೆ ಪದಾರ್ಥಗಳಾಗಿ ಉಪಯೋಗಿಸಬೇಕು. ಏಳು ದಿವಸಗಳಲ್ಲಿ ಗುಣ ತೋರದೆ ಇದ್ದರೆ ಬೇರೆ ಔಷಧ ಉಪಯೋಗಿಸಬೇಕು. ಯಾವನು ಯಾವ ದೇಶದವನೋ ಅಲ್ಲಿಯ ಔಷಧವೇ ಅವನಿಗೆ ಹಿತವು. ತನ್ನ ವೀರ್ಯರಸಗಂಧದಿಂದ ತುಂಬಿದ ಔಷಧವು ಯೋಗ್ಯ ಕಾಲದಲ್ಲಿ ಏಕಾಗ್ರತೆಯಿಂದ ತಕ್ಕೊಂಡರೆ ಅಮೃತವಾಗುವದು.

ಔಷಧವನ್ನು ಕೊಡುವ ಮೊದಲು ರೋಗಿಗಳು ಎಲ್ಲಿ ಹುಟ್ಟಿದವರು ? ಎಲ್ಲಿ ಬೆಳೆದವರು? ಆ ದೇಶದಲ್ಲಿಯ ಮನುಷ್ಯರ ಆಹಾರ ಎಂತಹದು? ಅವರಿಗೆ ಎಷ್ಟು ಶಕ್ತಿ? ಎಷ್ಟು ಸತ್ವ (ಸಹನ)? ಯಾವದು ಸಾತ್ಮ್ಯ? ಎಂಥ ವ್ಯಾಧಿಗಳು ಅವರಿಗೆ ಬರುವವು? ಹಿತ ಯಾವದು? ಅಹಿತವಾವದು? ಎಂಬುದನ್ನು ತಿಳಿದುಕೊಳ್ಳಬೇಕು. ಯಾವ ಕಾರಣದಿಂದ ಇವರಿಗೆ ರೋಗ ಉಂಟಾಗಿದೆ ಎಂಬುದನ್ನು ಲಕ್ಷಣ ಕೃತಿ ಮತ್ತು ಬುದ್ಧಿಯಿಂದ ತಿಳಿದುಕೊಳ್ಳಬೇಕು. ರುಕ್ಷಶೀತ ಆಹಾರದಿಂದ ಆಗಿದೆ ಅಥವಾ ಸಾಹಸ ವೇಗರೋಧ ಭಯ ಶೋಕಗಳಿಂದ ಆಗಿದೆ? ಎಂಬುದನ್ನು ಕಂಡುಹಿಡಿದು ಅದರ ವಿರುದ್ಧವಾದ ಔಷಧವನ್ನು ಕೊಟ್ಟರೆ ಶೀಘ್ರ ವಾಸಿಯಾಗುವದು. ರೋಗದಲ್ಲಿಯ ದೋಷದ ಬಲವನ್ನು ತಿಳಕೊಂಡು ಅದಕ್ಕೆ ಪ್ರತಿಕಾರಮಾಡಬೇಕು. ಅನೇಕದೋಷಗಳುಳ್ಳ ರೋಗದಲ್ಲಿ ದೋಷಗಳ ಬಲಗಳನ್ನೂ, ಅನೇಕ ರಸದ ಔಷಧಗಳಲ್ಲಿ ರಸಗಳ ಪ್ರಭಾವಗಳನ್ನೂ ಬೇರೆ ಬೇರೆಯಾಗಿ ವಿಚಾರಿಸಿ ಪ್ರತಿಕಾರವನ್ನು ನಿಶ್ಚಯಿಸಬೇಕು. ಆದರೆ ವಿಕೃತಸಮಸಮವೇತವ್ಯಾಧಿಗಳಲ್ಲಿ ಅವಯವಪ್ರಭಾವದ ಜ್ಞಾನದಿಂದ ಸಮುದಾಯಪ್ರಭಾವದ ತತ್ವವು ತಿಳಿಯಲಾಗದು. ಅಲ್ಲಿ ಸಮುದಾಯ ಪ್ರಭಾವವನ್ನು ನೋಡಿಯೇ ಔಷಧ ಯೋಜನೆ ಮಾಡಬೇಕು. ಬೇನೆಯು ಯಾವ ಸ್ಥಳದಲ್ಲಿದೆ ಎಂಬುದನ್ನು ನೋಡಬೇಕು. ಅದಕ್ಕೆ ತಕ್ಕ ಔಷಧ ಆಲೋಚಿಸಬೇಕು. ಆ ಔಷಧವು ದೋಷಾನುರೂಪವಾಗಿರಬೇಕಷ್ಟೇ ಅಲ್ಲದೆ ಬೇನೆಯ ಮತ್ತು ಬೇನೆಯವನ ಬಲಕ್ಕೆ ಅನುಗುಣವಾದ ವೀರ್ಯ ಪ್ರಮಾಣದ್ದೂ ಆಗಿರಬೇಕು. ಹೆಚ್ಚು ವೀರ್ಯ ಪ್ರಮಾಣಗಳ ಔಷಧಗಳು ದುರ್ಬಲರಿಗೂ – ವಿಶೇಷವಾಗಿ ಹೆಂಗಸರಿಗೂ ಹುಡುಗರಿಗೂ ಅಪಾಯವನ್ನುಂಟುಮಾಡುವವು. ಇದರಂತೆ ಬಲಿಷ್ಠರಲ್ಲಿ ಅಥವಾ ಬಲಿಷ್ಠ ಬೇನೆಯಲ್ಲಿ ಕೊಟ್ಟ ಅಲ್ಪ ವೀರ್ಯದ ಅಥವಾ ಅಲ್ಪ ಪ್ರಮಾಣದ ಔಷಧವು ದೋಷವನ್ನು ಉತ್ಕ್ಲೇಶಮಾಡಿ ಬೇನೆಯನ್ನು ಹೆಚ್ಚಿಸುವದು.

ಔಷಧವನ್ನು ಕೂಡ ಪರೀಕ್ಷಿಸಬೇಕು. ಅಂದರೆ ಅದರ ರಸ ವೀರ್ಯ ವಿಪಾಕ ಕರ್ಮ ಪ್ರಭಾವಗಳನ್ನು ನೋಡಬೇಕು. ಇದು ಇಂಥ ದೇಶಗಳಲ್ಲಿ

ಇಂಥ ಋತುವಿನಲ್ಲಿ ಈ ಪ್ರಕಾರ ತಕೊಳ್ಳಲ್ಪಟ್ಟಿದೆ. ಈ ಪ್ರಕಾರ ತಯಾರಿಸಲ್ಪಟ್ಟಿದೆ, ಇಂಥ ಸಂಸ್ಕಾರ ಕೊಟ್ಟಿದೆ, ಇಂಥದರೊಡನೆ ಕೂಡಿಸಿದೆ, ಇಷ್ಟು ಪ್ರಮಾಣದಲ್ಲಿ ಇಂಥ ಮನುಷ್ಯನಿಗೆ ಇಷ್ಟು ಕಾಲದಲ್ಲಿ ಕೊಟ್ಟರೆ ಇಷ್ಟು ದೋಷವನ್ನು ಕಳೆಯುವದು. ಅಥವಾ ಶಮನ ಮಾಡುವದು ಎಂಬುದನ್ನು ವಿಚಾರಮಾಡಬೇಕು ದೋಷ, ಔಷಧ, ದೂಷ್ಯ, ದೇಶ, ಕಾಲ, ಬಲ, ಅಗ್ನಿ, ಆಹಾರ, ಸಾತ್ಮ್ಯ, ಸತ್ವ, ಪ್ರಕೃತಿ, ವಯಸ್ಸುಗಳ ಅವಸ್ಥೆಗಳು ಬಹಳ ಸೂಕ್ಷ್ಮವಾಗಿರುವವು. ಬುದ್ಧಿವಂತರೂ ಕೂಡ ಆಲೋಚಿಸದೆ ಚಿಕಿತ್ಸೆಮಾಡಿದರೆ ರೋಗಿಯು ಸಾಯುವನು. ಕಾರಣ ಶಾಸ್ತ್ರದ ಅರ್ಥ ಮತ್ತು ಚಿಕಿತ್ಸೆಗಳನ್ನು ಮನನ ಮಾಡುತ್ತ ಬುದ್ಧಿಯನ್ನು ತೀಕ್ಷ್ಣ ಮಾಡಬೇಕು. ಶಾಸ್ತ್ರದಲ್ಲಿ ಹೇಳಿದ ಬೇನೆಗಳ ಉತ್ಸರ್ಗ ಮತ್ತು ಅಪವಾದಗಳನ್ನು ಬುದ್ಧಿಯಿಂದ ಆಲೋಚಿಸಿ ನಿಶ್ಚಯಿಸಬೇಕು.

ಕಾಲದ ವಿಚಾರವೂ ಚಿಕಿತ್ಸೆಗೆ ಅವಶ್ಯಕವಾಗಿದೆ. ಇಂಥ ಕಾಲ (ಶೀತೋಷ್ಣ, ಮುಂಜಾನೆ ಇತ್ಯಾದಿ) ಗಳಲ್ಲಿ ಇಂಥ ರೋಗಕ್ಕೆ ಇಂಥ ಶೋಧನ ಕೊಡಬೇಕ. ಮುಂತಾದ ವಿಧಿಗಳಿರುವವು.

ಔಷಧದ ಭೇದಗಳನ್ನೂ ಆಲೋಚಿಸಬೇಕು. ಊರ್ಜಸ್ಕರ ಮತ್ತು ರೋಗಘ್ನವೆಂದು ಔಷಧದಲ್ಲಿ ಮೊದಲು ಎರಡು ಮುಖ್ಯ ಪ್ರಕಾರಗಳು. ಉಭಯವೂ ಉಭಯಾತ್ಮಕವಿದ್ದರೂ ಆಯಾ ಗುಣದ ಬಾಹುಲ್ಯದಿಂದ ಹೀಗೆ ಕರೆಯುವರು.




**ರೋಗಘ್ನ** ಔಷಧವು ದ್ರವ್ಯ ಅದ್ರವ್ಯವೆಂದು ಪುನಃ ಎರಡು ಪ್ರಕಾರ. ದ್ರವ್ಯವು ಭೂಮಿಜ (ಬಂಗಾರ ಮುಂತಾದ ಖನಿಜಗಳು), ಉದ್ಭಿಜ್ಜ (ವನಸ್ಪತಿ), ಪ್ರಾಣಿಜ (ಮಧು ಘೃತ ಮುಂತಾದವುಗಳು) ಎಂದು ಮೂರು ಪ್ರಕಾರಗಳು. ಅದ್ರವ್ಯವು= ಉಪವಾಸ, ಗಾಳಿ, ಮುಂತಾದವು. ಔಷಧವು ದೈವವ್ಯಪಾಶ್ರಯ (ಮಂತ್ರ, ಬಲಿ, ಮಣಿ ಮುಂತಾದವು) ಯುಕ್ತಿ ವ್ಯಪಾಶ್ರಯ (ಆಹಾರ ಔಷಧ ಮುಂತಾದವು), ಸತ್ವಾವಜಯ (ಮನೋನಿಗ್ರಹ) ಎಂದು ಪುನಃ ಮೂರು ಪ್ರಕಾರ. ಪುನಃ ಅಪಕರ್ಷಣ (ತೆಗೆದು ಹಾಕುವದು) ಪ್ರಕೃತಿವಿಘಾತ (ಶಮನ), ನಿದಾನತ್ಯಾಗ ಎಂದು ಮೂರು ಪ್ರಕಾರ.

೧. ಹೇತು ವಿಪರೀತ, ೨. ವ್ಯಾಧಿವಿಪರೀತ, ೩. ಉಭಯಾರ್ಥಕಾರಿ ಎಂದು ಪುನಸ್ಟ ಮೂರು ಪ್ರಕಾರ.

ಅಪಥ್ಯವು— ೧. ಬಾಧಕ ( ಸದ್ಯಃ ಪ್ರಾಣಹರ ), ೨. ಅನುಬಾಧಕ ( ಕಾಲಾಂತರದಲ್ಲಿ ಪ್ರಾಣಹರ ) ಎಂದು ಎರಡು ವಿಧ.

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ದೋಷೋಪಕ್ರಮಣೀಯೋ ನಾಮ ತ್ರಯೋದಶೋಽಧ್ಯಾಯಃ ಸಮಾಪ್ತಃ**

ಇತಿ ಶ್ರೀ ವಿದ್ವಾಂಸ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಅಪ್ಪ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಟೀಕೆಯಲ್ಲಿ ಸೂತ್ರಸ್ಥಾನದಲ್ಲಿಯ **ದೋಷೋಪಕ್ರಮಣೀಯ**ವೆಂಬ ೧೩ನೆಯ ಅಧ್ಯಾಯವು ಮುಗಿದುದು.



# ೧೪ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ ದೋಷಗಳ ಉಪಕ್ರಮವನ್ನು* ಸಾಮಾನ್ಯವಾಗಿ ಹೇಳಿ ಈ ಅಧ್ಯಾಯದಲ್ಲಿ ಅದರ ಮುಖ್ಯವಾದ ಎರಡು ಭೇದಗಳನ್ನು ಹೇಳುತ್ತಾರೆ,

**ಅಥಾತೋ ದ್ವಿವಿಧೋಪಕ್ರಮಣೀಯಮಧ್ಯಾಯಂ ವ್ಯಾಖ್ಯಾಸ್ಯಾಮಃ|**

ಅರ್ಥ:— ಇನ್ನು ಎರಡು ತರಹದ ಚಿಕಿತ್ಸೆಯ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ |**

ಅರ್ಥ:— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಉಪಕ್ರಮ್ಯಸ್ಯ ಹಿ ದ್ವಿತ್ವಾದ್ದ್ವಿಧೈವೋಪಕ್ರಮೋ ಮತಃ |**
**ಏಕಃ ಸಂತರ್ಪಣಸ್ತತ್ರ ದ್ವಿತೀಯಶ್ಚಾಪತರ್ಪಣಃ** ||೧||

**ಬೃಂಹಣೋ ಲಂಘನಶ್ಚೇತಿ ತತ್ಪರ್ಯಾಯಾವುದಾಹೃತೌ ||**

ಅರ್ಥ:— ಚಿಕಿತ್ಸೆಗೆ ಅರ್ಹವಾದ ರೋಗಿಯಲ್ಲಿ ಎರಡು ಪ್ರಕಾರ ವಿರುವದರಿಂದ ಚಿಕಿತ್ಸೆಯೂ ಎರಡು ಪ್ರಕಾರದ್ದು ಇರುತ್ತದೆ. ಒಂದು ಸಂತರ್ಪಣ ಇನ್ನೊಂದು ಅಪತರ್ಪಣ. ಅದಕ್ಕೆ ಕ್ರಮವಾಗಿ ಬೃಂಹಣ, ಲಂಘನವೆಂಬ ಬೇರೆ ಹೆಸರುಗಳುಂಟು. (೧)

**ಬೃಂಹಣಂ ಯದ್ಬೃಹತ್ವಾಯ ಲಂಘನಂ ಲಾಘವಾಯಯತ್ ||೨||**
**ದೇಹಸ್ಯ**

ಅರ್ಥ:— ಯಾವುದು ಶರೀರದ ಪುಷ್ಟಿಯನ್ನು ಉಂಟು ಮಾಡುವದೋ ಅದು ಬೃಂಹಣ, ಯಾವುದು ಕಾರ್ಶ್ಯವನ್ನುಂಟುಮಾಡುವದೋ ಅದು ಲಂಘನ. (೨)

---

* ದ್ವಿವಿಧೋಪಕ್ರಮಣವು ಚರಕದ ಸೂ. ೨೧-೨೨-೨೩ನೇ, ಸುಶ್ರುತದ ಸೂ. ೧೫ನೇ ಚಿ. ೧ನೇ, ಉ. ೩೯ನೇ, ಅಷ್ಟಾಂಗ ಸಂಗ್ರಹದ ಸೂ. ೨೪ನೇ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ.

**....................ಭವತಃ ಪ್ರಾಯೋ ಭೌಮಾಪಮಿತರಚ್ಚ ತೇ ।**

ಅರ್ಥ:— ಬಹಳ ಮಾಡಿ ಬೃಂಹಣವು ಪೃಥ್ವೀಜಲಾತ್ಮಕವೂ ಲಂಘನವು ಅಗ್ನಿವಾಯ್ವಾಕಾಶಾತ್ಮಕವೂ ಇರುತ್ತದೆ.

**ಟಿಪ್ಪಣಿ:**— ಮುಳ್ಳು ಜಬಿ ಮುಂತಾದವು ಭೂಮಿಜಲಪ್ರಧಾನವಾಗಿದ್ದರೂ ಲಂಘನವಾಗಿವೆ. ಶುಂಠಿ ಹಿಪ್ಪಲಿಗಳು ಅಗ್ನಿ ವಾಯು ಆಕಾಶ ಪ್ರಧಾನವಾಗಿದ್ದರೂ ಬೃಂಹಣವಾಗಿವೆ. ಆದ್ದರಿಂದ ಇಲ್ಲಿ ‘ಬಹಳ ಮಾಡಿ’ ಎಂದು ಹೇಳಿದೆ.

**ಸ್ನೇಹನಂ ರೂಕ್ಷಣಂ ಕರ್ಮ ಸ್ವೇದನಂ ಸ್ತಂಭನಂ ಚ ಯತ್ ॥೩॥**
**ಭೂತಾನಾಂ ತದಪಿ ದ್ವೈಧ್ಯಾದ್ದ್ವಿತಯಂ ನಾತಿವರ್ತತೇ ॥**

ಅರ್ಥ:— ಸ್ನೇಹನ, ರೂಕ್ಷಣ, ಸ್ವೇದನ ಮತ್ತು ಸ್ತಂಭನಗಳು ಕೂಡ ಇವೆರಡರಲ್ಲಿಯೇ ಬರುತ್ತವೆ. ಯಾಕೆಂದರೆ ಪಂಚಮಹಾಭೂತಗಳಲ್ಲಿ ಈ ಎರಡೇ ಪ್ರಕಾರ ಇರುತ್ತವೆ. (೩)

**ಶೋಧನಂ ಶಮನಂ ಚೇತಿ ದ್ವಿಧಾ ತತ್ರಾಪಿ ಲಂಘನಮ್ ॥೪॥**

ಅರ್ಥ:— ಅದರಲ್ಲಿಯೂ ಲಂಘನದಲ್ಲಿ ಶೋಧನ, ಶಮನ ಎಂಬ ಎರಡು ಪ್ರಕಾರ ಇರುವವು.

**ಯದೀರಯೇದ್ಬಹಿರ್ದೋಷಾನ್ ಪಂಚಧಾ ಶೋಧನಂ ಚ ತತ್ ॥**
**ನಿರೂಹೋ ವಮನಂ ಕಾಯಶಿರೋರೇಕೋಽಸ್ರವಿಸ್ರುತಿಃ ॥೫॥**

ಅರ್ಥ:— ದೋಷಗಳನ್ನು ಹೊರಗೆ ಹಾಕುವದು ಶೋಧನವು. ಅದು (ಶೋಧನವು) ನಿರೂಹ (ಬಸ್ತಿ), ವಾಂತಿ, ರೇಚನ, ಶಿರೋವಿರೇಚನ (ನಸ್ಯ), ರಕ್ತಸ್ರಾವ ಎಂದು ಐದು ಪ್ರಕಾರವು. (೫)

**ನ ಶೋಧಯತಿ ಯದ್ದೋಷಾನ್ ಸಮಾನ್ನೋದೀರಯತ್ಯಪಿ ॥**

**ಸಮೀಕರೋತಿ ವಿಷಮಾನ್ ಶಮನಂ, ತಚ್ಚ ಸಪ್ತಧಾ ॥೬॥**

**ಪಾಚನಂ ದೀಪನಂ ಕ್ಷುತ್ತೃಡ್ವ್ಯಾಯಾಮಾತಪಮಾರುತಾಃ ॥**

ಅರ್ಥ:— ಯಾವದು ದೋಷಗಳನ್ನು ಹೊರಗೆಡುವದಿಲ್ಲ, ಸಮವಾದವುಗಳನ್ನು ಹೆಚ್ಚಿಸುವದಿಲ್ಲ, ಆದರೆ ವಿಷಮ ಇದ್ದವುಗಳನ್ನು ಮಾತ್ರ ಸಮಮಾಡುತ್ತದೆ, ಅದು ಶಮನವು. ಇದರಲ್ಲಿ ಪಾಚನ, ದೀಪನ, ಕ್ಷುಧಾನಿಗ್ರಹ, ತೃಷಾ ನಿಗ್ರಹ, ವ್ಯಾಯಾಮ, ಬಿಸಿಲು ಕಾಸೋಣ, ವಾಯು ಸೇವಿಸೋಣ ಎಂದು ಏಳು ಪ್ರಕಾರಗಳು ಉಂಟು. (೬॥)

**ಬೃಂಹಣಂ ಶಮನಂ ತ್ವೇವ ವಾಯೋಃ ಪಿತ್ತಾನಿಲಸ್ಯ ಚ ॥೭॥**

ಅರ್ಥ.— ವಾತಕ್ಕೂ ವಾತಪಿತ್ತಕ್ಕೂ ಬೃಂಹಣವೇ ಶಮನವು. (೭)

**ಬೃಂಹಯೇದ್ವ್ಯಾಧಿಭೈಷಜ್ಯಮದ್ಯಸ್ತ್ರೀಶೋಕಕರ್ಶಿತಾನ್ ॥**
**ಭಾರಾಧ್ವೋರಃಕ್ಷತಕ್ಷೀಣರೂಕ್ಷದುರ್ಬಲವಾತಲಾನ್ ॥ ॥೮॥**

**ಗರ್ಭಿಣೀಸೂತಿಕಾಬಾಲವೃದ್ಧಾನ್ ಗ್ರೀಷ್ಮೇಽಪರಾನಪಿ ॥**
**ಮಾಂಸಕ್ಷೀರಸಿತಾಸರ್ಪಿರ್ಮಧುರಸ್ನಿಗ್ಧಬಸ್ತಿಭಿಃ ॥ ॥೯॥**
**ಸ್ವಪ್ನಶಯ್ಯಾಸುಖಾಭ್ಯಂಗಸ್ನಾನನಿರ್ವೃತಿಹರ್ಷಣೈಃ ॥**

ಅರ್ಥ:— ಬೇನೆ ಔಷಧ ಮದ್ಯ ಸ್ತ್ರೀಸಂಗ ದುಃಖಗಳಿಂದ ಕೃಶರಾದವರನ್ನೂ, ಭಾರ ಹಾದಿ-ನಡೆಯೋಣ ಉರಃಕ್ಷತಗಳಿಂದ ಕ್ಷೀಣರಾದವರನ್ನೂ, ರುಕ್ಷ ಅಶಕ್ತ ವಾತ ರೋಗಿಗಳನ್ನೂ ಗರ್ಭಿಣಿ ಬಾಣಂತೀ ಹುಡುಗ ಮುದುಕರನ್ನೂ ಯಾವಾಗಲೂ, ಗ್ರೀಷ್ಮಕಾಲದಲ್ಲಿ ಉಳಿದ ಬೇನೆಯವರನ್ನೂ ಸಹ ಮಾಂಸ ಹಾಲು, ಸಕ್ಕರೆ, ತುಪ್ಪ, ಮಧುರ ಮತ್ತು ಸ್ನಿಗ್ಧವಾದ ಬಸ್ತಿ, ನಿದ್ರೆ, ಹಾಸಿಗೆಯ ಮೇಲೆ ಆರಾಮ ಮಲಗೋಣ,ಅಭ್ಯಂಗ,ಸ್ನಾನ, ಮನಸ್ಸಿನ ಸ್ವಾಸ್ಥ್ಯ ಮತ್ತು ಮನೋರಂಜನಗಳಿಂದ ಬೃಂಹಣಮಾಡಬೇಕು. (೯॥)

**ಮೇಹಾಮದೋಷಾತಿಸ್ನಿಗ್ಧಜ್ವರೋರುಸ್ತಂಭಕುಷ್ಠಿನಃ ॥೧೦॥**

**ವಿಸರ್ಪವಿದ್ರಧಿಪ್ಲೀಹಶಿರಃಕಂಠಾಕ್ಷಿರೋಗಿಣಃ ॥**
**ಸ್ಥೂಲಾಂಶ್ಚ ಲಂಘಯೇನ್ನಿತ್ಯಂ ಶಿಶಿರೇ ತ್ವಪರಾನಪಿ ॥೧೧॥**

ಅರ್ಥ:— ಮೇಹ ಆಮದೋಷ ಅತಿಸ್ನಿಗ್ಧತೆ ಜ್ವರ ಊರುಸ್ತಂಭ ಕುಷ್ಠ ವಿಸರ್ಪ ವಿದ್ರಧಿ ಪ್ಲೀಹೆ (ನೀರುಬಿಲ್ಲೆ) ಶಿರೋರೋಗ ಕಂಠರೋಗ

ನೇತ್ರರೋಗವುಳ್ಳವರನ್ನು ಮತ್ತು ಸ್ಥೂಲರನ್ನು ಮೊದಲಾಗಿ ಇತರ ರೋಗಿಗಳನ್ನು ಶಿಶಿರ ಹೇಮಂತಋತುಗಳಲ್ಲಿಯೂ ಲಂಘನಮಾಡಿಸಬೇಕು. (೧೧)

**ತತ್ರ ಸಂಶೋಧನೈಃ ಸ್ಥೌಲ್ಯಬಲಪಿತ್ತಕಫಾಧಿಕಾನ್**
**ಆಮದೋಷಜ್ವರಚ್ಛರ್ದಿರತೀಸಾರಹೃದಾಮಯೈಃ** ॥೧೨॥

**ವಿಬಂಧಗೌರವೋದ್ಗಾರಹೃಲ್ಲಾಸಾದಿಭಿರಾತುರಾನ್ ।**

ಅರ್ಥ:— ಲಂಘನ-ಯೋಗ್ಯರಲ್ಲಿಯೂ, ಯಾರಲ್ಲಿ ಸ್ಥೂಲತೆ, ಬಲ, ಪಿತ್ತ, ಕಫಗಳು ಹೆಚ್ಚಾಗಿ ಇದ್ದು ಅವರಿಗೆ ಆಮದೋಷ, ಜ್ವರ, ವಾಂತಿ, ಅತಿಸಾರ, ಹೃದ್ರೋಗ, ಮಲಬಂಧ, ಜಡತ್ವ, ತೇಗು, ಮಳಮಳಿಸುವದು ಮುಂತಾದ ವಿಕಾರಗಳು ಇದ್ದರೆ ಶೋಧನದಿಂದ ಲಂಘನ ಮಾಡಿಸಬೇಕು. (೧೨)

**ಮಧ್ಯಸ್ಥೌಲ್ಯಾದಿಕಾನ್ ಪ್ರಾಯಃ ಪೂರ್ವಂ ಪಾಚನದೀಪನೈಃ** ॥೧೩॥

ಅರ್ಥ:— ಯಾರಲ್ಲಿ ಸ್ಥೂಲತೆ ಮುಂತಾದ ಮೇಲೆ ಹೇಳಿದ ಗುಣಗಳು ಮಧ್ಯಮ ಪ್ರಮಾಣದಲ್ಲಿದ್ದು ಮೇಲೆ ಹೇಳಿದ ಆಮದೋಷ ಮುಂತಾದ ವಿಕಾರಗಳಿದ್ದರೆ ಬಹಳಮಾಡಿ ಮೊದಲು ಪಾಚನ, ದೀಪನ, ಔಷಧಗಳಿಂದ ಲಂಘನ ಮಾಡಿಸಬೇಕು. (೧೩)

**ಏಭಿರೇವಾಮಯೈರಾರ್ತಾನ್ ಹೀನಸ್ಥೌಲ್ಯಬಲಾದಿಕಾನ್ ॥**
**ಕ್ಷುತ್ತೃಷ್ಣಾನಿಗ್ರಹೈರ್ದೋಷೈಸ್ತ್ವಾರ್ತಾನ್ ಮಧ್ಯಬಲೈರ್ದೃಢಾನ್** (೧೪)
**ಸಮೀರಣಾತಪಾಯಾಸೈಃ ಕಿಮುತಾಲ್ಪಬಲೈರ್ನರಾನ್ ॥**

ಅರ್ಥ:— ಈ ಸ್ಥೌಲ್ಯ ಮುಂತಾದವುಗಳು ಅಲ್ಪ ಪ್ರಮಾಣದಲ್ಲಿ ಇದ್ದು ಮೇಲಿನ ವಿಕಾರಗಳು ಇದ್ದರೆ ಹಸಿವೆ ನೀರಡಿಕೆಗಳ ನಿಗ್ರಹದಿಂದ ಲಂಘನ ಮಾಡಿಸಬೇಕು. ರೋಗಿಯು ಸಶಕ್ತನಿದ್ದು ವಿಕಾರಗಳ ಬಲವು ಮಧ್ಯವಾಗಿದ್ದರೆ ಗಾಳಿ ಬಿಸಿಲು ವ್ಯಾಯಾಮಗಳಿಂದ ಲಂಘನ ಮಾಡಿಸಬೇಕು. ಹೀಗಿದ್ದ ಮೇಲೆ ವಿಕಾರಗಳು ದುರ್ಬಲವಾಗಿದ್ದರೆ ಇವುಗಳಿಂದ ಲಂಘನ ಮಾಡಿಸಬೇಕೆಂದು ಬೇರೆ ಹೇಳಬೇಕಾಗಿಲ್ಲ. (೧೪॥)

**ನ ಬೃಂಹಯೇಲ್ಲಂಘನೀಯಾನ್**..............................

ಅರ್ಥ:— ಲಂಘನಕ್ಕೆ ಯೋಗ್ಯರಿದ್ದವರಿಗೆ ಬೃಂಹಣಸಾಧ್ಯರೋಗವಿದ್ದರೂ ಬೃಂಹಣ ಕೊಡಬಾರದು. (೧೪॥)

**........ ...............ಬೃಂಹ್ಯಾಂಸ್ತು ಮೃದು ಲಂಘಯೇತ್ ॥೧೫॥**
**ಯುಕ್ತ್ಯಾ ವಾ ದೇಶಕಾಲಾದಿಬಲತಸ್ತಾನುಪಾಚರೇತ್ ॥**

ಅರ್ಥ:— ಆದರೆ ಬೃಂಹಣಕ್ಕೆ ಯೋಗ್ಯರಿದ್ದವರಿಗೆ (ಲಂಘನದ ಅವಶ್ಯಕತೆ ಇದ್ದರೆ) ಮೃದುವಾಗಿ ಲಂಘನ ಕೊಡಬಹುದು. ಅಥವಾ ದೇಶ ಕಾಲ ಮುಂತಾದವುಗಳ ಬಲವನ್ನು ನೋಡಿ ಉಪಾಯದಿಂದ ಉಪಚರಿಸಬೇಕು. (೧೫॥)

ಬೃಂಹಿತರ ಲಂಘಿತರ ಲಕ್ಷಣಗಳನ್ನು ಹೇಳುತ್ತಾರೆ.

**ಬೃಂಹಿತೇ ಸ್ಯಾದ್ಬಲಂ ಪುಷ್ಟಿಸ್ತತ್ಸಾಧ್ಯಾಮಯಸಂಕ್ಷಯಃ ॥೧೬॥**

ಅರ್ಥ:— ಬೃಂಹಣ ಪಡೆದವನಲ್ಲಿ ಶಕ್ತಿ ಪುಷ್ಟಿಗಳೂ ಮತ್ತು ಬೃಂಹಣದಿಂದ ಹೋಗತಕ್ಕ ರೋಗಗಳ ನಾಶವೂ ಆಗುವವು. (೧೬)

**ವಿಮಲೇಂದ್ರಿಯತಾ ಸರ್ಗೋ ಮಲಾನಾಂ ಲಾಘವಂ ರುಚಿಃ ॥**
**ಕ್ಷುತ್ತೃಟ್ಸಹೋದಯಃ ಶುದ್ಧಹೃದಯೋದ್ಗಾರಕಂಠತಾ ॥೧೭॥**
**ವ್ಯಾಧಿಮಾರ್ದವಮುತ್ಸಾಹಸ್ತಂದ್ರಾನಾಶಶ್ಚ ಲಂಘಿತೇ ॥**

ಅರ್ಥ:— ಲಂಘನ ಪಡೆದವನಲ್ಲಿ ಇಂದ್ರಿಯಪಟುತ್ವ ಮಲೋತ್ಸರ್ಗ, ಶರೀರ ಲಾಘವ, ರುಚಿ, ಹಸಿವೆ ನೀರಡಿಕೆಗಳು ಕೂಡಿಯೇ ಆಗೋಣ, ಹೃದಯ ತೇಗು ಕಂಠಗಳ ಶುದ್ಧಿ, ಉತ್ಸಾಹ, ತಂದ್ರಾನಾಶ ಆಗುವವು; ಮತ್ತು ಬೇನೆಗಳು ಕಡಿಮೆ ಆಗುವವು. (೧೭॥)

**ಅನಪೇಕ್ಷಿತಮಾತ್ರಾದಿಸೇವಿತೇ ಕುರುತಸ್ತು ತೇ ॥೧೮॥**
**ಅತಿಸ್ಥೌಲ್ಯಾತಿಕಾರ್ಶ್ಯಾದೀನ್ ವಕ್ಷ್ಯಂತೇ ತೇ ಚ ಸೌಷಧಾಃ ॥**

ಅರ್ಥ:— ಬೃಂಹಣ ಮತ್ತು ಲಂಘನ ಮುಂತಾದವುಗಳನ್ನು ಪ್ರಮಾಣ ಬಿಟ್ಟು ಸೇವಿಸಿದರೆ ಅತಿಸ್ಥೌಲ್ಯ ಅತಿಕಾರ್ಶ್ಯ ಮುಂತಾದವು

ಗಳನ್ನುಂಟುಮಾಡುತ್ತವೆ. ಅವುಗಳನ್ನು ಅವುಗಳ ಔಷಧಗಳನ್ನು ಮುಂದೆ (೨೦ನೇ ಶ್ಲೋಕದಲ್ಲಿ) ಹೇಳುವೆವು. (೨೮॥)

**ರೂಪಂ ತೈರೇವ ಚ ಜ್ಞೇಯಮತಿಬೃಂಹಿತಲಂಘಿತೇ ॥೨೯॥**

ಅರ್ಥ:— ಅವರಲ್ಲಿರುವ ಆ ವಿಕಾರ (ಅತಿಸ್ಥೌಲ್ಯ ಅತಿಕಾರ್ಶ್ಯ)ಗಳಿಂದಲೇ ಬೃಂಹಣ, ಲಂಘನಗಳ ಅತಿಯೋಗವನ್ನು ತಿಳಿಯತಕ್ಕದ್ದು. (೨೯)

**ಅತಿಸ್ಥೌಲ್ಯಾಪಚೀಮೇಹಜ್ವರೋದರಭಗಂದರಾನ್ ॥**
**ಕಾಸಸನ್ನ್ಯಾಸಕೃಚ್ಛ್ರಾಮಕುಷ್ಠಾದೀನತಿದಾರುಣಾನ್ ॥೩೦॥**

ಅರ್ಥ:— ಬೃಂಹಣದ ಅತಿಯೋಗದಿಂದ ಅತಿಸ್ಥೂಲತೆ, ಗಂಡಮಾಲೆ, ಪ್ರಮೇಹ, ಜ್ವರ, ಉದರ, ಭಗಂದರ, ಕಾಸ, ಸನ್ನ್ಯಾಸ (ಮೂರ್ಛಾ ವಿಶೇಷ), ಮೂತ್ರಕೃಚ್ಛ್ರ, ಆಮ, ಕುಷ್ಠ ಮುಂತಾದ ಅತಿ ಭಯಂಕರ ರೋಗಗಳು ಉಂಟಾಗುತ್ತವೆ. (೩೦)

**ತತ್ರ ಮೇದೋಽನಿಲಶ್ಲೇಷ್ಮನಾಶನಂ ಸರ್ವಮಿಷ್ಯತೇ ॥**

ಅರ್ಥ:— ಅವುಗಳ ಮೇಲೆ ಮೇದ ವಾತಕಫಗಳ ನಾಶಕವಾದ ಎಲ್ಲ ಚಿಕಿತ್ಸೆಗಳನ್ನು ಮಾಡಬೇಕು. (೩೦॥)

**ಕುಲತ್ಥಜೂರ್ಣಶ್ಯಾಮಾಕಯವಮುದ್ಗಮಧೂದಕಮ್ ॥೩೧॥**

**ಮಸ್ತುದಂಡಾಹತಾರಿಷ್ಟಚಿಂತಾಶೋಧನಜಾಗರಮ್ ॥**
**ಮಧುನಾ ತ್ರಿಫಲಾಂ ಲಿಹ್ಯಾದ್ಗುಡೂಚೀಮಭಯಾಂ ಘನಮ್ ॥೩೨॥**

ಅರ್ಥ:— ಹುರಳಿ, ಜೋಳ, ಸಾವೆ, ಮುಳಜವಿ, ಹೆಸರು, ಜೇನು ತುಪ್ಪ ಕೂಡಿಸಿದ ನೀರು, ಮೊಸರಿನ ಮೇಲಿನ ತಿಳಿನೀರು, ಮಜ್ಜಿಗೆ, ಅರಿಷ್ಟ (ಮದ್ಯ ವಿಶೇಷ) ಚಿಂತೆ ಶೋಧನ ಜಾಗರಣೆ ಇವನ್ನು ಮಾಡಬೇಕು. ಜೇನತುಪ್ಪದೊಡನೆ ತ್ರಿಫಲಾ ಅಥವಾ ಅಮೃತಬಳ್ಳಿಯ ಚೂರ್ಣ, ಅಳಲೇ ಕಾಯಿ ಅಥವಾ ಜೇಕಿನಗಡ್ಡೆ ಇವುಗಳ ಚೂರ್ಣಗಳನ್ನು ನೆಕ್ಕಬೇಕು.(೩೨)

ರಸಾಂಜನಸ್ಯ ಮಹತಃ ಪಂಚಮೂಲಸ್ಯ ಗುಗ್ಗುಲೋಃ ||
ಶಿಲಾಜಿತುಪ್ರಯೋಗಶ್ಚ ಸಾಗ್ನಿ ಮಂಥರಸೋ ಹಿತಃ ||೩೩||

ಅರ್ಥಃ— ರಸಾಂಜನ ಅಥವಾ ಬೃಹತ್ಪಂಚಮೂಲ ಅಥವಾ ಗುಗ್ಗುಳ, ಅಥವಾ ಶಿಲಾಜಿತುಗಳನ್ನು ಹೊಸಲಕ್ಕಿ ರಸವೊಡನೆ ತಕ್ಕೊಳ್ಳಬೇಕು. (೩೩)

ವಿಡಂಗಂ ನಾಗರಂ ಕ್ಷಾರಃ ಕಾಲಲೋಹರಜೋ ಮಧು ||
ಯವಾಮಲಕಚೂರ್ಣಂ ಚ ಯೋಗೋಽತಿಸ್ಥೌಲ್ಯದೋಷಜಿತ್ ||೩೪||

ಅರ್ಥಃ— ಜೇನಿನೊಡನೆ ತಕ್ಕೊಂಡ ವಾಯುವಾಡಂಗ, ಶುಂಠಿ, ಜವಕ್ಷಾರ, ಲೋಹಭಸ್ಮ, ಜೇನತುಪ್ಪ, ಮುಳಜವಿ, ನೆಲ್ಲಿಚಟ್ಟು-ಇವುಗಳ ಸಮಭಾಗ ಚೂರ್ಣವು ಅತಿಸ್ಥೌಲ್ಯ ದೋಷವನ್ನು ಗೆಲ್ಲುವದು (೩೪)

ವ್ಯೋಷಕಟ್ವೀವರಾಶಿಗ್ರುವಿಡಂಗಾತಿವಿಷಾಸ್ಥಿರಾಃ ||
ಹಿಂಗುಸೌವರ್ಚಲಾಜಾಜೀಯವಾನೀಧಾನ್ಯಚಿತ್ರಕಾಃ ||೩೫

ನಿಶೇ ಬೃಹತ್ಯೌ ಹಪುಷಾ ಪಾಠಾ ಮೂಲಂ ಚ ಕೇಂಬುಕಾತ್ ||
ವಿಷಾಂ ಚೂರ್ಣಂ ಮಧು ಘೃತಂ ತೈಲಂ ಚ ಸದೃಶಾಂಶಕಮ್||೩೬||

ಸಕ್ತುಭಿಃ ಷೋಡಶಗುಣೈರ್ಯುಕ್ತಂ ಪೀತಂ ನಿಹಂತಿ ತತ್ ||
ಅತಿಸ್ಥೌಲ್ಯಾದಿಕಾನ್ ಸರ್ವಾನ್ ರೋಗಾನನ್ಯಾಂಶ್ಚ ತದ್ವಿಧಾನ್||೩೭||

ಹೃದ್ರೋಗಕಾಮಲಾಶ್ವಿತ್ರಶ್ವಾಸಕಾಸಗಲಗ್ರಹಾನ್ ||
ಬುದ್ಧಿಮೇಧಾಸ್ಮೃತಿಕರಂ ಸನ್ನಸ್ಯಾಗ್ನೇಶ್ಚ ದೀಪನಮ್ ||೩೮||

ಅರ್ಥಃ— ತ್ರಿಕಟು (ಶುಂಠಿ, ಮೆಣಸು, ಹಿಪ್ಪಲಿ), ಕಟುಕರೋಹಿಣಿ, ತ್ರಿಫಲಾ, ನುಗ್ಗಿ, ವಾವಡಿಂಗ, ಅತಿವಿಷ, ಒಂದೆಲೆ ಹೊನ್ನಿ, ಇಂಗು, ಕಾಚ ಲವಣ, ಜೀರಿಗೆ, ಅಜಿವಾನ, ಕೊತ್ತುಂಬರೀಬೀಜ, ಚಿತ್ರಕ, ಅರಿಷಿಣ, ಮರಅರಿಷಿಣ, ನೆಲಗುಳ್ಳ, ಹೆಬ್ಬುಗುಳ್ಳಗಳ ಬೇರು, ಹಸರಾಣಿ, ಅಗಳಶುಂಠಿ, ಕೆಂಬುಕ ಬೇರು—ಇವುಗಳ ಚೂರ್ಣವನ್ನು ಸಮಭಾಗ

ಕುಡಿಸಿ ಅಪರಸ್ಪೀ ಚೇಸುತಪ್ಪು, ಘೃತ. ತೈಲಗಳನ್ನು ಹಾಕಿ [illegible] ಪ್ಲವುಗಳ ಗುಟಿಯನ್ನು ಸುರಿಯಿಸಿಟ್ಟು ಹಾಕಿ ಮಾಡಿದ ಔಷಧವನ್ನು ತಕ್ರದ ನಲ್ಲಿ ಕುಡಿದರೆ ಅತಿಸ್ಥೌಲ್ಯ ಮುಂತಾದ ರೋಗಗಳನ್ನೂ ಅದರಂತೆಯೇ ಇತರ ರೋಗಗಳನ್ನೂ ಹೃದ್ರೋಗ, ಕಾಮಲೆ, ಶ್ವಿತ್ರ, ಶ್ವಾಸ, ಕಾಸ, ಗಲಗ್ರಹ ಗಳನ್ನೂ ನಾಶಮಾಡುವದು. ಬುದ್ಧಿ, ಧಾರಣಾಶಕ್ತಿ, ಸ್ಮೃತಿಗಳನ್ನು ಕೊಡುವದು ಮತ್ತು ಮಂದ ಅಗ್ನಿಯನ್ನು ಪ್ರದೀಪ್ತಮಾಡುವದು. (೨೮)

**ಅತಿಕಾರ್ಶ್ಯಂ ಭ್ರಮಃ ಕಾಸಸ್ತೃಷ್ಣಾಧಿಕ್ಯಮರೋಚಕಃ ||**
**ಸ್ನೇಹಾಗ್ನಿನಿದ್ರಾದೃಕ್ಶ್ರೋತ್ರಶುಕ್ರೌಜಃಕ್ಷುತ್ಸ್ವರಕ್ಷಯಃ ||೨೯||**
**ಬಸ್ತಿಹೃನ್ಮೂರ್ಧಜಂಘೋರುತ್ರಿಕಪಾರ್ಶ್ವರುಜಾಜ್ವರಃ ||**
**ಪ್ರಲಾಪೋರ್ಧ್ವಾನಿಲಗ್ಲಾನಿಚ್ಛರ್ದಿಪರ್ವಾಸ್ಥಿಭೇದನಮ್ ||೩೦||**
**ವರ್ಚೋಮೂತ್ರಗ್ರಹಾದ್ಯಾಶ್ಚ ಜಾಯಂತೇಽತಿವಿಲಂಘನಾತ್ ||**

ಅರ್ಥಃ— ಅತಿ ಲಂಘನದಿಂದ ಅತಿ ಕೃಶತ್ವ, ಭ್ರಮೆ, ಕೆಮ್ಮು, ನೀರಡಿಕೆ, ಅರುಚಿ, ಸ್ನಿಗ್ಧತ್ವ ಪಚನಶಕ್ತಿ ನಿದ್ರೆ ಕಣ್ಣು ಕಿವಿ ಶುಕ್ರ ಓಜ ಹಸಿವೆ ಸ್ವರಗಳ ನಾಶ, ಮೂತ್ರಾಶಯ ಎದೆ ತಲೆ ಮೊಣಕಾಲು ತೊಡೆ ತ್ರಿಗ ಪಾರ್ಶ್ವಗಳಲ್ಲಿ ನೋವು, ಜ್ವರ, ಬಡಬಡಿಸೋಣ, ಊರ್ಧ್ವವಾತ, ಗ್ಲಾನಿ, ವಾಂತಿ, ಸಂಧಿ ಅಸ್ಥಿಗಳಲ್ಲಿ ಶೂಲೆ, ಮಲಮೂತ್ರ ಪ್ರತಿಬಂಧ, ಮುಂತಾದವು ಗಳುಂಟಾಗುತ್ತವೆ. (೩೦||)

**ಕಾರ್ಶ್ಯಮೇವ ವರಂ ಸ್ಥೌಲ್ಯಾನ್ನ ಹಿ †ಸ್ಥೂಲಸ್ಯ ಭೇಷಜಮ್ ||೩೧||**

**ಬೃಂಹಣಂ ಲಂಘನಂ ವಾಽಲಮತಿಮೇದೋಗ್ನಿವಾತಜಿತ್ ||**
**ಮಧುರಸ್ನಿಗ್ಧಸೌಹಿತ್ಯೈರ್ಯತ್ಸೌಖ್ಯೇನ ಚ ನಶ್ಯತಿ ||೩೨||**

**ಕ್ರಶಿಮಾ ಸ್ಥವಿಮಾಽತ್ಯಂತವಿಪರೀತನಿಷೇವಣೈಃ ||**

ಅರ್ಥಃ—ಅತಿಸ್ಥೂಲತ್ವಕ್ಕಿಂತ ಅತಿ ಕೃಶತ್ವವೇ ಶ್ರೇಷ್ಠ. ಅತಿ ಸ್ಥೂಲನಿಗೆ ಔಷಧವೇ ಇಲ್ಲ. ಯಾಕೆಂದರೆ (ಸ್ಥೂಲನಲ್ಲಿರುವ) ಅತಿಮೇದ್ಯ ಅತಿ ಅಗ್ನಿ ಅತಿವಾತಗಳನ್ನು ಗೆಲ್ಲಲು ಬೃಂಹಣವು ಅಥವಾ ಲಂಘನವು ಸಮರ್ಥವಲ್ಲವು.

† "ಸ್ಥೌಲ್ಯಸ್ಯ" ಎಂಬ ಪಾಠಾಂತರವಿದೆ.

ಮತ್ತು ಕೃಶತ್ವವು ಮಧುರ ಸ್ನಿಗ್ಧ ದ್ರವ್ಯಗಳ ತೃಪ್ತಿ ಮತ್ತು ಸೌಖ್ಯಗಳಿಂದ ನಾಶಹೊಂದುತ್ತದೆ. ಆದರೆ ಸ್ಥೌಲ್ಯವು ಇದರ ವಿಪರೀತ ಕಹಿ ಕಾರ ಒಗರು ಮುಂತಾದ ರಸ ಮತ್ತು ದುಃಖ ಸೇವನದಿಂದ ಹೋಗುತ್ತದೆ.

ಟಿಪ್ಪಣಿ:— ಲಂಘನವು ಅತಿ ಮೇದವನ್ನು ಕಳೆದರೂ ಅತ್ಯಗ್ನಿ ಮತ್ತು ಅತಿವಾತಗಳನ್ನು ಕಳೆಯಲಾರದು. ಇದರಂತೆ ಬೃಂಹಣವು ಅತ್ಯಗ್ನಿ ಅತಿವಾತಗಳನ್ನು ಕಳೆದರೂ ಮೇದವನ್ನು ಕಳೆಯಲಾರದು. ಆದ್ದರಿಂದ ಸ್ಥೂಲತ್ವಕ್ಕೆ ಯಾವ ಔಷಧವೂ ಇಲ್ಲವೆಂದು ಅಭಿಪ್ರಾಯವು. (೩೨॥)

**ಯೋಜಯೇದ್ಬೃಂಹಣಂ ತತ್ರ ಸರ್ವಂ ಪಾನಾನ್ನಭೇಷಜಮ್ ॥೩೩॥**

ಅರ್ಥ:— ಕೃಶನಿಗೆ ಬೃಂಹಣವಾದ ಎಲ್ಲ ಪಾನ ಆಹಾರ ಔಷಧಗಳನ್ನು ಕೊಡಬೇಕು.

**ಅಚಿಂತಯಾ ಹರ್ಷಣೇನ ಧ್ರುವಂ ಸಂತರ್ಪಣೇನ ಚ ॥**
**ಸ್ವಪ್ನಪ್ರಸಂಗಾಚ್ಚ ಕೃಶೋ ವರಾಹ ಇವ ಪುಷ್ಯತಿ ॥೩೪**

ಅರ್ಥ:— ನಿಶ್ಚಿಂತೆ, ಆನಂದ, ಪೌಷ್ಟಿಕ ಆಹಾರದ ತೃಪ್ತಿಗಳಿಂದಲೂ ಮಲಗೋಣದರಿಂದಲೂ ಕೃಶನು ಕಾಡ ಹಂದಿಯಂತೆ ಸೊಕ್ಕುವನು. (೩೪)

**ನ ಹಿ ಮಾಂಸಸಮಂ ಕಿಂಚಿದನ್ಯದ್ದೇಹಬೃಹತ್ವಕೃತ್ ॥**
**ಮಾಂಸಾದಮಾಂಸಂ ಮಾಂಸೇನ ಸಂಭೃತತ್ವಾದ್ವಿಶೇಷತಃ ॥೩೫॥**

ಅರ್ಥ:— ಮಾಂಸದಷ್ಟು ಬೇರೆ ಯಾವದೂ ದೇಹ ಪೋಷಕವಾಗಿರುವದಿಲ್ಲ. ಮಾಂಸ ತಿನ್ನುವ ಪ್ರಾಣಿಗಳ ಮಾಂಸವಂತೂ ಮಾಂಸದಿಂದಲೇ ತುಂಬಿರುವದರಿಂದ ಅದು ವಿಶೇಷವಾಗಿ ದೇಹ ಪೋಷಣವನ್ನು ಮಾಡುತ್ತದೆ. (೩೫)

**ಗುರು ಚಾತರ್ಪಣಂ ಸ್ಥೂಲೇ, ವಿಪರೀತಂ ಹಿತಂ ಕೃಶೇ ॥**

ಅರ್ಥ:— ಸ್ಥೂಲನಿಗೆ ಜಡವಿದ್ದು ಸಾರವಿಲ್ಲದ ದ್ರವ್ಯವೂ, ಕೃಶನಿಗೆ ಅದರ ವಿಪರೀತ (ಲಘುವಿದ್ದು ಸಾರವುಳ್ಳ) ದ್ರವ್ಯವೂ ಹಿತಕರವು. (೩೬॥)

ಯವಗೋಧೂಮಮುಭಯೋಸ್ತದ್ಯೋಗ್ಯಾಹಿತಕಲ್ಪನಮ್ ॥೩೬॥

ಅರ್ಥ:— ಇಬ್ಬರಿಗೂ (ಕೃಶ, ಸ್ಥೂಲರಿಗೂ) ಕ್ರಮವಾಗಿ ಮುಳಜವೆ ಮತ್ತು ಗೋಧಿಗಳಿಂದ ಅವರವರಿಗೆ ಯೋಗ್ಯವಾದ ಸಂಸ್ಕಾರ ಕೊಟ್ಟು ಮಾಡಿದ ಪದಾರ್ಥಗಳು ಹಿತಕರವು. (೩೬)

**ದೋಷಗತ್ಯಾಽತಿರಿಚ್ಯಂತೇ ಗ್ರಾಹಿಭೇದ್ಯಾದಿಭೇದತಃ ॥**
**ಉಪಕ್ರಮಾ ನ ತೇ ದ್ವಿತ್ವಾದ್ಭಿನ್ನಾ ಅಪಿ ಗದಾ ಇವ ॥೩೭॥**

ಅರ್ಥ:— ರೋಗಗಳು ವಾತಾದಿ ದೋಷಗಳಿಂದ ಅನೇಕವಾಗಿದ್ದರೂ ಕೂಡ ಸಾಮ, ನಿರಾಮವೆಂದು ( ಮುಖ್ಯವಾಗಿ ) ಎರಡೇ ವಿಧವಿರುವಂತೆ ಚಿಕಿತ್ಸೆಯೂ ಕೂಡ ದೋಷಗಳ ಗತಿ ( ಸಂಸರ್ಗ ಸನ್ನಿಪಾತ, ವೃದ್ಧಿ, ಕ್ಷಯ, ಊರ್ಧ್ವಾಧೋಗಮನ ಮುಂತಾದವು) ಗಳಿಂದಲೂ ಸ್ತಂಭಕ, ರೇಚಕ ಮುಂತಾದ ಭೇದಗಳಿಂದಲೂ ಅನೇಕ ವಿಧವಾಗಿದ್ದರೂ ಬೃಂಹಣ ಲಂಘನವೆಂದು ಮುಖ್ಯವಾಗಿ ಎರಡೇ ವಿಧವಾಗಿರುವದು. (೩೭)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ದ್ವಿವಿಧೋಪಕ್ರಮಣೀಯೋ ನಾಮ ಚತುರ್ದಶೋಽಧ್ಯಾಯಃ ಸಮಾಪ್ತಃ ।**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ '**ರಹಸ್ಯ ಪ್ರಕಾಶಿನೀ** ' ಎಂಬ '**ಅಷ್ಟಾಂಗಹೃದಯ**'ದ ಟೀಕೆಯಲ್ಲಿ **ಸೂತ್ರಸ್ಥಾನದಲ್ಲಿಯ ದ್ವಿವಿಧೋಪಕ್ರಮಣೀಯ** ಎಂಬ **೧೪ನೆಯ ಅಧ್ಯಾಯವು** ಮುಗಿದುದು.



# ೧೫ನೆಯ ಅಧ್ಯಾಯವು

ಹಿಂದಿನ ಸ್ನೇಹೋಪಕ್ರಮಣೀಯ ಮತ್ತು ದ್ವಿವಿಧೋಪಕ್ರಮಣೀಯ ಅಧ್ಯಾಯಗಳಲ್ಲಿ ಅನೇಕ ಉಪಕ್ರಮಗಳು ಹೇಳಲ್ಪಟ್ಟವು. ಅವುಗಳಿಗೆ ಬೇಕಾದ ಔಷಧಗಳನ್ನು ಈ ಅಧ್ಯಾಯದಲ್ಲಿ ವಮನಗಣ ವಿರೇಚನಗಣ ಮುಂತಾದ ಬೇರೆಬೇರೆ ಗಣಗಳನ್ನು ಮಾಡಿ ಹೇಳುತ್ತಾರೆ.

**ಅಥಾತಃಶೋ*ಧನಾದಿಗಣಸಂಗ್ರಹಮಧ್ಯಾಯಂ ವ್ಯಾಖ್ಯಾಸ್ಯಾಮಃ ||**

ಅರ್ಥ:— ಇನ್ನು ಮೇಲೆ ಶೋಧನ, ಶಮನ ಮುಂತಾದ ಗಣಗಳ ಸಂಗ್ರಹವನ್ನು ಹೇಳುವ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಅರ್ಥ:—ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಮದನಮಧುಕಲಂಬಾನಿಂಬಬಿಂಬೀವಿಶಾಲಾ**
**ತ್ರಪುಸಕುಟಜಮೂರ್ವಾದೇವದಾಲೀಕೃಮಿಘ್ನಮ್ ||**
**ವಿದುಲದಹನಚಿತ್ರಾಃ ಕೋಶವತ್ಯೌ ಕರಂಜಃ**
**ಕಣಲವಣವಚೈಲಾಸರ್ಷಪಾಶ್ಛರ್ದನಾನಿ ||೧||**

ಅರ್ಥ:— ಮುಗ್ಗಾರಿಕಾಯಿ. ಜೇಷ್ಠಮಧು, ಕಹಿ ಹಾಲುಗುಂಬಳ ಕಾಯಿ (ಕೈಸೋರೆ), ಬೇವು, ಕಹಿ ತೊಂಡೆಕಾಯಿ, ಕಾಡ ಕವಡೇಕಾಯಿ ( ಹಾವು ಮೆಕ್ಕೇಕಾಯಿ), ಕಹಿ ಸವತೇಕಾಯಿ, ಕೊಡಸಿಗೆ, ಹೆಗ್ಗುರುಟಿಕೆ, ದೇವದಾಳಿ, ವಾವಡಿಂಗ, ವಿದುಲ, (ಜಲವೇತಸ), ಚಿತ್ರಕ, ಮೂಷಕಪರ್ಣೆ, ಕಹಿ ಹೀರಿ, ಕಹಿ ತಿಪ್ಪರಿ, ಹುಲಗಲಿ, ಹಿಪ್ಪಲಿ, ಸೈಂಧವ, ಬಜೆ, ಯಾಲಕ್ಕಿ, ಸಾಸಿವೆ—ಇವು ವಾಮಕ ಔಷಧಗಳು. (೧)

**ನಿಕುಂಭಕುಂಭತ್ರಿಫಲಾಗವಾಕ್ಷೀ**
**ಸ್ನುಕ್ಶಂಖಿನೀನೀಲಿನಿತಿಲ್ವಕಾನಿ ||**

---

* ಶೋಧನಾದಿ ಗಣಸಂಗ್ರಹವು ಚರಕದ ಸೂ. ೪ನೇ, ಸುಶ್ರುತದ ಸೂ. ೩೮–೩೯–೪೪ನೇ ಅಷ್ಟಾಂಗ ಸಂಗ್ರಹದ ಸೂ. ೧೪–೧೫–೧೬ನೇ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ.

**ಶವ್ಯಾಕಕಂಪಿಲ್ಲಕಹೇಮದುಗ್ಧಾ**
**ದುಗ್ಧಂ ಚ ಮೂತ್ರಂ ಚ ವಿರೇಚನಾನಿ** ॥೨॥

ಅರ್ಥ:— ದಂತಿ, ತಿಗಡಿ, ತ್ರಿಫಲಾ, ಸಣ್ಣಕಾಡಕವಡಿಕಾಯಿ (ಹಾವುಮೆಕ್ಕೆ), ಮೂರೇಣಿನಕಳ್ಳಿ (ಮಂಡಗಳ್ಳಿ), ಶಂಖಿನಿ, ಸೀಲೀಗಿಡ, ಲೋಧ್ರ, ಕಕ್ಕೇಕಾಯಿ, ಕಪಿಲಾ, ಗೋಳಗೋಳಿಕೆ, ಹಾಲು, ಮೂತ್ರ—ಇವು ರೇಚಕಗಳು. (೨)

**ಮದನಕುಟಜಕುಷ್ಠದೇವದಾಲೀ**
**ಮಧುಕವಚಾದಶಮೂಲದಾರುರಾಸ್ನಾಃ**
**ಯುವಮಿಶಿಕೃತವೇಧನಂ ಕುಲತ್ಥಾ**
**ಮಧು ಲವಣಂ ತ್ರಿವೃತಾ ನಿರೂಹಣಾನಿ** ॥೩॥

ಅರ್ಥ:— ಮಂಗಾರೇಕಾಯಿ, ಹಲಗತ್ತಿ (ಕೊಡಸಿಗೆ) ಕೋಟೆ, ಕೋಷ್ಟ, ದೇವದಾಲಿ, ಜೇಷ್ಠಮಧು, ಬಜೆ, ದಶಮೂಲ, ದೇವದಾರು, ರಾಸ್ನಾ (ರೇಸಿಮಿಕಡ್ಡಿ), ಮುಳಜವಿ, ಬಡೆಸೋಪ, ಕಹಿಹೀರಿ, ಹುರಳಿ, ಜೇನತುಪ್ಪ, ಸೈಂಧವ, ನಿಶೋತ್ತರ (ತಿಗಡಿ)—ಇವು ನಿರೂಹಬಸ್ತಿಯ ಔಷಧಗಳು. (೩)

**ವೇಲ್ಲಾಪಾಮಾರ್ಗವ್ಯೋಷದಾರ್ವೀಸುರಾಲಾ**
**ಬೀಜಂ ಸೈರೀಷಂ ಬಾರ್ಹತಂ ಶೈಗ್ರವಂ ಚ ॥**
**ಸಾರೋ ಮಾಧೂಕಃ ಸೈಂಧವಂ ತಾರ್ಕ್ಷ್ಯಶೈಲಂ**
**ತ್ರುಟ್ಯೌ ಪೃಥ್ವೀಕಾ ಶೋಧಯಂತ್ಯುತ್ತಮಾಂಗಮ್** ॥೪॥

ಅರ್ಥ:— ವಾವಡಿಂಗ, ಉತ್ತರಾಣಿ, ತ್ರಿಕಟು, ಮರಅರಿಷಣ, ರಾಳ, ಸಿರಸಲಬೀಜ । (ಬಾಗೇಬೀಜ), ಹೆಗ್ಗುಳ್ಳದ ಬೀಜ, ನುಗ್ಗೀ ಬೀಜ, ಇಪ್ಪೀಗಿಡದ ಕೆಚ್ಚು, ಸೈಂಧವ, ರಸಾಂಜನ, ಸಣ್ಣ ಮತ್ತು ದೊಡ್ಡ ಯಾಲಕ್ಕಿ, ಪೃಥ್ವೀಕ (ಹಿಂಗುಪತ್ರಿ)—ಇವು ಶಿರೋರೇಚಕ ವಿರುವವು. (೪)

**ಭದ್ರದಾರು ನತಂ ಕುಷ್ಠಂ ದಶಮೂಲಂ ಬಲಾದ್ವಯಮ್ ||**
**ವಾಯುಂ ವೀರತರಾದಿಶ್ಚ ವಿದಾರ್ಯಾದಿಶ್ಚ ನಾಶಯೇತ್ ||೫||**

ಅರ್ಥ:— ದೇವದಾರು, ತಗರ, ಕೋಷ್ಠ, ದಶಮೂಲ, ಬಲಾ (ಕಳ್ಳಂಗಡ್ಲೆ), ಅತಿಬಲಾ (ದೊಡ್ಡಕಳ್ಳಂಗಡ್ಲೆ) —ಇವು ಮತ್ತು ಮುಂದೆ ಹೇಳುವ ವೀರತರಾದಿ ಮತ್ತು ವಿದಾರ್ಯಾದಿ .ಗಣಗಳು ವಾತನಾಶಕ ಇರುವವು. (೫)

**ದೂರ್ವಾಽನಂತಾ ನಿಂಬವಾಸಾಽಽತ್ಮಗುಪ್ತಾ**
**ಗುಂದ್ರಾಽಭೀರುಃ ಶೀತಪಾಕೀ ಪ್ರಿಯಂಗುಃ ||**
**ನ್ಯಗ್ರೋಧಾದಿಃ ಪದ್ಮಕಾದಿಃ ಸ್ಥಿರೇ ದ್ವೇ**
**ಪದ್ಮಂ ವನ್ಯಂ ಸಾರಿವಾದಿಶ್ಚ ಪಿತ್ತಮ್ ||೬||**

ಅರ್ಥ:— ಕರಿಕೆ, ನೆಲ ಇಂಗಳ, ಬೇವು, ಅಡಸಲ, ನಸುಗುನ್ನಿ, ಆಪು (ದೊಡ್ಡ ಜೇಕು, ಪೃಮದರ್ಭ), ಶತಾವರೀ, ಬಿಳಿಗುಲಗಂಜಿ, ಪ್ರಿಯಂಗು— ಇವು ಮತ್ತು ನ್ಯಗ್ರೋಧಾದಿಗಣವೂ,ಪದ್ಮಕಾದಿಗಣವೂ, ಒಂದೆಲೆಯ ಹೊನ್ನಿ ಮೂರೆಲೆ ಹೊನ್ನಿ, ಕಮಲ, ಕ್ಷುದ್ರಮುಸ್ತಾ, ಮತ್ತು ಸಾರಿವಾದಿಗಣವೂ ಪಿತ್ತ ನಾಶಕ ಇರುತ್ತವೆ.

**ಆರಗ್ವಧಾದಿರರ್ಕಾದಿರ್ಮುಷ್ಕಕಾದ್ಯೋಽಸನಾದಿಕಃ ||**
**ಸುರಸಾದಿಃ ಸಮುಸ್ತಾದಿರ್ವತ್ಸಕಾದಿರ್ಬಲಾಸಜಿತ್ ||೭||**

ಅರ್ಥ:— ಆರಗ್ವಧಾದಿಗಣ, ಅರ್ಕಾದಿಗಣ, ಮುಷ್ಕಕಾದಿಗಣ, ಅಸನಾದಿಗಣ, ಸುರಸಾದಿಗಣ, ಮುಸ್ತಾದಿಗಣ ಮತ್ತು ವತ್ಸಕಾದಿಗಣ—ಈ ಏಳು ಗಣಗಳು ಕಫನಾಶಕವಿರುತ್ತವೆ. (೭)

**ಜೀವಂತೀ ಕಾಕೋಲ್ಯೌ ಮೇದೇ ದ್ವೇ ಮುದ್ಗಮಾಷಪರ್ಣ್ಯೌ ಚ ||**
**ಋಷಭಕಜೀವಕಮಧುಕಂ ಚೇತಿ ಗಣೋ ಜೀವನೀಯಾಖ್ಯಃ ||೮||**

ಅರ್ಥ:— ಜೀವಂತಿ (ಶೀಹಾಲೆ), ಕಾಕೋಲಿ, ಕ್ಷೀರಕಾಕೋಲಿ, ಮೇದಾ, ಮಹಾಮೇದಾ, ಮುದ್ಗಪರ್ಣಿ (ಅಡವಿ ಹೆಸರು) ಮಾಷಪರ್ಣಿ

(ಅಡವಿ ಉದ್ದು): ಋಷಭಕ, ಜೀವಕ, ಮೇದ, ಮಧು-ಈ ಗಣವು ಜೀವನೀಯಗಣವು. (೮)

ವಿದಾರಿಪಂಚಾಂಗುಲವೃಶ್ಚಿಕಾಲೀ
ವೃಶ್ಚೀವದೇವಾಹ್ವಯಶೂರ್ಪಪರ್ಣ್ಯಃ ।
ಕಂಡೂಕರೀ ಜೀವನಹ್ರಸ್ವಸಂಜ್ಞೇ
ದ್ವೇ ಪಂಚಕೇ ಗೋಪಸುತಾ ತ್ರಿಪಾದೀ ॥೯॥

ವಿದಾರ್ಯಾದಿರಯಂ ಹೃದ್ಯೋ ಬೃಂಹಣೋ ವಾತಪಿತ್ತಹಾ ।
ಶೋಷಗುಲ್ಮಾಂಗಮರ್ದೋರ್ಧ್ವಶ್ವಾಸಕಾಸಹರೋ ಗಣಃ ॥೧೦॥

ಅರ್ಥ:— ನೆಲಗುಂಬಳ, ಔಡಲ, ಮೇಷಶೃಂಗಿ, ಬಿಳಿಗಣಜಲ, ದೇವದಾರು, ಅಡವೀ ಹೆಸರು, ಅಡವೀ ಉದ್ದು, ನಸುಗುನ್ನಿ, ಜೀವನಪಂಚಮೂಲ, ಹ್ರಸ್ವಪಂಚಮೂಲ, ಅನಂತಮೂಲ, ತ್ರಿಪಾದೀ (ಹಂಸಪಾದಿ, ಕೆಂಪುಮುಟ್ಟಲುಮುರಕ)-ಈ ವಿದಾರ್ಯಾದಿ ಗಣವು ಹೃದ್ಯ, ಪೌಷ್ಟಿಕ, ವಾತ-ಪಿತ್ತ-ನಾಶಕ, ಕ್ಷಯ ಗುಲ್ಮ ಮೈಕೂಲಿ ಊರ್ಧ್ವಶ್ವಾಸ ಮತ್ತು ಕೆಮ್ಮುಗಳನ್ನು ಕಳೆಯುವದು. (೧೦)

ಸಾರಿವೋಶೀರಕಾಶ್ಮರ್ಯಮಧೂಕಶಿಶಿರದ್ವಯಮ್ ।
ಯಷ್ಟೀ ಪರೂಷಕಂ ಹಂತಿ ದಾಹಪಿತ್ತಾಸ್ರತೃಡ್ಜ್ವರಾನ್ ॥೧೧॥

ಅರ್ಥ:— ನೊಗದೇಬೇರು, ಬಾಳದಬೇರು, ಶಿವನ್ನೀ ಬೇರು, ಇಪ್ಪೀ ಹೂ, ಬಿಳೀ ಮತ್ತು ಕೆಂಪು ಚಂದನ, ಜ್ಯೇಷ್ಠ ಮಧು, ಪರೂಷಕ-ಇವು ದಾಹ (ರಕ್ತ ಪಿತ್ತ) ನೀರಡಿಕೆ ಮತ್ತು ಜ್ವರಗಳನ್ನು ನಾಶಮಾಡುತ್ತವೆ. (೧೧)

ಪದ್ಮಕಪುಂಡ್ರೌ ವೃದ್ಧಿತುಗರ್ದ್ಧ್ಯಃ
ಶೃಂಗ್ಯಮೃತಾ ದಶ ಜೀವನಸಂಜ್ಞಾಃ ।
ಸ್ತನ್ಯಕರಾ ಘ್ನಂತೀರಣಪಿತ್ತಂ
ಪ್ರೀಣನಜೀವನಬೃಂಹಣವೃಷ್ಯಾಃ ॥೧೨॥

ಅರ್ಥ— ಕೆಂಪು ಕಮಲ, ಪುಂಡರೀಕ, ವೃದ್ಧಿ, ವಂಶಲೋಚನ, ಋದ್ಧಿ, ಕಾಕಡಸಿಂಗಿ, ಅಮೃತಬಳ್ಳಿ, ಮತ್ತು ಜೀವನೀಯಗಣದಲ್ಲಿಯ ಹತ್ತು ಔಷಧ—ಇವು ಸ್ತನ್ಯವನ್ನುಂಟುಮಾಡುವವು. ಸ್ತನ್ಯಕರ, ತುಷ್ಟಿಪ್ರದ, ಆರೋಗ್ಯಕರ, ಬಲ ಮತ್ತು ಶುಕ್ರವೃದ್ಧಿಕರ ಇದ್ದು ವಾತಪಿತ್ತಗಳನ್ನು ನಾಶ ಮಾಡುವವು. (೧೨)

**ಪರೂಷಕಂ ವರಾ ದ್ರಾಕ್ಷಾ ಕಟ್ಫಲಂ ಕತಕಾತ್ಫಲಮ್ ।**
**ರಾಜಾಹ್ವಂ ದಾಡಿಮಂ ಶಾಕಂ ತೃಣ್ಮೂತ್ರಾಮಯವಾತಜಿತ್ ॥೧೩॥**

ಅರ್ಥ:— ದಡಸಲಹಣ್ಣು, ತ್ರಿಫಲಾ ದ್ರಾಕ್ಷೆ, ಕಿರಿಸಿವನ್ನಿ, ತಿಳಿಬೀಜ (ಚಿಲ್ಲದಬೀಜ), ರಾಜಾಹ್ವ (ಖಿರಣಿ), ದಾಳಿಂಬ, ಸಾಗ-ಇವು ನೀರಡಿಕೆ ಮೂತ್ರರೋಗ, ವಾತರೋಗಗಳನ್ನು ನಾಶಮಾಡುವವು. (೧೩)

**ಅಂಜನಂ ಫಲಿನೀ ಮಾಂಸೀ ಪದ್ಮೋತ್ಪಲರಸಾಂಜನಮ್ ॥೧೪॥**
**ಸೈಲಾಮಧುಕನಾಗಾಹ್ವಂ ವಿಷಾಂತರ್ದಾಹಪಿತ್ತನುತ್ ॥೧೪॥**

ಅರ್ಥ:— ಸ್ರೋತೋಂಜನ ಸೌವೀರಾಂಜನ, ಗಹುಲಾ, ಜಟಾಮಾಸಿ, ಬಿಳೀ ಕಮಲ, ಕರೇ ಕಮಲ, ರಸಾಂಜನ, ಯಾಲಕ್ಕಿ, ಜೇಷ್ಠಮಧು ಮತ್ತು ನಾಗಕೇಶರ—ಈ ಅಂಜನಾದಿಗಣವು ವಿಷ ಅಂತರ್ದಾಹ ಪಿತ್ತಗಳನ್ನು ನಾಶ ಮಾಡುತ್ತದೆ. (೧೪)

**ಪಟೋಲಕಟುರೋಹಿಣೀಚಂದನಂ**
**ಮಧುಸ್ರವಗುಡೂಚಿಪಾಠಾನ್ವಿತಮ್ ॥**
**ನಿಹಂತಿ ಕಫಪಿತ್ತಕುಷ್ಠಜ್ವರಾನ್**
**ವಿಷಂ ವಮಿಮರೋಚಕಂ ಕಾಮಲಾಮ್ ॥೧೫॥**

ಅರ್ಥ:— ಕಹಿ ಪಡುವಲು, ಕಟುಕರೋಹಿಣಿ, ಶ್ರೀಗಂಧ, ಹಾಲುಕೊರಟಿಗೆ, ಅಮೃತಬಳ್ಳಿ, ಅಗಳಶುಂಠಿ (ಹಾಡೀಗಡ್ಡೆ), ಈ ಪಟೋಲಾದಿ ಗಣವು ಕಫ ಪಿತ್ತ ಕುಷ್ಠ ಜ್ವರ ವಿಷ ವಾಂತಿ ಅರುಚಿ ಕಾಮಣಿಗಳನ್ನು ನಾಶಮಾಡುತ್ತದೆ. (೧೫)

ಗುಡೂಚೀಪದ್ಮಕಾರಿಷ್ಟಧಾನಕಾರಕ್ತಚಂದನಮ್ ॥
ಪಿತ್ತಶ್ಲೇಷ್ಮಜ್ವರಚ್ಛರ್ದಿದಾಹತೃಷ್ಣಾಘ್ನಮಗ್ನಿಕೃತ್ ॥೧೬॥

ಅರ್ಥ:— ಅಮೃತಬಳ್ಳಿ, ಪದ್ಮಕಾಷ್ಠ, ಬೇವು, ಹವೀಜ, ರಕ್ತಚಂದನ-ಈ ಗುಡೂಚ್ಯಾದಿ ಗಣವು ಪಿತ್ತ ಕಫ ಜ್ವರ ವಾಂತಿ ದಾಹ ನೀರಡಿಕೆಗಳನ್ನು ನಾಶಮಾಡುತ್ತದೆ. ಮತ್ತು ಅಗ್ನಿಯನ್ನು ಪ್ರದೀಪ್ತ ಮಾಡುತ್ತದೆ.

ಆರಗ್ವಧೇಂದ್ರಯವಪಾಟಲಿಕಾಕತಿಕ್ತಾ
ನಿಂಬಾಮೃತಾಮಧುರಸಾಸ್ರುವವೃಕ್ಷಪಾಠಾಃ ॥
ಭೂನಿಂಬಸೈರ್ಯಕಪಟೋಲಕರಂಜಯುಗ್ಮಂ
ಸಪ್ತಚ್ಛದಾಗ್ನಿಸುಷವೀಫಲಬಾಣಘೋಂಟಾಃ ॥೧೭॥

ಆರಗ್ವಧಾದಿರ್ಜಯತಿ ಛರ್ದಿಕುಷ್ಠವಿಷಜ್ವರಾನ್ ॥
ಕಫಂ ಕಂಡೂಂ ಪ್ರಮೇಹಂ ಚ ದುಷ್ಟವ್ರಣವಿಶೋಧನಃ ॥೧೮॥

ಅರ್ಥ:— ಕಕ್ಕೇಕಾಯಿ, ಇಂದ್ರಜವಿ, ಪಾದರಿ, ಗಜಗು ಬೇವು, ಅಮೃತಬಳ್ಳಿ, ಹಾಲುಗೊರಟಿಗೆ, ಸ್ರುವವೃಕ್ಷ ( ಸಂಪೇಹಂಣಿನಮರ ), ಅಗಳಶುಂಠಿ, ನೆಲಬೇವು, ಮುಳಜಾಜಿ, (ಗೋರಂಟಿ), ಕಹಿಪಡುವಲ, ಎರಡೂತರದ ಹುಲಗಲಿ, ಸಪ್ತಪರ್ಣಿ, ಚಿತ್ರಕ, ಸುಷವೀ, ಮಂಗಾರೆಕಾಯಿ, ನೀಲಿಹೂವುಳ್ಳ ಮುಳಜಾಜಿ, ಸಣ್ಣಬಾರೀಕಾಯಿ-ಈ ಆರಗ್ವಧಾದಿ ಗಣವು ವಾಂತಿ ಕುಷ್ಠ ವಿಷ ಜ್ವರ ಕಫ ಕಂಡೂ ಪ್ರಮೇಹಗಳನ್ನು ಕಳೆಯುವದು ಮತ್ತು ದುಷ್ಟ ವ್ರಣಗಳನ್ನು ಶುದ್ಧಮಾಡುವದು. (೧೮)

ಅಸನತಿನಿಶಭೂರ್ಜಶ್ವೇತವಾಹಪ್ರಕೀರ್ಯಾ
ಖದಿರಕದರಭಂಡೀಶಿಂಶಪಾಮೇಷಶೃಂಗ್ಯಃ ॥
ತ್ರಿಹಿಮತಲಪಲಾಶಾ ಜೋಂಗಕಃ ಶಾಕಶಾಲೌ
ಕ್ರಮುಕಧವಕಲಿಂಗಚ್ಛಾಗಕರ್ಣಾಶ್ವಕರ್ಣಾಃ ॥೧೯॥

ಅಸನಾದಿರ್ವಿಜಯತೇ ಶ್ವಿತ್ರಕುಷ್ಠಕಫಕ್ರಿಮೀನ್ ॥
ಪಾಂಡುರೋಗಂ ಪ್ರಮೇಹಂ ಚ ಮೇದೋದೋಷನಿಬರ್ಹಣಃ ॥೨೦॥

**ಪ್ರತ್ಯಕ್ಪುಷ್ಪೀ ಪೀತತೈಲೋದಕೀರ್ಯಾ**
**ಶ್ವೇತಾಯುಗ್ಮಂ ತಾಪಸಾನಾಂ ಚ ವೃಕ್ಷಃ** ||೨೮||

**ಅಯಮರ್ಕಾದಿಕೋ ವರ್ಗಃ ಕಫಮೇದೋವಿಷಾಪಹಃ ||**
**ಕೃಮಿಕುಷ್ಠಪ್ರಶಮನೋ ವಿಶೇಷಾದ್ವ್ರಣಶೋಧನಃ ||** ||೨೯||

ಅರ್ಥಃ— ಎಕ್ಕ, ಬಿಳೇ ಎಕ್ಕ, ನಾಗದಂತೀ [ದಾಸಮೆಕ್ಕೇ ಜಾತಿ] ಕೋಳಿಕುಟಮನ ಗಡ್ಡೆ, ಭಾರಂಗ ಮೂಲ, ರಾಸ್ನಾ [ರೇಶಿಮೆಗಡ್ಡೆ], ವೃಶ್ಚಿಕಾಲಿ [ಚೇಳುಕೊಂಡಿ], ಹೊಲಸು ಹುಲಗಲಿ [ಹೇತಾರಿ], ಉತ್ತರಾಣಿ, ಸಣ್ಣ ಗಾಗುಂಚೆ ಬೀಜ [ಜ್ಯೋತಿಷ್ಮತಿ], ಹುಲಗಲಿ, ಶ್ವೇತಾ ಮತ್ತು ಮಹಾ ಶ್ವೇತಾ [ಕಣಿಹಿ, ಕಟಭಿ], ಇಂಗಳ ಗಿಡ ಈ ಅರ್ಕಾದಿ ಗಣವು ಕಫ, ಮೇದ, ಕೃಮಿ, ವಿಷ, ಕುಷ್ಠಗಳನ್ನು ನಾಶಮಾಡುವದು. ವಿಶೇಷವಾಗಿ ವ್ರಣ ಶೋಧನ ಮಾಡುವದು. (೨೯)

**ಸುರಸಯುಗಫಣಿಜ್ಝಂ ಕಾಲಮಾಲಾವಿಡಂಗಮ್**
**ಖರಬುಸವೃಷಕರ್ಣೀ ಕಟ್ಫಲಂ ಕಾಸಮರ್ದಃ ||**
**ಕ್ಷವಕಸರಸಿಭಾರ್ಂಗೀ † ಕಾರ್ಮುಕಾಃ ಕಾಕಮಾಚೀ**
**ಕುಲಹಲವಿಷಮುಷ್ಟೀಭೂಸ್ತೃಣೋ ಭೂತಕೇಶೀ** ||೩೦||

**ಸುರಸಾದಿರ್ಗಣಃ ಶ್ಲೇಷ್ಮಮೇದಃಕೃಮಿನಿಷೂದನಃ ||**
**ಪ್ರತಿಶ್ಯಾಯಾರುಚಿಶ್ವಾಸಕಾಸಘ್ನೋ ವ್ರಣಶೋಧನಃ** ||೩೧||

ಅರ್ಥಃ— ಬಿಳೇ ಮತ್ತು ಕರೇ ತುಳಸಿ, ಬಿಳೇ ಕಾಡು ತುಳಸಿ, ಕರೇ ಕಾಡ ತುಳಸಿ, ವಾವಡಿಂಗ, ಮರಗು, ಇಲಿಕಿವಿ, ಕಿರಿಶಿವನೀಗಿಡ, ಎಲವರಿಗೆ ಕ್ಷವಕ [ಶೀನು ಬರುವ ಗಿಡ], ಸರಸಿ, ಗಂಟು ಭಾರಂಗಿ, ಕಾರ್ಮುಕಾ [ಅತಿಮುಕ್ತಕ], ಕಾಕಮಾಚಿ [ಕಾಕೀ ಗಿಡ,ಗಣಿಕೆ], ಕುಲಹಲ [ಮುಂಡಿ], ವಿಷಮುಷ್ಟಿ [ಮಹಾನಿಂಬ], ಭೂಸ್ತೃಣ [ಗಂಜನೀ ಹುಲ್ಲು], ಭೂತಕೇಶೀ [ಲಕ್ಕಿ] ಈ ಸುರಸಾದಿಗಣವು ಕಫ, ಮೇದ, ಕೃಮಿ, ನೆಗಡಿ, ಅರುಚಿ, ಕೆಮ್ಮು, ದಮ್ಮುಗಳನ್ನು ಕಳೆಯುವದು. ವ್ರಣವನ್ನು ಶೋಧಿಸುವದು. (೩೧)

* ಕಾಮುಕ, ಕಾರ್ಮುಕ, ಕಾರ್ಮುಕಾ, ಎಂಬ ಪಾಠ ಭೇದಗಳು ಇರುತ್ತವೆ.

ಮುಷ್ಕಕಸ್ನುಗ್ವರಾದ್ವೀಪಿಪಲಾಶಧವಶಿಂಶಪಾಃ ॥
ಗುಲ್ಮಮೇಹಾಶ್ಮರೀಪಾಂಡುಮೇದೋಽರ್ಶಃಕಫಶುಕ್ರಜಿತ್ ॥೩೦॥

ಅರ್ಥ:— ಮುಷ್ಕಕ [ಮುಳ್ಳು ಮುತ್ತುಗ], ಮೂರೇಣಿನ ಕಳ್ಳಿ, ತ್ರಿಫಲಾ, ಚಿತ್ರಕ, ಮುತ್ತುಲ, ಧವ [ದಿಂಡಲು], ಶಿಸವ [ಬೀಟೆ], ಈ ಮುಷ್ಕಕಾದಿ ಗಣವು ಗುಲ್ಮ, ಮೇಹ, ಮೂತ್ರಾಶ್ಮರಿ, ಪಾಂಡು, ಮೇದ, ಮೂಲವ್ಯಾಧಿ, ಕಫ, ಶುಕ್ರಗಳನ್ನು ನಾಶಮಾಡುವದು. (೩೦)

ವತ್ಸಕಮೂರ್ವಾಭಾರ್ಂಗೀಕಟುಕಾಮರಿಚಂ ।
ಘುಣಪ್ರಿಯಾ ಚ ಗಂಡೀರಮ್ ।
ಏಲಾ ಪಾಠಾಜಾಜೀ ಕಟ್ವಂಗಫಲಾಜಮೋದಸಿದ್ಧಾರ್ಥವಚಾಃ ॥೩೩॥

ಜೀರಕಹಿಂಗುವಿಡಂಗಂ ಪಶುಗಂಧಾ ಪಂಚಕೋಲಕಂ ಹಂತಿ ॥

ಚಲಕಫಮೇದಃಪೀನಸಗುಲ್ಮಜ್ವರಶೂಲದುರ್ನಾಮ್ನಃ ॥೩೪॥

ಅರ್ಥ:— ಹಲಗತ್ತಿ [ಕೊಡಸಿಗ], ಹಾಲು ಕೊರಟಿಗೆ, ಭಾರಂಗಿ, ಕಟುಕರೋಹಿಣಿ, ಮೆಣಸು, ಅತಿಬಜೆ, ಮೂರೇಣಿನ ಕಳ್ಳಿ, ಯಾಲಕ್ಕಿ, ಅಗಳ- ಶುಂಠಿ [ಹಾಡೇಗಡ್ಡೆ], ಜೀರಗಿ, ಹೆಮ್ಮರ, ಮದನಫಲ, ಅಜವೋದ, ಬಿಳೀ ಸಾಸಿವೆ, ಬಜೆ, ಜೀರಗಿ, ಇಂಗು, ವಾವಡಿಂಗ, ಅಡವೀ ತುಳಸಿ, ಪಂಚಕೋಲ, [ಹಿಪ್ಪಲಿ, ಮೋಡಿಕಡ್ಡಿ, ಚವಕ, ಚಿತ್ರಕ, ಶುಂಠಿ], ಈ ವತ್ಸಕಾದಿಗಣವು ವಾತ, ಕಫ, ಮೇದ, ಪೀನಸ, ಗುಲ್ಮ, ಜ್ವರ, ಶೂಲ, ಮೂಲವ್ಯಾಧಿಗ ಗಳನ್ನು ನಾಶ ಮಾಡುತ್ತದೆ. (೩೪)

ವಚಾಜಲದದೇವಾಹ್ವನಾಗರಾತಿವಿಷಾಭಯಾಃ ॥
ಹರಿದ್ರಾದ್ವಯ-ಯಷ್ಟ್ಯಾಹ್ವಕಲಶೀಕುಟಜೋದ್ಭವಾಃ ॥ ॥೩೫॥

ವಚಾಹರಿದ್ರಾದಿಗಣಾವಾಮಾತೀಸಾರನಾಶನೌ ॥
ಮೇದಃಕಫಾಢ್ಯಪವನಸ್ತನ್ಯದೋಷನಿಬರ್ಹಣೌ ॥೩೬॥

ಅರ್ಥಃ— ಬಜೆ, ಜೇಕಿನಗಡ್ಡೆ, ದೇವದಾರು, ಶುಂಠಿ, ಅತಿವಿಷ, ಅಳ್ಳೀಕಾಯಿ, ಅರಿಷಿಣ, ಮರಅರಿಷಿಣ, ಜೇಷ್ಠಮಧು: ಒಂದೆಲೆ

ಹೊನ್ನಿ, ಇಂದ್ರಜವಿ—ಈ ವಚಾದಿ ಮತ್ತು ಹರಿದ್ರಾದಿ ಗಣಗಳು ಆಮಾತಿಸಾರವನ್ನೂ ಮೇದ, ಕಫ, ಊರುಸ್ತಂಭ, ಸ್ತನ್ಯ ದೋಷಗಳನ್ನೂ ನಾಶ ಮಾಡುವವು.

ಪ್ರಿಯಂಗುಪುಷ್ಪಾಂಜನಯುಗ್ಮಪದ್ಮಾ
ಪದ್ಮಾದ್ರಜೋಯೋಜನವಲ್ಲ್ಯನಂತಾ ॥
ಮಾನದ್ರುಮೋ ಮೋಚರಸಃ ಸಮಂಗಾ
ಪುನ್ನಾಗಶೀತಂ ಮದನೀಯಹೇತುಃ ॥೩೭॥

ಆಂಬಷ್ಠಾ ಮಧುಕಂ ನಮಸ್ಕರೀ ನಂದೀವೃಕ್ಷಪಲಾಶಕಚ್ಛುರಾಃ ॥
ರೋಧ್ರಂ ಧಾತಕಿಬಿಲ್ವಪೇಶಿಕೇಕಟ್ವಂಗಃಕಮಲೋದ್ಭವಂ ರಜಃ ೩೮॥

ಗಣೌ ಪ್ರಿಯಂಗ್ವಂಬಷ್ಠಾದೀ ಪಕ್ವಾತೀಸಾರನಾಶನೌ ॥
ಸಂಧಾನೀಯೌ ಹಿತೌ ಪಿತ್ತೇ ವ್ರಣಾನಾಮಪಿ ರೋಪಣೌ ॥೩೯॥

ಅರ್ಥಃ— ಪ್ರಿಯಂಗು, ಪುಷ್ಪ [ಸತುವಿನ ಹೂ], ಸ್ರೋತೋಂಜನ, ಮತ್ತು ಸೌವೀರಾಂಜನ, ಪದ್ಮಾ [ಭಾರಂಗಿ], ಕಮಲದ ಪರಾಗ, ಮಂಜಿಷ್ಠಾ, ನೆಲ ಇಂಗಳ, ಊರಲಮರ, ಬೂರಲಂಟು, ಒಳಮುಚ್ಚಕ ಪುನ್ನಾಗ [ಸುರ ಹೊನ್ನಿ], ಚಂದನ, ಧಾತಕೀ ಹೂ, ಮಯೂರ ಶಿಖೆ, ಜೇಷ್ಠಮಧು, ನಾಚಿಕೆಗಿಡ ( ಒಳಮುಚ್ಚಕ ) ನಂದೀವೃಕ್ಷ, ಮುತ್ತಲು, ಕರೇ ನೆಲಇಂಗಳ, ಲೋಧ್ರ, ಧಾತಕೀಗಿಡ, ಬಿಲ್ವಮಜ್ಜೆ, ಹೆಮ್ಮರ, ಕಮಲಕೇಶರ—ಈ ಪ್ರಿಯಂಗ್ವಾದಿ ಮತ್ತು ಅಂಬಷ್ಠಾದಿ ಗಣವು ಪಕ್ವಾತೀಸಾರನಾಶಕ, ಭಗ್ನ ಸಂಧಾನಕರ, ಪಿತ್ತನಾಶಕ, ಮತ್ತು ವ್ರಣರೋಪಕ ಇರುವವು. (೩೯)

ಮುಸ್ತಾವಚಾಗ್ನಿದ್ವಿನಿಶಾದ್ವಿತಿಕ್ತಾ
ಭಲ್ಲಾತಪಾಠಾತ್ರಿಫಲಾವಿಷಾಖ್ಯಾಃ ॥
ಕುಷ್ಠಂ ತ್ರುಟೀ ಹೈಮವತೀ ಚ ಯೋನಿ-
ಸ್ತನ್ಯಾಮಯಘ್ನಾ ಮಲಪಾಚನಾಶ್ಚ ॥೪೦॥

ಅರ್ಥಃ— ಜೇಕಿನಗಡ್ಡಿ, ಬಜಿ, ಚಿತ್ರಕ, ಅರಿಷಿಣ, ಮತ್ತು ಮರ ಅರಿಷಿಣ, ಕಟುಕರೋಹಿಣಿ, ಗಜಗು, ಕೇರು, ಅಗಳಶುಂಠಿ, ತ್ರಿಫಲಾ, ಅತಿ

ವಿಷ, ಕೋಷ್ಠ, ಯಾಪಕ್ವ, ಬಿಳೀ ಬಿಷಿ, ಈ ಪುಸ್ತಾವಿಗಣವು ಯೋನಿ ಮತ್ತು ಸ್ತನ್ಯರೋಗಗಳನ್ನು ನಾಶಮಾಡುವದು. ಮತ್ತು ಸಂಧಾನಕ ವಾಗಿರುವವು. (೪೦)

**ನ್ಯಗ್ರೋಧಪಿಪ್ಪಲಸದಾಫಲರೋಧ್ರಯುಗ್ಮಂ**
**ಜಂಬೂದ್ವಯಾರ್ಜುನಕಪೀತನಸೋಮವಲ್ಕಾಃ ॥**
**ಪ್ಲಕ್ಷಾಮ್ರವಂಜುಲಪಿಯಾಲಪಲಾಶನಂದೀ**
**ಕೋಲೀಕದಂಬವಿರಲಾ ಮಧುಕಂ ಮಧೂಕಮ್ ॥೪೧॥**

**ನ್ಯಗ್ರೋಧಾದಿಗಣೋ ವ್ರಣ್ಯಃ ಸಂಗ್ರಾಹೀ ಭಗ್ನ ಸಾಧನಃ**
**ಮೇದಃಪಿತ್ತಾಸ್ರತೃಡ್ದಾಹಯೋನಿರೋಗನಿಬರ್ಹಣಃ ॥೪೨॥**

ಅರ್ಥಃ— ಆಲ, ಅರಳಿ, ಅತ್ತಿ, ಲೋಧ್ರ ಮತ್ತು ಬಿಳೀಲೋಧ್ರ, ನೇರಿಲ[ಸಣ್ಣದೊಡ್ಡ ಜಾತಿ], ಮತ್ತಿ, ಕಪೀತನ(ಹೆಪ್ಪೀಜಾತಿ), ಬಿಳೀಖದಿರ. ಬಸರೀಗಿಡ, ಮಾವು, ಬೆತ್ತ, ಪಿಯಾಲ, ಮುತ್ತಲ, ನಂದೀಮರ, ಬೋರೆ, ಕದಂಬ [ಈಚಲ], ತುಮರೀಗಿಡ, ಜೇಷ್ಠಮಧು, ಇಪ್ಪಿಹೂ ಈ ನ್ಯಗ್ರೋಧಾದಿಗಣವು ವ್ರಣನಾಶಕವಿದ್ದು, ಗ್ರಾಹಕ, ಭಗ್ನಸಂಧಾನಕರ, ಮೇದ, ಪಿತ್ತ, ರಕ್ತಪಿತ್ತ, ನೀರಡಿಕೆ, ದಾಹ ಯೋನಿರೋಗಗಳ ನಾಶಕವಾಗಿರುವದು. (೪೨)

**ಏಲಾಯುಗ್ಮತುರುಷ್ಕಕುಷ್ಠಫಲಿನೀಮಾಂಸೀಜಲಧ್ಯಾಮಕಮ್ ॥**
**ಸ್ಪೃಕ್ಕಾಚೋರಕಚೋಚಪತ್ರತಗರಸ್ಥೌಣೇಯಜಾತೀರಸಾಃ ॥**
**ಶುಕ್ತಿರ್ವ್ಯಾಘ್ರನಖೋಽಮರಾಹ್ವಮಗುರುಃ ಶ್ರೀವಾಸಕಂ ಕುಂಕುಮಮ್**
**ಚಂಡಾಗುಗ್ಗುಲುದೇವಧೂಪಖಪುರಾಃ ಪುನ್ನಾಗನಾಗಾಹ್ವಯಮ್ ॥೪೩॥**

**ಏಲಾದಿಕೋ ವಾತಕಫೌ ವಿಷಂ ಚ ವಿನಿಯಚ್ಛತಿ ॥**
**ವರ್ಣಪ್ರಸಾದನಃ ಕಂಡೂಪಿಟಿಕಾಕೋಠನಾಶನಃ ॥೪೪॥**

ಅರ್ಥಃ— ಸಣ್ಣ ದೊಡ್ಡ ಯಾಲಕ್ಕಿಗಳು, ತುರುಷ್ಕ [ಶಿಲಾರಸ], ಕೋಷ್ಠ, ಗಹುಲಾ [ಹಾಲಮಡ್ಡಿ], ಜಟಾಮಾಂಸಿ, ಬಾಳದಬೇರು ರೋಹಿಸ ಹುಲ್ಲು, ಸ್ಪೃಕ್ಕಾ [ಗಂಧದ್ರವ್ಯಜಾತಿ], ಚೋರಕ,ದಾಲಚಿನ್ನಿ, ತಮಾಲಪತ್ರಿ

ತಗರ, ಸ್ಥೌಣೇಯ [ಮಂಚಪತ್ರಿ],ಚೋಳ [ರಕ್ತ], ಶುಕ್ತಿ [ನಖ], ವ್ಯಾಘ್ರ ನಖ, ದೇವದಾರು, ಅಗರು, ಗಂಧಾಬಿರೋಜಾ, ಕೇಶರ, ಚಂಡಾ [ಪಾರಸೀಕ ಅಜಿವಾನ], ಗುಗ್ಗುಲ, ರಾಳ, ಖಪುರ [ಶಲ್ಲಕೀಗಿಡದ ಅಂಟು], ಪುನ್ನಾಗ [ಸುರಗೀಹೂ], ನಾಗಕೇಶರ ಈ ಏಲಾದಿಗಣವು ವಾತ, ಕಫ, ವಿಷ, ಕಂಡೂ, ಬಕ್ಕೆ, ಶೀತಪಿತ್ತದ ಗಾದರಿಗಳನ್ನು ನಾಶಮಾಡುವದು. ಮತ್ತು ಕಾಂತಿ ಯನ್ನು ಕೊಡುವದು. (೪೪)

**ಶ್ಯಾಮಾದಂತೀದ್ರವಂತೀಕ್ರಮುಕಕುಟರಣಾಶಂಖಿನೀಚರ್ಮಸಾಹ್ವಾ**
**ಸ್ವರ್ಣಕ್ಷೀರೀಗವಾಕ್ಷೀಶಿಖರಿರಜನಕಚ್ಛಿನ್ನರೋಹಾಃ ಕರಂಜಾಃ**
**ಬಸ್ತಾಂತ್ರೀ ವ್ಯಾಧಿಘಾತೋ ಬಹಲಬಹುರಸಸ್ತೀಕ್ಷ್ಣವೃಕ್ಷಾತ್**
**ಫಲಾನಿ**
**ಶ್ಯಾಮಾದ್ಯೋ ಹಂತಿ ಗುಲ್ಮಂ ವಿಷಮರುಚಿಕಫೌ**
**ಹೃದ್ರುಜಂ ಮೂತ್ರಕೃಚ್ಛ್ರಮ್** ||೪೫||

ಅರ್ಥಃ— ಕರೇತಿಗಡಿ, ದಂತೀ, ದ್ರವಂತೀ [ದೊಡ್ಡದಂತೀ,] ಅಡಿಕೆ, ಬಿಳೇತಿಗಡಿ, ಶಂಖಿನಿ [ನೆಲಬೇವಿನಜಾತಿ], ಶೀಗೇಕಾಯಿ, ಗೊಳ ಗೊಳಿಕೆ, ಕಾಡಕವಡೀಕಾಯಿ, ಉತ್ತರಾಣಿ,ಕಪಿಲೆ,ಅಮೃತಬಳ್ಳಿ, ಹುಲಗಲಿ, ವರಧಾರಾ, ಕಕ್ಕಿ, ನುಗ್ಗಿ, ಕಬ್ಬು, ಗೋವಿನಕಾಯಿ ಈ ಶ್ಯಾಮಾದಿಗಣವು ಗುಲ್ಮ ವಿಷ ಅರುಚಿ ಕಫ ಹೃದ್ರೋಗ ಮೂತ್ರಕೃಚ್ಛ್ರಗಳನ್ನು ನಾಶ ಮಾಡುತ್ತದೆ. (೪೫)

**ತ್ರಯಸ್ತ್ರಿಂಶದಿತಿ ಪ್ರೋಕ್ತಾ ವರ್ಗಾಸ್ತೇಷು ತ್ವಲಾಭತಃ ||**
**ಯುಂಜ್ಯಾತ್ತದ್ವಿಧಮನ್ಯಚ್ಚ ದ್ರವ್ಯಂ ಜಹ್ಯಾದಯೌಗಿಕಮ್** ||೪೬||

ಅರ್ಥಃ— ಈ ಪ್ರಕಾರ ೩೩ ವರ್ಗಗಳು ಹೇಳಲ್ಪಟ್ಟಿವೆ. ಇವು ಗಳಲ್ಲಿ ಒಂದು ಸಿಗದಿದ್ದರೆ ರಸ ವೀರ್ಯ ವಿಪಾಕಗಳಿಂದ ಸಮವಾದ ಎರಡನೇ ದ್ರವ್ಯಗಳನ್ನು ಉಪಯೋಗಿಸಬೇಕು.ಅಯೋಗ್ಯವಾದದ್ದನ್ನು ಬಿಡಬೇಕು.(೪೬)

**ಏತೇ ವರ್ಗಾ ದೋಷದೂಷ್ಯಾದ್ಯಪೇಕ್ಷ್ಯ**
**ಕಲ್ಕಕ್ವಾಥಸ್ನೇಹಲೇಹಾದಿಯುಕ್ತಾಃ ||**

ಪಾನೇ ನಸ್ಯೇಽನ್ವಾಸನೇಽಂತರ್ಬಹಿರ್ವಾ
ಲೇಪಾಭ್ಯಂಗೈರ್ಘ್ನಂತಿ ರೋಗಾನ್ ಸುಕೃಚ್ಛ್ರಾನ್ ||೪೬||

ಅರ್ಥ:— ಈ ವರ್ಗಗಳಲ್ಲಿಯ ಔಷಧಿಗಳನ್ನು ದೋಷದೂಷ್ಯಾದಿಗಳನ್ನು ವಿಚಾರಿಸಿ ಕಲ್ಕ, ಕಷಾಯ, ಸ್ನೇಹ, ಲೇಹ ಮುಂತಾದ ರೂಪಗಳಿಂದ ಪಾನ, ನಸ್ಯ, ಅನುವಾಸನ, ಲೇಪ, ಅಭ್ಯಂಗಗಳಿಂದ ಒಳಹೊರಗೆ ಉಪಯೋಗಿಸಿದರೆ ಅತಿ ಕಷ್ಟಸಾಧ್ಯ ರೋಗಗಳು ಕೂಡ ನಷ್ಟವಾಗುವವು. ||೪೬||

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ಶೋಧನಾದಿಗಣಸಂಗ್ರಹೋ ನಾಮ ಪಂಚದಶಃ ಸರ್ಗಃ ಸಮಾಪ್ತಃ |**

ಇತಿ ಶ್ರೀ ಮದಾದ್ಯಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಸೂತ್ರಸ್ಥಾನದಲ್ಲಿಯ ೧೫ನೆಯ ಅಧ್ಯಾಯದ ಟೀಕೆಯು ಮುಗಿದುದು.



# ೧೩ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ ಶೋಧನಗಳನ್ನು ಹೇಳಿದರು. ಶೋಧನ ಕೊಡಬೇಕಾದರೆ ಮೊದಲು ಸ್ನೇಹಸ್ವೇದವಿಧಿಗಳನ್ನು ಮಾಡಬೇಕು. ಇಲ್ಲವಾದರೆ ಅಪಾಯವಾಗುವದೆಂದು ಮುಂದೆ (ಸೂ. ೧೫ ೧೯) ಹೇಳಿದ್ದಾರೆ. ಆದಕ್ಕಾಗಿ ಈ ಅಧ್ಯಾಯದಲ್ಲಿ ಸ್ನೇಹವಿಧಿಯನ್ನೂ ಮುಂದಿನ ಅಧ್ಯಾಯದಲ್ಲಿ ಸ್ವೇದವಿಧಿಯನ್ನೂ ಹೇಳುತ್ತಾರೆ.

**ಅಥಾತಃ ಸ್ನೇಹ*ವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥ:— ಇನ್ನು ಮೇಲೆ ಸ್ನೇಹವಿಧಿಯನ್ನು ಹೇಳಿದ ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ॥**

ಅರ್ಥ:—ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಗುರುಶೀತಸರಸ್ನಿಗ್ಧಮಂದಸೂಕ್ಷ್ಮ ಮೃದುದ್ರವಮ್ ॥**
**ಔಷಧಂ ಸ್ನೇಹನಂ ಪ್ರಾಯೋ, ವಿಪರೀತಂ ವಿರೂಕ್ಷಣಮ್ ॥೧॥**

ಅರ್ಥ:— ಜಡ, ಶೀತ, ಸಾರಕ ಸ್ನಿಗ್ಧ, ಮಂದ ಸೂಕ್ಷ್ಮ ಮೃದು, ಮತ್ತು ದ್ರವವಾದ ಔಷಧವು ಬಹುತರ ಸ್ನೇಹನವಿರುತ್ತದೆ. ಇದರ ವಿಪರೀತ ಅಂದರೆ ಹಗುರು, ಉಷ್ಣ, ಸ್ಥಿರ, ರೂಕ್ಷ, ತೀಕ್ಷ್ಣ, ಸ್ಥೂಲ, ಕಠಿಣ, ಗಟ್ಟಿಯಾದ ವಸ್ತುವು ವಿರೂಕ್ಷಣವಿರುತ್ತದೆ.

ಟಿಪ್ಪಣಿ:— ಸಾಸಿವೆಯ ಎಣ್ಣೆ, ಆಡಿನ ಹಾಲು ಮತ್ತು ಕೆಲವು ಮಾಂಸಗಳು ಹಗುರು ಇದ್ದರೂ ಸ್ನೇಹನವಾಗಿವೆ. ಮೀನ ಕೋಣಗಳ ಮಾಂಸವು ಉಷ್ಣವಿದ್ದರೂ ಸ್ನೇಹನವಾಗಿರುತ್ತದೆ. ಇದರಂತೆ ಮುಳ್ಳಜವೆ, ಅಲಸಂದಿಗಳು ಜಡ, ಶೀತ ಮುಂತಾದ ಗುಣವುಳ್ಳವಾಗಿದ್ದರೂ ವಿರೂಕ್ಷಣಗಳಾಗಿವೆ. ಅದ್ದರಿಂದ' ಇಲ್ಲಿ 'ಪ್ರಾಯಃ' ಎಂದು ಹೇಳಿದರು. (೧)

---

* ಸ್ನೇಹವಿಧಿಯು ಚರಕದ ಸೂ. ೧೩ನೇ ಸುಶ್ರುತದ ಚಿ. ೩೧ನೇ ಅಷ್ಟಾಂಗಸಂಗ್ರಹದ ಸೂ ೨೫ನೇ ಅಧ್ಯಾಯಗಳಲ್ಲಿ ಹೇಳಲಾಗಿದೆ,

**ಸರ್ಪಿರ್ಮಜ್ಜಾ ವಸಾ ತೈಲಂ ಸ್ನೇಹೇಷು ಪ್ರವರಂ ಮತಮ್ ।**
**ತತ್ರಾಪಿ ಚೋತ್ತಮಂ ಸರ್ಪಿಃ ಸಂಸ್ಕಾರಸ್ಯಾನುವರ್ತನಾತ್ ॥೨॥**

ಅರ್ಥ:— ಸ್ನೇಹಗಳಲ್ಲಿ ತುಪ್ಪ, ಮಜ್ಜೆ, ನೆಣ, ತೈಲಗಳು ಶ್ರೇಷ್ಠ. ಅದರಲ್ಲಿಯೂ ತುಪ್ಪ ಶ್ರೇಷ್ಠವು. ಯಾಕೆಂದರೆ ಅದು ಸಂಸ್ಕಾರವನ್ನು ಅನುಸರಿಸುತ್ತದೆ.

**ಟಿಪ್ಪಣಿ:—** ತುಪ್ಪವು ಶೀತ ದ್ರವ್ಯಗಳಿಂದ ಸಂಸ್ಕರಿಸಿದರೆ ಶೀತವೂ ಉಷ್ಣ ದ್ರವ್ಯಗಳಿಂದ ಸಂಸ್ಕರಿಸಿದರೆ ಉಷ್ಣವೂ ಆಗುವದು. ಎಂಬ ಭಾವವು. (೨)

**ಪಿತ್ತಘ್ನಾಸ್ತೇ ಯಥಾಪೂರ್ವಮಿತರಘ್ನಾ ಯಥೋತ್ತರಮ್ ॥**

ಅರ್ಥ:—ಹಿಂದು ಹಿಂದಿನವು ಒಂದಕ್ಕಿಂತ ಒಂದು ಹೆಚ್ಚು ಪಿತ್ತನಾಶಕಗಳೂ ಮುಂದು ಮುಂದಿನವು ಹೆಚ್ಚು ವಾತ ಕಫನಾಶಕಗಳೂ ಆಗಿರುವವು.

**ಟಿಪ್ಪಣಿ:—**ತೈಲಕ್ಕಿಂತ ನೆಣವೂ ನೆಣಕ್ಕಿಂತ ಮಜ್ಜೆಯೂ ಮಜ್ಜೆಗಿಂತ ತುಪ್ಪವೂ ಹೆಚ್ಚು ಪಿತ್ತ ನಾಶಕವಾಗಿರುವದು. ತುಪ್ಪಕ್ಕಿಂತ ಮಜ್ಜೆಯೂ ಮಜ್ಜೆಗಿಂತ ನೆಣವೂ ನೆಣಕ್ಕಿಂತ ತೈಲವು ಹೆಚ್ಚು ವಾತಕಫ ನಾಶಕವಾಗಿರುವದು.

**ಘೃತಾತ್ತೈಲಂ ಗುರು ವಸಾ ತೈಲಾನ್ಮಜ್ಜಾ ತತೋಽಪಿ ಚ ॥೩॥**

ಅರ್ಥ:—ತುಪ್ಪಕ್ಕಿಂತ ಎಣ್ಣೆಯು ಜಡ. ಅದಕ್ಕಿಂತ ನೆಣವು ಜಡವು ಅದಕ್ಕಿಂತ ಮಜ್ಜೆಯು ಹೆಚ್ಚು ಜಡವಾಗಿರುತ್ತದೆ. (೩)

**ದ್ವಾಭ್ಯಾಂ ತ್ರಿಭಿಶ್ಚತುರ್ಭಿಸ್ತೈರ್ಯಮಕಸ್ತ್ರಿವೃತೋ ಮಹಾನ್ ॥**

ಅರ್ಥ:— ಎರಡು ಸ್ನೇಹಗಳಿಂದ ಯಮಕ, ಮೂರು ಸ್ನೇಹಗಳಿಂದ ತ್ರಿವೃತ, ನಾಲ್ಕು ಸ್ನೇಹಗಳಿಂದ ಮಹಾನ್ ಎಂಬ ಸ್ನೇಹವಾಗುವದು. (೩॥)

ಇನ್ನು ಮೇಲೆ ಸ್ನೇಹಕ್ಕೆ ಯೋಗ್ಯರನ್ನು ಹೇಳುತ್ತಾರೆ.

**ಸ್ವೇದ್ಯಸಂಶೋಧ್ಯಮದ್ಯಸ್ತ್ರೀವ್ಯಾಯಾಮಾಸಕ್ತಚಿಂತಕಾಃ ॥೪॥**
**ವೃದ್ಧಬಾಲಾಬಲಕೃಶಾ ರೂಕ್ಷಾಃ ಕ್ಷೀಣಾಸ್ರರೇತಸಃ ॥**

ವಾತಾರ್ತಸ್ಯಂದತಿಮಿರದಾರುಣಪ್ರತಿಬೋಧಿನಃ ||೫||
ಸ್ನೇಹ್ಯಾಃ...................................................

ಅರ್ಥಃ— ಸ್ವೇದಕ್ಕೆ ಮತ್ತು ಶೋಧನಕ್ಕೆ ಅರ್ಹರಿದ್ದವರೂ, ಮದ್ಯ, ಸ್ತ್ರೀಸಂಗ ವ್ಯಾಯಾಮದಲ್ಲಿ ಆಸಕ್ತರಿದ್ದವರೂ, ಚಿಂತೆಯುಳ್ಳವರೂ, ವೃದ್ಧರೂ, ಬಾಲರೂ, ಅಶಕ್ತರೂ, ಕೃಶರೂ, ರೂಕ್ಷರೂ, ರಕ್ತ ಶುಕ್ರಗಳ ಕ್ಷಯವಿದ್ದವರೂ, ವಾತಪೀಡಿತರೂ, ಅಭಿಷ್ಯಂದ (ಕಣ್ಣುಬೇನೆ), ತಿಮಿರ (ನೇತ್ರರೋಗ), ಮಲಗಿ ಎದ್ದ ಕೂಡಲೆ ಕಣ್ಣು ತೆರೆಯಲು ತ್ರಾಸವಾಗುವಂಥವರೂ ಸ್ನೇಹನಕ್ಕೆ ಯೋಗ್ಯರು. (೫|)

........ನತ್ವತಿಮಂದಾಗ್ನಿತೀಕ್ಷ್ಣಾಗ್ನಿಸ್ಥೂಲದುರ್ಬಲಾಃ ||
ಊರುಸ್ತಂಭಾತಿಸಾರಾಽಽಮಗಲರೋಗಗರೋದರೈಃ ||೬||

ಮೂರ್ಛಾಚ್ಛರ್ದ್ಯರುಚಿಶ್ಲೇಷ್ಮತೃಷ್ಣಾಮದ್ಯೈಶ್ಚ ಪೀಡಿತಾಃ ||
ಅಪಪ್ರಸೂತಾ ಯುಕ್ತೇ ಚ ನಸ್ಯೇ ಬಸ್ತೌ ವಿರೇಚನೇ ||೭||

ಅರ್ಥಃ— ಅತಿ ಮಂದ ಅಥವಾ ಅತಿ ತೀಕ್ಷ್ಣ ಅಗ್ನಿ ಉಳ್ಳವರು, ಅತಿ ಸ್ಥೂಲರು, ಅತಿ ದುರ್ಬಲರು, ಊರುಸ್ತಂಭ, ಅತಿಸಾರ, ಆಮರೋಗ, ಕಂಠರೋಗ, ವಿಷ, ಉದರರೋಗಗಳಿಂದಲೂ ಮೂರ್ಛೆ, ವಾಂತಿ, ಅರುಚಿ, ಕಫ,ನೀರಡಿಕೆ,ಮದ್ಯಗಳಿಂದ ಪೀಡಿತರೂ,ಗರ್ಭದ ಸ್ರಾವ ಅಥವಾ ಪಾತ ಆದವರೂ, ನಸ್ಯ, ಬಸ್ತಿ, ಅಥವಾ ವಿರೇಚನ ತಕ್ಕೊಂಡವರೂ ಸ್ನೇಹನಕ್ಕೆ ಯೋಗ್ಯರಲ್ಲ. (೭)

ಈ ನಾಲ್ಕು ಸ್ನೇಹಗಳಲ್ಲಿ ಯಾವದು ಯಾರಿಗೆ ಹಿತವೆಂಬುದನ್ನು ಹೇಳುತ್ತಾರೆ.

ತತ್ರ ಧೀಸ್ಮೃತಿ*ಮೇಧಾಗ್ನಿಕಾಂಕ್ಷಿಣಾಂ ಶಸ್ಯತೇ ಘೃತಮ್ ||

ಅರ್ಥಃ— ಈ ಸ್ನೇಹಗಳಲ್ಲಿ ಬುದ್ಧಿ, ಸ್ಮರಣಶಕ್ತಿ, ಧಾರಣಾಶಕ್ತಿ ಮತ್ತು ಅಗ್ನಿಗಳನ್ನು ಬಯಸುವವರಿಗೆ ತುಪ್ಪವು ಶ್ರೇಷ್ಠವು. (೭||)

† 'ಮೇಧಾದಿ' ಎಂಬು ಹೇಮಾದ್ರಿಯ ಪಾಠವು.

ಗ್ರಂಥಿನಾಡೀಕೃಮಿಶ್ಲೇಷ್ಮಮೇದೋಮಾರುತರೋಗಿಷು ೮।
ತೈಲಂ ಲಾಘವದಾರ್ಢ್ಯಾರ್ಥಿಕ್ರೂರಕೋಷ್ಠೇಷು ದೇಹಿಷು ।

ಅರ್ಥ:— ಗ್ರಂಥಿ, ನಾಡೀವ್ರಣ, ಕೃಮಿ, ಕಫ, ಮೇದ ವಾತ ರೋಗಿಗಳಿಗೂ ಶರೀರಕ್ಕೆ ಕೃಶತ್ವ ಮತ್ತು ಗಟ್ಟಿತನವನ್ನು ಬಯಸುವವರಿಗೂ, ಕ್ರೂರ ಕೋಷ್ಠವವರಿಗೂ ತೈಲವು ಹೆಚ್ಚು ಯೋಗ್ಯವು. (೮)

ವಾತಾತಪಾಧ್ವಭಾರಸ್ತ್ರೀವ್ಯಾಯಾಮಕ್ಷೀಣಧಾತುಷು ೯।
ರೂಕ್ಷಕ್ಲೇಶಕ್ಷಮಾತ್ಯಗ್ನಿವಾತಾವೃತಪಥೇಷು ಚ ।
ಶೇಷೌ........................ ........................

ಅರ್ಥ:— ಗಾಳಿ, ಬಿಸಿಲು, ಹಾದಿ ನಡೆಯೋಣ, ಭಾರ, ಸ್ತ್ರೀಸಂಗ, ವ್ಯಾಯಾಮಗಳಿಂದ ಧಾತುಕ್ಷಯವನ್ನು ಹೊಂದಿದವರಿಗೂ, ರೂಕ್ಷರಿಗೂ, ದುಃಖಸಹನ ಮಾಡುವವರಿಗೂ, ಅತ್ಯಗ್ನಿಗಳಿಗೂ, ವಾತದಿಂದ ಸ್ರೋತಸ್ಸುಗಳ ಪ್ರತಿಬಂಧನನ್ನು ಹೊಂದಿದವರಿಗೂ ಉಳಿದವು (ನೆಣ, ಮಜ್ಜೆಗಳು) ಹಿತಕರವು. (೯॥)

...........ವಸಾ ತು ಸಂಧ್ಯಸ್ಥಿಮರ್ಮಕೋಷ್ಠರುಜಾಸು ಚ ।೧೦।
ತಥಾ ದಗ್ಧಾಹತಭ್ರಷ್ಟಯೋನಿಕರ್ಣಶಿರೋರುಜಿ ॥

ಅರ್ಥ:— ನೆಣವು ಸಂಧಿ, ಅಸ್ಥಿ ಮರ್ಮ, ಕೋಷ್ಠಗಳ ಬೇನೆಗಳಲ್ಲಿಯೂ, ಸುಟ್ಟಗಾಯ, ಬಡಿತ, ಯೋನಿಭ್ರಂಶ, ಕರ್ಣರೋಗ, ಶಿರೋರೋಗಗಳಲ್ಲಿಯೂ ಹಿತಕರವು (೧೦॥)

ಯಾವ ಕಾಲದಲ್ಲಿ ಯಾವ ಸ್ನೇಹದ ಉಪಯೋಗವು ಯೋಗ್ಯವೆಂಬುದನ್ನು ಹೇಳುತ್ತಾರೆ

ತೈಲಂ ಪ್ರಾವೃಷಿ, ವರ್ಷಾಂತೇ ಸರ್ಪಿರನ್ಯೌ ತು ಮಾಧವೇ ॥೧೧॥

ಅರ್ಥ:— ಮಳೆಗಾಲದಲ್ಲಿ ತೈಲವನ್ನು, ಶರತ್ ಕಾಲದಲ್ಲಿ ತುಪ್ಪವನ್ನು, ವಸಂತ ಕಾಲದಲ್ಲಿ ನೆಣ ಮಜ್ಜೆಗಳನ್ನು ಉಪಯೋಗಿಸಬೇಕು. (೧೧)

ಋತೌ ಸಾಧಾರಣೇ ಸ್ನೇಹಃ ಶಸ್ತೋಽಹ್ನಿ ವಿಮಲೇ ರವೌ ॥

ಅರ್ಥಃ— ಬಹಳ ಶೀತ ಉಷ್ಣವಿರದ ಋತುವಿನಲ್ಲಿ (ಶ್ರಾವಣ, ಕಾರ್ತಿಕ, ಚೈತ್ರ ಮಾಸಗಳಲ್ಲಿ), ಹಗಲು ಸೂರ್ಯನು ಸ್ಪಷ್ಟವಿದ್ದಾಗ್ಗೆ ಸ್ನೇಹವು ಯೋಗ್ಯವು. (೧೧॥)

ತೈಲಂ ತ್ವರಾಯಾಂ ಶೀತೇಽಪಿ, ಘರ್ಮೇಽಪಿ ಚ ಘೃತಂ ನಿಶಿ ॥೧೨॥
ನಿಶ್ಯೇವ ಪಿತ್ತೇ ಪವನೇ ಸಂಸರ್ಗೇ ಪಿತ್ತವತ್ಯಪಿ ॥

ಅರ್ಥಃ— ಸ್ನೇಹವನ್ನು ಕೂಡಲೇ ಕೊಡಬೇಕಾಗಿದ್ದರೆ ಶೀತಕಾಲದಲ್ಲಿಯೂ ತೈಲವನ್ನು ಕೊಡಬಹುದು. ಬೇಸಿಗೆಯಲ್ಲಿಯೂ ರಾತ್ರಿಯಲ್ಲಿ ಘೃತವನ್ನು ಕೊಡಬಹುದು. ಪಿತ್ತ ಕೋಪದಲ್ಲಿ, ಪಿತ್ತದ ವಿಕಾರದಲ್ಲಿ ಮತ್ತು ವಾತಕೋಪದಲ್ಲಿ, ವಾತದ ವಿಕಾರದಲ್ಲಿ ಅಥವಾ ಪಿತ್ತಾಧಿಕ ವಾತ ಪಿತ್ತ ವಿಕಾರದಲ್ಲಿ ಅಥವಾ ಕಫ ಪಿತ್ತ ವಿಕಾರದಲ್ಲಿ ಸ್ನೇಹವನ್ನು ಕೊಡುವದಾದರೆ ತುಪ್ಪವನ್ನೇ ಕೊಡಬೇಕು ಮತ್ತು ಅದನ್ನು ರಾತ್ರಿಯಲ್ಲಿಯೇ ಉಪಯೋಗಿಸಬೇಕು. (೧೨॥)

ನಿಶ್ಯನ್ಯಥಾ ವಾತಕಫಾದ್ರೋಗಾಃ ಸ್ಯುಃ ಪಿತ್ತತೋ ದಿವಾ ॥೧೩॥

ಅರ್ಥಃ— ಇಲ್ಲವಾದರೆ ಅಂದರೆ ಶೀತಕಾಲದಲ್ಲಿ ರಾತ್ರಿಯಲ್ಲಿ ತುಪ್ಪವನ್ನು ಉಪಯೋಗಿಸಿದರೆ ವಾತ ಕಫ ರೋಗಗಳುಂಟಾಗುವವು. ಹಗಲು ಬೇಸಿಗೆಯಲ್ಲಿ ತೈಲವನ್ನು ಉಪಯೋಗಿಸುವದರಿಂದ ಪಿತ್ತದ ರೋಗಗಳುಂಟಾಗುವವು.

ಸ್ನೇಹವನ್ನು ಹೇಗೆ ಉಪಯೋಗಿಸಬೇಕು ಎಂಬದನ್ನು ಹೇಳುತ್ತಾರೆ.

ಯುಕ್ತ್ಯಾಽವಚಾರಯೇತ್ಸ್ನೇಹಂ ಭಕ್ಷ್ಯಾದ್ಯನ್ನೇನ ಬಸ್ತಿಭಿಃ ॥
ನಸ್ಯಾಭ್ಯಂಜನಗಂಡೂಷಮೂರ್ಧಕರ್ಣಾಕ್ಷಿತರ್ಪಣೈಃ ॥೧೪॥

ಅರ್ಥಃ— ಸ್ನೇಹವನ್ನು ಕಾಲ, ಕರ್ಮ, ಭೂಮಿ, ದೇಹ, ದೋಷ, ಪ್ರಮಾಣಗಳನ್ನು ಸರಿಯಾಗಿ ಆಲೋಚಿಸಿ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯಗಳೊಡನೆಯೂ, ಮೂರೂ ಬಸ್ತಿ, ನಸ್ಯ, ಅಭ್ಯಂಗ, ಗಂಡೂಷ, ಶಿರೋಬಸ್ತಿ, ಕರ್ಣಪೂರಣ, ಅಕ್ಷಿತರ್ಪಣಗಳಿಂದಲೂ ಉಪಯೋಗಿಸಬೇಕು. (೧೪)

**ರಸಭೇದೈಕಕತ್ವಾಭ್ಯಾಂ ಚತುಃಷಷ್ಟಿರ್ವಿಚಾರಣಾಃ ।**
**ಸ್ನೇಹಸ್ಯಾನ್ಯಾಭಿಭೂತತ್ವಾದಲ್ಪತ್ವಾಚ್ಚ ಕ್ರಮಾತ್ಸ್ಮೃತಾ. ॥೧೫॥**

ಅರ್ಥ:— ಬೇರೆ ಬೇರೆ ರಸಭೇದಗಳುಳ್ಳ ಅನ್ನದೊಡನೆ ಕೊಡಲ್ಪಡುವ ಸ್ನೇಹದ ಭೇದಗಳು ಅರವತ್ತುಮೂರು. ಮತ್ತು ಬಸ್ತಿ ಮುಂತಾದವುಗಳಿಂದ ಕೊಡಲ್ಪಡುವ ಕೇವಲ ಸ್ನೇಹದ ಭೇದವು ಒಂದು. ಹೀಗೆ ಸ್ನೇಹ ಪ್ರಯೋಗದ ಅರವತ್ತುನಾಲ್ಕು ಭೇದಗಳಿಗೆ (ಸ್ನೇಹದ ಶಕ್ತಿಯು ವಿಚಾರ ಮಾಡಬೇಕಾಗುವದರಿಂದ) 'ವಿಚಾರಣೆ' ಎಂಬ ಸಂಜ್ಞೆಯುಂಟು. ಏಕೆಂದರೆ ಅನ್ನದೊಡನೆ ಕೊಟ್ಟದ್ದರಲ್ಲಿ ಸ್ನೇಹದ ಶಕ್ತಿಯು ಕುಗ್ಗಿರುತ್ತದೆ. ಮತ್ತು ಬಸ್ತಿ ಮುಂತಾದವುಗಳ ಪ್ರಯೋಗದಲ್ಲಿ ಸ್ನೇಹದ ಪ್ರಮಾಣವೇ ಕಡಿಮೆ ಇರುತ್ತದೆ. (೧೫)

**ಯಥೋಕ್ತಹೇತ್ವಭಾವಾಚ್ಚ ನಾಚ್ಛಪೇಯೋ ವಿಚಾರಣಾ ।**
**ಸ್ನೇಹಸ್ಯ ಕಲ್ಪಃ ಸ ಶ್ರೇಷ್ಠಃ ಸ್ನೇಹಕರ್ಮಾಶುಸಾಧನಾತ್ ॥೧೬॥**

ಅರ್ಥ:— ಮೇಲೆ ಹೇಳಿದ ಕಾರಣಗಳು (ಸ್ನೇಹದ ಶಕ್ತಿ ಕಡಿಮೆಯಾಗೋಣ ಮತ್ತು ಸ್ನೇಹದ ಪ್ರಮಾಣ ಕಡಿಮೆ ಇರೋಣ) ಇಲ್ಲದ್ದರಿಂದ ಕೇವಲ ಸ್ನೇಹಪಾನವು ವಿಚಾರಣೆಯಲ್ಲ. ಸ್ನೇಹದ ಕಾರ್ಯವನ್ನು ಶೀಘ್ರ ಮಾಡೋಣದರಿಂದ ಆ ಸ್ನೇಹದ ಕಲ್ಪವು ಶ್ರೇಷ್ಠವು.

ಟಿಪ್ಪಣಿ:— ಇದರಲ್ಲಿ ಸ್ನೇಹದ ಶಕ್ತಿಯು ಇಷ್ಟೆಂದು ಗೊತ್ತಿರುವದರಿಂದ ವಿಚಾರದ ಅವಶ್ಯಕತೆ ಇಲ್ಲ. (೧೬)

ಈಗ್ಗೆ ಶುದ್ಧ ಪೇಯದ ಮೂರು ಮಾತ್ರೆಗಳನ್ನು ಹೇಳುತ್ತಾರೆ.

**ದ್ವಾಭ್ಯಾಂ ಚತುರ್ಭಿರಷ್ಟಾಭಿರ್ಯಾಮೈರ್ಜೀರ್ಯಂತಿ ಯಾಃ ಕ್ರಮಾತ್ ।**
**ಹ್ರಸ್ವಮಧ್ಯೋತ್ತಮಾ ಮಾತ್ರಾಸ್ತಾಸ್ತಾಭ್ಯಶ್ಚ ಹ್ರಸೀಯಸೀಮ್ ॥೧೭॥**
**ಕಲ್ಪಯೇದ್ವೀಕ್ಷ್ಯ ದೋಷಾದೀನ್ ಪ್ರಾಗೇವ ತು ಹ್ರಸೀಯಸೀಮ್ ॥**

ಅರ್ಥ:— ಎರಡು, ನಾಲ್ಕು, ಎಂಟು ಪ್ರಹರಗಳಿಂದ ಪಚನವಾಗುವ ಸ್ನೇಹದ ಪ್ರಮಾಣಕ್ಕೆ ಕ್ರಮವಾಗಿ ಹ್ರಸ್ವ, ಮಧ್ಯ, ಉತ್ತಮ ಮಾತ್ರೆಗಳೆಂದು ಅನ್ನುವರು. ದೋಷ, ಔಷಧ, ದೇಶ, ಕಾಲ ಮುಂತಾದವುಗಳನ್ನು ಆಲೋಚಿಸಿ ಅವಕ್ಕೂ ಸಣ್ಣ(ಒಂದೇ ಪ್ರಹರದಲ್ಲಿ ಜೀರ್ಣವಾಗುವ) ಮಾತ್ರೆ

ಯನ್ನು ಕೊಡಬೇಕು. ಆರಂಭದಲ್ಲಿಯಂತೂ ಎಲ್ಲರಿಗೆ ಸಣ್ಣ ಮಾತ್ರೆಯನ್ನೇ ಕೊಡಬೇಕು. (೧೭॥)

ಶೋಧನ, ಶಮನ, ಬೃಂಹಣ ಎಂದು ಮೂರುವಿಧದ ಸ್ನೇಹಗಳ ಕಾಲ, ಪ್ರಮಾಣ, ಲಕ್ಷಣಗಳನ್ನು ಹೇಳುತ್ತಾರೆ.

**ಹ್ಯಸ್ತನೇ ಜೀರ್ಣ ಏವಾನ್ನೇ ಸ್ನೇಹೋಽಚ್ಛಃ ಶುದ್ಧಯೇ ಬಹುಃ ॥೧೮॥**

**ಶಮನಃ ಕ್ಷುದ್ವತೋಽನನ್ನೋ ಮಧ್ಯಮಾತ್ರಶ್ಚ ಶಸ್ಯತೇ ॥**
**ಬೃಂಹಣೋ ರಸಮದ್ಯಾದ್ಯೈಃ ಸಭಕ್ತೋಽಲ್ಪಃ............**

ಅರ್ಥಃ— ಶೋಧನ ಬೇಕಾಗಿದ್ದರೆ ಕೇವಲ ಸ್ನೇಹವನ್ನು ಉತ್ತಮ ಮಾತ್ರೆಯಿಂದ ಹಿಂದಿನ ಅನ್ನ ಜೀರ್ಣವಾದ ಕೂಡಲೆ ಕೊಡಬೇಕು. ಶಮನ ವಾಗಬೇಕಾಗಿದ್ದರೆ, ಹಸಿವೆಯಾದ ನಂತರ ಕೇವಲ ಸ್ನೇಹವನ್ನು ಮಧ್ಯಮ ಮಾತ್ರೆಯಿಂದ ಕೊಡಬೇಕು. ಬೃಂಹಣವಾಗಬೇಕಾಗಿದ್ದರೆ ಮಾಂಸರಸ ಮದ್ಯ ಮುಂತಾದವುಗಳ ಸಂಗಡ ಆಹಾರದೊಡನೆ ಸ್ನೇಹವನ್ನು ಕೂಡಿಸಿ ಅಲ್ಪ ಮಾತ್ರೆಯಿಂದ ಕೊಡಬೇಕು. (೧೮॥)

**.ಹಿತಃ ಸ ಚ ॥೧೯॥**

**ಬಾಲವೃದ್ಧಪಿಪಾಸಾರ್ತಸ್ನೇಹದ್ವಿಣ್ಮದ್ಯಶೀಲಿಷು ॥**
**ಸ್ತ್ರೀಸ್ನೇಹನಿತ್ಯಮಂದಾಗ್ನಿಸುಖಿತಕ್ಲೇಶಭೀರುಷು ॥೨೦॥**
**ಮೃದುಕೋಷ್ಠಾಲ್ಪದೋಷೇಷು ಕಾಲೇ ಚೋಷ್ಣೇ ಕೃಶೇಷು ಚ ॥**

ಅರ್ಥಃ— ಆ ಬೃಂಹಣ ಸ್ನೇಹವು ಬಾಲ, ವೃದ್ಧರಿಗೂ ನೀರಡಿಸಿದವರಿಗೂ ಸ್ನೇಹ ಬೇಡಾದವರಿಗೂ ಹೆರೆಕುಡಿಯುವವರಿಗೂ ದಿನಾಲು ಸ್ತ್ರೀಸಂಗ ಸ್ನೇಹಪಾನ ಮಾಡುವವರಿಗೂ ಮಂದಾಗ್ನಿ, ಸುಕುಮಾರ, ದುಃಖವನ್ನು ಸಹಿಸದವರಿಗೂ, ಮೃದು ಕೋಷ್ಠದವರಿಗೂ, ಅಲ್ಪದೋಷವುಳ್ಳವರಿಗೂ ಕೃಶರಿಗೂ ಉಷ್ಣ ಕಾಲದಲ್ಲಿಯೂ ಹಿತಕರವಾಗಿದೆ. (೨೦॥)

**ಪ್ರಾಙ್ಮಧ್ಯೋತ್ತರಭಕ್ತೋಽಸಾವಧೋಮಧ್ಯೋರ್ಧ್ವದೇಹಜಾನ್ ॥೨೧॥**
**ವ್ಯಾಧೀಂ ಜಯೇದ್ಬಲಂ ಕುರ್ಯಾದಂಗಾನಾಂ ಚ ಯಥಾಕ್ರಮಮ್ ॥**

ಅರ್ಥ:— ಅನ್ನದ ಮೊದಲು, ಅನ್ನದ ನಡುವೆ, ಅನ್ನದ ನಂತರ ಹೀಗೆ ಕೊಟ್ಟ ಸ್ನೇಹವು ಕ್ರಮವಾಗಿ ಶರೀರದ ಕೆಳಗಿನ ನಡುವಿನ, ಮೇಲಿನ ಭಾಗಗಳಲ್ಲಿಯ ರೋಗಗಳನ್ನು ಕಳೆದು ಅವಯವಗಳಿಗೆ ಬಲವನ್ನು ಕೊಡುವದು. (೨೧)

**ವಾರ್ಯುಷ್ಣಮಚ್ಛಮನುಪಿಬೇತ್ ಸ್ನೇಹೇ ತತ್ಸುಖಪಕ್ತಯೇ ||೨೨||**

**ಆಸ್ಯೋಪಲೇಪಶುದ್ಧ್ಯೈ ಚ ತೌವರಾರುಷ್ಕರೇ ನ ತು ||**
**ಜೀರ್ಣಾಜೀರ್ಣವಿಶಂಕಾಯಾಂ ಪುನರುಷ್ಣೋದಕಂ ಪಿಬೇತ್ ||೨೩||**

**ತೇನೋದ್ಗಾರವಿಶುದ್ಧಿಃ ಸ್ಯಾತ್ತತಶ್ಚ ಲಘುತಾ ರುಚಿಃ ||**

ಅರ್ಥ:— ಕೇವಲ ಸ್ನೇಹವನ್ನು ಕುಡಿಯಲು ಸುಖವಾಗಿ ಅದರ ಪಚನವಾಗುವದಕ್ಕಾಗಿ ಮತ್ತು ಬಾಯಿ ಜಿಗಟು ಹೋಗುವದಕ್ಕಾಗಿ ಬಿಸಿ ನೀರನ್ನು ಕುಡಿಯಬೇಕು. ಆದರೆ ಗೇರು ಎಣ್ಣೆ, ಗೋಡಂಬಿ ಎಣ್ಣೆಗಳ ಮೇಲೆ ಮಾತ್ರ ಬಿಸಿನೀರನ್ನು ಕುಡಿಯಬಾರದು. ಸ್ನೇಹವು ಪಚನವಾಗಿದೆಯೋ ಇಲ್ಲವೋ ಎಂಬ ಶಂಕೆ ಬಂದರೆ ಪುನಃ ಬಿಸಿ ನೀರನ್ನು ಕುಡಿಯಬೇಕು. ಅದರಿಂದ ಸ್ವಚ್ಛವಾದ ತೇಗುಗಳು ಬರುವವು. ಶರೀರವು ಹಗುರಾಗುವದು. ಬಾಯಿಗೆ ರುಚಿ ಬರುವದು. (೨೩)

**ಭೋಜ್ಯೋಽನ್ನಂ ಮಾತ್ರಯಾ ಪಾಸ್ಯನ್ ಶ್ವಃ ಪಿಬನ್ ಪೀತವಾನಪಿ ||೨೪||**

**ದ್ರವೋಷ್ಣಮನಭಿಷ್ಯಂದಿ ನಾತಿಸ್ನಿಗ್ಧಮಸಂಕರಮ್ ||**
**ಉಷ್ಣೋದಕೋಪಚಾರೀ ಸ್ಯಾದ್ಬ್ರಹ್ಮಚಾರೀ ಕ್ಷಪಾಶಯಃ ||೨೫||**

**ನ ವೇಗರೋಧೀ ವ್ಯಾಯಾಮಕ್ರೋಧಶೋಕಹಿಮಾತಪಾನ್ ||**
**ಪ್ರವಾತಯಾನಯಾನಾಧ್ವಭಾಷ್ಯಾತ್ಯಾಸನಸಂಸ್ಥಿತೀಃ ||೨೬||**

**ನೀಚಾತ್ಯುಚ್ಚೋಪಧಾನಾಹಃ ಸ್ವಪ್ನಧೂಮರಜಾಂಸಿ ಚ ||**
**ಯಾನ್ಯಹಾನಿ ಪಿಬೇತ್ತಾನಿ ತಾವಂತ್ಯನ್ಯಾನ್ಯಪಿ ತ್ಯಜೇತ್ ||೨೭||**

ಅರ್ಥ:— ಸ್ನೇಹಪಾನ ಮಾಡತಕ್ಕವನಿಗೆ ಅದರ ಮೊದಲನೇ ದಿವಸ, ಆ ದಿವಸ ಮತ್ತು ಮುಂದಿನ ದಿವಸ ದ್ರವ, ಉಷ್ಣ, ಕಫಕರವಲ್ಲದ

ಬಹಳ ಸ್ನಿಗ್ಧವಿರದ, ಒಂದೇ ವಸ್ತುವಿನ ಅನ್ನವನ್ನು ಸ್ವಲ್ಪ ಪ್ರಮಾಣದಿಂದ ಕೊಡಬೇಕು. ಆವನು ಸ್ನೇಹಪಾನ ಮಾಡಿದ ದಿವಸಗಳಲ್ಲಿಯೂ, ಮುಂದೆ ಅದರಷ್ಟು ದಿವಸಗಳವರೆಗೂ ಬಿಸಿ ನೀರನ್ನು ಉಪಯೋಗಿಸಬೇಕು. ಬ್ರಹ್ಮ ಚರ್ಯದಿಂದ ಇರಬೇಕು. ರಾತ್ರಿ ನಿದ್ದೆಗೆಡಬಾರದು. ಮಲಮೂತ್ರ ಮುಂತಾದವುಗಳ ವೇಗಗಳ ಪ್ರತಿಬಂಧವನ್ನೂ, ವ್ಯಾಯಾಮ, ಕ್ರೋಧ, ಶೋಕ, ಚಳಿ, ಬಿಸಿಲು, ಬಿರುಗಾಳಿ, ವಾಹನದ ಮೇಲೆ ಕೂಡ್ರೋಣ, ಹಾದಿ ನಡೆಯೋಣ, ಅಭ್ಯಾಸ, ಬಹಳ ಹೊತ್ತು ಎದ್ದು ನಿಲ್ಲೋಣ, ಒತ್ತಟ್ಟಿಗೇ ಕೂಡ್ರೋಣ, ಬಹಳ ಸಣ್ಣ ಅಥವಾ ಎತ್ತರವಾದ ತಲೆಗಿಂಬು, ಹಗಲು ನಿದ್ರೆ, ಹೊಗೆ, ಧೂಳಿ—ಇವುಗಳನ್ನು ಸೇವಿಸಬಾರದು. ೨೭)

**ಸರ್ವಕರ್ಮಸ್ವಯಂ ಪ್ರಾಯೋ ವ್ಯಾಧಿಕ್ಷೀಣೇಷು ಚ ಕ್ರಮಃ ||**

ಅರ್ಥಃ— ವಮನ ವಿರೇಚನ ಮುಂತಾದ ಎಲ್ಲ ಕರ್ಮಗಳಲ್ಲಿ ಬಹುಶಃ ಈ ಕ್ರಮವನ್ನು ಇಡಬೇಕು. ಬೇನೆಯಿಂದ ಕ್ಷೀಣರಾದವರಲ್ಲಿಯೂ ಈ ಕ್ರಮವು ಯೋಗ್ಯವು. (೨೭||)

**ಉಪಚಾರಸ್ತು ಶಮನೇ ಕಾರ್ಯಃ ಸ್ನೇಹೇ ವಿರಿಕ್ತವತ್ ||೨೮||**

ಅರ್ಥಃ— ಶಮನ ಸ್ನೇಹದಲ್ಲಿ ವಿರೇಚನದಂತೆ ಉಪಚಾರ ಮಾಡಬೇಕು.

**ಟಿಪ್ಪಣಿ:**— ಸಂಗ್ರಹದಲ್ಲಿ ಸ್ನೇಹಪಾನಕ್ಕಿಂತ ಮೊದಲು ಅಗ್ನಿಯ ಉತ್ತೇಜನ ಮಾಡುವ ಮತ್ತು ಕೋಷ್ಠವನ್ನು ಹಗುರು ಮಾಡುವ ಮೃದುವಾದ ಔಷಧವನ್ನು ಕೊಡಬೇಕೆಂದು ಹೇಳಿದೆ. (೨೮)

**ತ್ರ್ಯಹಮಚ್ಛಂ ಮೃದೌ ಕೋಷ್ಠೇ ಕ್ರೂರೇ ಸಪ್ತದಿನಂ ಪಿಬೇತ್ ||**
**ಸಮ್ಯಕ್ಸ್ನಿಗ್ಧೋಽಥವಾ ಯಾವದತಃ ಸಾತ್ಮ್ಯೀಭವೇತ್ಪರಮ್ ||೨೯||**

ಅರ್ಥಃ— ಶುದ್ಧ ಸ್ನೇಹವನ್ನು, ಕೋಷ್ಠವು ಮೃದು ಇದ್ದರೆ ಮೂರು ದಿವಸ, ಕ್ರೂರವಿದ್ದರೆ ಏಳು ದಿವಸ ಅಥವಾ ಚನ್ನಾಗಿ ಸ್ನಿಗ್ಧವಾಗುವವರೆಗೆ ಕುಡಿಯಬೇಕು. ಆ ಮೇಲೆ ಅದು ಸಾತ್ಮ್ಯವಾಗುವದು. (೨೯)

ಸ್ನೇಹದ ಸಮ್ಯಗ್ಯೋಗ, ಅಯೋಗ, ಅತಿಯೋಗಗಳನ್ನು ಹೇಳುತ್ತಾನೆ.

ವಾತಾನುಲೋಮ್ಯಂ ದೀಪ್ತೋಽಗ್ನಿರ್ವರ್ಚಃ ಸ್ನಿಗ್ಧಮಸಂಹತಮ್ ।
* ಸ್ನೇಹೋದ್ವೇಗಃ ಕ್ಲಮಃ ಸಮ್ಯಕ್ ಸ್ನಿಗ್ಧೇ, ರೂಕ್ಷೇ ವಿಪರ್ಯಯಃ
॥೩೦॥
ಅತಿಸ್ನಿಗ್ಧೇ ತು ಪಾಂಡುತ್ವಂ ಘ್ರಾಣವಕ್ತ್ರಗುದಸ್ರವಾಃ ।

ಅರ್ಥ:— ಸರಿಯಾಗಿ ಸ್ನಿಗ್ಧನಾಗಲು ವಾತದ ಅನುಲೋಮನ, ಅಗ್ನಿಯ ದೀಪ್ತಿ, ಸ್ನಿಗ್ಧ ಮತ್ತು ಶಿಥಿಲವಾದ ಮಲ, ಸ್ನೇಹ ಬೇಡಾಗುವಿಕೆ. ಗ್ಲಾನಿಗಳು ಉಂಟಾಗುವವು. ರುಕ್ಷನಲ್ಲಿ ಇದರ ವಿಪರೀತ ಗುಣಗಳು ಇರುವವು. ಅತಿಸ್ನಿಗ್ಧನಲ್ಲಿ ಪಾಂಡುತ್ವ, ಮೂಗು ಬಾಯಿ ಗುದಗಳ ಸ್ರಾವವು ಉಂಟಾಗುವವು. (೩೦॥)

ಸ್ನೇಹದ ಮಿಥ್ಯಾಯೋಗವನ್ನು ಹೇಳುತ್ತಾನೆ.

ಅಮಾತ್ರಯಾಽಹಿತೋಽಕಾಲೇ ಮಿಥ್ಯಾಹಾರವಿಹಾರತಃ ॥೩೧॥

ಸ್ನೇಹಃ ಕರೋತಿ ಶೋಫಾರ್ಶಸ್ತಂದ್ರಾಸ್ತಂಭ ವಿಸಂಜ್ಞತಾಃ
ಕಂಡೂಕುಷ್ಠಜ್ವರೋತ್ಕ್ಲೇಶಶೂಲಾನಾಹಭ್ರಮಾದಿಕಾನ್ ॥೩೨॥

ಅರ್ಥ:— ಅಳತೆಗೆಟ್ಟ ಅಯೋಗ್ಯವಾದ ಅಥವಾ ಅಯೋಗ್ಯ ಕಾಲದಲ್ಲ ಉಪಯೋಗಿಸಿದ ಅಥವಾ ಸರಿಯಾಗಿ ಆಹಾರ-ವಿಹಾರಗಳನ್ನು ಹೊಂದದ ಸ್ನೇಹವು ಬಾವು, ಮೂಲವ್ಯಾಧಿ, ಆಲಸ್ಯ, ಸ್ತಬ್ಧತೆ, ಮೂರ್ಛೆ ತುರಿಕೆ, ಕುಷ್ಠ, ಜ್ವರ, ಓಕರಿಕೆ, ಶೂಲ, ಹೊಟ್ಟೆಯುಬ್ಬು, ಭ್ರಮ ಮುಂತಾದವುಗಳನ್ನು ಉಂಟು ಮಾಡುವದು. (೩೨)

ಕ್ಷುತ್ತೃಷ್ಣೋಲ್ಲೇಖನಸ್ವೇದ ರೂಕ್ಷಪಾನಾನ್ನಭೇಷಜಮ್ ॥
ತಕ್ರಾರಿಷ್ಟಖಲೋದ್ದಾಲಯವಶ್ಯಾಮಾಕಕೋದ್ರವಮ್ ॥೩೩॥

ಪಿಪ್ಪಲೀತ್ರಿಫಲಾಕ್ಷೌದ್ರಪಥ್ಯಾಗೋಮೂತ್ರಗುಗ್ಗುಲು ॥
ಯಥಾಸ್ವಂ ಪ್ರತಿರೋಗಂ ಚ ಸ್ನೇಹವ್ಯಾಪದಿ ಸಾಧನಮ್ ॥೩೪॥

* ಮೃದುಸ್ನಿಗ್ಧಾಂಗತಾಗ್ಲಾನಿಃ ಸ್ನೇಹೋದ್ವೇಗೋಽಂಗಲಾಘವಮ್ ವಿಮಲೇಂದ್ರಿಯತಾ, ಎಂಬ ಪಾಠಾಂತರವಿದೆ.

ಅರ್ಥ:— ಸ್ನೇಹದಿಂದಾದ ಅಪಾಯದಲ್ಲಿ ಆಯಾ ದೋಷಕ್ಕೆ ತಕ್ಕ ರೂಪವಾಗಿ ಹಸಿವೆ ನೀರಡಿಕೆಗಳ ನಿಗ್ರಹ, ವಮನ, ಸ್ವೇದನ, ರುಕ್ಷವಾದ ಅನ್ನಪಾನ ಔಷಧಗಳನ್ನೂ ಮಜ್ಜಿಗೆ, ಅರಿಷ್ಟ. ಖಲ (ವ್ಯಂಜನಭೇದ) ಉದ್ದಾಲ (ಶಾಲಿವಿಶೇಷ), ಮುಳಜವಿ, ಸಾವಿ, ಕೋದ್ರವ (ಹಾರಕ), ಪಿಪ್ಪಲಿ, ತ್ರಿಫಳೆ, ಜೇನು, ಅಣಲೆ, ಗೋಮೂತ್ರ, ಗುಗ್ಗುಳಗಳನ್ನು ತಕ್ಕೊಳ್ಳಬೇಕು. ಆಯಾರೋಗಗಳ ಉಪಚಾರಗಳನ್ನು ಮಾಡಬೇಕು. (೩೪)

ಸ್ನೇಹದ ಅಪಾಯದಲ್ಲಿ ವಿರೂಕ್ಷಣ ಮಾಡಬೇಕಾಗಿರುವದರಿಂದ ರೂಕ್ಷಣವು ಸರಿಯಾಗಿ ಆದ, ಆಗದ ಲಕ್ಷಣಗಳನ್ನು ಹೇಳುತ್ತಾರೆ.

**ವಿರೂಕ್ಷಣೇ ಲಂಘನವತ್ಕೃತಾತಿಕೃತಲಕ್ಷಣಮ್ ||**

ಅರ್ಥ:— ಸರಿಯಾಗಿ ಆದ ಲಂಘನದ ಲಕ್ಷಣದಂತೆ ಸರಿಯಾಗಿ ಆದ ವಿರೂಕ್ಷಣದ ಲಕ್ಷಣವೂ,ಅತಿಯಾಗಿ ಆದ ಲಂಘನದ ಲಕ್ಷಣದಂತೆ ಅತಿಯಾದ ವಿರೂಕ್ಷಣದ ಲಕ್ಷಣವೂ ಇರುವದು. (೩೪||)

**ಸ್ನಿಗ್ಧದ್ರವೋಷ್ಣಧನ್ವೋತ್ಥರಸಭುಕ್ ಸ್ವೇದಮಾಚರೇತ್ ।೩೫॥**

**ಸ್ನಿಗ್ಧಸ್ತ್ರ್ಯಹಂ ಸ್ಥಿತಃ ಕುರ್ಯಾದ್ವಿರೇಕಂ ವಮನಂ ಪುನಃ ||**
**ಏಕಾಹಂ ದಿನಮನ್ಯಚ್ಚ ಕಫಮುತ್ಕ್ಲೇಶ್ಯ ತತ್ಕರೈಃ ||೬೩||**

ಅರ್ಥ:— ಸ್ನೇಹ ತಕ್ಕೊಂಡವನು ಸ್ನಿಗ್ಧ, ದ್ರವ, ಉಷ್ಣವಾದ ಜಾಂಗಲಮಾಂಸರಸವನ್ನು ಉಣ್ಣುತ್ತ, ಸ್ವೇದವನ್ನು ತಕ್ಕೊಳ್ಳಬೇಕು. ಮೂರು ದಿವಸ ತಡೆದು ಆಮೇಲೆ ವಿರೇಚನವನ್ನು ತಕ್ಕೊಳ್ಳಬೇಕು ಆಮೇಲೆ ಒಂದು ದಿನ ವಿಶ್ರಾಂತಿ ತಕ್ಕೊಂಡು ಮರುದಿವಸ ಕಫಕರ ಪದಾರ್ಥಗಳಿಂದ ಕಫವನ್ನು ಕೆರಳಿಸಿ ಮೂರನೆಯ ದಿವಸ ವಮನವನ್ನು ತಕ್ಕೊಳ್ಳಬೇಕು. (೩೬)

**ಮಾಂಸಲಾ ಮೇದುರಾ ಭೂರಿಶ್ಲೇಷ್ಮಾಣೋ ವಿಷಮಾಗ್ನಯಃ ||**
**ಸ್ನೇಹೋಚಿತಾಶ್ಚ ಯೇ ಸ್ನೇಹ್ಯಾಸ್ತಾನ್ ಪೂರ್ವಂ ರೂಕ್ಷಯೇತ್ತತಃ**
**।೩೭॥**

**ಸಂಸ್ನೇಹ್ಯ ಶೋಧಯೇದೇವಂ ಸ್ನೇಹವ್ಯಾಪನ್ನ ಜಾಯತೇ ।**
**ಅಲಂ ಮಲಾನೀರಯಿತುಂ ಸ್ನೇಹಶ್ಚಾಸಾತ್ಮ್ಯತಾಂ ಗತಃ ॥೩೮॥**

ಅರ್ಥ:— ಮಾಂಸ, ಮೇದ ಅಥವಾ ಕಫ ಹೆಚ್ಚಾಗಿ ಉಳ್ಳವರನ್ನೂ ವಿಷಮಾಗ್ನಿಗಳನ್ನೂ ಹೆಚ್ಚಾಗಿ ಸ್ನೇಹ ಸೇವಿಸುವವರನ್ನೂ ಸ್ನಿಗ್ಧ ಮಾಡಬೇಕಾಗಿದ್ದರೆ ಮೊದಲು ಅವರನ್ನು ರೂಕ್ಷಮಾಡಬೇಕು. ಆ ಮೇಲೆ ಸ್ನಿಗ್ಧ ಮಾಡಿ ಶೋಧನ ಮಾಡಬೇಕು. ಹೀಗೆ ಮಾಡಿದರೆ ಸ್ನೇಹದ ಅಪಾಯವು ಆಗದು. ಸ್ನೇಹವು ಸಾತ್ಮ್ಯವಾಗದೆ ಇದ್ದರೆ ಮಲಗಳನ್ನು ಹೊರಗೆಡುವಲು ಸಮರ್ಥವಾಗುವದು. (೩೮)

**ಬಾಲವೃದ್ಧಾದಿಷು ಸ್ನೇಹಪರಿಹಾರಾಸಹಿಷ್ಣುಷು ॥**
**ಯೋಗಾನಿಮಾನನುದ್ವೇಗಾನ್ ಸದ್ಯಃ ಸ್ನೇಹಾನ್**
**ಪ್ರಯೋಜಯೇತ್ ॥೩೯॥**

ಅರ್ಥ:— ಸ್ನೇಹಪಾನಕ್ಕೆ ಹೇಳಿದ ಪಥ್ಯಗಳನ್ನು ಮಾಡಲಿಕ್ಕಾಗದ ಬಾಲ, ವೃದ್ಧ ಮುಂತಾದವರಿಗೆ ತ್ರಾಸವಾಗದ, ತತ್ಕಾಲದಲ್ಲಿ ಸ್ನಿಗ್ಧಮಾಡುವ ಈ ಯೋಗಗಳನ್ನು ಕೊಡಬೇಕು. (೩೯)

ಆ ಯೋಗಗಳನ್ನು ಹೇಳುತ್ತಾರೆ.

**ಪ್ರಾಜ್ಯಮಾಂಸರಸಾಸ್ತೇಷು ಪೇಯಾ ವಾ ಸ್ನೇಹಭರ್ಜಿತಾ ॥**
**ತಿಲಚೂರ್ಣಶ್ಚ ಸಸ್ನೇಹಫಾಣಿತಃ ಕೃಶರಾ ತಥಾ ॥೪೦॥**

**ಕ್ಷೀರಪೇಯಾ ಘೃತಾಢ್ಯೋಷ್ಣೋದಧ್ನೋ ವಾ ಸಗುಡಃ ಸರಃ ॥**
**ಪೇಯಾ ಚ ಪಂಚಪ್ರಸೃತಾ ಸ್ನೇಹೈಸ್ತಂಡುಲಪಂಚಮೈಃ ॥೪೧॥**

**ಸಪ್ತೈತೇ ಸ್ನೇಹನಾಃ ಸದ್ಯಃ ಸ್ನೇಹಾಶ್ಚ ಲವಣೋಲ್ಬಣಾಃ ॥**
**ತದ್ಧ್ಯಭಿಷ್ಯಂದ್ಯರೂಕ್ಷಂ ಚ ಸೂಕ್ಷ್ಮಮುಷ್ಣಂ ವ್ಯವಾಯಿ ಚ ॥೪೨॥**

ಅರ್ಥ:— ಅವರಿಗೆ ೧. ಬಹಳ ಮಾಂಸದ ರಸ, ೨. ಬಹಳ ಸ್ನೇಹದಲ್ಲಿ ಕರಿದ ಮಾಂಸದ ಪೇಯ, ೩. ಸ್ನೇಹ ಮತ್ತು ಕಾಕಂಬಿ ಕೂಡಿಸಿದ

* 'ವಿಷ್ಯಂದ್ಯ' ಎಂಬ ಹೇಮಾದ್ರಿಯ ಪಾಠವು.

ಎಳ್ಳುಚಿಗಳಿ, ೪ ಅದರಂತೆ ಮಾಡಿದ ಹುಗ್ಗಿ, ೫ ತುಪ್ಪವನ್ನು ಬಹಳ ಹಾಕಿದ ಉಷ್ಣವಾದ ಹಾಲಿನ ಖೀರು, ೬ ಬೆಲ್ಲ ಹಾಕಿದ ಮೊಸರಿನ ನೀರು, ೭ ತುಪ್ಪ, ಎಣ್ಣೆ, ನೆಣ, ಮಜ್ಜೆ, ಅಕ್ಕಿಗಳನ್ನು ಎಂಟೆಂಟು ತೊಲಿ ಹಾಕಿಮಾಡಿದ ಪೇಯ—ಈ ಏಳು ಕೂಡಲೇ ಸ್ನೇಹನ ಮಾಡುವವು ಬಹಳ ಉಪ್ಪು ಹಾಕಿದ ಸ್ನೇಹಗಳೂ ತೀವ್ರವಾಗಿ ಸ್ನಿಗ್ಧ ಮಾಡುತ್ತವೆ. ಯಾಕೆಂದರೆ ಲವಣವು ಶ್ರೋತಸ್ಸುಗಳಲ್ಲಿ ಹುದುಗಿದ ಮಲಗಳನ್ನು ಕಿತ್ತಿ ಮೇಲಕ್ಕೆ ತರುವದೂ, ಸ್ನೇಹದ ಅವಿರುದ್ಧವೂ, ಅರೂಕ್ಷವೂ, ಎಲ್ಲ ಭಾಗಗಳಲ್ಲಿ ಸೇರುವಂತೆ ಸೂಕ್ಷ್ಮವೂ, ಸ್ನೇಹವನ್ನು ಕರಗಿಸುವ ಉಷ್ಣ ಗುಣವುಳ್ಳದ್ದೂ, ಎಲ್ಲ ಕಡೆಗೆ ಸಂಚರಿಸುವಂಥದ್ದೂ ಆಗಿರುವದು. (೪೨)

**ಗುಡಾನೂಪಾಮಿಷಕ್ಷೀರತಿಲಮಾಷಸುರಾದಧಿ ||**
**ಕುಷ್ಠಶೋಫಪ್ರಮೇಹೇಷು ಸ್ನೇಹಾರ್ಥಂ ನ ಪ್ರಕಲ್ಪಯೇತ್ ||೪೩||**

ಅರ್ಥಃ— ಕುಷ್ಠ, ಬಾವು, ಪ್ರಮೇಹಗಳಲ್ಲಿ ಸ್ನೇಹನಕ್ಕಾಗಿ ಬೆಲ್ಲ, ಆನೂಪಮಾಂಸ, ಹಾಲು, ಎಳ್ಳು, ಉದ್ದು, ಸುರೆ, ಮೊಸರುಗಳನ್ನು ಉಪಯೋಗಿಸಬಾರದು. (೪೩)

**ತ್ರಿಫಲಾಪಿಪ್ಪಲೀಪಥ್ಯಾಗುಗ್ಗುಲ್ವಾದಿವಿಪಾಚಿತಾನ್ ||**
**ಸ್ನೇಹಾನ್ ಯಥಾಸ್ವಮೇತೇಷಾಂ ಯೋಜಯೇದವಿಕಾರಿಣಃ ||೪೪||**

ಅರ್ಥಃ— ಇವುಗಳಿಗೆ ತ್ರಿಫಳೆ, ಹಿಪ್ಪಲಿ, ಅಣಲೆ, ಗುಗ್ಗುಲು ಮುಂತಾದವುಗಳಿಂದ ಸಿದ್ಧಪಡಿಸಿದ, ವಿಕಾರಮಾಡದ, ಆ ಆ ರೋಗಕ್ಕೆ ಯೋಗ್ಯವಾದ ಸ್ನೇಹಗಳನ್ನು ಯೋಜಿಸಬೇಕು. (೪೪)

**ಕ್ಷೀಣಾನಾಂ ತ್ವಾಮಯ್ಯೈರಗ್ನಿದೇಹಸಂಧುಕ್ಷಣಕ್ಷಮಾನ್ ||**

ಅರ್ಥಃ— ಬೇನೆಗಳಿಂದ ಕ್ಷೀಣರಾದವರಿಗೆ ಅಗ್ನಿದೀಪಕ ದೇಹ ಪೋಷಕಗಳಾದ ಸ್ನೇಹಗಳನ್ನು ಉಪಯೋಗಿಸಬೇಕು. (೪೪||)

**ದೀಪ್ತಾಂತರಾಗ್ನಿಃ ಪರಿಶುದ್ಧಕೋಷ್ಠಃ**
**ಪ್ರತ್ಯಗ್ರಧಾತುರ್ಬಲವರ್ಣಯುಕ್ತಃ ||೪೫||**

ದೃಢೇಂದ್ರಿಯೋ ಮಂದಜರಃ ಶತಾಯುಃ
ಸ್ನೇಹೋಪಸೇವೀ ಪುರುಷಃ ಪ್ರದಿಷ್ಟಃ ॥

ಅರ್ಥ:— ಸ್ನೇಹವನ್ನು ಉಪಯೋಗಿಸುವ ಮನುಷ್ಯನ ಅಗ್ನಿಯು ಪ್ರದೀಪ್ತವಾಗುವದು. ಕೋಷ್ಠವು ಶುದ್ಧವಾಗುವದು. ಧಾತುಗಳು ಪುಷ್ಟವಾಗುವವು. ಬಲವರ್ಣಗಳು ಹೆಚ್ಚುವವು. ಇಂದ್ರಿಯಗಳು ದೃಢವಾಗುವವು. ಮುಪ್ಪು ದೂರ ಸರಿಯುವದು. ಅದ್ದರಿಂದ ನೂರು ವರ್ಷ ಬದುಕುವನು. (೪೫)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ಸ್ನೇಹವಿಧಿರ್ನಾಮ ಷೋಡಶೋಽಧ್ಯಾಯಃ ಸಮಾಪ್ತಃ।**

ಇತಿ ಶ್ರೀಮದಾದ್ಯಬಾಬಾಚಾರ್ಯಪೂಜ್ಯಪಾದಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯ ಪ್ರಕಾಶಿನೀ ' ಎಂಬ 'ಅಷ್ಟಾಂಗಹೃದಯ'ದ ಸೂತ್ರಸ್ಥಾನದಲ್ಲಿಯ ಸ್ನೇಹವಿಧಿ ಎಂಬ ೧೬ ನೆಯ ಅಧ್ಯಾಯದ ಟೀಕೆಯು ಮುಗಿದುದು.



# ೧೭ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ ಶೋಧನಕ್ಕಾಗಿ ಮೊದಲು ಮಾಡಬೇಕಾದ ಸ್ನೇಹ ವಿಧಿಯನ್ನು ಹೇಳಿದರು. ಅನಂತರ ಮಾಡಬೇಕಾದ ಸ್ವೇದವಿಧಿಯನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ.

**ಅಥಾತಃ *ಸ್ವೇದವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ ॥**

ಅರ್ಥಃ— ಇನ್ನು ಸ್ವೇದವಿಧಿಯನ್ನು ಹೇಳಿದ ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ॥**

ಅರ್ಥಃ— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು

**ಸ್ವೇದಸ್ತಾಪೋಪನಾಹೋಷ್ಮದ್ರವಭೇದಾಚ್ಚತುರ್ವಿಧಃ ॥**

ಅರ್ಥಃ— ಸ್ವೇದವು, ತಾಪ (ಒಣಕಾವು) ಉಪನಾಹ (ಯಾತರಲ್ಲಿ ಯಾದರೂ ಕಟ್ಟಿ ಕಾಸುವದು), ಊಷ್ಮ (ಉಗಿಯ ಕಾವು), ದ್ರವ (ದ್ರವ ವಸ್ತುಗಳ ಕಾವು)— ಎಂದು ನಾಲ್ಕು ಪ್ರಕಾರ. (॥)

**ತಾಪೋಽಗ್ನಿತಪ್ತವಸನಫಾಲಹಸ್ತತಲಾದಿಭಿಃ ॥೧॥**

ಅರ್ಥಃ— ತಾಪವೆಂದರೆ ಬೆಂಕಿಯಿಂದ ಕಾಯ್ದ ಅರಿವೆ, ಕಬ್ಬಿಣದ ತಗಡು, ಅಂಗೈ ಮುಂತಾದವುಗಳಿಂದ ಕಾಸೋಣ. (೧)

**ಉಪನಾಹೋ ವಚಾಕಿಣ್ವಶತಾಹ್ವಾದೇವದಾರುಭಿಃ ॥**
**ಧಾನ್ಯೈಃ ಸಮಸ್ತೈರ್ಗಂಧೈಶ್ಚ ರಾಸ್ನೈರಂಡಜಟಾಮಿಷೈಃ ॥೨॥**
**ಉದ್ರಿಕ್ತಲವಣೈಃ ಸ್ನೇಹಚುಕ್ರತಕ್ರಪಯಃಪ್ಲುತೈಃ ॥**
**ಕೇವಲೇ ಪವನೇ, ಶ್ಲೇಷ್ಮಸಂಸೃಷ್ಟೇ ಸುರಸಾದಿಭಿಃ ॥೩॥**
**ಪಿತ್ತೇನ ಪದ್ಮಕಾದ್ಯೈಸ್ತು ಸಾಲ್ವಣಾಖ್ಯೈಃ ಪುನಃ ಪುನಃ ॥**

---

* ಸ್ವೇದವಿಧಿಯು ಚರಕದ ಸೂ೦ ೧೪ ನೇ, ಸುಶ್ರುತದ ಚಿ. ೩೨ ನೇ ಅಷ್ಟಾಂಗ ಸಂಗ್ರಹದ ಸೂ. ೨೬ ನೇ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ.

ಅರ್ಥ:— ಕೇವಲ ವಾತದ ಮೇಲೆ ಬಜೆ, ಸುವಾಬೀಜ, ಬಡಿ ಸೋಪು, ದೇವದಾರು, ಎಲ್ಲ ತರದ ಧಾನ್ಯ, ಸುಗಂಧ ದ್ರವ್ಯ, ರಾಸ್ನಾ, ಔಡಲ ಬೇರು, ಮಾಂಸ ಇವುಗಳಲ್ಲಿ ಬಹಳ ಉಪ್ಪನ್ನೂ ಸ್ನೇಹ ಚುಕ್ರ(ಹುಳಿ)ಮಜ್ಜಿಗೆ ಹಾಲುಗಳನ್ನೂ ಕಲಿಸಿ ಕಟ್ಟಬೇಕು. ವಾತವು ಕಫದಿಂದ ಯುಕ್ತವಾಗಿದ್ದರೆ ತುಳಸಿ ಮುಂತಾದವು (ಸುರಸಾದಿಗಣ ಅ. ೧೫-೩೦) ಗಳನ್ನು ಕೂಡಿಸಿ, ಸ್ವಲ್ಪ ಪಿತ್ತದಿಂದ ಕೂಡಿದ್ದರೆ ಪದ್ಮಕಾಷ್ಠಾದಿ [ಪದ್ಮಕಾದಿಗಣ(೧೫।೧೩)] ಗಳನ್ನು ಕೂಡಿಸಿ ಪುನಃ ಪುನಃ ಕಟ್ಟಬೇಕು. ಈ ಪದ್ಮಕಾದಿಗಣದ ಔಷಧಿಯುಕ್ತ ಸ್ವೇದಕ್ಕೆ ಸಾಲ್ವಣಸ್ವೇದವೆಂಬ ಹೆಸರು. ಇದು ಉಪನಾಹ [ಉಪನಹ್ಯತೇ (ಬಧ್ಯತೇ) ಅನೇನೇತಿ] ಸ್ವೇದವು. (೪)

ಸ್ನಿಗ್ಧೋಷ್ಣವೀರ್ಯೈರ್ಮೃದುಭಿಶ್ಚರ್ಮಪಟ್ಟೈರಪೂತಿಭಿಃ ॥೪॥

ಅಲಾಭೇ ವಾತಜಿತ್ಪತ್ರಕೌಶೇಯಾವಿಕಶಾಟಕೈಃ ।
ಬದ್ಧಂ ರಾತ್ರೌ ದಿವಾ ಮುಂಚೇನ್ಮುಂಚೇದ್ರಾತ್ರೌ ದಿವಾಕೃತಮ್ ೫।

ಅರ್ಥ:— ಸ್ನಿಗ್ಧ, ಉಷ್ಣವೀರ್ಯ, ಮೃದು ಮತ್ತು ದುರ್ಗಂಧ ರಹಿತವಾದ ತೊಗಲಿನ ಪಟ್ಟಿಗಳಿಂದ, ಅವು ಸಿಗದಿದ್ದರೆ ವಾತನಾಶಕವಾದ (ಔಡಲ ಎಕ್ಕೆ ಮುಂತಾದವುಗಳ) ಎಲೆ, ರೇಶಿಮೆ ಅಥವಾ ಕಂಬಳಿ ಇಲ್ಲವೆ ಬೇರೆ ವಸ್ತ್ರಗಳಿಂದ ಕಟ್ಟಬೇಕು. ರಾತ್ರಿಯಲ್ಲಿ ಕಟ್ಟಿದ್ದನ್ನು ಮುಂಜಾನೆ, ಮುಂಜಾನೆ ಕಟ್ಟಿದ್ದನ್ನು ರಾತ್ರಿಯಲ್ಲಿ ಬಿಚ್ಚಬೇಕು. (೫)

ಊಷ್ಮಸ್ವೇದದ ಲಕ್ಷಣವನ್ನು ಹೇಳುತ್ತಾರೆ.

ಊಷ್ಮಾ ತೂತ್ಕಾರಿಕಾಲೋಷ್ಟಕಪಾಲೋಪಲಪಾಂಸುಭಿಃ ॥
ಪತ್ರಭಂಗೇನ ಧಾನ್ಯೇನ ಕರೀಷಸಿಕತಾತುಷೈಃ ॥೬॥

ಅನೇಕೋಪಾಯಸಂತಪ್ತೈಃ ಪ್ರಯೋಜ್ಯೋ ದೇಶಕಾಲತಃ ॥

ಅರ್ಥ:— ಜವೆ ಮುಂತಾದವುಗಳ ರೊಟ್ಟಿ, ಹೆಂಟೆ, ಖಪ್ಪರಿ, ಕಲ್ಲು, ಹುಡಿ, ಎಲೆಯ ಚೂರುಗಳು, ಧಾನ್ಯ, ಕುಳ್ಳಿನ ಹುಡಿ, ಉಸುಕು, ಹೊಟ್ಟು ಇವುಗಳನ್ನು ಅನೇಕ ಉಪಾಯಗಳಿಂದ ಕಾಸಿ ದೇಶ ಕಾಲಾನುಸಾರವಾಗಿ ಉಪಯೋಗಿಸಬೇಕು. ಇದಕ್ಕೆ ಊಷ್ಮಸ್ವೇದವೆನ್ನುವದು.

ಟಿಪ್ಪಣೀ:— ಊಷ್ಮ ಸ್ವೇದವು, ಪಿಂಡಸ್ವೇದ, ಸಂಸ್ತರಸ್ವೇದ, ನಾಡೀಸ್ವೇದ, ಘನಾಶ್ಮಸ್ವೇದ, ಕುಂಭೀಸ್ವೇದ, ಕೂಪಸ್ವೇದ, ಕುಟೀಸ್ವೇದ, ಜೇಂತಾಕಸ್ವೇದ ಎಂದು ಎಂಟು ಪ್ರಕಾರ.

(೧) ಪಿಂಡಸ್ವೇದ— ಕಲ್ಲು, ಹೆಂಟೆ, ಲೋಹ ಮುಂತಾದವುಗಳನ್ನು ಕೆಂಪಗೆ ಕಾಸಿ ಸಂಡಾಸದಿಂದ ಹಿಡಿದು ನೀರಿನಲ್ಲಿ ಅಥವಾ ಅಂಬಲಿಯಲ್ಲಿ ಎದ್ದಿ ಅವನ್ನು ವಸ್ತ್ರದಲ್ಲಿ ಸುತ್ತಿ ಕಫಮೇದಗಳಿಂದ ನೋವುಳ್ಳ ಅವಯವವನ್ನು ಅಥವಾ ಗಂಟನ್ನು ಕಾಸುವದು. ಇದರಂತೆ ಹುಡಿ, ಉಸುಕು, ಹೊಟ್ಟು, ಧಾನ್ಯ, ಮಾಂಸ, ಮುಂತಾದವುಗಳನ್ನು ಅಂಬಲಿಯಲ್ಲಿ ಕುದಿಸಿ ಮೇಲಿನಂತೆ ಅರಿವೆಯಲ್ಲಿ ಕಟ್ಟಿ ಅಥವಾ ಮೇಲೆ ಹೇಳಿದ ಪೋಟೇಸಿನ ದ್ರವ್ಯಗಳಿಂದ ಮಾಡಿದ ರೊಟ್ಟಿ, ಉಸುಳಿ ಮುಂತಾದ ವುಗಳ ಮುದ್ದಿಯನ್ನು ಅರಿವೆಯಲ್ಲಿ ಹಾಕಿ ವಾತರೋಗಪೀಡಿತ ಅಂಗವನ್ನು ಕಾಸು ವದು ಪಿಂಡಸ್ವೇದವು. ಇದಕ್ಕೆ ಸಂಕರಸ್ವೇದವೆಂದೂ ಹೆಸರುಂಟು.

(೨) ಸಂಸ್ತರ(ಹಾಸಿಗೆ) ಸ್ವೇದಃ— ಸ್ವೇದದ್ರವ್ಯಗಳನ್ನು ಮುಚ್ಚಿದ ಪಾತ್ರೆ ಯಲ್ಲಿ ಕುದಿಸಿ ಗಾಳಿ ಇಲ್ಲದ ಮನೆಯಲ್ಲಿ ಹಾಸಿಗೆಯ ಮೇಲೆ ಷೋಣಗಮಟು ಅರಿವೆ ಯನ್ನು ಹಾಸಿ, ಅದರ ಮೇಲೆ ಅವನ್ನು ಹರವಬೇಕು. ಅದರ ಮೇಲೆ ರೋಗಿಯನ್ನು ಮಲಗಿಸಿ ಸ್ವೇದ ಕೊಡುವದು.

(೩) ನಾಡೀಸ್ವೇದ:— ಮೇಲಿನಂತೆ ಮುಚ್ಚಿದ ಪಾತ್ರೆಗಳಲ್ಲಿ ಸ್ವೇದದ್ರವ್ಯ ಗಳನ್ನು ಕುದಿಸಿ ಅದಕ್ಕೆ ಹಚ್ಚಿದ ಸೊಂಡಿಯಿಂದ ನೋವುಳ್ಳಭಾಗಕ್ಕೆ ಕಾವು ಕೊಡು ವದು.

(೪) ಘನಾಶ್ಮಸ್ವೇದಃ— ಮನುಷ್ಯನಷ್ಟೇ ಉದ್ದಾದ ಕಲ್ಲನ್ನು ಅಥವಾ ಭೂಮಿಯನ್ನು ವಾತನಾಶಕ ಕಟ್ಟಿಗೆಗಳಿಂದ ಸುಟ್ಟು ಬೆಂಕೆಯನ್ನು ತೆಗೆದು ಅದರ ಮೇಲೆ ಬಿಸಿ ನೀರು ಅಂಬಲಿಗಳನ್ನು ಸಿಂಪಡಿಸಿ ಅದರ ಮೇಲೆ ರೋಗಿಯನ್ನು ಹೊಚ್ಚಿ ಮಲಗಿಸಿ ಸಂಸ್ತರ ಸ್ವೇದದಂತೆ ಕಾವು ಕೊಡುವದು.

(೫) ಕುಂಭೀಸ್ವೇದಃ— ಮೇಲಿನಂತೆ ಸ್ವೇದದ್ರವ್ಯಗಳನ್ನು ದೊಡ್ಡ ಹರಿವೆ ಯಲ್ಲಿ ಕುದಿಸಿ ಅದನ್ನು ಅಲಿಂಗಿಸಿ ಕೂತು ಕಾವು ತಕ್ಕೊಳ್ಳಬೇಕು. ಅಥವಾ ಭೂಮಿ ಯಲ್ಲಿ ಅದನ್ನು ಕುತ್ತಿಗೆಮಟ್ಟು ಹುಗಿದು ಅದರ ಮೇಲೆ ಬಹಳ ದಪ್ಪವಿಲ್ಲದ ಆಸನ ಹಾಕಿ ಅದರ ಮೇಲೆ ಕಂಬಳಿ ಮುಂತಾದವುಗಳನ್ನು ಹೊತ್ತುಕೊಂಡು ಕೂತು ಆಗಾಗ್ಗೆ ಅದರಲ್ಲಿ ಕೆಂಪಾಗಿ ಕಾಯ್ದ ಕಬ್ಬಿಣದ ತುಂಡುಗಳನ್ನು ಅಥವಾ ಕಲ್ಲುಗಳ ತುಂಡುಗಳನ್ನು ಬಿಡುತ್ತ ಕಾಸಿಕೊಳ್ಳುವದು.

(೬) ಕೂಪಸ್ವೇದಃ— ಹಾಸಿಗೆಯ ಕೆಳಗೆ ದೊಡ್ಡ ತೆಗ್ಗು ತೆಗೆದು ಅದರಲ್ಲಿ ವಾತನಾಶಕ ಕಟ್ಟಿಗೆಗಳನ್ನು ಹಾಕಿ ಬೆಂಕೆ ಮಾಡಿ ಹೊಗೆ ಹೋಗಲು, ಮೇಲು ಭಾಗದ ಮೇಲೆ ಹಾಸಿಗೆಯನ್ನು ಹಾಕಿ ಕಾಸುವದು.

(೭) ಕುಟೀಸ್ವೇದ:— ಒಳಗೆ ಎತ್ತರ ಅಗಲ ಇಲ್ಲದ ದುಂಡಾದ, ಛಿದ್ರ ವಿಲ್ಲದ, ಸ್ವೇದಪ್ರಶಸ್ತಗಳಿಂದ ಗೋಡೆಗಳನ್ನು ಪಟ್ಟಾಗಿ ಹೊದೆದು. ಸುತ್ತ ಹೊಗೆ ಯಿಲ್ಲದ ಕೆಂಡಗಳಿಂದ ತುಂಬಿದ ಅಗ್ಗಿಷ್ಟಿಗೆಗಳನ್ನು ಸುತ್ತುಮುತ್ತಲೂ ಇಟ್ಟು ಒಂದು ಕುಟಿ (ಸಣ್ಣಕೋಣೆ)ಯಲ್ಲಿ ಹಾಸಿಗೆಯಲ್ಲಿ ಮಲಗಿ ಕಾಯುವದು.

(೮) ಜೇಂತಾಕಸ್ವೇದವು:— ಇದುದೊಡ್ಡದಿದ್ದುದರಿಂದ ಇಲ್ಲಿ ಹೇಳಿಲ್ಲ. (೬)

ಇನ್ನು ಮೇಲೆ ದ್ರವಸ್ವೇದನವನ್ನು ಹೇಳುತ್ತಾರೆ. ಅದು ಪರಿಷೇಕ ಮತ್ತು ಅವಗಾಹನವೆಂದು ಎರಡು ಪ್ರಕಾರ. ಈಗ 'ಪರಿಷೇಕ'ವನ್ನು ಹೇಳುತ್ತಾರೆ.

**ಶಿಗ್ರುವಾರಣಕೈರಂಡಕರಂಜಸುರಸಾರ್ಜಕಾತ್ ||೭||**

**ಶಿರೀಷವಾಸಾವಂಶಾರ್ಕಮಾಲತೀದೀರ್ಘವೃಂತತಃ |**
**ಪತ್ರಭಂಗೈರ್ವಚಾದ್ಯೈಶ್ಚ ಮಾಂಸೈಶ್ಚಾನೂಪವಾರಿಜೈಃ ||೮||**

**ದಶಮೂಲೇನ ಚ ಪೃಥಕ್ ಸಹಿತೈರ್ವಾ ಯಥಾಮಲಮ್**
**ಸ್ನೇಹವದ್ಭಿಃ ಸುರಾಶುಕ್ತವಾರಿಕ್ಷೀರಾದಿಸಾಧಿತೈಃ ||೯||**

**ಕುಂಭೀರ್ಗಲಂತೀರ್ನಾಡೀರ್ವಾ ಪೂರಯಿತ್ವಾ ರುಜಾರ್ದಿತಮ್ ||**
**ವಾಸಸಾಽಽಚ್ಛಾದಿತಂ ಗಾತ್ರಂ ಸ್ನಿಗ್ಧಂ ಸಿಂಚೇದ್ಯಥಾಸುಖಮ್ ||೧೦||**

ಅರ್ಥ:— ನುಗ್ಗಿ, ಗಜಗ, ಔಡಲ, ಹುಲಗಲಿ, ತುಳಸಿ, ಅರ್ಜಕ, ಶಿರಸಲ, ಆಡಸಲ, ಬಿದುರು, ಎಕ್ಕೆ, ಮಲ್ಲಿಗೆ, ಹೆಮ್ಮರಗಳ ಎಲೆಗಳ ಚೂರು, ಮೇಲೆಹೇಳಿದ ಬಜೆ ಮುಂತಾದವು, ಅನೂಪ ದೇಶದ ಮಾಂಸ, ನೀರಿನಲ್ಲಿ ಹುಟ್ಟಿದ ಪ್ರಾಣಿಗಳ ಮಾಂಸ, ದಶಮೂಲ ಇವುಗಳನ್ನು ಬೇರೆ ಬೇರೆಯಾಗಿ ಇಲ್ಲವೆ ಕೂಡಿಯೇ ತಕ್ಕೊಂಡು ಮಲಾನುಸಾರ ಸುರೆ, ಶುಕ್ತ, ನೀರು,ಹಾಲು ಮುಂತಾದ್ದರಲ್ಲಿ ಸಿದ್ಧಪಡಿಸಿ ಸ್ನೇಹಗಳನ್ನು ಕೂಡಿಸಿ ಛಿದ್ರವುಳ್ಳ ಕೊಡಗಳಲ್ಲಿ, ಝಾರಿಗಳಲ್ಲಿ ಅಥವಾ ಪಿಚಕಾರಿಗಳಲ್ಲಿ ತುಂಬಿ ಮೊದಲು ಬೇನೆ ಯಿಂದ ಪೀಡಿತ ಅವಯವವನ್ನು ಸ್ನಿಗ್ಧಮಾಡಿ ಮೇಲೆ ಅರಿವೆ ಸುತ್ತಿ ಅದರ ಮೇಲೆ ಸುಖವಾಗುವಂತೆ ಅವುಗಳಿಂದ ಧಾರೆ ಬಿಡಬೇಕು. ಇದು ದ್ರವ ಸ್ವೇದವು. (೧೦)

ಅವಗಾಹ ಸ್ವೇದವನ್ನು ಹೇಳುತ್ತಾರೆ.

ತೈರೇವ ವಾ ದ್ರವ್ಯೈಃ ಪೂರ್ಣಂ ಕುಂಡಂ ಸರ್ವಾಂಗಗೇಽನಿಲೇ ॥
ಅವಗಾಹ್ಯಾತುರಸ್ತಿಷ್ಠೇದರ್ಶಃಕೃಚ್ಛ್ರಾದಿರುಕ್ಷು ಚ ।೧೧॥

ಅರ್ಥ:— ಸರ್ವಾಂಗದಲ್ಲಿಯ ವಾತ, ಮೂಲವ್ಯಾಧಿ, ಮೂತ್ರ ಕೃಚ್ಛ್ರ ಮುಂತಾದ ಪೀಡೆಗಳ ಮೇಲೆ ಅದೇ ದ್ರವಗಳಿಂದ ತುಂಬಿದ ಕುಂಡದಲ್ಲಿ ರೋಗಿಯು ಕೂಡ್ರಬೇಕು. ಇದಕ್ಕೆ 'ಅವಗಾಹನ ಸ್ವೇದ ವೆಂಬ ಹೆಸರು. (೧೧)

ನಿವಾತೇಽಂತರ್ಬಹಿಃ ಸ್ನಿಗ್ಧೋ ಜೀರ್ಣಾನ್ನಃ ಸ್ವೇದಮಾಚರೇತ್ ॥
ವ್ಯಾಧಿವ್ಯಾಧಿತದೇಶರ್ತುವಶಾನ್ಮಧ್ಯವರಾವರಮ್ ।೧೨॥

ಅರ್ಥ:— ಒಳಹೊರಗೆ ಸ್ನಿಗ್ಧವಾದನಂತರ ಅನ್ನ ಜೀರ್ಣವಾದ ಮೇಲೆ ನಿರ್ವಾತ ಪ್ರದೇಶದಲ್ಲಿ ರೋಗ, ರೋಗಿ, ದೇಶ, ಋತುಗಳನ್ನು ನೋಡಿ ಕೊಂಡು ಉತ್ತಮ ಮಧ್ಯಮ ಅಥವಾ ಕನಿಷ್ಠ ಸ್ವೇದಗಳನ್ನು ತಕ್ಕೊಳ್ಳ ಬೇಕು. (೧೨)

† ಕಫಾರ್ತೋ ರೂಕ್ಷಣಂ ರೂಕ್ಷೋ, ರೂಕ್ಷಸ್ನಿಗ್ಧಂ ಕಫಾನಿಲೇ ॥
ಆಮಾಶಯಗತೇ ವಾಯೌ ಕಫೇ ಪಕ್ವಾಶಯಾಶ್ರಿತೇ ।೧೩॥

ರೂಕ್ಷಪೂರ್ವಂ ತಥಾ ಸ್ನೇಹಪೂರ್ವಂ ಸ್ಥಾನಾನುರೋಧತಃ ॥

ಅರ್ಥ:— ಕಫದಿಂದ ಪೀಡಿತನಾದವನು ಸ್ನೇಹವನ್ನು ತಕ್ಕೊಳ್ಳದೆ ರುಕ್ಷವಾದ ಸ್ವೇದವನ್ನು ಮಾಡಿಕೊಳ್ಳಬೇಕು. ಆದರೆ ಕಫವಾತಗಳಿದ್ದರೆ ಮಾತ್ರ ಕ್ರಮದಿಂದ ರುಕ್ಷ ಸ್ನಿಗ್ಧಸ್ವೇದವನ್ನು ಮಾಡಿಕೊಳ್ಳಬೇಕು. ವಾತವು ಆಮಾಶಯದಲ್ಲಿದ್ದರೆ ಸ್ಥಾನಾನುಸಾರ ಮೊದಲು ರೂಕ್ಷ ಆಮೇಲೆ ಸ್ನಿಗ್ಧ; ಕಫವು ಪಕ್ವಾಶಯದಲ್ಲಿದ್ದರೆ ಮೊದಲು ಸ್ನಿಗ್ಧ ಆಮೇಲೆ ರೂಕ್ಷ ಸ್ವೇದವನ್ನು ತಕ್ಕೊಳ್ಳಬೇಕು.

**ಟಿಪ್ಪಣೀ—** ಏಕೆಂದರೆ ವಾತವು ಆಮಾಶಯದಲ್ಲಿ ಆಗಂತು ಇದ್ದದರಿಂದ ಆಮಾಶಯದ ಸ್ಥಾನಿಯಾದ ಕಫಕ್ಕೆ ಮೊದಲು ಚಿಕಿತ್ಸೆ ಮಾಡಬೇಕಾಗಿದ್ದರಿಂದ

† 'ಕಫೇ ತು ರೂಕ್ಷಣಂ ರೂಕ್ಷೋ, ರೂಕ್ಷಃ ಸ್ನಿಗ್ಧಂ ಕಫಾನಿಲೇ' ಎಂದು, ಹೇಮಾದ್ರಿಯ ಪಾಠವು.

ಮೊದಲು ರೂಕ್ಷಸ್ವೇದವು ಆಮೇಲೆ ಸ್ನಿಗ್ಧಸ್ವೇದವು ಯೋಗ್ಯವು. ಇದರಂತೆ ಕಫವು ಪಕ್ವಾಶಯದಲ್ಲಿ ಆಗಲೀ. ಇಲ್ಲಿಯೂ ಸ್ಥಾನಿದೋಷವು ವಾತವು. ಆದ್ದರಿಂದ ಸ್ಥಾನಿಯಾದ ವಾತಕ್ಕೆ ಮೊದಲು ಸ್ನಿಗ್ಧಸ್ವೇದವು ಆಮೇಲೆ ಕಫಕ್ಕಾಗಿ ರೂಕ್ಷಸ್ವೇದವು ಯುಕ್ತವು. ಇದರ ಕಾರಣವನ್ನು 'ತತ್ರಾನ್ಯಸ್ಥಾನಸಂಸ್ಥೇಷು ತದೀಯಾಂ' (೧೩।೨೧) ಎಂದು ಹೇಳಿಯೇ ಇದ್ದಾರೆ. (೧೩)

**ಅಲ್ಪಂ ವಂಕ್ಷಣಯೋಃ ಸ್ವಲ್ಪಂ ದೃಙ್ಮುಷ್ಕಹೃದಯೇ ನ ವಾ ॥೧೪॥**

ಅರ್ಥ:— ಗೆಜ್ಜೆಯಲ್ಲಿ ಸ್ವಲ್ಪ ಸ್ವೇದ ಕೊಡಬೇಕು. ಮತ್ತು ಕಣ್ಣು, ವೃಷಣ ಎದೆಗಳಲ್ಲಿ ಕೊಟ್ಟರೆ ಸ್ವಲ್ಪ ಸ್ವೇದ ಕೊಡಬೇಕು, ಅಥವಾ ಕೊಡಲೇ ಬಾರದು. (೧೪)

ಸ್ವೇದದ ಸಮ್ಯಗ್ಯೋಗವನ್ನು ಹೇಳುತ್ತಾರೆ.

**ಶೀತಶೂಲಕ್ಷಯೇ ಸ್ವಿನ್ನೋ ಜಾತೇಽಂಗಾನಾಂ ಚ ಮಾರ್ದವೇ ॥**
**ಸ್ಯಾಚ್ಛನೈರ್ಮೃದಿತಃ ಸ್ನಾತಸ್ತತಃ ಸ್ನೇಹವಿಧಿಂ ಭಜೇತ್ ॥೧೫॥**

ಅರ್ಥ:— ಶೀತಶೂಲಗಳ ನಾಶವಾಗಲು ಅವಯವಗಳು ಮೆತ್ತಗಾಗಲು ಸ್ವೇದವು ಚೆನ್ನಾಗಿ ಆಯಿತೆಂದು ತಿಳಿಯಬೇಕು. ಅನಂತರ ಸಾವಕಾಶವಾಗಿ ಮೈಯೊತ್ತಿಸಿಕೊಂಡು ಸ್ನಾನಮಾಡಬೇಕು. ಸ್ನೇಹದ ಆಹಾರ-ವಿಹಾರ ನಿಯಮಗಳನ್ನು ಪಾಲಿಸಬೇಕು. (೧೫)

ಸ್ವೇದದ ಅತಿಯೋಗವನ್ನು ಹೇಳುತ್ತಾರೆ.

**ಪಿತ್ತಾಸ್ರಕೋಪತೃಣ್ಮೂರ್ಛಾಸ್ವರಾಂಗಸದನಭ್ರಮಾಃ ॥**
**ಸಂಧಿಪೀಡಾ ಜ್ವರಃ ಶ್ಯಾವರಕ್ತಮಂಡಲದರ್ಶನಮ್ ॥೧೬॥**

**ಸ್ವೇದಾತಿಯೋಗಾಚ್ಛರ್ದಿಶ್ಚ ತತ್ರ ಸ್ತಂಭನಮೌಷಧಮ್ ॥**
**ವಿಷಕ್ಷಾರಾಗ್ನ್ಯತೀಸಾರಚ್ಛರ್ದಿಮೋಹಾತುರೇಷು ಚ ॥೧೭॥**

ಅರ್ಥ:— ಸ್ವೇದದ ಅತಿಯೋಗವಾಗಲು ರಕ್ತ-ಪಿತ್ತ, ನೀರಡಿಕೆ, ಮೂರ್ಛೆ, ಸ್ವರಭ್ರಂಶ, ನಿತ್ರಾಣ, ಭ್ರಮೆ, ಸಂಧಿಪೀಡೆ, ಜ್ವರ, ಕರೆ ಮತ್ತು ಕೆಂಪು ಕಲೆ, ವಾಂತಿಗಳುಂಟಾಗುವವು. ಅಲ್ಲಿ ಸ್ತಂಭಕ ಔಷಧಗಳನ್ನು ಕೊಡ

ಬೇಕು. ಅದರಂತೆ ವಿಷ, ಕ್ಷಾರ, ಸುಡೋಣ, ಅತಿಸಾರ, ವಾಂತಿ, ಮೂರ್ಛೆ ಗಳ ಮೇಲೆಯೂ ಸ್ತಂಭಕ ಔಷಧಗಳನ್ನೇ ಕೊಡಬೇಕು. (೧೭)

**ಸ್ವೇದನಂ ಗುರುತೀಕ್ಷ್ಣೋಷ್ಣಂ ಪ್ರಾಯಃ ಸ್ತಂಭನಮನ್ಯಥಾ ।**
**ದ್ರವಸ್ಥಿರಸರಸ್ನಿಗ್ಧರೂಕ್ಷಸೂಕ್ಷ್ಮಂ ಚ ಭೇಷಜಮ್ ॥೧೮॥**

**ಸ್ವೇದನಂ, ಸ್ತಂಭನಂ ಶ್ಲಕ್ಷ್ಣಂ ರೂಕ್ಷಸೂಕ್ಷ್ಮಸರದ್ರವಮ್ ॥**
**ಪ್ರಾಯಸ್ತಿಕ್ತಂ ಕಷಾಯಂ ಚ ಮಧುರಂ ಚ ಸಮಾಸತಃ ॥೧೯॥**

ಅರ್ಥಃ— ಜಡ, ತೀಕ್ಷ್ಣ, ಉಷ್ಣ ಔಷಧಗಳು ಪ್ರಾಯಃ ಸ್ವೇದನ ವಿರುತ್ತವೆ. ಇಲ್ಲವಾದರೆ (ಲಘು, ಮಂದ, ಶೀತವಿದ್ದರೆ) ಸ್ತಂಭನವಿರುತ್ತವೆ. ದ್ರವ, ಸ್ಥಿರ, ಸಾರಕ, ಸ್ನಿಗ್ಧ, ರುಕ್ಷ, ಸೂಕ್ಷ್ಮವಾದ ಔಷಧವು ಸ್ವೇದ ನವು. ನುಣುಪು, ರುಕ್ಷ, ಸೂಕ್ಷ್ಮ, ಸಾರಕ ದ್ರವಗಳು ಸ್ತಂಭನವಿರುತ್ತವೆ. ಬಹಳಮಾಡಿ ಕಹಿ, ಕಷಾಯ, ಮಧುರ, ರಸಗಳು ಸ್ತಂಭಕವಿರುತ್ತವೆ.(೧೯)

**ಸ್ತಂಭಿತಃ ಸ್ಯಾದ್ಬಲೇ ಲಬ್ಧೇ ಯಥೋಕ್ತಾಮಯಸಂಕ್ಷಯಾತ್ ॥**

ಅರ್ಥಃ— ಮೇಲೆ ಹೇಳಿದ ರೋಗಗಳು ನಾಶವಾಗಿ ಬಲವು ಬರಲು ಸ್ತಂಭನವು ಚನ್ನಾಗಿ ಆಯಿತೆಂದು ತಿಳಿಯಬೇಕು. (೧೯॥)

**ಸ್ತಂಭತ್ವಕ್‌ಸ್ನಾಯುಸಂಕೋಚಕಂಪಹೃದ್ವಾಗ್ಘನುಗ್ರಹೈಃ ॥೨೦॥**

**ಪಾದೌಷ್ಠತ್ವಕ್ಕರೈಃ ಶ್ಯಾವೈರತಿಸ್ತಂಭಿತಮಾದಿಶೇತ್ ॥**

ಅರ್ಥಃ— ಸೆಟೆಯೋಣ, ತ್ವಚೆ ಸ್ನಾಯುಗಳ ಸಂಕೋಚನ, ಕಂಪ ಎದೆ ಹಿಡಿಯೋಣ, ಮಾತು ಬಂದಾಗುವದು, ಹನುಗ್ರಹ, ಕಾಲು ತುಟಿ ತ್ವಚೆ ಕೈಗಳು ಕಪ್ಪು ಆದರೆ ಸ್ತಂಭನದ ಅತಿಯೋಗವೆಂದು ತಿಳಿಯಬೇಕು. (೨೦॥)

**ನ ಸ್ವೇದಯೇದತಿಸ್ಥೂಲರೂಕ್ಷದುರ್ಬಲಮೂರ್ಛಿತಾನ್ (೨೧॥)**

**ಸ್ತಂಭನೀಯಕ್ಷತಕ್ಷೀಣಕ್ಷಾಮಮದ್ಯವಿಕಾರಿಣಃ ॥**
**ತಿಮಿರೋದರವೀಸರ್ಪಕುಷ್ಠಶೋಷಾಢ್ಯರೋಗಿಣಃ ॥೨೨॥**

ಪೀತದುಗ್ಧದಧಿಸ್ನೇಹಮಧೂನ್ ಕೃತವಿರೇಚನಾನ್ ।
ಭ್ರಷ್ಟದಗ್ಧಗುದಗ್ಲಾನಿಕ್ರೋಧಶೋಕಭಯಾರ್ದಿತಾನ್ ॥೨೩॥

ಕ್ಷುತ್ತೃಷ್ಣಾಕಾಮಲಾಪಾಂಡುಮೇಹಿನಃ ಪಿತ್ತಪೀಡಿತಾನ್ ॥
ಗರ್ಭಿಣೀಂ ಪುಷ್ಪಿತಾಂ ಸೂತಾಂ ಮೃದು ಚಾತ್ಯಯಿಕೇ ಗದೇ ॥೨೪॥

ಅರ್ಥ:— ಅತಿಸ್ಥೂಲ ರೂಕ್ಷ ದುರ್ಬಲ ಮೂರ್ಛಿತರಿಗೂ, ಸ್ತಂಭನಕ್ಕೆ ಯೋಗ್ಯರಾದವರಿಗೂ, ಗಾಯಗೊಂಡಿದ ಕ್ಷೀಣ ಕೃಶ ಮದ್ಯ ವಿಕಾರವುಳ್ಳವರಿಗೂ, ತಿಮಿರ ಉದರ ಇಸಬು ಕುಷ್ಠ ಕ್ಷಯ ವಾತರಕ್ತ ರೋಗಿಗಳಿಗೂ, ಹಾಲು ಮೊಸರು ಸ್ನೇಹ ಜೇನುತುಪ್ಪ ಕುಡಿದವರಿಗೂ, ವಿರೇಚನ ತಕ್ಕೊಂಡವರಿಗೂ, ಗುದಭ್ರಂಶ ಗುದಪಾಕ ಗ್ಲಾನಿ ಕ್ರೋಧ ಶೋಕ ಭಯಗಳಿಂದ ಮತ್ತು ಹಸಿವೆ ನೀರಡಿಕೆ ಕಾಮಿಣಿ ಪಾಂಡು ಮೇಹಪಿತ್ತಗಳಿಂದ ಪೀಡಿತರಿಗೂ, ಗರ್ಭಿಣಿ ಪುಷ್ಪಿಣಿ (ಹೊರಗಾದವಳು) ಬಾಣಂತಿಯರಿಗೂ ಸ್ವೇದ ಕೊಡಬಾರದು. ಭಯಂಕರ ರೋಗವಿದ್ದರೆ ಮಾತ್ರ ಸ್ವಲ್ಪ ಕೊಡಬೇಕು. (೨೪)

ಶ್ವಾಸಕಾಸಪ್ರತಿಶ್ಯಾಯಹಿಧ್ಮಾಧ್ಮಾನವಿಬಂಧಿಷು ।
ಸ್ವರಭೇದಾನಿಲವ್ಯಾಧಿಶ್ಲೇಷ್ಮಾಮಸ್ತಂಭಗೌರವೇ ॥೨೫॥
ಅಂಗಮರ್ದಕಟೀಪಾರ್ಶ್ವಪೃಷ್ಠಕುಕ್ಷಿಹನುಗ್ರಹೇ ।
ಮಹತ್ವೇ ಮುಷ್ಕಯೋಃ ಖಲ್ಲ್ಯಾಮಾಯಾಮೇ ವಾತಕಂಟಕೇ ॥೨೬॥

ಮೂತ್ರಕೃಚ್ಛ್ರಾರ್ಬುದಗ್ರಂಥಿಶುಕ್ರಾಘಾತಾಢ್ಯಮಾರುತೇ ।
ಸ್ವೇದಂ ಯಥಾಯಥಂ ಕುರ್ಯಾತ್ತದೌಷಧವಿಭಾಗತಃ ॥೨೭॥

ಅರ್ಥ:— ಶ್ವಾಸ, ಕಾಸ, ನೆಗಡಿ, ಬಿಕ್ಕು, ಹೊಟ್ಟೆಯುಬ್ಬು, ಮಲಬಂಧ, ಸ್ವರಭೇದ, ವಾತವ್ಯಾಧಿ, ಕಫ, ಆಮ, ಸೆಟೆಯೋಣ, ಜಡತ್ವ, ಮೈನೋಯೋಣ, ಟೊಂಕ ಮಗ್ಗಲು ಬೆನ್ನು ಬರಿಕೆ ಗದ್ದ ಹಿಡಿಯೋಣ, ಅಂಡವೃದ್ಧಿ, ಖಲ್ಲಿ (ವಾತರೋಗ), ಧನುರ್ವಾತ, ವಾತಕಂಟಕ, ಮೂತ್ರಕೃಚ್ಛ್ರ, ಅರ್ಬುದ, ಕುರುವು, ಶುಕ್ರಪ್ರತಿಬಂಧ, ಊರುಸ್ತಂಭ ಇವುಗಳ ಮೇಲೆ ಆಯಾ ಔಷಧಗಳ ವಿಚಾರಮಾಡಿ ಈ ನಾಲ್ಕು ಸ್ವೇದನಗಳಲ್ಲಿ ಯೋಗ್ಯವಾದದ್ದನ್ನು ಮಾಡಬೇಕು. (೨೭)

**ಸ್ವೇದೋ ಹಿತಸ್ತ್ವನಾಗ್ನೇಯೋ ವಾತೇ ಮೇದಃಕಫಾವೃತೇ ॥**
**ನಿವಾತಂ ಗೃಹಮಾಯಾಸೋ ಗುರು ಪ್ರಾವರಣಂ ಭಯಮು ॥೨೮**

**ಉಪನಾಹಾಹವಕ್ರೋಧಭೂರಿಪಾನಂ ಕ್ಷುಧಾಽಽತಪಃ ॥**

ಅರ್ಥಃ— ಮೇದ ಮತ್ತು ಕಫದಿಂದ ಕೂಡಿದ ವಾಯುವಿನ ಮೇಲೆ ಅನಗ್ನಿಸ್ವೇದವು ಹಿತಕರವು. ಅನಗ್ನಿಸ್ವೇದವೆಂದರೆ ಗಾಳಿ ಇಲ್ಲದ ಮನೆಯಲ್ಲಿ ಇರೋಣ, ಶ್ರಮ, ದೊಡ್ಡ ಬೆಚ್ಚನ್ನ ಹೊದಿಕೆ, ಅಂಜಿಕೆ, ಪೋಟೀಸ (ಬಜಿ ಮುಂತಾದವುಗಳನ್ನು ಮೈಗೆ ಕಟ್ಟೋಣ), ಯುದ್ಧ, ಕ್ರೋಧ, ಅತಿ ಮದ್ಯಪಾನ, ಹಸಿವೆ, ಬಿಸಿಲು ಮುಂತಾದವುಗಳು. (೨೮॥)

**ಸ್ನೇಹಕ್ಲಿನ್ನಾಃ ಕೋಷ್ಠಗಾ ಧಾತುಗಾ ವಾ ॥**
**ಸ್ರೋತೋಲೀನಾ ಯೇ ಚ ಶಾಖಾಸ್ಥಿಸಂಸ್ಥಾಃ ॥೨೯॥**
**ದೋಷಾಃ ಸ್ವೇದೈಸ್ತೇ ದ್ರವೀಕೃತ್ಯ ಕೋಷ್ಠಂ ।**
**ನೀತಾಃ ಸಮ್ಯಕ್ ಶುದ್ಧಿಭಿರ್ನಿರ್ಹ್ರಿಯಂತೇ ॥**

ಅರ್ಥಃ— ಕೋಷ್ಠ ಮತ್ತು ಧಾತುಗಳಲ್ಲಿದ್ದ, ಸ್ರೋತಸ್ಸುಗಳಲ್ಲಿ ಸೇರಿಕೊಂಡ, ಶಾಖಾ, ಅಸ್ಥಿಗಳನ್ನು ಆಶ್ರಯಿಸಿದ ದೋಷಗಳು ಸ್ನೇಹದಿಂದ ಮೆತ್ತಗಾಗಿ, ಸ್ವೇದದಿಂದ ದ್ರವರೂಪವನ್ನು ಹೊಂದಿ, ಕೋಷ್ಠಕ್ಕೆ ತಿರುಗಿ ತರಲ್ಪಟ್ಟು ಶೋಧನಗಳಿಂದ ಹೊರದೂಡಲ್ಪಡುತ್ತವೆ. (೨೯॥)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸ್ವೇದವಿಧಿರ್ನಾಮ ಸಪ್ತದಶೋಽಧ್ಯಾಯಃ ಸಮಾಪ್ತಃ ।**

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ' ದ ಸೂತ್ರಸ್ಥಾನದಲ್ಲಿಯ ಸ್ವೇದವಿಧಿ ಎಂಬ ೧೭ ನೆಯ ಅಧ್ಯಾಯದ ಟೀಕೆಯು ಮುಗಿದುದು.

# ೧೮ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ ಸ್ನೇಹದಿಂದ ತೊಯ್ದು, ಸ್ವೇದದಿಂದ ದ್ರವರೂಪವನ್ನು ಹೊಂದಿ ಕೋಷ್ಠಕ್ಕೆ ಬಂದ ದೋಷಗಳು ಶೋಧನದಿಂದ ಹೊರಗೆ ತೆರೆಯಲ್ಪಡುತ್ತವೆ ಎಂದು ಹೇಳಿದರು. ಆ ಶೋಧನಗಳನ್ನು ಮುಂದಿನ ಅಧ್ಯಾಯಗಳಲ್ಲಿ ಕ್ರಮವಾಗಿ ಹೇಳುತ್ತಾರೆ. 'ಚಿಕಿತ್ಸಾಕಲಿಕೆ'ಯಲ್ಲಿ 'ಪ್ರಾಕ್ ಪಾಚನಂ ಸ್ನೇಹವಿಧಿಸ್ತತಶ್ಚ ಸ್ವೇದಸ್ತತಃ ಸ್ಯಾದ್ವಮನಂ ವಿರೇಕಃ । ನಿರೂಹಕಾನ್ವಾಸನಬಸ್ತಿಕರ್ಮ ನಸ್ಯಂ ಕ್ರಮಶ್ಚೇತಿ ಭಿಷಗ್ವರಾಣಾಮ್' ಎಂದು ಅವುಗಳ ಕ್ರಮ ಹೇಳಿದೆ. ಆ ಕ್ರಮದಂತೆ ಮೊದಲು ವಮನ ವಿಧಿಯನ್ನು ಹೇಳುತ್ತಾರೆ

**ಅಥಾತೋ ವಮನ*ವಿರೇಚನವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ।**

ಅರ್ಥಃ— ಇನ್ನು ಮೇಲೆ ವಮನ ವಿರೇಚನಗಳ ವಿಧಿಯ ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ॥**

ಅರ್ಥಃ—ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಕಫೇ ವಿದಧ್ಯಾದ್ವಮನಂ ಸಂಯೋಗೇ ವಾ ಕಫೋಲ್ಬಣೇ ॥**

ಅರ್ಥಃ— ಕಫ ವಿಕಾರದಲ್ಲಿ ಮತ್ತು ಕಫಾಧಿಕ ವಿಕಾರದಲ್ಲಿ ವಮನವನ್ನು ಕೊಡಬೇಕು. (॥)

**ತದ್ವದ್ವಿರೇಚನಂ ಪಿತ್ತೇ........... .....................**

ಅರ್ಥಃ— ಅದರಂತೆ ಪಿತ್ತ ಅಥವಾ ಪಿತ್ತೋಲ್ಬಣ ವಿಕಾರದಲ್ಲಿ ವಿರೇಚನವನ್ನು ಕೊಡಬೇಕು. (॥।)

**.............................ವಿಶೇಷೇಣ ತು ವಾಮಯೇತ್ ॥೧॥**

**ನವಜ್ವರಾತಿಸಾರಾಧಃಪಿತ್ತಾಸೃಗ್ರಾಜಯಕ್ಷ್ಮಿಣಃ ॥**

---

* ವಮನವಿರೇಚನ ವಿಧಿಯು ಚರಕದ ಸೂ. ೧೫, ೧೬ ನೇ, ಸಿ. ೧-೨-೬ನೇ, ಸುಶ್ರುತದ ಚಿಕಿತ್ಸಾಸ್ಥಾನ ೩೩-೩೪ ನೇ, ಅಷ್ಟಾಂಗಸಂಗ್ರಹದ ಸೂ. ೨೭ನೇ ಅಧ್ಯಾಯ. ಗಳಲ್ಲಿ ಹೇಳಲ್ಪಟ್ಟಿದೆ.

ಶ್ವಾಸಹೃಲ್ಲಾಸವೀಸರ್ಪಸ್ತನ್ಯದೋಷೋರ್ಧ್ವರೋಗಿಣಃ ೩॥
ಕುಷ್ಠಮೇಹಾಪಚೀಗ್ರಂಥಿಶ್ಲೀಪದೋನ್ಮಾದಕಾಸಿನಃ ॥

ಅರ್ಥಃ— ವಿಶೇಷವಾಗಿ ನವಜ್ವರ, ಅತಿಸಾರ, ಅಧೋಗಾಮಿ ರಕ್ತ ಪಿತ್ತ ಕ್ಷಯರೋಗ, ಕುಷ್ಠ, ಮೇಹ, ಗಂಡಮಾಲೆ, ಕುರುವು, ಶ್ಲೀಪದ ಉನ್ಮಾದ, ಕೆಮ್ಮು , ದಮ್ಮು , ಮಳಮಳ, ಇಸಬು, ಸ್ತನ್ಯರೋಗ ಮತ್ತು ಕುತ್ತಿಗೆಯ ಮೇಲಿನ ರೋಗಗಳಿಗೆ ವಮನವನ್ನು ಕೊಡಬೇಕು. (೩॥)

ಅವಮ್ಯಾ ಗರ್ಭಿಣೀ ರೂಕ್ಷಃ ಕ್ಷುಧಿತೋ ನಿತ್ಯದುಃಖಿತಃ |೩||

ಬಾಲವೃದ್ಧಕೃಶಸ್ಥೂಲಹೃದ್ರೋಗಿಕ್ಷತದುರ್ಬಲಾಃ ॥
ಪ್ರಸಕ್ತ ವಮಥುಪ್ಲೀಹತಿಮಿರಕ್ರಿಮಿಕೋಷ್ಠಿನಃ ||೪||

ಊರ್ಧ್ವಪ್ರವೃತ್ತವಾಯ್ವಸ್ರದತ್ತಬಸ್ತಿಹತಸ್ವರಾಃ ॥
ಮೂತ್ರಾಘಾತ್ಯುದರೀ ಗುಲ್ಮೀ ದುರ್ವಮೋಽತ್ಯಗ್ನಿರರ್ಶಸಃ ||೫||

ಉದಾವರ್ತಭ್ರಮಾಷ್ಠೀಲಾಪಾರ್ಶ್ವರುಗ್ವಾತರೋಗಿಣಃ ।
ಋತೇ ವಿಷಗರಾಜೀರ್ಣವಿರುದ್ಧಾಭ್ಯವಹಾರತಃ ||೬||

ಅರ್ಥಃ— ಗರ್ಭಿಣಿ ರುಕ್ಷ ಹಸಿದ ಯಾವಾಗಲೂ ದುಃಖಿತ ಬಾಲ ವೃದ್ಧ ಕೃಶ ಸ್ಥೂಲರಿಗೂ, ಹೃದ್ರೋಗ ಗಾಯ ದೌರ್ಬಲ್ಯಗಳುಳ್ಳ ಮತ್ತು ಬಹಳ ವಾಂತಿಯಾಗುತ್ತಿರುವ ಜನರಿಗೂ, ಪ್ಲೀಹ ತಿಮಿರ ಹೊಟ್ಟೆಯಲ್ಲಿ ಕ್ರಿಮಿಯಾದವರಿಗೂ, ವಾಯು ರಕ್ತಪಿತ್ತಗಳು ಊರ್ಧ್ವಗಾಮಿಯಾದವರಿಗೂ, ಬಸ್ತಿ ತೆಗೆದುಕೊಂಡವರಿಗೂ, ಧ್ವನಿ ಬಿದ್ದವರಿಗೂ, ಮೂತ್ರಾಘಾತ ಉದರ ಗುಲ್ಮಗಳಾದವರಿಗೂ, ಯಾವನಿಗೆ ವಮನ ಔಷಧಗಳಿಂದ ವಮನವಾಗುವದಿಲ್ಲವೋ ಅವನಿಗೂ, ಅತ್ಯಗ್ನಿ ಮೂಲವ್ಯಾಧಿ ಉದಾವರ್ತ ಭ್ರಮ ಅಷ್ಠೀಲಾ ( ವಾತರೋಗ ವಿಶೇಷ ) ಪಾರ್ಶ್ವರೋಗ ವಾತರೋಗ ಉಳ್ಳವರಿಗೂ ವಮನ ಕೊಡಬಾರದು. ಆದರೆ ವಿಷ, ಕೃತ್ರಿಮ ವಿಷ, ಅಜೀರ್ಣ, ವಿರುದ್ಧಾಶನಗಳಲ್ಲಿ ಮಾತ್ರ ಕೊಡಲು ಅಡ್ಡಿಯಿಲ್ಲ. (೬)

ಟಿಪ್ಪಣಿ— ಗರ್ಭಿಣಿಗೆ ವಮನ ಕೊಟ್ಟರೆ ಗರ್ಭಕ್ಕೆ ಧಕ್ಕೆ, ಗರ್ಭಭ್ರಂಶಗಳಾಗುವದರಿಂದ ದೊಡ್ಡ ಬೇನೆ ಬರುವದು. ರುಕ್ಷನಿಗೆ ವಾಯುವು ಕುಪಿತವಾಗಿ

ಹನುಗ್ರಹ ಮುಂತಾದವುಗಳನ್ನುಂಟುಮಾಡುವದು. ಪಕ್ವವ ಮತ್ತು ಪಿತ್ತಪ್ರಕೋಪಿತ ನಿಗೆ ಬಲಕ್ಷಯವಾಗುವದು. ಅದರಂತೆ ಬಾಲ, ವೃದ್ಧ, ಕೃಶ, ಸ್ಥೂಲರ ಬಲವು ಕುಗ್ಗುವದು. ಹೃದ್ರೋಗಿಗಳ ಹೃದಯವು ಹಿಡಿಯುವದು. ಗಾಯವಾದವನ ಗಾಯದಿಂದ ರಕ್ತವು ಹೆಚ್ಚು ಬೀಳುವದು. ವಾಂತಿಮಾಡಿಕೊಳ್ಳುವವರಿಗೆ ಅತಿ ಪ್ರವೃತ್ತಿಯಾಗುವದು. ಕ್ರಿಮಿಯುಳ್ಳವರ ಕ್ರಿಮಿಗಳು ಸಂಪೂರ್ಣವಾಗಿ ಹೋಗದ್ದ ರಿಂದ ವಾಂತಿಯು ಹೆಚ್ಚಾಗುವದು. ಇದರಂತೆಯೇ ಉಳಿದವರಿಗೆ ವಮನ ಕೊಡ ದಿರುವ ಕಾರಣವನ್ನು ಯೋಚಿಸಬೇಕು. (೬)

**ಪ್ರಸಕ್ತವಮಥೋಃ ಪೂರ್ವೇ ಪ್ರಾಯೋಽಣಾಮಜ್ವರೋಽಪಿ ಚ ॥**
**ಧೂಮಾಂತೈಃ ಕರ್ಮಭಿರ್ವರ್ಜ್ಯಾಃ ಸರ್ವೈರೇವ ತ್ವಜೀರ್ಣಿನಃ ॥೭॥**

ಅರ್ಥಃ— (ಮೇಲಿನ ಶ್ಲೋಕದಲ್ಲಿ ಹೇಳಿದ) ಗರ್ಭಿಣಿಯಿಂದ ಅಶಕ್ತರ ವರೆಗೆ ಎಲ್ಲ(೧೧) ಜನರಿಗೂ, ಆಮಜ್ವರ ಅಜೀರ್ಣವುಳ್ಳವರಿಗೂ, ವಮನ ದಿಂದ ಧೂಮ್ರಪಾನದವರೆಗೆ ಎಲ್ಲ ಕರ್ಮ (ವಮನ, ವಿರೇಚನ, ಬಸ್ತಿ, ನಸ್ಯ, ಧೂಮ) ಗಳನ್ನು ಕೊಡಬಾರದು.

**ವಿರೇಕಸಾಧ್ಯಾ ಗುಲ್ಮಾರ್ಶೋವಿಸ್ಫೋಟವ್ಯಂಗಕಾಮಲಾಃ ॥**
**ಜೀರ್ಣಜ್ವರೋದರಗರಚ್ಛರ್ದಿಪ್ಲೀಹಹಲೀಮಕಾಃ ॥೮॥**

**ವಿದ್ರಧಿಸ್ತಿಮಿರಂ ಕಾಚಃ ಸ್ಯಂದಃ ಪಕ್ವಾಶಯವ್ಯಥಾ ॥**
**ಯೋನಿಶುಕ್ರಾಶ್ರಯಾ ರೋಗಾಃ ಕೋಷ್ಠಗಾಃ ಕೃಮಯೋ ವ್ರಣಾಃ ॥೯॥**

**ವಾತಾಸ್ರಮೂರ್ಧ್ವಗಂ ರಕ್ತಂ ಮೂತ್ರಾಘಾತಃ ಶಕೃದ್ಗ್ರಹಃ ॥**
**ವಾಮ್ಯಾಶ್ಚ ಕುಷ್ಠಮೇಹಾದ್ಯಾಃ......................**

ಅರ್ಥಃ— ಗುಲ್ಮ, ಮೂಲವ್ಯಾಧಿ, ವಿಸ್ಫೋಟ, ವ್ಯಂಗ, ಕಾಮಿಣಿ, ಜೀರ್ಣಜ್ವರ, ಉದರ, ಕೃತ್ರಿಮವಿಷ, ವಾಂತಿ, ಪ್ಲೀಹ, ಹಲೀಮಕ, ಕುರುವು, ತಿಮಿರ, ಕಾಚ, ಅಭಿಷ್ಯಂದ (ನೇತ್ರರೋಗಗಳು), ಪಕ್ವಾಶಯ ಬೇನೆ,ಯೋನಿ ಶುಕ್ರರೋಗಗಳು, ಕೋಷ್ಠದಲ್ಲಿಯ ಕೃಮಿ, ವ್ರಣ, ವಾತರಕ್ತ ಊರ್ಧ್ವಗಾಮಿ ರಕ್ತಪಿತ್ತ, ಮೂತ್ರಾಘಾತ, ಮಲಾವರೋಧಗಳೂ, ವಮನಾ ರ್ಹವಾದ ಕುಷ್ಠ, ಮೇಹ ಮುಂತಾದ ರೋಗಗಳೂ ವಿರೇಚನದಿಂದ ಸಾಧ್ಯ ವಾಗುವವು. (೯॥)

... .................................................ನ ತು ರೇಚ್ಯೋ ನವಜ್ವರೀ ॥೧೦॥

ಅಲ್ಪಾಗ್ನ್ಯಧೋಗಪಿತ್ತಾಸ್ರಕ್ಷತಪಾಯ್ವತಿಸಾರಿಣಃ ॥
ಸಶಲ್ಯಾಸ್ಥಾಪಿತಕ್ರೂರಕೋಷ್ಠಾತಿಸ್ನಿಗ್ಧಶೋಷಿಣಃ ॥೧೧॥

ಅರ್ಥಃ— ಜ್ವರದ ಆರಂಭದಲ್ಲಿ ರೇಚಕ ಕೊಡಬಾರದು. ಅದರಂತೆ ಅಲ್ಪಾಗ್ನಿ, ಅಧೋಗಾಮಿ ರಕ್ತಪಿತ್ತ, ಗುದದ್ವಾರದಲ್ಲಿ ವ್ರಣವುಳ್ಳವರಿಗೂ ಅತಿಸಾರ, ಶಲ್ಯ, ಕ್ಷಯ, ಕ್ರೂರಕೋಷ್ಠವುಳ್ಳವರಿಗೂ ಆಸ್ಥಾಪನಬಸ್ತಿ ಕೊಟ್ಟವರಿಗೂ ಅತಿಸ್ನಿಗ್ಧರಿಗೂ ರೇಚಕ ಕೊಡಬಾರದು.

**ಟಿಪ್ಪಣೆ:—** ನವಜ್ವರಿಗಳಿಗೆ ವಿರೇಚನ ಕೊಟ್ಟರೆ ಅದು ಅವನ ಅಪಕ್ವ ದೋಷಗಳನ್ನು ಹೊರಗೆಡುಹಲು ಅಶಕ್ತವಾದ್ದರಿಂದ ವಾತಕೋಪವನ್ನುಂಟು ಮಾಡುವದು. ಅಲ್ಪಾಗ್ನಿಯು ಬಲಹೀನನಾದ್ದರಿಂದ ಔಷಧವೇಗವನ್ನು ಸಹನ ಮಾಡನು. ಅಧೋಗ ರಕ್ತಪಿತ್ತ ಅತಿಸಾರಿಗಳಿಗೆ ಅತಿಯೋಗವಾಗುವದು. ಕ್ಷತ ಪಾಯುವಿನ ಕ್ಷತವು ಬಹಳ ನೋಯುವದು. ಸಶಲ್ಯನ ಕ್ಷತದಲ್ಲಿ ವಾಯುವು ಸೇರಿ ನೋವನ್ನುಂಟುಮಾಡುವದು. ನಿರೂಹಬಸ್ತಿ ಕೊಟ್ಟವನಿಗೆ ಔಷಧ ವೇಗವು ಸಹನವಾಗದ್ದರಿಂದ ಬಲನಾಶವಾಗುವದು. ಕ್ರೂರ ಕೋಷ್ಠನ ದೋಷಗಳು ಹೊರೆ ಬೀಳದೆ ಎದೆ ಸಂಧಿಗಳಲ್ಲಿ ಶೂಲೆ, ಹೊಟ್ಟೆಯುಬ್ಬು, ವಾಂತಿ, ಮೂರ್ಛೆ, ದಣುವುಗಳುಂಟಾಗುವವು ಅತಿಸ್ನಿಗ್ಧನಿಗೆ ಅತಿಯೋಗವಾಗುವದು. ಕ್ಷಯರೋಗಿಯ ಧಾತುಗಳು ಕ್ಷೀಣವಾಗಿರುವದರಿಂದ ಅವನಿಗೆ ಮಲದ ಬಲವೇ ಇರುತ್ತದೆ. ಆ ಮಲವೇ ಹೋಗುವದರಿಂದ ದೇಹನಾಶವಾಗುವದು. (೧೧)

ಅಥ ಸಾಧಾರಣೇ ಕಾಲೇ ಸ್ನಿಗ್ಧಸ್ವಿನ್ನಂ ಯಥಾವಿಧಿ ॥
ಶ್ಲೇಷ್ಮಲೈರುತ್ಕ್ಲಿಷ್ಟಕಫಂ ಮತ್ಸ್ಯಮಾಷತಿಲಾದಿಭಿಃ ॥೧೨॥

ನಿಶಾಂ ಸುಪ್ತಂ ಸುಜೀರ್ಣಾನ್ನಂ ಪೂರ್ವಾಹ್ಣೇ ಕೃತಮಂಗಲಮ್ ॥
ನಿರನ್ನಮೀಷತ್ಸ್ನಿಗ್ಧಂ ವಾ ಪೇಯಯಾ ಪೀತಸರ್ಪಿಷಮ್ ॥೧೩॥

ವೃದ್ಧಬಾಲಾಬಲಕ್ಲೀಬಭೀರೂನ್ ರೋಗಾನುರೋಧತಃ ॥
ಆಕಂಠಂ ಪಾಯಿತಾನ್ಮದ್ಯಂ ಕ್ಷೀರಮಿಕ್ಷುರಸಂ ರಸಮ್ ॥೧೪॥

ಯಥಾವಿಕಾರವಿಹಿತಾಂ ಮಧುಸೈಂಧವಸಂಯುತಾಮ್ ॥
ಕೋಷ್ಠಂ ವಿಭಜ್ಯ ಭೈಷಜ್ಯಮಾತ್ರಾಂ ಮಂತ್ರಾಭಿಮಂತ್ರಿತಾಮ್ ॥೧೫॥

"ಬ್ರಹ್ಮದಕ್ಷಾಶ್ವಿರುದ್ರೇಂದ್ರಭೂಚಂದ್ರಾರ್ಕಾನಿಲಾನಲಾಃ
ಋಷಯಃ ಸೌಷಧಿಗ್ರಾಮಾ ಭೂತಸಂಘಾಶ್ಚ ಪಾಂತು ವಃ ॥೧೬॥

ರಸಾಯನಮಿವರ್ಷೀಣಾಮಮರಾಣಾಮಿವಾಮೃತಮ್
ಸುಧೇವೋತ್ತಮನಾಗಾನಾಂ ಭೈಷಜ್ಯಮಿದಮಸ್ತು ತೇ ॥೧೭॥
ಓಂ ನಮೋ ಭಗವತೇ ಭೈಷಜ್ಯಗುರವೇ ವೈಡೂರ್ಯಪ್ರಭ
ರಾಜಾಯ ।

ತಥಾಗತಾಯಾರ್ಹತೇ ಸಮ್ಯಕ್ ಸಂಬುದ್ಧಾಯ । ತದ್ಯಥಾ ।
ಓಂ ಭೈಷಜ್ಯೇ ಭೈಷಜ್ಯೇ ಮಹಾಭೈಷಜ್ಯೇಸಮುದ್ಗತೇ ಸ್ವಾಹಾ ।
ಪ್ರಾಙ್ಮುಖಂ ಪಾಯಯೇತ್......................

ಅರ್ಥಃ— ಸಾಧಾರಣ ಕಾಲವಾದ ಶ್ರಾವಣ, ಕಾರ್ತಿಕ, ಚೈತ್ರ ಮಾಸಗಳಲ್ಲಿ ವಿಧಿಯಂತೆ ಸ್ನೇಹ, ಸ್ವೇದ ಕೊಟ್ಟು ಮೊದಲನೇ ದಿವಸ ಮೀನ ಉದ್ದು ಎಳ್ಳು ಮುಂತಾದವುಗಳಿಂದ ಅವನ ಕಫವನ್ನು ಕೆರಳಿಸಿ ರಾತ್ರಿಯಲ್ಲಿ ಚನ್ನಾಗಿ ನಿದ್ದೆಮಾಡಿಸಿ, ಮರುದಿವಸ ಮುಂಜಾನೆ ಅನ್ನವು ಜೀರ್ಣವಾದ ಮೇಲೆ, ಸ್ವಸ್ತಿ ವಾಚನ ಮಾಡಿ ಪೇಯೆಯೊಡನೆ ಘೃತಪಾನಮಾಡಿಸಿ, ಸ್ವಲ್ಪ ಸ್ನಿಗ್ಧನಾಗಲು ಅಥವಾ ಹಾಲು ಹೊಟ್ಟೆಯಿಂದಲೇ ವೃದ್ಧ, ಬಾಲ, ಅಶಕ್ತ, ನಪುಂಸಕ, ಅಂಜುಬುರಕ ಈ ಮುಂತಾದ ಜನರಿಗೆ ಅವರವರ ರೋಗಾನುಸಾರ ವಾಗಿ ಮದ್ಯ, ಹಾಲು ಕಬ್ಬಿನರಸ, ಮಾಂಸರಸಗಳನ್ನು ಕುತ್ತಿಗೆಯಮಟ್ಟ ಕುಡಿಸಿ ಆಯಾ ವಿಕಾರಕ್ಕೆ ಹೇಳಿದ, ಮಧು ಸೈಂಧವಗಳಿಂದ ಕೂಡಿದ, ಅವರವರ ಕೋಷ್ಠಕ್ಕೆ ಯೋಗ್ಯ ಪ್ರಮಾಣವಾಗಿರುವ ಔಷಧವನ್ನು ಮುಂದೆ ಹೇಳಿದ ಮಂತ್ರದಿಂದ ಅಭಿಮಂತ್ರಿಸಿ ಪೂರ್ವಾಭಿಮುಖವಾಗಿ ಕುಡಿಸಬೇಕು.

ಮಂತ್ರದ ಅರ್ಥವು— ಬ್ರಹ್ಮ, ದಕ್ಷ, ರುದ್ರ, ಅಶ್ವಿನಿ, ಇಂದ್ರ ಭೂಮಿ, ಚಂದ್ರ, ಸೂರ್ಯ, ವಾಯು ಅಗ್ನಿ ಋಷಿ, ಔಷಧಿಗಳ ಸಮೂಹ, ಭೂತಸಂಘಗಳು ನಿಮ್ಮನ್ನು ರಕ್ಷಿಸಲಿ. ಋಷಿಗಳಿಗೆ ರಸಾಯನದಂತೆ, ದೇವತೆ ಗಳಿಗೆ ಅಮೃತದಂತೆ, ಉತ್ತಮನಾಗರಿಗೆ ಸುಧೆಯಂತೆ ಈ ಔಷಧ ನಿನ ಗಾಗಲಿ. ವೈಡೂರ್ಯದಂತೆ ಕಾಂತಿಯಿಂದ ಹೊಳೆಯುವ ಭಗವಾನ್ ಔಷಧ ಶ್ರೇಷ್ಠನಿಗೆ ನಮಸ್ಕಾರವು. ಪೂರ್ಣ ಜ್ಞಾನಿಯಾದ ಅರ್ಹನಾದ ಬುದ್ಧನಿಗೆ ನಮಸ್ಕಾರವು. ಭೈಷಜ್ಯೇ ಭೈಷಜ್ಯೇ ಮಹಾಭೈಷಜ್ಯಕ್ಕೆ ಸ್ವಾಹಾ. (೧೭)

............ಪೀತೋ ಮುಹೂರ್ತಮನುಪಾಲಯೇತ್ ॥
ತನ್ಮನಾ ಜಾತಹೃಲ್ಲಾಸಪ್ರಸೇಕಶ್ಛರ್ದಯೇತ್ತತಃ ॥೧೮॥

ಅಂಗುಲಿಭ್ಯಾಮನಾಯಸ್ತೋ ನಾಲೇನ ಮೃದುನಾಽಥವಾ ॥
ಗಲತಾಲ್ವರುಜನ್ ವೇಗಾನಪ್ರವೃತ್ತಾನ್ ಪ್ರವರ್ತಯನ್ ॥೧೯॥

ಪ್ರವರ್ತಯನ್ ಪ್ರವೃತ್ತಾಂಶ್ಚ ಜಾನುತುಲ್ಯಾಸನೇ ಸ್ಥಿತಃ ॥

ಅರ್ಥ:— ಕುಡಿದನಂತರ ಎರಡು ಗಳಿಗೆಯವರೆಗೆ ಅದರ ಕಡೆಗೇ ಲಕ್ಷಗೊಟ್ಟು ವಾಂತಿಯು ಹಾದೀ ನೋಡಬೇಕು. ಮಳ ಮಳ ಅಂದು ಬಾಯಿಗೆ ನೀರು ಬರಹತ್ತಲು ಮೊಳಕಾಲಷ್ಟು ಎತ್ತರವಾದ ಆಸನದ ಮೇಲೆ ಕುಳಿತು ಗಂಟಲಲ್ಲಿ ಎರಡು ಬಟ್ಟು ಹಾಕಿಕೊಂಡಾಗಲಿ ಅಥವಾ ಗಂಟಲ ಅಂಗಳಗಳಿಗೆ ನೋವಾಗದಂತೆ ಮೃದುವಾದ ಕಮಲದೇಟಿನಿಂದ ಆಗಲಿ ಆಯಾಸವಾಗದಂತೆ ವಾಂತಿಯು ಪ್ರವೃತ್ತಿಯನ್ನು ಮಾಡಬೇಕು. ಮೊದಲೇ ಪ್ರವೃತ್ತಿಯಾಗಿದ್ದರೆ ಅದನ್ನು ಹಾಗೇ ಸುರುವು ಇಡಬೇಕು. (೧೯॥)

ಉಭೇ ಪಾರ್ಶ್ವೇ ಲಲಾಟಂ ಚ ವಮತಶ್ಚಾಸ್ಯ ಧಾರಯೇತ್ ॥೨೦॥
ಪ್ರಪೀಡಯೇತ್ತಥಾ ನಾಭಿಂ ಪೃಷ್ಠಂ ಚ ಪ್ರತಿಲೋಮತಃ ॥

ಅರ್ಥಃ— ವಾಂತಿ ಮಾಡಿಕೊಳ್ಳುವವನ ಎರಡೂ ಬರಿಕೆಗಳನ್ನೂ ಹಣೆಯನ್ನೂ ಹಿಡಿಯಬೇಕು. ಹೊಕ್ಕಳು ಬೆನ್ನುಗಳನ್ನು ಕೆಳಗಿನಿಂದ ಮೇಲೆ ಒತ್ತುತ್ತ ಹೋಗಬೇಕು. (೨೦॥)

ಕಫೇ ತೀಕ್ಷ್ಣೋಷ್ಣ ಕಟುಕೈಃ, ಪಿತ್ತೇ ಸ್ವಾದುಹಿಮೈರಿತಿ ॥೨೧॥

ವಮೇತ್ ಸ್ನಿಗ್ಧಾಮ್ಲ ಲವಣೈಃ, ಸಂಸೃಷ್ಟೇ ಮರುತಾ ಕಫೇ ॥
ಪಿತ್ತಸ್ಯ ದರ್ಶನಂ ಯಾವಚ್ಛೇದೋ ವಾ ಶ್ಲೇಷ್ಮಣೋ ಭವೇತ್ ॥೨೨॥

ಅರ್ಥ:— ಕಫ ವಿಕಾರದಲ್ಲಿ ತೀಕ್ಷ್ಣ ಉಷ್ಣ ಖಾರ ಪದಾರ್ಥಗಳಿಂದ, ಪಿತ್ತದಲ್ಲಿ ಮಧುರ ಶೀತ ಪದಾರ್ಥಗಳಿಂದ, ವಾತಯುಕ್ತ ಕಫವಿಕಾರದಲ್ಲಿ ಸ್ನಿಗ್ಧ ಆಮ್ಲ ಲವಣಗಳಿಂದ ಪಿತ್ತ ಬೀಳುವವರೆಗೆ ಅಥವಾ ಕಫನಾಶವಾಗುವವರೆಗೆ ವಾಂತಿ ಮಾಡಿಸಬೇಕು. (೨೨)

ವಮನದ ಅಯೋಗವನ್ನು ಹೇಳುತ್ತಾರೆ.

**ಹೀನವೇಗಃ ಕಣಾಧಾತ್ರೀಸಿದ್ಧಾರ್ಥಲವಣೋದಕೈಃ ॥**
**ವಮೇತ್ ಪುನಃ ಪುನಸ್ತತ್ರ ವೇಗಾನಾಮಪ್ರವರ್ತನಮ್ ॥೩೩॥**

**ಪ್ರವೃತ್ತಿಃ ಸವಿಬಂಧಾ ವಾ ಕೇವಲಸ್ಯೌಷಧಸ್ಯ ವಾ ॥**
**ಅಯೋಗಸ್ತೇನ ನಿಷ್ಠೀವಕಂಡೂಕೋಠಜ್ವರಾದಯಃ ॥೩೪॥**

ಅರ್ಥಃ— ವೇಗವು ಹೀನವಾದರೆ ಹಿಪ್ಪಲಿ, ನೆಲ್ಲೀಕಾಯಿ, ಸಾಸಿವೆ ಮತ್ತು ಉಪ್ಪು ಹಾಕಿದ ನೀರಿನಿಂದ ಮೇಲೆ ಮೇಲೆ ವಾಂತಿಮಾಡಿಸಬೇಕು. ವೇಗ ಬರದೇ ಇರೋಣ, ತಟ್ಟ ತಟ್ಟಿಸಿ ಬರೋಣ ಅಥವಾ ಬರೇ ಔಷಧ ಬೀಳೋಣ ಇದು ವಮನದ ಅಯೋಗವು. ಅದರಿಂದ ಉಗುಳು, ಕಂಡೂ ಹೈದಿಕೆ, ಜ್ವರ ಮುಂತಾದವುಗಳುಂಟಾಗುತ್ತವೆ. (೩೪)

ವಮನದ ಸಮ್ಯಗ್ಯೋಗ ಅತಿಯೋಗಗಳನ್ನು ಹೇಳುತ್ತಾರೆ.

**ನಿರ್ವಿಬಂಧಂ ಪ್ರವರ್ತಂತೇ ಕಫಪಿತ್ತಾನಿಲಾಃ ಕ್ರಮಾತ್ ॥**
**ಸಮ್ಯಗ್ಯೋಗೇಽತಿಯೋಗೇ ತು ಫೇನಚಂದ್ರಕರಕ್ತವತ್ ॥೩೫॥**

**ವಮಿತಂ ಕ್ಷಾಮತಾ ದಾಹಃ ಕಂಠಶೋಷಸ್ತಮೋ ಭ್ರಮಃ ॥**
**ಘೋರಾ ವಾಯ್ವಾಮಯಾ ಮೃತ್ಯುರ್ಜೀವಶೋಣಿತನಿರ್ಗಮಾತ್ ॥೩೬॥**

ಅರ್ಥಃ— ಸಮ್ಯಗ್ಯೋಗವಾಗಲು, ಕಫ-ಪಿತ್ತ-ವಾತಗಳು ಪ್ರತಿಬಂಧವಿಲ್ಲದೆ ಕ್ರಮವಾಗಿ ಪ್ರವೃತ್ತವಾಗುವವು. ಅತಿಯೋಗವಾಗಲು ಬುರುಗು ತರತರದ ಬಣ್ಣ ರಕ್ತಗಳಿಂದ ಕೂಡಿದ ವಾಂತಿಯಾಗುವದು. ಕೃಶತ್ವ,ದಾಹ,ಕಂಠಶೋಷ,ಕಣ್ಣಿಗೆ ಕತ್ತಲು ಬರುವದು,ಭ್ರಮ, ಭಯಂಕರ ವಾತರೋಗಗಳುಂಟಾಗುವವು. ಜೀವಂತ ರಕ್ತ ಹೋಗುವದರಿಂದ ಮೃತ್ಯುವೂ ಬರುವದು. (೩೬)

**ಸಮ್ಯಗ್ಯೋಗೇನ ವಮಿತಂ ಕ್ಷಣಮಾಶ್ವಾಸ್ಯ ಪಾಯಯೇತ್ ॥**
**ಧೂಮತ್ರಯಸ್ಯಾನ್ಯತಮಂ ಸ್ನೇಹಾಚಾರಮಥಾದಿಶೇತ್ ॥೩೭॥**

ಅರ್ಥಃ— ವಮನದ ಸಮ್ಯಗ್ಯೋಗವಾದವನಿಗೆ ಒಂದು ಕ್ಷಣ ವಿಶ್ರಾಂತಿ ಕೊಟ್ಟು ಸ್ನಿಗ್ಧ, ಮಧ್ಯ, ತೀಕ್ಷ್ಣ ಎಂಬ ಮೂರು ತರದ ಧೂಮಗಳಲ್ಲಿ ಒಂದನ್ನು ಕೊಟ್ಟು ಸ್ನೇಹ ಕುಡಿಯುವವರಿಗೆ ಹೇಳಿದ ಪಥ್ಯವನ್ನು ಮಾಡಿಸಬೇಕು. (೨೭)

**ತತಃ ಸಾಯಂ ಪ್ರಭಾತೇ ವಾ ಕ್ಷುದ್ವಾನ್ ಸ್ನಾತಃ ಸುಖಾಂಬುನಾ||**
**ಭುಂಜಾನೋ ರಕ್ತಶಾಲ್ಯನ್ನಂ ಭಜೇತ್ಪೇಯಾದಿಕಂ ಕ್ರಮಮ್||೨೮||**

ಅರ್ಥಃ—ಆಮೇಲೆ ದೀಪ್ತಾಗ್ನಿಯುಳ್ಳವನು ಮೂರು ಸಂಜೆಯುಮುಂದೆ, ಮಂದಾಗ್ನಿಯುಳ್ಳವನು ಮುಂಜಾನೆ ಹಸಿವೆಯಾದನಂತರ ಬೆಚ್ಚನ್ನನೀರಿನಿಂದ ಸ್ನಾನಮಾಡಿ ಕೆಂಪಕ್ಕಿಯ ಅನ್ನದಿಂದ ಮಾಡಿದ (ಮುಂದೆ ಹೇಳಿದ) ಪೇಯಾದಿಕ್ರಮವನ್ನು ಅನುಸರಿಸಬೇಕು. (೨೮)

**ಪೇಯಾಂ ವಿಲೇಪೀಮಕೃತಂ ಕೃತಂ ಚ ಯೂಷಂ ರಸಂ**
**ತ್ರೀನುಭಯಂ ತಥೈಕಮ್ ||**
**ಕ್ರಮೇಣ ಸೇವೇತ ನರೋಽನ್ನಕಾಲಾನ್**
**ಪ್ರಧಾನಮಧ್ಯಾವರಶುದ್ಧಿಶುದ್ಧಃ ||೨೯||**

ಅರ್ಥ:— ಗಂಜಿ, ತೆಳ್ಳಗಿನ ಅನ್ನ, ಶುಂಠಿ ಉಪ್ಪು ಹಾಕಿ ರುಚಿ ಮಾಡಿದ ಕಟ್ಟು, ಹಾಕದೇ ಮಾಡಿದ ಕಟ್ಟು, ಮಾಂಸರಸ ಇವುಗಳನ್ನು ಉತ್ತಮ ಶುದ್ಧಿಯಾದವನು ಮೂರು ಊಟದ ಕಾಲ ಸೇವಿಸಬೇಕು. ಮಧ್ಯಮ ಶುದ್ಧಿಯಾದವನು ಎರಡು ಅನ್ನಕಾಲ, ಹೀನ ಶುದ್ಧಿಯಾದವನು ಒಂದು ಕಾಲ ಸೇವಿಸಬೇಕು. (೨೯)

**ಯಥಾಽಣುರಗ್ನಿಸ್ತೃಣಗೋಮಯಾದ್ಯೈಃ**
**ಸಂಧುಕ್ಷ್ಯಮಾಣೋ ಭವತಿ ಕ್ರಮೇಣ ||**
**ಮಹಾನ್ ಸ್ಥಿರಃ ಸರ್ವಪಚಸ್ತಥೈವ**
**ಶುದ್ಧಸ್ಯ ಪೇಯಾದಿಭಿರಾಂತರಾಗ್ನಿಃ ||೩೦||**

ಅರ್ಥ:— ಹೇಗೆ ಸಣ್ಣ ಕಿಡಿಯು ಹುಲ್ಲು ಕುಳ್ಳು ಮುಂತಾದವುಗಳಿಂದ ಕ್ರಮವಾಗಿ ಹೊತ್ತಿಸುತ್ತಾ ಹೋದರೆ ದೊಡ್ಡದೂ ಸ್ಥಿರ ಮತ್ತು

ಎಲ್ಲವನ್ನು ಹೋಯಿಸುವಂಥವು, ಆಗುತ್ತವೆಯೋ ಅದರಂತೆ ಹುಲ್ಲು ನಾರಿನ ಅಗ್ನಿಯೂ ಸೌದೆ ಮುಂತಾದವುಗಳಿಂದ ಕ್ರಮವಾಗಿ ಬೆಳೆಸುತ್ತ ಹೋದರೆ ಹಾಗೆಯೇ ಆಗುತ್ತದೆ. (೩೦)

**ಜಘನ್ಯಮಧ್ಯಪ್ರವರೇ ತು ವೇಗಾಶ್ಚತ್ವಾರ ಇಷ್ಟಾ ವಮನೇ ಷಡಷ್ಟೌ॥**
**ದಶೈವ ತೇ ದ್ವಿತ್ರಿಗುಣಾ ವಿರೇಕೇ ಪ್ರಸ್ಥಸ್ತಥಾ ಸ್ಯಾದ್ದ್ವಿಚತುರ್ಗುಣಶ್ಚ ॥೩೧॥**

ಅರ್ಥ:— ಕನಿಷ್ಠ ವಮನದಲ್ಲಿ ನಾಲ್ಕು, ಮಧ್ಯಮ ವಮನದಲ್ಲಿ ಆರು, ಉತ್ತಮ ವಮನದಲ್ಲಿ ಎಂಟು ವೇಗಗಳು ಆಗಬೇಕು. ವಿರೇಚನದಲ್ಲಿ ಅದರಂತೆ ಹತ್ತು, ಇಪ್ಪತ್ತು, ಮೂವತ್ತು ಹೀಗೆ ಕ್ರಮವಾಗಿ ವೇಗಗಳು ಆಗಬೇಕು. ಮತ್ತು ವಿರೇಚನವಾದ ಮಲದ ಪ್ರಮಾಣವು ಒಂದು ಪ್ರಸ್ಥ, ಎರಡು ಪ್ರಸ್ಥ, ನಾಲ್ಕು ಪ್ರಸ್ಥ ಇರಬೇಕು. (೩೧)

**ಪಿತ್ತಾವಸಾನಂ ವಮನಂ ವಿರೇಕಾ**
**ದರ್ಧಂ ಕಫಾಂತಂ ಚ ವಿರೇಕಮಾಹುಃ ॥**
**ದ್ವಿತ್ರಾನ್ ಸವಿಟ್ಕಾನಪನೀಯ ವೇಗಾನ್**
**ಮೇಯಂ ವಿರೇಕೇ ವಮನೇ ತು ಪೀತಮ್ ॥೩೨॥**

ಅರ್ಥ:— ಪಿತ್ತ ಬೀಳುವವರೆಗೆ ವಮನ ಮಾಡಿಸಬೇಕು. ವಿರೇಚನದ ಅರ್ಧ ವಮನದಿಂದ ಬಿದ್ದ ದ್ರವ್ಯ(ಕನಿಷ್ಠದಲ್ಲಿ ಅರ್ಧ ಪ್ರಸ್ಥ, ಮಧ್ಯಮದಲ್ಲಿ ಒಂದು ಪ್ರಸ್ಥ,ಉತ್ತಮದಲ್ಲಿ ಎರಡು ಪ್ರಸ್ಥ) ಇರಬೇಕೆಂದೂ,ವಿರೇಚನವು ಕಫಬೀಳುವ ವರೆಗೆ ಆಗಬೇಕೆಂದೂ ಹೇಳುತ್ತಾರೆ. ರೇಚನದಲ್ಲಿ ಮಲಸಹಿತವಾದ ಮೊದಲಿನ ಎರಡು-ಮೂರು ಮಲಯುಕ್ತ ವೇಗಗಳನ್ನೂ ಮತ್ತು ವಮನದಲ್ಲಿ ಕುಡಿದ ಔಷಧವನ್ನೂ ಬಿಟ್ಟು ತೂಕಮಾಡಬೇಕು. (೩೨)

ಇನ್ನು ಮೇಲೆ ವಿರೇಚನ ವಿಧಿಯನ್ನು ಹೇಳುತ್ತಾರೆ.

**ಅಥೈನಂ ವಾಮಿತಂ ಭೂಯಃ ಸ್ನೇಹಸ್ವೇದೋಪಪಾದಿತಮ್ ॥**
**ಶ್ಲೇಷ್ಮಕಾಲೇ ಗತೇ ಜ್ಞಾತ್ವಾ ಕೋಷ್ಠಂ ಸಮ್ಯಗ್ವಿರೇಚಯೇತ್ ॥೩೩॥**

ಅರ್ಥಃ— ಆಮೇಲೆ ವಾಂತಿ ಕೊಟ್ಟವನಿಗೆ ಪುನಃ ಸ್ನೇಹ, ಸ್ವೇದ, ಕೊಟ್ಟು ಕಫದ ವೇಳೆ ಹೋದನಂತರ ಅವರ ಕೋಷ್ಠವನ್ನು ನೋಡಿ ಚನ್ನಾಗಿ ವಿರೇಚನ ಮಾಡಬೇಕು. (೩೩)

ಬಹುಪಿತ್ತೋ ಮೃದುಃ ಕೋಷ್ಠಃ ಕ್ಷೀರೇಣಾಪಿ ವಿರಿಚ್ಯತೇ ||
ಪ್ರಭೂತಮಾರುತಃ ಕ್ರೂರಃ ಕೃಚ್ಛ್ರಾಚ್ಛ್ಯಾಮಾದಿಕೈರಪಿ ||೩೪||

ಅರ್ಥ:— ಪಿತ್ತಾಧಿಕ ಕೋಷ್ಠವು ಮೃದುವಿರುತ್ತದೆ. ಮತ್ತು ಅದು ಹಾಲಿನಿಂದಾದರೂ ಜಾಡಿಸುತ್ತದೆ. ಬಹಳ ವಾತವುಳ್ಳ ಕೋಷ್ಠವು ಕ್ರೂರವಿರುವದು. ಆದ್ದರಿಂದ ತಿಗಡಿ ಮುಂತಾದವುಗಳಿಂದ ಸಹ ಜಾಡಿಸುವದು ಕಠಿಣವು. (೩೪)

ಕಷಾಯಮಧುರೈಃ ಪಿತ್ತೇ ವಿರೇಕಃ ಕಟುಕೈಃ ಕಫೇ
ಸ್ನಿಗ್ಧೋಷ್ಣಲವಣೈರ್ವಾಯಾವಪ್ರವೃತ್ತೌ ತು ಪಾಯಯೇತ್ ||೩೫||

ಉಷ್ಣಾಂಬು, ಸ್ವೇದಯೇದಸ್ಯ ಪಾಣಿತಾಪೇನ ಚೋದರಮ್ ||

ಅರ್ಥಃ— ಪಿತ್ತದಲ್ಲಿ ಒಗರು ಶೀಪದಾರ್ಥಗಳಿಂದ, ಕಫದಲ್ಲಿ ಕಾರ ಔಷಧಗಳಿಂದ, ವಾಯುವಿನಲ್ಲಿ ಸ್ನಿಗ್ಧ ಉಷ್ಣ ಉಪ್ಪು ಔಷಧಗಳಿಂದ ವಿರೇಚನ ಮಾಡಬೇಕು. ರೇಚದ ಪ್ರವೃತ್ತಿಯಾಗದೇ ಹೋದರೆ ಬಿಸಿನೀರು ಕುಡಿಸಬೇಕು ಮತ್ತು ಕೈ ಕಾಸಿ ಅದರಿಂದ ಅವನ ಹೊಟ್ಟೆಯನ್ನು ಕಾಸಬೇಕು.

ಟಿಪ್ಪಣಿಃ— ಔಷಧವನ್ನು ಕುಡಿದ ಕೂಡಲೇ ವಾಂತಿಯಾಗಬಾರದೆಂದು ಮೋರೆಯ ಮೇಲೆ ತಣ್ಣೀರು ಸಿಂಪಡಿಸಬೇಕು. ಆಮೇಲೆ ಬಿಸಿನೀರಿನಿಂದ ಬಾಯಿಯನ್ನು ಮುಕ್ಕಳಿಸಿ ಸುಗಂಧ ದ್ರವ್ಯಗಳನ್ನು ಮೂಸಬೇಕು ಗಾಳಿಯಿಲ್ಲದ ಸ್ಥಳದಲ್ಲಿ ಮೆತ್ತನ್ನ ಹಾಸಿಗೆಯ ಮೇಲೆ ಕುಳಿತು ಬಾಯಿಯಲ್ಲಿ ಬಿಸಿ ನೀರನ್ನು ಆಗಾಗ್ಗೆ ಹಿಡಿಯುತ್ತಿರಬೇಕು ತಣ್ಣನ್ನ ಪದಾರ್ಥಗಳನ್ನು ಮುಟ್ಟಬಾರದು. ಹೀಗೆ ಮಾಡುವದರಿಂದ ವಿರೇಚನವಾಗುವದು. ವಮನದಲ್ಲಿ, ಸ್ವೇದ, ಬಾಯಿಗೆ ನೀರು ಬಿಡೋಣ, ಔಷಧ, ಕಫ, ಪಿತ್ತ, ವಾತಗಳು ಹೇಗೆ ಕ್ರಮದಿಂದ ಹೊರಬೀಳುವವೋ ಅದರಂತೆ ವಿರೇಚನದಲ್ಲಿ ವಾತ, ಮೂತ್ರ, ಮಲ, ಪಿತ್ತ, ಕಫಗಳು ಕ್ರಮವಾಗಿ ಹೊರಬೀಳುತ್ತವೆ. ಕಡೆಗೆ ವಾಯುವು ಹೊರಬೀಳುವದು. ದೇಹದಲ್ಲಿ ಇದೇ ಪ್ರಕಾರ ದೋಷಗಳ ಸ್ಥಿತಿ ಇರುತ್ತದೆ ಈ ವಮನ ವಿರೇಚನ ಮಾರ್ಗಗಳು ವಿಪರೀತವಾಗಿರುವದರಿಂದ ಅವುಗಳ ಹೊರಬೀಳುವ ಕ್ರಮವು ಬೇರೆಬೇರೆಯಾಗಿದೆ. (೩೫)

ಉತ್ಥಾನೇಽಲ್ಪೇ ದಿನೇ ತಸ್ಮಿನ್ ಭುಕ್ತ್ವಾಽನ್ಯೇದ್ಯುಃ ಪುನಃ ಪಿಬೇತ್ ॥೩೬॥

ಅರ್ಥಃ— ಸ್ವಲ್ಪೇ ಪ್ರವೃತ್ತಿಯಾದರೆ ಆ ದಿವಸ ಊಟಮಾಡಿ ಎರಡನೇ ದಿವಸ ಪುನಃ(ರೇಚಕ) ಕುಡಿಯಬೇಕು. (೩೬)

ಅದೃಢಸ್ನೇಹಕೋಷ್ಠಸ್ತು ಪಿಬೇದೂರ್ಧ್ವಂ ದಶಾಹತಃ ॥
ಭೂಯೋಽಪ್ಯುಪಸ್ಕೃತತನುಃ ಸ್ನೇಹಸ್ವೇದೈರ್ವಿರೇಚನಮ್ ॥೩೭॥
ಯೌಗಿಕಂ ಸಮ್ಯಗಾಲೋಚ್ಯ ಸ್ಮರನ್ಪೂರ್ವಮತಿಕ್ರಮಮ್ ॥

ಅರ್ಥಃ— ಚೆನ್ನಾಗಿ ಸ್ನಿಗ್ಧವಾಗದ ಕೋಷ್ಠವುಳ್ಳವನು ಸ್ನೇಹ ಸ್ವೇದಗಳನ್ನು ಪುನಃ ಮಾಡಿಕೊಂಡು ಹಿಂದೆ ಮಾಡಿದ ತಪ್ಪುಗಳನ್ನೆಲ್ಲ ನೆನಪಿಗೆ ತಂದುಕೊಂಡು ಚೆನ್ನಾಗಿ ಆಲೋಚಿಸಿ ಹತ್ತು ದಿವಸಗಳ ಮೇಲೆ ಶಾಸ್ತ್ರವಿಧಿಯಂತೆ ಪುನಃ ವಿರೇಚನವನ್ನು ಕುಡಿಯಬೇಕು. (೩೭)

ವಿರೇಚನದ ಹೀನಯೋಗ ಸಮ್ಯಗ್ಯೋಗಗಳನ್ನು ಹೇಳುತ್ತಾರೆ.

ಹೃತ್ಕುಕ್ಷ್ಯಶುದ್ಧಿರರುಚಿರುತ್ಕ್ಲೇಶಃ ಶ್ಲೇಷ್ಮಪಿತ್ತಯೋಃ ॥೩೮॥
ಕಂಡೂರ್ವಿದಾಹಃ ಪಿಟಿಕಾಃ ಪೀನಸೋ ವಾತವಿಡ್ಗ್ರಹಃ ॥
ಅಯೋಗಲಕ್ಷಣಂ.ಯೋಗೋ ವೈಪರೀತ್ಯೇ ಯಥೋದಿತಾತ್ ॥೩೯॥

ಅರ್ಥಃ— ಎದೆ ಹೊಟ್ಟೆಗಳು ಸ್ವಚ್ಛ ಇರದೇ ಇರೋಣ, ಅರುಚಿ, ಕಫ ಪಿತ್ತಗಳ ಓಕರಿಕೆ, ಕಂಡೂ, ವಿದಾಹ, ಬಕ್ಕೆ, ನೆಗಡಿ, ವಾತ ಮಲಗಳ ಪ್ರತಿಬಂಧ ಇವು ರೇಚನವು ಚೆನ್ನಾಗಿ ಆಗದೇ ಇದ್ದುದರ ಲಕ್ಷಣಗಳು. ಇದರ ವಿಪರೀತ ಲಕ್ಷಣಗಳಾಗಲು ವಿರೇಚನವು ಚೆನ್ನಾಗಿ ಆಗಿದೆಯೆಂದು ತಿಳಿಯಬೇಕು. (೩೯)

ವಿರೇಚನದ ಅತಿಯೋಗವನ್ನು ಹೇಳುತ್ತಾರೆ.

ವಿಟ್ಪಿತ್ತಕಫವಾತೇಷು ನಿಃಸೃತೇಷು ಕ್ರಮಾತ್ಸ್ರವೇತ್ ॥
ನಿಃಶ್ಲೇಷ್ಮಪಿತ್ತಮುದಕಂ ಶ್ವೇತಂ ಕೃಷ್ಣಂ ಸಲೋಹಿತಮ್ ॥೪೦॥

ಮಾಂಸಧಾವನತುಲ್ಯಂ ವಾ ಮೇದಃಖಂಡಾಭಮೇವ ವಾ ॥
ಗುದನಿಃಸರಣಂ ತೃಷ್ಣಾ ಭ್ರಮೋ ನೇತ್ರಪ್ರವೇಶನಮ್ ॥೪೧॥

ಭವಂತ್ಯತಿವಿರಿಕ್ತಸ್ಯ ತಥಾಽತಿವಮನಾಮಯಾಃ ॥

ಅರ್ಥಃ— ಅತಿರೇಚ ಆದವನ ಮಲ, ಪಿತ್ತ, ಕಫ, ವಾತಗಳು ಕ್ರಮದಿಂದ ಹೊರಬೀಳುವವು. ಅನಂತರ ಕಫ ಪಿತ್ತ ಕೂಡದ, ಬಿಳೀ, ಕರೇ, ಸ್ವಲ್ಪ ರಕ್ತದಿಂದ ಕೂಡಿದ ಮಾಂಸ ತೊಳೆದ ನೀರಿನಂತಿದ್ದ ಅಥವಾ ಮೇದಸ್ಸಿನ ತುಣುಕಿನಂತಿದ್ದ ನೀರು ಬೀಳುವದು. ಗುದಭ್ರಂಶ ಮತ್ತು ನೀರಡಿಕೆ, ಭ್ರಮ, ಕಣ್ಣು ಒಳನಡೋಣ—ಈ ವಿಕಾರಗಳೂ, ವಾಂತಿಯು ಅತಿಯೋಗದ ವಿಕಾರಗಳೂ ಆಗುವವು. (೪೧॥)

ಸಮ್ಯಗ್ವಿರಿಕ್ತಮೇನಂ ಚ ವಮನೋಕ್ತೇನ ಯೋಜಯೇತ್ ॥೪೨॥
ಧೂಮವರ್ಜ್ಯೇನ ವಿಧಿನಾ ತತೋ ವಮಿತವಾನಿವ ॥

ಕ್ರಮೇಣಾನ್ನಾನಿ ಭುಂಜಾನೋ ಭಜೇತ್ಪ್ರಕೃತಿಭೋಜನಮ್ ॥೪೩॥

ಅರ್ಥಃ— ಸರಿಯಾಗಿ ರೇಚನವು ಆದನಂತರ ಧೂಮ್ರಪಾನದ ಹೊರ್ತು ಉಳಿದ ವಮನದ ಉಪಚಾರ ಮಾಡಬೇಕು. ಆಮೇಲೆ ವಮನ ತೆಗೆದುಕೊಂಡವನಂತೆ ಕ್ರಮದಿಂದ ಅನ್ನಗಳನ್ನು ಸೇವಿಸುತ್ತ ಕಡೆಗೆ ತನ್ನ ಸ್ವಾಭಾವಿಕ ಅನ್ನವನ್ನು ತಕ್ಕೊಳ್ಳಬೇಕು. (೪೩)

ಮಂದವಹ್ನಿಮಸಂಶುದ್ಧಮಕ್ಷಾಮಂ ದೋಷದುರ್ಬಲಂ ॥
ಅದೃಷ್ಟಜೀರ್ಣಲಿಂಗಂ ಚ ಲಂಘಯೇತ್ ಪೀತಭೇಷಜಮ್ ॥೪೪॥

ಸ್ನೇಹಸ್ವೇದೌಷಧೋತ್ಕ್ಲೇಶಸಂಗೈರಿತಿ ನ ಬಾಧ್ಯತೇ ॥

ಅರ್ಥಃ— ಅಗ್ನಿ ಮಾಂದ್ಯವುಳ್ಳವನೂ ಹೀನಯೋಗವಾದವನೂ ಶೋಧನದಿಂದ ಆಗಬೇಕಾದ ಕೃಶತ್ವವನ್ನು ಹೊಂದದವನೂ, ದೋಷ ವೃದ್ಧಿಗಳಿಂದ ದುರ್ಬಲನಾದವನೂ, ಕುಡಿದ ಔಷಧವು ಪಚನವಾಗದೆ ಇದ್ದವನೂ ಆ ದಿವಸ ಲಂಘನ ಮಾಡಬೇಕು. ಅಂದರೆ ಸ್ನೇಹ, ಸ್ವೇದ

ಔಷಧಗಳಿಂದ ಚಲಿತವಾದ ದೋಷಗಳು ಹಾಗೇ ಶರೀರದಲ್ಲಿ ಉಳಿಯುವದರಿಂದ ಆಗುವ ರೋಗಗಳು ಉಂಟಾಗುವದಿಲ್ಲ.

ಟಿಪ್ಪಣಿ:— ಔಷಧವು ಪಚನವಾದ, ಆಗದ ಲಕ್ಷಣಗಳನ್ನು ಚರಕದಲ್ಲಿ ಹೇಳಿರುವರು.

ಅನುಲೋಮೋಽನಿಲಃ ಸ್ವಾಸ್ಥ್ಯಂ ಕ್ಷುತ್ತೃಷ್ಣಾ ಊರ್ಜಮನಸ್ಕತಾ

ಲಘುತ್ವಮಿಂದ್ರಿಯೋದ್ಗಾರಶುದ್ಧಿರ್ಜೀರ್ಣೌಷಧಾಕೃತಿಃ ॥

ಕ್ಲಮೋ ದಾಹೋಽಂಗಸದನಂ ಭ್ರಮೋ ಮೂರ್ಛಾ ಶಿರೋರುಜಾ ।

ಅರತಿರ್ಬಲಹಾನಿಶ್ಚ ಸಾವಶೇಷೌಷಧಾಕೃತಿಃ ॥ (ಚ೦ ಸಿ೦ ೬.೨೨)                    (೪೪)

ಸಂಶೋಧನಾಸ್ರವಿಸ್ರಾವಸ್ನೇಹಯೋಜನಲಂಘನೈಃ                    ॥೪೫॥

ಯಾತ್ಯಗ್ನಿರ್ಮಂದತಾಂ ತಸ್ಮಾತ್ ಕ್ರಮಂ ಪೇಯಾದಿಮಾಚರೇತ್ ॥

ಅರ್ಥ:— ಸಂಶೋಧನ, ರಕ್ತಸ್ರಾವ, ಸ್ನೇಹನ, ಲಂಘನಗಳಿಂದ ಅಗ್ನಿಯು ಮಂದವಾಗುತ್ತದೆ. ಕಾರಣ ಪೇಯಾದಿಕ್ರಮಗಳನ್ನು ಇಡಬೇಕು.

ಟಿಪ್ಪಣಿ:— ೬೦ ನೇ ಶ್ಲೋಕದಲ್ಲಿ ಸಂಶೋಧನವು ಅಗ್ನಿಯನ್ನು ಪ್ರದೀಪ್ತ ಮಾಡುತ್ತದೆ ಎಂದು ಹೇಳಿದ್ದಾರೆ. ಇಲ್ಲಿ ಮಂದವೆಂದು ಹೇಳುತ್ತಾರೆ. ಇದು ಪರಸ್ಪರ ವಿರುದ್ಧ ತೋರುವದು. ಆದರೆ ಸಂಶೋಧನವನ್ನು ತಕ್ಕೊಂಡಾಗ್ಗೆ ಮಂದವಾಗುವದು ನಿಜ. ಆದರೆ ಮುಂದೆ ಪೇಯಾದಿಕ್ರಮವನ್ನು ಅನುಸರಿಸಲು ಪ್ರದೀಪ್ತವಾಗುವದು. ಆದ್ದರಿಂದ ವಿರೋಧವಿಲ್ಲ.                    (೪೫)

ಸ್ರುತಾಲ್ಪಪಿತ್ತಶ್ಲೇಷ್ಮಾಣಂ ಮದ್ಯಪಂ ವಾತಪೈತ್ತಿಕಮ್ ।                    ॥೪೬॥

ಪೇಯಾಂ ನ ಪಾಯಯೇತ್ತೇಷಾಂ ತರ್ಪಣಾದಿಕ್ರಮೋ ಹಿತಃ ॥

ಅರ್ಥ:— ಸ್ವಲ್ಪವೇ ಕಫ ಪಿತ್ತ ಬಿದ್ದವನಿಗೂ ಸೆರೆಗುಡುಕನಿಗೂ ವಾತಪಿತ್ತವುಳ್ಳವನಿಗೂ ಪೇಯೆಯನ್ನು ಕುಡಿಸಬಾರದು. ಅವನಿಗೆ ತರ್ಪಣಾದಿ ಕ್ರಮವು ಹಿತಕರವು.                    (೪೬)

ಅಪಕ್ವಂ ವಮನಂ ದೋಷಾನ್ ಪಚ್ಯಮಾನಂ ವಿರೇಚನಮ್                    ॥೪೭॥

ನಿರ್ಹರೇದ್ವಮನಸ್ಯಾತಃ ಪಾಕಂ ನ ಪ್ರತಿಪಾಲಯೇತ್ ॥

ಅರ್ಥಃ— ವಮನೌಷಧವು ಅಪಕ್ವ ಅವಸ್ಥೆಯಲ್ಲಿಯೇ ದೋಷಗಳನ್ನು ಕೆಡವುವದು. ವಿರೇಚನವು ಪಚನವಾಗುವಾಗ್ಗೆ ದೋಷಗಳನ್ನು ಕೆಡುವುವದು. ಕಾರಣ ವಮನೌಷಧ ಪಚನವಾಗುವ ಹಾದೀ ನೋಡಬಾರದು.

**ದುರ್ಬಲೋ ಬಹುದೋಷಶ್ಚ ದೋಷಪಾಕೇನ ಯಃ ಸ್ವಯಮ್** ॥೪೮॥
**ವಿರಿಚ್ಯತೇ ಭೇದನೀಯೈರ್ಭೋಜ್ಯೈಸ್ತಮುಪಪಾದಯೇತ್** ॥

ಅರ್ಥಃ— ಬಹಳ ದೋಷವುಳ್ಳ ನಿರ್ಬಲರೋಗಿಗೆ ದೋಷಪಾಕದಿಂದ ತಾನಾಗಿಯೇ ರೇಚನವಾಗಹತ್ತಿದರೆ ಅವನಿಗೆ (ರೇಚನ ಔಷಧ ಕೊಡದೇ) ಸಾರಕವಾದ ಅನ್ನ ಕೊಡಬೇಕು. (೪೮॥)

**ದುರ್ಬಲಃ ಶೋಧಿತಃ ಪೂರ್ವಮಲ್ಪದೋಷಃ ಕೃಶೋ ನರಃ** ॥೪೯॥
**ಅಪರಿಜ್ಞಾತಕೋಷ್ಠಶ್ಚ ಪಿಬೇನ್ಮೃದ್ವಲ್ಪಮೌಷಧಮ್** ॥

ಅರ್ಥಃ— ದುರ್ಬಲನೂ, ಮೊದಲು ಶೋಧನ ತೆಗೆದುಕೊಂಡವನೂ, ಅಲ್ಪದೋಷವುಳ್ಳವನೂ, ಕೃಶನೂ, ಯಾವನ ಕೋಷ್ಠವು ಇನ್ನೂ ತಿಳಿದಿಲ್ಲವೋ ಅವನೂ ಮೃದು ಮತ್ತು ಸ್ವಲ್ಪ ಔಷಧವನ್ನು ಕುಡಿಯಬೇಕು. (೪೯॥)

**ವರಂ ತದಸಕೃತ್ಪೀತಮನ್ಯಥಾ ಸಂಶಯಾವಹಮ್** ॥೫೦॥

ಅರ್ಥಃ— ಔಷಧವನ್ನು ಅನೇಕಸಾರೆ ತಕ್ಕೊಳ್ಳುವದು ಹಿತಕರವೇ ಹೊರ್ತು, ಬಹಳ ಅಥವಾ ತೀಕ್ಷ್ಣ ಔಷಧವನ್ನು ಒಂದೇ ಸಾರೆ ತಕ್ಕೊಳ್ಳುವದು ಹಿತಕರಲ್ಲ. (೫೦)

**ಹರೇದ್ಬಹೂಂಶ್ಚಲಾನ್ ದೋಷಾನಲ್ಪಾನಲ್ಪಾನ್ ಪುನಃ ಪುನಃ** ॥
**ದುರ್ಬಲಸ್ಯ ಮೃದುದ್ರವ್ಯೈರಲ್ಪಾನ್ ಸಂಶಮಯೇತ್ತು ತಾನ್** ॥೫೧॥
**ಕ್ಲೇಶಯಂತಿ ಚಿರಂ ತೇ ಹಿ ಹನ್ಯುರ್ವೈನಮನಿರ್ಹೃತಾಃ** ॥

ಅರ್ಥಃ— ದುರ್ಬಲ ರೋಗಿಯ ದೋಷಗಳು ಬಹಳವಿದ್ದು ಚಲಿತವಾಗಿದ್ದರೆ ಮೇಲಿಂದ ಮೇಲೆ ಸ್ವಲ್ಪ ಸ್ವಲ್ಪವಾಗಿಯೇ ಮೃದು ದ್ರವ್ಯಗಳಿಂದ

ತನ್ನಾಗನ್ನು ತೆಗೆಯಬೇಕು. ಸ್ವಲ್ಪವಿದ್ದರೆ ತನ್ನಾಗ ಶಮನವಾಡಬೇಕು. ತವನ್ನು ತೆಗೆಯದೆ ಇದ್ದರೆ ಬಹಳ ದಿವಸ ಪೀಡಿಸುವವು. ಇಲ್ಲವೆ ಕೊಲ್ಲುವವು. (೫೨)

**ಮಂದಾಗ್ನಿಂ ಕ್ರೂರಕೋಷ್ಠಂ ಚ ಸಕ್ಷಾರಲವಣೈರ್ಘೃತೈಃ ॥೫೩॥**
**ಸಂಧುಕ್ಷಿತಾಗ್ನಿಂ ವಿಜಿತಕಫವಾತಂ ಚ ಶೋಧಯೇತ್ ॥**

ಅರ್ಥಃ— ಅಗ್ನಿಮಾಂದ್ಯ ಜಡಕೋಷ್ಠವುಳ್ಳವರ ಅಗ್ನಿಯನ್ನು ಕ್ಷಾರ ಲವಣಯುಕ್ತವಾದ ಘೃತದಿಂದ ಪ್ರದೀಪ್ತಮಾಡಿ ಅದರಿಂದ ಕಫ ವಾತಗಳ ನಾಶವಾಗಲು ಶೋಧನ ಕೊಡಬೇಕು. (೫೩)

**ರೂಕ್ಷಬಹ್ವನಿಲಕ್ರೂರಕೋಷ್ಠವ್ಯಾಯಾಮಶೀಲಿನಾಮ್ ॥೫೪॥**

**ದೀಪ್ತಾಗ್ನೀನಾಂ ಚ ಭೈಷಜ್ಯಮವಿರೇಚ್ಯೈವ ಜೀರ್ಯತಿ ॥**
**ತೇಭ್ಯೋ ಬಸ್ತಿಂ ಪುರಾ ದದ್ಯಾತ್ತತಃ ಸ್ನಿಗ್ಧಂ ವಿರೇಚನಮ್ ॥೫೫॥**

**ಶಕೃನ್ನಿರ್ಹೃತ್ಯ ವಾ ಕಿಂಚಿತ್ತೀಕ್ಷ್ಣಾಭಿಃ ಫಲವರ್ತಿಭಿಃ ॥**
**ಪ್ರವೃತ್ತಂ ಹಿ ಮಲಂ ಸ್ನಿಗ್ಧೋ ವಿರೇಕೋ ನಿರ್ಹರೇತ್ಸುಖಮ್ ॥೫೬॥**

ಅರ್ಥಃ— ರೂಕ್ಷ, ಬಹಳ ವಾತವುಳ್ಳ, ಕ್ರೂರಕೋಷ್ಠವುಳ್ಳ, ವ್ಯಾಯಾಮ ಮಾಡುವ ಮತ್ತು ಪ್ರದೀಪ್ತವಾದ ಅಗ್ನಿಯುಳ್ಳವನಿಗೆ ಕೊಟ್ಟ ಔಷಧವು ರೇಚನ ಮಾಡದೆ ತಾನೇ ಜೀರ್ಣವಾಗುವದು. ಕಾರಣ ಮೊದಲು ಅವರಿಗೆ ನಿರೂಹ ಬಸ್ತಿ ಕೊಟ್ಟು ಅಥವಾ ತೀಕ್ಷ್ಣವಾದ ಫಲವರ್ತಿಗಳಿಂದ ಸ್ವಲ್ಪ ಮಲವನ್ನು ತೆಗೆದು ಸ್ನಿಗ್ಧ ವಿರೇಚನವನ್ನು ಕೊಡಬೇಕು. ಯಾಕಂದರೆ ಸ್ನಿಗ್ಧವಾದಂಥ ರೇಚಕವು ಪ್ರವೃತ್ತವಾದ ಮಲವನ್ನು ಸುಲಭವಾಗಿ ಹೊರಗೆಡುವುವದು. (೫೬)

**ವಿಷಾಭಿಘಾತಪಿಟಿಕಾಕುಷ್ಠಶೋಫವಿಸರ್ಪಿಣಃ ॥**
**ಕಾಮಲಾಪಾಂಡುಮೇಹಾರ್ತಾನ್ನಾತಿಸ್ನಿಗ್ಧಾನ್ ವಿಶೋಧಯೇತ್ ॥೫೭॥**

ಅರ್ಥಃ— ವಿಷ, ಗಾಯ, ಬಕ್ಕಿ, ಕುಷ್ಠ, ಬಾವು, ಇಸಬು, ಕಾಮಣಿ ಪಾಂಡು, ಮೇಹ ರೋಗಿಗಳಿಗೆ ಸ್ವಲ್ಪ ಮಾತ್ರ ಸ್ನೇಹಕೊಟ್ಟು ರೇಚಕ ಕೊಡಬೇಕು. (೫೭)

ಸರ್ವಾನ್ ಸ್ನೇಹವಿರೇಕೈಶ್ಚ ರೂಕ್ಷೈಸ್ತು ಸ್ನೇಹಭಾವಿತಾನ್ ॥

ಅರ್ಥಃ— ಎಲ್ಲರಿಗೂ ಸ್ನೆಹರೇಚಕ ಕೊಡಬೇಕು. ಆದರೆ ಸ್ನಿಗ್ಧರಾದವರಿಗೆ ಮಾತ್ರ ರೂಕ್ಷರೇಚಕ ಕೊಡಬೇಕು. (೫೭)

ಕರ್ಮಣಾಂ ವಮನಾದೀನಾಂ ಪುನರಪ್ಯಂತರೇಽಂತರೇ ॥೫೭॥
ಸ್ನೇಹಸ್ವೇದೌ ಪ್ರಯುಂಜೀತ ಸ್ನೇಹಮಂತೇ ಬಲಾಯ ಚ ॥

ಅರ್ಥಃ— ವಮನ ಮುಂತಾದ ಕರ್ಮಗಳ ನಡು ನಡುವೆ ಆಗಾಗ್ಗೆ ಸ್ನೆಹಸ್ವೇದಗಳನ್ನು ಕೊಡಬೇಕು. ಕಡೆಗೆ ಶಕ್ತಿಗಾಗಿ ಸ್ನೇಹ ಕೊಡಬೇಕು.

ಟಿಪ್ಪಣೆ:— ಮೊದಲು ಸ್ನೇಹಸ್ವೇದ ಆಮೇಲೆ ವಮನ ಅನಂತರ ಪುನಃ ಸ್ನೇಹಸ್ವೇದ ಆ ಮೇಲೆ ವಿರೇಚನ ಆಮೇಲೆ ಪುನಃ ಸ್ನೇಹಸ್ವೇದ ನಂತರ ಅನುವಾಸನ ಅದಾದ ಮೇಲೆ ಪುನಃ ಸ್ನೇಹಸ್ವೇದ ಆಮೇಲೆ ನಿರೂಹಣ ಪುನಃ ಸ್ನೇಹ ಸ್ವೇದ ಅನಂತರ ಅನುವಾಸನ ಹೀಗೆ ಕ್ರಮವಿಡಬೇಕೆಂಬ ಭಾವವು. (೫೭)

ಮಲೋ ಹಿ ದೇಹಾದುತ್ಕ್ಲೇಶ್ಯ ಹ್ರಿಯತೇ ವಾಸಸೋ ಯಥಾ ॥೫೮॥
ಸ್ನೇಹಸ್ವೇದೈಸ್ತಥೋತ್ಕ್ಲಿಷ್ಟಃ ಶೋಧ್ಯತೇ ಶೋಧನೈರ್ಮಲಃ ॥

ಅರ್ಥಃ— ಸಬಕಾರ ಮತ್ತು ಬಿಸಿನೀರುಗಳಿಂದ ವಸ್ತ್ರದ ಮಲವು ವಸ್ತ್ರದಿಂದ ಬೇರೆಮಾಡಿ ಹೇಗೆ ತೆಗೆಯಲ್ಪಡುವದೋ ಅದರಂತೆ ದೋಷಗಳು ಸ್ನೇಹಸ್ವೇದಗಳಿಂದ, ದೇಹದಿಂದ ಬೇರೆ ಮಾಡಲ್ಪಟ್ಟು ಶೋಧನಗಳಿಂದ ಹೊರದೂಡಲ್ಪಡುತ್ತವೆ. (೫೮)

ಸ್ನೇಹಸ್ವೇದಾವನಭ್ಯಸ್ಯ ಕುರ್ಯಾತ್ಸಂಶೋಧನಂ ತು ಯಃ ॥೫೯॥
ದಾರು ಶುಷ್ಕಮಿವಾನಾಮೇ ಶರೀರಂ ತಸ್ಯ ದೀರ್ಯತೇ ॥

ಅರ್ಥಃ— ಯಾವನು ಸ್ನೇಹಸ್ವೇದಗಳನ್ನು ಮಾಡಿಕೊಳ್ಳದೆ ಸಂಶೋಧನವನ್ನು ಮಾಡಿಕೊಳ್ಳುವನೋ ಅವನ ದೇಹವು, ಒಣಗಿದ ಕಟ್ಟಿಗೆಯು ಮಣಿಸುವದರಿಂದ ಹೇಗೆ ಮುರಿಯುತ್ತದೋ ಅದರಂತೆ ನಾಶ ಹೊಂದುತ್ತದೆ. (೫೯)

ಬುದ್ಧಿಪ್ರಸಾದಂ ಬಲಮಿಂದ್ರಿಯಾಣಾಂ
ಧಾತುಸ್ಥಿರತ್ವಂ ಜ್ವಲನಸ್ಯ ದೀಪ್ತಿಮ್ ॥೬೦॥
ಚಿರಾಚ್ಚ ಪಾಕಂ ವಯಸಃ ಕರೋತಿ
ಸಂಶೋಧನಂ ಸಮ್ಯಗುಪಾಸ್ಯಮಾನಮ್ ॥

ಅರ್ಥ:— ಯೋಗ್ಯ ರೀತಿಯಿಂದ ಮಾಡಿದ ಸಂಶೋಧನವು ಪ್ರಸನ್ನತೆಯನ್ನೂ, ಇಂದ್ರಿಯಗಳಿಗೆ ಬಲವನ್ನೂ, ಧಾತುಗಳಿಗೆ ಸ್ಥೈರ್ಯವನ್ನೂ, ಅಗ್ನಿದೀಪ್ತಿಯನ್ನೂ ಉಂಟುಮಾಡಿ ವಾರ್ಧಕ್ಯವನ್ನು ಮುಂದೂಡುವದು. (೬೦॥)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ವಮನವಿರೇಚನವಿಧಿರ್ನಾಮ ಅಷ್ಟಾದಶೋಽಧ್ಯಾಯಃ ಸಮಾಪ್ತಃ ।**

ಶ್ರೀಮದಾದ್ಯ ಬಾದಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ' ದ ಸೂತ್ರಸ್ಥಾನದಲ್ಲಿಯ 'ವಮನವಿರೇಚನವಿಧಿ' ಎಂಬ ೧೮ ನೆಯ ಅಧ್ಯಾಯದ ಟೀಕೆಯು ಮುಗಿದುದು.



# ೧೯ನೆಯ ಅಧ್ಯಾಯವು

ಕ್ರಮಪ್ರಾಪ್ತವಾದ ಬಸ್ತಿವಿಧಿಯನ್ನು ಹೇಳುತ್ತಾರೆ.

**ಅಥಾತೋ ಬಸ್ತಿ†ವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥಃ— ಇನ್ನು ಮೇಲೆ ಬಸ್ತಿವಿಧಿಯ ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ॥**

ಅರ್ಥಃ—ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ವಾತೋಲ್ಬಣೇಷು ದೋಷೇಷು ವಾತೇ ವಾ ಬಸ್ತಿರಿಷ್ಯತೇ॥**
**ಉಪಕ್ರಮಾಣಾಂ ಸರ್ವೇಷಾಂ ಸೋಽಗ್ರಣೀ ಸ್ತ್ರಿವಿಧಸ್ತು ಸಃ ॥೧॥**

**ನಿರೂಹೋಽನ್ವಾಸನೋ ಬಸ್ತಿರುತ್ತರಸ್ತೇನ ಸಾಧಯೇತ್ ॥**
**ಗುಲ್ಮಾನಾಹಖುಡಪ್ಲೀಹಶುದ್ಧಾತೀಸಾರಶೂಲಿನಃ ॥೨॥**

**ಜೀರ್ಣಜ್ವರಪ್ರತಿಶ್ಯಾಯಶುಕ್ರಾನಿಲಮಲಗ್ರಹಾನ್ ॥**
**ವರ್ಧಾಶ್ಮರೀರಜೋನಾಶಾನ್ ದಾರುಣಾಂಶ್ಚಾನಿಲಾಮಯಾನ್ ।೩॥**

ಅರ್ಥ:— ಕೇವಲ ವಾತ ಅಥವಾ ವಾತಾಧಿಕ ವಿಕಾರದಲ್ಲಿ ಬಸ್ತಿಯು ಇಷ್ಟವು. ಎಲ್ಲ ಚಿಕಿತ್ಸೆಗಳಲ್ಲಿ ಅದು ಶ್ರೇಷ್ಠವಾದದ್ದು. ಅದು ನಿರೂಹ ಅನುವಾಸನ ಉತ್ತರ ಎಂದು ಮೂರು ಪ್ರಕಾರವುಳ್ಳದ್ದು. ನಿರೂಹ ಬಸ್ತಿಯಿಂದ ಗುಲ್ಮ ಹೊಟ್ಟೆಯುಬ್ಬರ ವಾತರಕ್ತ ಪ್ಲೀಹಶುದ್ಧ (ನಿರಾಮ) ಅತಿಸಾರ ಶೂಲ ಜೀರ್ಣಜ್ವರ ನೆಗಡಿಗಳನ್ನೂ, ಶುಕ್ರ ವಾಯು ಮಲಗಳ ಬಂಧಗಳನ್ನೂ, ಅಂತರ್ಗಳ ಅಶ್ಮರಿ ರಜೋನಾಶಗಳನ್ನೂ, ಭಯಂಕರವಾದ ವಾತ ರೋಗಗಳನ್ನೂ ಗೆಲ್ಲಬೇಕು.

---

† ಬಸ್ತಿವಿಧಿಯು ಚರಕದ ಸಿಂ ೧-೨-೩ ನೇ ಸುಶ್ರುತದ ಚಿಂ ೩೫-೩೭-೩೮ ನೇ, ಅಷ್ಟಾಂಗಸಂಗ್ರಹದ ಸೂ. ೨೮ ನೇ ಅಧ್ಯಾಯಗಳಲ್ಲಿಯೂ ಹೇಳಲ್ಪಟ್ಟಿದೆ.

ಟಿಪ್ಪಣಿ:— ಬಸ್ತಿ ಎಂದರೆ ಮೂತ್ರಾಶಯ, ಪೂರ್ವಕಾಲದಲ್ಲಿ ಈಗಿನಂತೆ ಬಸ್ತಿಯಂತ್ರ (Enema pot) ಇಲ್ಲದ್ದರಿಂದ ಕೋಣ ಮುಂತಾದವುಗಳ ಮೂತ್ರಾಶಯವನ್ನು ತಕ್ಕೊಂಡು ಅದರಿಂದ ತಿದಿಯ ಆಕಾರದ ಯಂತ್ರವನ್ನು ಮಾಡಿ ಅದರಿಂದ ಮಲಶೋಧನ ಮಾಡುತ್ತಿದ್ದುದರಿಂದ (ಬಸ್ತಿನಾ ದೀಯತೇ ಇತಿ) ಮತ್ತು ಇದರಲ್ಲಿ ಮೂತ್ರಾಶಯ(ಬಸ್ತಿ)ದ ಸಂಬಂಧವು ಒದಗಿ ಬರುವದರಿಂದ (ಪೂರ್ವಂ ಬಸ್ತಿಮಸ್ಯೇತಿ) ಇದಕ್ಕೆ ಬಸ್ತಿ ಎಂಬ ಹೆಸರು ಬಂದಿದೆ.

ನಿರೂಹ:— ನಿಶ್ಶೇಷವಾಗಿ ದೋಷಗಳನ್ನು ಹರಣ ಮಾಡುವದೆಂದು (ನಿಃಶೇಷೇಣ ನಿರ್ಹರಣಾತ್) ಅಥವಾ ಬಹಳ ಪ್ರಭಾವವಿರುವದರಿಂದ ಅದರ ಊಹೆ (ಕಲ್ಪನೆ) ಮಾಡುವದು ಆಗದ್ದರಿಂದಲೂ (ನ ಊಹಾ ಯಸ್ಯ) ನಿರೂಹವೆಂಬ ಹೆಸರು ಇದು ವಯಃಸ್ಥಾಪನ (ಆಯುಷ್ಯವರ್ಧನ) ಮಾಡುವದರಿಂದಲೂ, ದೋಷಗಳನ್ನು ತಮ್ಮ ಸ್ಥಳದಲ್ಲಿ ಸ್ಥಾಪನ ಮಾಡುವದರಿಂದಲೂ (ಆಸ್ಥಾಪಯತೀತಿ) ಆಸ್ಥಾಪನವೆಂದು ಕರೆಯಲ್ಪಡುತ್ತದೆ. ಇದರಲ್ಲಿ ಉತ್ಕ್ಲೇಶನ, ಶೋಧನ, ಶಮನ, ಲೇಖನ ಬೃಂಹಣ, ವಾಜೀಕರಣ, ಪಿಚ್ಛಾಬಸ್ತಿ, ಮಾಧುತೈಲಿಕ ಬಸ್ತಿ ಮುಂತಾದ ಭೇದಗಳುಂಟು. ಮಾಧುತೈಲಿಕಕ್ಕೆ ಯಾಪನ, ಯುಕ್ತರಥ, ದೋಷಹರ, ಸಿದ್ಧಬಸ್ತಿ ಎಂಬ ಬೇರೆ ಬೇರೆ ಹೆಸರುಗಳುಂಟು.

ಅನ್ವಾಸನ<br>ಅನುವಾಸನ } = ಶರೀರವನ್ನು ಸ್ನಿಗ್ಧಮಾಡುವದಕ್ಕಾಗಿ ಕೊಡುವ ಸ್ನೇಹ ಬಸ್ತಿಯು. ನಿರೂಹದಿಂದ ಸ್ಥಾನಭ್ರಷ್ಟವಾದ ದೋಷಗಳನ್ನು ಹಿಂದುಗಡೆ ಕಳೆಯುವದೆಂದು (ಅನು ಅಸ್ಯತೇ ಅನೇನ ಇತಿ) ಅನ್ವಾಸನವೆಂದೂ, ಭೋಜನದ ಸಮೀಪಕಾಲದಲ್ಲಿಯೇ ಕೊಡಲ್ಪಡುವದೆಂದು (ಅನು= ಸಮೀಪ, ವಾಸನಂ= ಭೋಜನಂ ದೀಯತೇ ಇತಿ) ಅನುವಾಸನವೆಂದೂ ಹೇಳಲ್ಪಡುತ್ತದೆ.

ಉತ್ತರಬಸ್ತಿ:— ನಿರೂಹ ಕೊಟ್ಟನಂತರ (ಉತ್ತರೇಣ ದೀಯತೇ ಇತಿ) ಅಥವಾ ಗುದದ್ವಾರದ ಮೇಲಿನ(ಉತ್ತರ) ಮಾರ್ಗದಿಂದ (ಯೋನಿ, ಶಿಶ್ನ ಮೂತ್ರಾಶಯಗಳಿಂದ) ಕೊಡಲ್ಪಡುವದೆಂದು ಉತ್ತರ ಬಸ್ತಿ ಎಂಬ ಹೆಸರು ಬಂದಿದೆ. ಇದು ಸ್ನೇಹನವೂ, ಶೋಧನವೂ ಆಗಿದೆ.

ಇದು 'ಶ್ರೇಷ್ಠ' ಏಕೆಂದರೆ ಶೀಘ್ರವಾಗಿ ಮತ್ತು ಸುಖವಾಗಿ ಬೃಂಹಣಮಾಡುವದು. ಪ್ರಬಲವಾದ ವಾತವನ್ನು ಗೆಲ್ಲುವದು. ಬಾಲ ವೃದ್ಧ ಕೃಶ ಸ್ಥೂಲ ಸ್ತ್ರೀ ಕ್ಷೀಣರಿಗೂ ಕೊಡಲು ಬರುವದು. (೩)

**ಅನಾಸ್ಥಾಪ್ಯಾಸ್ತ್ವತಿಸ್ನಿಗ್ಧಃ ಕ್ಷತೋರಸ್ಕೋ ಭೃಶಂ ಕೃಶಃ ॥**
**ಆಮಾತಿಸಾರೀ ವಮಿಮಾನ್ ಸಂಶುದ್ಧೋ ದತ್ತನಾವನಃ ॥೪॥**
**ಶ್ವಾಸಕಾಸಪ್ರ*ಸೇಕಾರ್ಶೋಹಿಧ್ಮಾಧ್ಮಾನಾಲ್ಪವಹ್ನ*ಯಃ ॥**
**ಶೂನಪಾಯುಃ ಕೃತಾಹಾರೋ ಬದ್ಧಚ್ಛಿದ್ರೋದಕೋದರೀ ॥೫॥**
**ಕುಷ್ಠೀ ಚ ಮಧುಮೇಹೀ ಚ ಮಾಸಾನ್ ಸಪ್ತ ಚ ಗರ್ಭಿಣೀ ॥**

* 'ಪ್ರಮೇಹ' ಎಂಬ ಪಾಠಾಂತರವಿದೆ. * 'ವರ್ಚಸಃ' ಎಂಬ ಪಾಠಾಂತರವಿದೆ

ಆಸ್ಥಾಪ್ಯಾ ಏವ ಚಾನ್ವಾಸ್ಯಾ ವಿಶೇಷಾದತಿವಹ್ನಯಃ ||೬||

ರೂಕ್ಷಾಃ ಕೇವಲವಾತಾರ್ತಾಃ........................||

ಅರ್ಥಃ— ಆದರೆ ಅತಿಸ್ನಿಗ್ಧ ಉರಃಕ್ಷತ ಬಹಳಕೃಶ ಆಮಾತಿಸಾರ ವಾಂತಿಯುಳ್ಳವನೂ, ವಮನ ವಿರೇಚನ ಅಥವಾ ನಸ್ಯ ತಕ್ಕೊಂಡವನೂ, ಕೆಮ್ಮು ದಮ್ಮು ಲಾಲಾಸ್ರಾವ ಮೂಲವ್ಯಾಧಿ ಬಿಕ್ಕು ಹೊಟ್ಟೆಯುಬ್ಬರ ಮತ್ತು ಮಂದಾಗ್ನಿಯುಳ್ಳವನೂ, ಜಾತ ಗುದವುಳ್ಳವನೂ, ಊಟಮಾಡಿದವನೂ, ಬದ್ಧೋದರ ಛಿದ್ರೋದರ ಉದಕೋದರ ಕುಷ್ಠ ಮಧುಮೇಹವುಳ್ಳವನೂ ಮತ್ತು ಏಳು ತಿಂಗಳುಗಳ ವರೆಗೆ ಗರ್ಭಿಣಿಯೂ ನಿರೂಹ ಬಸ್ತಿಗೆ ಅಯೋಗ್ಯರಿರುತ್ತಾರೆ. ನಿರೂಹ ಬಸ್ತಿಗೆ ಯೋಗ್ಯರಿದ್ದವರು ಅನುವಾಸನ ಬಸ್ತಿಗೂ ಯೋಗ್ಯರು. ಪ್ರದೀಪ್ತ ಅಗ್ನಿಯಿದ್ದವರೂ, ರೂಕ್ಷರೂ, ಕೇವಲ ವಾತದಿಂದ ಪೀಡಿತರೂ, ಅನುವಾಸನ ಬಸ್ತಿಗೆ ವಿಶೇಷವಾಗಿ ಅರ್ಹರು.

**ಟಿಪ್ಪಣಿ:—** ಅತಿ ಸ್ನಿಗ್ಧನಿಗೆ ನಿರೂಹ ಬಸ್ತಿ ಕೊಟ್ಟರೆ ದೋಷಗಳನ್ನು ಉತ್ಕ್ಲೇಶ ಮಾಡಿ ಬಾವು ಮತ್ತು ಉದರಗಳನ್ನು ಉಂಟುಮಾಡುವದು. ರೂಕ್ಷನಿಗೆ ಕೊಟ್ಟರೆ ಕ್ಷೋಭಯುಕ್ತವಾದ ಅವನ ಶರೀರವನ್ನು ಹೆಚ್ಚು ಪೀಡಿಸುವದು. ಆಮಾತಿಸಾರಿಗೆ ಕೊಟ್ಟರೆ ದೋಷವು ಹೊರಬೀಳದ್ದರಿಂದ ಬಹಳ ತ್ರಾಸವಾಗುವದು. ವಾಂತಿಯಾಗುವವನಿಗೆ ಕೊಟ್ಟರೆ ದೋಷದ ವೇಗವು ನಿರೂಹವನ್ನು ಮೇಲಕ್ಕೆ ಒಯ್ಯುವದು. ವಮನ ವಿರೇಚನ ತಕ್ಕೊಂಡವರಿಗೆ ಕೊಟ್ಟರೆ ಮೊದಲೇ ಪೊಳ್ಳಾದ ದೇಹವನ್ನು ಹೆಚ್ಚು ಪೀಡಿಸುವದು. ನಸ್ಯ ತಕ್ಕೊಂಡವನಿಗೆ ಕೊಟ್ಟರೆ ಸ್ರೋತಸ್ಸುಗಳು ವಿಸ್ಸೃತವಾದ್ದರಿಂದ ಮುಖಭ್ರಂಶವನ್ನು ಮಾಡುವದು. ಕೆಮ್ಮು ದಮ್ಮುಗಳುಳ್ಳವನಿಗೆ ಕೊಟ್ಟರೆ ನಿರೂಹವನ್ನು ಮೇಲಕ್ಕೆ ಒಯ್ಯುವದು. ಮೂಲವ್ಯಾಧಿಯಾದವನಿಗೆ ಕೊಟ್ಟರೆ ಮಾರ್ಗದ ಪ್ರತಿಬಂಧದಿಂದ ಬಸ್ತಿಯು ಹೊರಗೆ ಬರದೆ ಪ್ರಾಣವನ್ನು ಕಳೆಯುವದು. ಅಲ್ಪ ಮಲವುಳ್ಳವರಿಗೆ ಕೊಟ್ಟರೆ ಜಡತ್ವ ಸ್ತಬ್ಧತೆಗಳು ಉಂಟಾಗುವವು. ಗರ್ಭಿಣಿಗೆ ಕೊಟ್ಟರೆ ವಮನದಲ್ಲಿ ಹೇಳಿದ ಗರ್ಭಭ್ರಂಶ ಮುಂತಾದ ರೋಗಗಳು ಉಂಟಾಗುವವು. (೬)

........................ನಾನುವಾಸ್ಯಾಸ್ತ ಏವ ಚ ||

ಯೇऽನಾಸ್ಥಾಪ್ಯಾಸ್ತಥಾ ಪಾಂಡುಕಾಮಲಾಮೇಹಪೀನಸಾಃ ||೭||

ನಿರನ್ನಪ್ಲೀಹವಿಡ್ಭೇದಿಗುರುಕೋಷ್ಠಕಫೋದರಾಃ ||

**ಅಭಿಷ್ಯಂದಿಭೃಶಸ್ಥೂಲಕೃಮಿಕೋಷ್ಠಾಢ್ಯಮಾರುತಾಃ ॥೮॥**
**ಪೀತೇ ವಿಷೇ ಗರೇಽಪಚ್ಯಾಂ ಶ್ಲೀಪದೀ ಗಲಗಂಡವಾನ್ ॥**

ಅರ್ಥ:— ಆದರೆ ನಿರೂಹ ಬಸ್ತಿಗೆ ಅಯೋಗ್ಯರೂ ಅದರಂತೆ ಪಾಂಡು ಕಾಮಲಾ (ಕಾಮಿಣಿ) ಮೇಹ ಪೀನಸ ಹಾಳುಹೊಟ್ಟೆ ಪ್ಲೀಹ ಮಲಭೇದ ಜಡಕೋಷ್ಠ ಕಫೋದರ ಕಣ್ಣುಬೇನೆ ಸ್ಥೌಲ್ಯ ಕೃಮಿ-ಕೋಷ್ಠ ಊರುಸ್ತಂಭ ವಿಷ ಕೃತ್ರಿಮವಿಷ ಗಂಡಮಾಲಾ ಶ್ಲೀಪದ ಮತ್ತು ಗಲಗಂಡ ರೋಗಿಗಳೂ ಅನುವಾಸನ ಬಸ್ತಿಗೆ ಯೋಗ್ಯರಲ್ಲ. (೮॥)

**ತಯೋಸ್ತು ನೇತ್ರಂ ಹೇಮಾದಿಧಾತುದಾರ್ವಸ್ಥಿವೇಣುಜಮ್ ॥೯॥**
**ಗೋಪುಚ್ಛಾಕಾರಮಚ್ಛಿದ್ರಂ ಶ್ಲಕ್ಷ್ಣರ್ಜುಗುಲಿಕಾಮುಖಮ್ ॥**

ಅರ್ಥ:— ಈ ಎರಡೂ ಬಸ್ತಿಗಳ ಮುಂದಿನ ನಳಿಕೆಯು ಬಂಗಾರ ಮೊದಲಾದ ಧಾತು ಅಥವಾ ಕಟ್ಟಿಗೆ ಎಲಬು ಅಥವಾ ಬಿದರಿನದೂ, ಗೋಪುಚ್ಛದಂತೆ ಕ್ರಮವಾಗಿ ಕೃಶವೂ, ತೂತುಗಳಿಲ್ಲದ್ದೂ, ನುಣುಪುಳ್ಳದ್ದೂ, ಸರಳವೂ, ಗುಳಿಗೆಯಂತೆ ಗುಂಡಾದ ಬಾಯಿಯುಳ್ಳದ್ದೂ ಇರಬೇಕು (೯॥)

**ಊನೇಽಬ್ದೇ ಪಂಚ, ಪೂರ್ಣೇಽಸ್ಮಿನ್ನಾಸಪ್ತಭ್ಯೋಽಂಗುಲಾನಿ ಷಟ್ ॥೧೦॥**

**ಸಪ್ತಮೇ ಸಪ್ತ, ತಾನ್ಯಷ್ಟೌ ದ್ವಾದಶೇ, ಷೋಡಶೇ ನವ ॥**
**ದ್ವಾದಶೈವ ಪರಂ ವಿಂಶಾದ್ವೀಕ್ಷ್ಯ ವರ್ಷಾಂತರೇಷು ಚ ॥೧೧॥**

**ವಯೋಬಲಶರೀರಾಣಿ ಪ್ರಮಾಣಮಭಿವರ್ಧಯೇತ್ ॥**
**ಸ್ವಾಂಗುಷ್ಠೇನ ಸಮಂ ಮೂಲೇ ಸ್ಥೌಲ್ಯೇನಾಗ್ರೇ ಕನಿಷ್ಠಯಾ ॥೧೨॥**

ಅರ್ಥ:— ಒಂದು ವರ್ಷ ಪೂರ್ಣವಾಗದ ಹುಡುಗನಿಗೆ ಐದು ಅಂಗುಲ, ಒಂದು ವರ್ಷದಿಂದ ಏಳು ವರ್ಷದ ಒಳಗಿನವರಿಗೆ ಆರು ಅಂಗುಲ, ಏಳು ವರ್ಷದವರಿಗೆ ಏಳು ಅಂಗುಲ, ಹನ್ನೆರಡು ವರ್ಷದವರಿಗೆ ಎಂಟು ಅಂಗುಲ, ಹದಿನಾರು ವರ್ಷದವನಿಗೆ ಒಂಬತ್ತು ಅಂಗುಲ, ಇಪ್ಪತ್ತು ವರ್ಷದಿಂದ ಕಡೆತನಕ ಹನ್ನೆರಡು ಅಂಗುಲ ಉದ್ದ ನೇತ್ರದ ಪರಿಮಾಣವಿರಬೇಕು.

ಮೇಲೆ ಹೇಳಿದ ನಡುವಿನ ವಯಸ್ಸಿನವರಿಗೆ ವಯಸ್ಸು, ಸಾಮರ್ಥ್ಯ, ಶರೀರ ಗಳನ್ನು ನೋಡಿ ಪ್ರಮಾಣಗಳನ್ನು ಹೆಚ್ಚಿಸಬೇಕು. ಅದರ ಮೂಲವು ತನ್ನ ಹೆಬ್ಬೆಟ್ಟಿನಷ್ಟು ಗಡುತರವಿರಬೇಕು. ತುದಿಯು ಕಿರುಬಟ್ಟಿನಷ್ಟು ಗಡುತರವಿರಬೇಕು. (೧೨)

**ಪೂರ್ಣೇsಬ್ದೇsಂಗುಲಮಾದಾಯ ತದರ್ಧಾರ್ಧಪ್ರವರ್ಧಿತಮ್॥**
**ತ್ರ್ಯಂಗುಲಂ ಪರಮಂ ಛಿದ್ರಂ, ಮೂಲೇsಗ್ರೇ ವಹತೇ ತು ಯತ್**
**।೧೩॥**
**ಮುದ್ಗಂ ಮಾಷಂ ಕಲಾಯಂ ಚ ಕ್ಲಿನ್ನಂ ಕರ್ಕಂಧುಕಂ ಕ್ರಮಾತ್॥**

ಅರ್ಥ:— ನಲಿಕೆಯ ಮೂಲದ ಛಿದ್ರವನ್ನು ಮೊದಲನೇ ವರ್ಷ ದಿಂದ ಆರು ವರ್ಷಗಳವರೆಗೆ ೧ ಅಂಗುಲ, ಏಳನೆಯ ವರ್ಷದಿಂದ ಹನ್ನೊಂದನೆಯ ವರ್ಷಗಳವರೆಗೆ ೧। ಅಂಗುಲ, ಹನ್ನೆರಡನೆಯ ವರ್ಷದಿಂದ ಹದಿನಾರನೆಯ ವರ್ಷದವರೆಗೆ ೧॥ ಅಂಗುಲ,೧೬ನೇವರ್ಷ ೧।।। ಅಂಗುಲ, ೧೭ನೆಯ ವರ್ಷ ೨ ಅಂಗುಲ, ೧೮ನೆಯ ವರ್ಷ ೨। ಅಂಗುಲ, ೧೯ನೆಯ ವರ್ಷ ೨।। ಅಂಗುಲ, ೨೦ನೆಯ ವರ್ಷ ೨।।। ಅಂಗುಲ, ೨೧ನೆಯ ವರ್ಷ ೩ ಅಂಗುಲ, ಹೀಗೆ ಪ್ರಮಾಣ ಹೆಚ್ಚಿಸುತ್ತ ಹೋಗಬೇಕು. ಕಡೆಯ ಪ್ರಮಾಣವು ಮೂರು ಅಂಗುಲ. ಮುಂದಿನ ಛಿದ್ರವು ಒಂದರಿಂದ ಆರು ವರ್ಷಗಳ ವರೆಗೆ ಹೆಸರು ಕಾಳು, ಏಳರಿಂದ ಹನ್ನೊಂದು ವರ್ಷಗಳ ವರೆಗೆ ಉದ್ದಿನ ಕಾಳು, ಹನ್ನೆರಡನೆಯ ವರ್ಷ ಬಟಗಡ್ಲೆಕಾಳು, ಹದಿನಾರನೆಯ ವರ್ಷ ನೆನೆದ ಬಟಗಡ್ಲೆಯಕಾಳು, ಇಪ್ಪತ್ತೊಂದನೆಯ ವರ್ಷ ಅಡಿವೆ ಬಾರೀ ಕಾಯಿಯು ಹೋಗುವಷ್ಟು ಅಗಲು ಇರಬೇಕು. (೧೩॥)

**ಮೂಲಚ್ಛಿದ್ರಪ್ರಮಾಣೇನ ಪ್ರಾಂತೇ ಘಟಿತಕರ್ಣಿಕಂ** [೧೪]
**ವರ್ತ್ಯಾsಗ್ರೇ ಪಿಹಿತಂ, ಮೂಲೇ ಯಥಾಸ್ವಂದ್ವ್ಯಂಗುಲಾಂತರಮ್॥**
**ಕರ್ಣಿಕಾದ್ವಿತಯಂ ನೇತ್ರೇ ಕುರ್ಯಾತ್** ॥೧೫॥

ಅರ್ಥ:— ತುದಿಗೆ ಮೂಲಛಿದ್ರದ ಪ್ರಮಾಣದಿಂದ ಒಂದು ಕರ್ಣಿಕೆ (ಹೆಚ್ಚಿಗೆ ಒಳಗೆ ಹೋಗಬಾರದೆಂದು ಎತ್ತರಚಕ್ರ) ಯನ್ನು ಕೂಡಿಸಬೇಕು. ಅದರ ಮುಂದಿನ ತುದಿಯಲ್ಲಿ ಬತ್ತಿಯನ್ನು ಕೂಡಿಸಿ ಮುಚ್ಚಿರಬೇಕು. ಎರಡೆರಡು ಅಂಗುಲದ ಅಂತರಕ್ಕೆ ಈ ಮೂಲದಲ್ಲಿ ಎರಡು ಕರ್ಣಿಕೆಗಳನ್ನು ಕೂಡಿಸಬೇಕು. (೧೫)

.........................................ತತ್ರ ಚ ಯೋಜಯೇತ್

ಅಜಾವಿಮಹಿಷಾದೀನಾಂ ಬಸ್ತಿಂ ಸುಮೃದಿತಂ ದೃಢಮ್ ॥
ಕಷಾಯರಕ್ತಂ ನಿಶ್ಛಿದ್ರಗ್ರಂಥಿಗಂಧಶಿರಂ ತನುಮ್ ॥೧೬॥

ಗ್ರಥಿತಂ ಸಾಧು ಸೂತ್ರೇಣ ಸುಖಸಂಸ್ಥಾಪ್ಯಭೇಷಜಮ್ ॥

ಅರ್ಥ:— ಅದಕ್ಕೆ ಕುರಿ ಆಡು ಕೋಣ ಮುಂತಾದವುಗಳ, ಚೆನ್ನಾಗಿ ಮೆತ್ತಗೆ ಮಾಡಿದ್ದ, ಗಟ್ಟಿಯಾದ, ಕಷಾಯರಸದಿಂದ ಬಣ್ಣ ಕೊಟ್ಟ, ತೂತು ಗಂಟು ವಾಸನೆ ನರಗಳು ಇಲ್ಲದ, ತೆಳ್ಳಗಿನ ಔಷಧವು ಚೆನ್ನಾಗಿ ನಿಲ್ಲುವಂತೆ ಇದ್ದ, ದಾರದಿಂದ ಕಟ್ಟಿದ ಮೂತ್ರಾಶಯವನ್ನು ಜೋಡಿಸಬೇಕು. (೧೬)

ಬಸ್ತ್ಯಭಾವೇಽಂಕಪಾದಂ ವಾ ನ್ಯಸೇದ್ವಾಸೋಽಥವಾ ಘನಮ್ ॥೧೭॥

ಅರ್ಥ:— ಮೂತ್ರಾಶಯವು ಸಿಗದಿದ್ದರೆ ತೊಡೆ, ಕಾಲುಗಳನ್ನು ಅಥವಾ ಗಟ್ಟಿಯಾದ ಮೇಣಗವುಟ ಅರಿವೆಯನ್ನು ಜೋಡಿಸಬೇಕು. (೧೭)

ನಿರೂಹಮಾತ್ರಾ ಪ್ರಥಮೇ ಪ್ರಕುಂಚೋ ವತ್ಸರಾತ್ಪರಮ್ ॥
ಪ್ರಕುಂಚವೃದ್ಧಿಃ ಪ್ರತ್ಯಬ್ದಂ ಯಾವತ್ಷಟ್ಪ್ರಸೃತಾಸ್ತತಃ ॥೧೮॥

ಪ್ರಸೃತಂ ವರ್ಧಯೇದೂರ್ಧ್ವಂ ದ್ವಾದಶಾಷ್ಟಾದಶಸ್ಯ ತು ॥
ಆಸಪ್ತತೇರಿದಂ ಮಾನಂ ದಶೈವ ಪ್ರಸೃತಾಃ ಪರಮ್ ॥೧೯॥

ಅರ್ಥ:— ಮೊದಲನೆಯ ವರ್ಷ ನಿರೂಹದ ಪ್ರಮಾಣವು ನಾಲ್ಕು ತೊಲೆ ವರ್ಷದನಂತರ ಮುಂದಿನ ಪ್ರತಿವರ್ಷಕ್ಕೆ ನಾಲ್ಕುನಾಲ್ಕು ತೊಲೆಯಂತೆ (ಹನ್ನೆರಡು ವರ್ಷಗಳವರೆಗೆ) ನಾಲ್ವತ್ತೆಂಟು ತೊಲೆಯವರೆಗೆ ಹೆಚ್ಚಿಸುತ್ತ ಹೋಗಬೇಕು. ಆ ಮೇಲೆ ಪ್ರತಿವರ್ಷ ಎಂಟು ತೊಲೆಯಂತೆ ೧೮ ವರ್ಷಗಳವರೆಗೆ ಹೆಚ್ಚಿಸಬೇಕು. ಹದಿನೆಂಟು ವರ್ಷದವನಿಗೆ ತೊಂಬತ್ತಾರು ತೊಲಿ ಪ್ರಮಾಣವಾಗುವದು. ಎಪ್ಪತ್ತು ವರ್ಷದವರೆಗೆ ಇದೇ ಪ್ರಮಾಣವಿರಬೇಕು. ಆ ಮೇಲೆ ಎಂಭತ್ತು ತೊಲಿ ಪ್ರಮಾಣವಿರಬೇಕು. (೧೯)

ದೀಪ್ತಾಗ್ನಿಂ ತ್ವಾಗತಸ್ನೇಹಂ ಸಾಯಾಹ್ನೇ ಭೋಜಯೇಲ್ಲಘು ॥
ನಿವೃತ್ತಿಕಾಲಃ ಪರಮಸ್ತ್ರಯೋ ಯಾಮಾಸ್ತತಃ ಪರಮ್ ॥೩೦॥

ಅಹೋರಾತ್ರಮುಪೇಕ್ಷೇತ ಪರತಃ ಫಲವರ್ತಿಭಿಃ ॥
ತೀಕ್ಷ್ಣೈರ್ವಾ ಬಸ್ತಿಭಿಃ ಕುರ್ಯಾದ್ಯತ್ನಂ ಸ್ನೇಹನಿವೃತ್ತಯೇ ॥೩೧॥

ಅರ್ಥಃ— ಸ್ನೇಹವು ತಿರುಗಿ ಬಂದ ಮೇಲೆ ಅಗ್ನಿ ಪ್ರದೀಪ್ತವಾಗಲು ಸಾಯಂಕಾಲಕ್ಕೆ ಲಘು ಭೋಜನ ಮಾಡಬೇಕು. ಸ್ನೇಹ ಬಸ್ತಿಯು ತಿರುಗಿ ಬರುವ ಪರಮಾವಧಿಯು ಮೂರು ಪ್ರಹರ. ಅಷ್ಟರಲ್ಲಿ ಅದು ಬರದಿದ್ದರೆ ಒಂದು ಹಗಲು, ಒಂದು ರಾತ್ರಿ ಹಾದೀ ನೋಡಬೇಕು. ಆಮೇಲೆ ತೀಕ್ಷ್ಣವಾದ ಫಲವರ್ತಿ (ಅರ್ಶಚಿಕಿತ್ಸೆಯಲ್ಲಿ ಹೇಳಿದಂತೆ) ಗಳಿಂದ ಅಥವಾ (ಬಸ್ತಿಕಲ್ಪೋಕ್ತ) ಬಸ್ತಿಗಳಿಂದ ಸ್ನೇಹ ತಿರುಗಿಬರುವದಕ್ಕಾಗಿ ಯತ್ನಮಾಡಬೇಕು. (೩೧)

ಅತಿರೌಕ್ಷ್ಯಾದನಾಗಚ್ಛನ್ನ ಜೇಜ್ಜಾಡ್ಯಾದಿದೋಷಕೃತ್ ॥
ಉಪೇಕ್ಷೇತೈವ ಹಿ ತತೋಽಧ್ಯುಷಿತಶ್ಚ ನಿಶಾಂ ಪಿಬೇತ್ ॥೩೨॥

ಪ್ರಾತರ್ನಾಗರಧಾನ್ಯಾಂಭಃ ಕೋಷ್ಣಂ ಕೇವಲಮೇವ ವಾ ॥

ಅರ್ಥ:— ಶರೀರದ ಅತಿ ರೂಕ್ಷತೆಯು ಮೂಲಕ ಅದು ತಿರುಗಿ ಬರದಿದ್ದರೆ ಜಾಡ್ಯ ಅಗ್ನಿಮಾಂದ್ಯ ಮುಂತಾದ ದೋಷಗಳು ಉಂಟಾಗದಿದ್ದಲ್ಲಿ ಉಪೇಕ್ಷಿಸಬೇಕು. ಆಮೇಲೆ ಇಡೀ ರಾತ್ರಿ ಸುಮ್ಮನೆ ಕುಳಿತು(ಸ್ನೇಹದ ಪಾಕವಾಗುವದಕ್ಕಾಗಿ) ಮುಂಜಾನೆ ಶುಂಠಿ ಹವೀಜದ ಕಷಾಯವನ್ನಾಗಲೀ ಬೆಚ್ಚನ್ನ ಬರೇ ನೀರನ್ನಾಗಲೀ ಕುಡಿಯಬೇಕು. (೩೨)

ಅನ್ವಾಸಯೇತ್ತೃತೀಯೇಽಹ್ನಿ ಪಂಚಮೇ ವಾ ಪುನಶ್ಚ ತಮ್ ॥೩೩॥

ಯಥಾ ವಾ ಸ್ನೇಹಪಕ್ತಿಃ ಸ್ಯಾದತೋಽತ್ಯುಲ್ಬಣಮಾರುತಾನ್ ॥
ವ್ಯಾಯಾಮನಿತ್ಯಾನ್ ದೀಪ್ತಾಗ್ನೀನ್ ರೂಕ್ಷಾಂಶ್ಚ ಪ್ರತಿವಾಸರಮ್ ॥೩೪॥

ಅರ್ಥಃ— ಮೂರನೇ ಅಥವಾ ಐದನೇ ದಿವಸ ಮತ್ತೆ ಅವನಿಗೆ ಅನುವಾಸನ ಬಸ್ತಿಯನ್ನು ಕೊಡಬೇಕು. ಅಥವಾ ಸ್ನೇಹ ಪಚನವಾದದ್ದನ್ನು

ನೋಡಿ ಬೇಕಾದಾಗ್ಗೆ ಪುನಃ ಅನುವಾಸನ ಬಸ್ತಿ ಕೊಡಬಹುದು. ಅವಕ್ಕಾಗಿಯೇ (ಸ್ನೇಹಪಚನವೇ ಅದರ ಕಾಲವಾದ್ದರಿಂದ) ಅತ್ಯಂತ ವಾತಪ್ರಕೃವರಿಗೂ ನಿತ್ಯ ವ್ಯಾಯಾಮ ಮಾಡುವವರಿಗೂ ಪ್ರದೀಪ್ತಾಗ್ನಿಯುಳ್ಳವರಿಗೂ ರೂಕ್ಷರಿಗೂ ದಿನಾಲು ಅನುವಾಸನ ಮಾಡಬೇಕು. (೩೪)

**ಇತೀಸ್ನೇಹೈಸ್ತ್ರಿಚತುರೈಃ ಸ್ನಿಗ್ಧೇ ಸ್ರೋತೋವಿಶುದ್ಧಯೇ ॥**
**ನಿರೂಹಂ ಶೋಧನಂ ಯುಂಜ್ಯಾದಸ್ನಿಗ್ಧೇ ಸ್ನೇಹನಂ ತನೋಃ ॥೩೫॥**

ಅರ್ಥಃ— ಈ ಪ್ರಕಾರ ಮೂರು ನಾಲ್ಕು ಸ್ನೇಹಗಳಿಂದ ಶರೀರವು ಸ್ನಿಗ್ಧವಾಗಲು ಸ್ರೋತಸ್ಸುಗಳ ಶುದ್ಧಿಯಾಗುವದಕ್ಕಾಗಿ ನಿರೂಹ-ಶೋಧನ ಮಾಡಬೇಕು. ಅನುವಾಸನಕ್ಕೆ ಅನರ್ಹನಾದವನಿಗೆ ಶರೀರವನ್ನು ಸ್ನಿಗ್ಧ ಮಾಡುವ ನಿರೂಹ ಬಸ್ತಿಯನ್ನು ಕೊಡಬೇಕು. (೩೫)

**ಪಂಚಮೇಽಥ ತೃತೀಯೇ ವಾ ದಿವಸೇ ಸಾಧಕೇ ಶುಭೇ ।**
**ಮಧ್ಯಾಹ್ನೇ ಕಿಂಚಿದಾವೃತ್ತೇ ಪ್ರಯುಕ್ತೇ ಬಲಿಮಂಗಲೇ ॥೩೬॥**

**ಅಭ್ಯಕ್ತಸ್ವೇದಿತೋತ್ಸೃಷ್ಟಮಲಂ ನಾತಿಬುಭುಕ್ಷಿತಮ್ ॥**
**ಅವೇಕ್ಷ್ಯ ಪುರುಷಂ ದೋಷಭೇಷಜಾದೀನಿ ಚಾದರಾತ್ ॥೩೭॥**

**ಬಸ್ತಿಂ ಪ್ರಕಲ್ಪಯೇದ್ವೈದ್ಯಸ್ತದ್ವಿದ್ಯೈರ್ಬಹುಭಿಃ ಸಹ ॥**

ಅರ್ಥಃ— ಐದನೇ ಅಥವಾ ಮೂರನೇ (ಜ್ಯೋತಿಃ ಶಾಸ್ತ್ರೋಕ್ತ) ಶುಭದಿವಸದಲ್ಲಿ ಮಧ್ಯಾಹ್ನವು ಸ್ವಲ್ಪ ಮೀರಲು ಬಲಿ ಮಂಗಲ ಮಾಡಿ ಅಭ್ಯಂಗ ಸ್ವೇದ ಮಲವಿಸರ್ಜನೆ ಮಾಡಿಸಿ ಸ್ವಲ್ಪ ಹಸಿವೆಯಾದನಂತರ ರೋಗಿಯ ಪ್ರಕೃತಿ, ದೋಷ ಮುಂತಾದವುಗಳನ್ನು ಆದರದಿಂದ ವಿಚಾರಿಸಿ, ಬಸ್ತಿಜ್ಞಾನವುಳ್ಳ ಅನೇಕ ವೈದ್ಯರೊಡನೆ ಕೂಡಿಕೊಂಡು ವೈದ್ಯನು ಬಸ್ತಿಯನ್ನು ಕೊಡಬೇಕು. (೩೭)

**ಕ್ವಾಥಯೋರ್ವಿಂಶತಿಪಲಂ ದ್ರವ್ಯಸ್ಯಾಷ್ಟೌ ಪಲಾನಿ ಚ ॥೩೮॥**

**ತತಃ ಕ್ವಾಥಾಚ್ಚತುರ್ಥಾಂಶಂ ಸ್ನೇಹಂ ವಾತೇ ಪ್ರಕಲ್ಪಯೇತ್ ॥**
**ಪಿತ್ತೇ ಸ್ವಸ್ಥೇ ಚ ಷಷ್ಠಾಂಶಮಷ್ಟಮಾಂಶಂ ಕಫೇಽಧಿಕೇ ॥೩೯॥**

ಸರ್ವತ್ರ ಚಾಷ್ಟಮಂ ಭಾಗಂ ಕಲ್ಕಾದವ್ಯವತಿ ವಾ ಯಥಾ ||
ನಾತ್ಯಚ್ಛಸಾಂದ್ರತಾ ಬಸ್ತೇಃ ಪಲಮಾತ್ರಂ ಗುಡಸ್ಯ ಚ ||೪೦||

ಮಧುಪಟ್ವಾದಿ ಶೇಷಂ ಚ ಯುಕ್ತ್ಯಾ..................

ಅರ್ಥಃ— ಬಸ್ತಿಗೆ ಎಂಭತ್ತು ತೊಲಿ (ಕಲ್ಪಸ್ಥಾನದಲ್ಲಿ ಹೇಳಿದ) ಔಷಧಗಳನ್ನು ಹಾಕಿದ್ದರೆ ಎಂಟು ಮದನ ಫಲಗಳನ್ನು ಹಾಕಿ ಕುದಿಸಿ ಕಷಾಯ ಮಾಡಬೇಕು. ಆಮೇಲೆ ಕಷಾಯದ ನಾಲ್ಕನೆಯ ಭಾಗ ಸ್ನೇಹವನ್ನು ವಾತರೋಗಕ್ಕೆ, ಆರನೇ ಭಾಗ ಸ್ನೇಹವನ್ನು ಪಿತ್ತಕ್ಕೆ ಮತ್ತು ನಿರೋಗಿಗೆ ಎಂಟನೆಯ ಭಾಗ ಸ್ನೇಹವನ್ನು ಕಫಾಧಿಕ್ಯಕ್ಕೆ ಹಾಕಬೇಕು. ಎಲ್ಲಕ್ಕೂ (ವಾತ, ಪಿತ್ತ, ಕಫ, ನಿರೋಗಿಗಳಿಗೂ) ಈ ಔಷಧದ ಎಂಟನೆಯ ಭಾಗ ಅಥವಾ ಬಸ್ತಿಯು ಬಹಳ ರಾಡಿಯಾಗದಂತೆ ಕಲ್ಕವನ್ನು ಹಾಕಬೇಕು. ಬೆಲ್ಲವನ್ನು ಮಾತ್ರ ನಾಲ್ಕು ತೊಲಿ ಹಾಕಬೇಕು. ಜೇನುತುಪ್ಪ, ಉಪ್ಪು, ಜವಖಾರ, ಮಾಂಸರಸ, ಮದ್ಯ, ಆಸವ, ಗೋಮೂತ್ರ, ಗಂಜಿ ಮುಂತಾದವು ಗಳನ್ನು ಯೋಗ್ಯ ಪ್ರಕಾರವಾಗಿ ಹಾಕಬೇಕು. (೪೦)

..............................ಸರ್ವಂ ತದೇಕತಃ ||
ಉಷ್ಣಾಂಬುಕುಂಭೀಬಾಷ್ಪೇಣ ತಪ್ತಂ ಖಜಸಮಾಹತಮ್ ||೪೧||

ಪ್ರಕ್ಷಿಪ್ಯ ಬಸ್ತೌ ಪ್ರಣಯೇತ್ಪಾಯೌ ನಾತ್ಯುಷ್ಣಶೀತಲಮ್ ||
ನಾತಿಸ್ನಿಗ್ಧಂ ನ ವಾ ರೂಕ್ಷಂ ನಾತಿತೀಕ್ಷ್ಣಂ ನ ವಾ ಮೃದು ||೪೨||
ನಾತ್ಯಚ್ಛಸಾಂದ್ರಂ ನೋನಾತಿಮಾತ್ರಂ ನಾಪಟು ನಾತಿ ಚ ||
ಲವಣಂ ತದ್ವದಮ್ಲಂ ಚ..............................

ಅರ್ಥಃ— ಇದನ್ನೆಲ್ಲ ಒತ್ತಟ್ಟಿಗೆ ಮಾಡಿ ಕೊಡದಲ್ಲಿದ್ದ ಬಿಸಿನೀರಿನ ಉಗಿಯಿಂದ ಕಾಸಿ ಸೌಟನಿಂದ ತಿರುವಿ ಬಸ್ತಿಯಲ್ಲಿ ತುಂಬಿ ಗುದದ್ವಾರದಲ್ಲಿ ಹಾಕಬೇಕು. ಬಸ್ತಿಯ ನೀರು, ಬಹಳ ಉಷ್ಣ ಅಥವಾ ಬಹಳ ಶೀತ, ಬಹಳ ಸ್ನಿಗ್ಧ ಅಥವಾ ಬಹಳ ರುಕ್ಷ, ಬಹಳ ತೀಕ್ಷ್ಣ ಅಥವಾ ಬಹಳ ಮೃದು, ಬಹಳ ತಿಳಿ ಅಥವಾ ಬಹಳ ಗಟ್ಟಿ, ಮತ್ತು ಪ್ರಮಾಣ ಬಹಳ ಕಡಿಮೆ ಅಥವಾ ಹೆಚ್ಚು ಇರಬಾರದು. ಅದರಂತೆ ಉಪ್ಪು ಹುಳಿಗಳೂ ಕೂಡ ಹೆಚ್ಚು ಕಡಿಮೆ ಇರದೆ ಸಾಕಷ್ಟೇ ಇರಬೇಕು. (೪೨||)

..............................ಪಲಂತ್ವನ್ಯೇ ತು ತದ್ವಿದಃ ॥೪೩॥

ಮಾತ್ರಾಂ ತ್ರಿಪಲಿಕಾಂ ಕುರ್ಯಾತ್ಸ್ನೇಹಮಾಕ್ಷಿಕಯೋಃ ಪೃಥಕ್ ।
ಕರ್ಷಾರ್ಧಂ ಮಾಣಿಮಂಥಸ್ಯ ಸ್ವಸ್ಥೇ ಕಲ್ಕಪಲದ್ವಯಮ್ ॥೪೪॥
ಸರ್ವದ್ರವಾಣಾಂ ಶೇಷಾಣಾಂ ಪಲಾನಿ ದಶ ಕಲ್ಪಯೇತ್ ।

ಅರ್ಥ:— ಕೆಲವು ಬಸ್ತಿಜ್ಞರು ನಿರೋಗಿಗೆ ಸ್ನೇಹ ಮತ್ತು ಜೇನತುಪ್ಪಗಳನ್ನು ಹನ್ನೆರಡು ಹನ್ನೆರಡು ತೊಲಿ, ಸೈಂಧವ ಅರ್ಧ ತೊಲಿ, ಕಲ್ಕ ಎಂಟು ತೊಲಿ, ಉಳಿದ ಎಲ್ಲ ದ್ರವ್ಯಗಳು ನಾಲ್ವತ್ತು ತೊಲಿ ಇರಬೇಕು ಎಂದು ಹೇಳುವರು. (೪೪॥)

ಮಾಕ್ಷಿಕಂ ಲವಣಂ ಸ್ನೇಹಂ ಕಲ್ಕಂ ಕ್ವಾಥಮಿತಿ ಕ್ರಮಾತ್ ॥೪೫॥
ಆವಪೇತ ನಿರೂಹಾಣಾಮೇಷ ಸಂಯೋಜನೇ ವಿಧಿಃ ॥

ಅರ್ಥ:— ನಿರೂಹ ದ್ರವ್ಯಗಳನ್ನು ಕೂಡಿಸುವದಾದರೆ ಮೊದಲು ಜೇನತುಪ್ಪ, ಆಮೇಲೆ ಉಪ್ಪು, ಸ್ನೇಹ, ಕಲ್ಕ, ಕಷಾಯ ಹೀಗೆ ಕ್ರಮದಿಂದ ಕೂಡಿಸಬೇಕು. (೪೫॥)

ಉತ್ತಾನೋ ದತ್ತಮಾತ್ರೇ ತು ನಿರೂಹೇ ತನ್ಮನಾ ಭವೇತ್ ॥೪೬॥

ಕೃತೋಪಧಾನಃ ಸಂಜಾತವೇಗಶ್ಚೋತ್ಕಟಕಃ ಸೃಜೇತ್ ॥
ಆಗತೌ ಪರಮಃ ಕಾಲೋ ಮುಹೂರ್ತೋ ಮೃತ್ಯವೇ ಪರಮ್ ॥೪೭॥

ಅರ್ಥ:— ನಿರೂಹವನ್ನು ಕೊಟ್ಟಕೂಡಲೆ ಅಂಗಾತವಾಗಿ ಮಲಗಿ ತಲೆಗಿಂಬು ತಕ್ಕೊಂಡು ಅತ್ತಕಡೆಗೇ ಲಕ್ಷ ಹಚ್ಚಬೇಕು. ವೇಗ ಬರಲು ತುದಿಗುಂಡಿಯಿಂದ ಮಲ-ವಿಸರ್ಜನೆಯನ್ನು ಮಾಡಬೇಕು. ನಿರೂಹವು ತಿರುಗಿ ಬರುವದಕ್ಕೆ ಪರಮ ಅವಧಿಯು ಎರಡು ಗಳಿಗೆ ಮಾತ್ರ. ಆಮೇಲೆ ಬರದಿದ್ದರೆ ಮೃತ್ಯುವನ್ನುಂಟುಮಾಡುವದು. (೪೭)

ತತ್ರಾನುಲೋಮಿಕಂ ಸ್ನೇಹಕ್ಷಾರಮೂತ್ರಾಮ್ಲಕಲ್ಪಿತಮ್ ॥
ತ್ವರಿತಂ ಸ್ನಿಗ್ಧತೀಕ್ಷ್ಣೋಷ್ಣಂ ಬಸ್ತಿಮನ್ಯಂ ಪ್ರಪೀಡಯೇತ್ ॥೪೮॥

ವಿದಧ್ಯಾತ್ಫಲವರ್ತಿಂ ವಾ ಸ್ವೇದನೋತ್ತ್ರಾಸನಾದಿ ಚ ||

ಅರ್ಥಃ— ಆಗ್ಗೆ ಸ್ನೇಹ ಕ್ಷಾರ ಮೂತ್ರ ಹುಳಿ ಪದಾರ್ಥಗಳಿಂದ ಮಾಡಿದ ಸ್ನಿಗ್ಧ ತೀಕ್ಷ್ಣ ಉಷ್ಣವಾದ ವಾತಾನುಲೋಮಕ ಎರಡನೆಯ ಬಸ್ತಿಯನ್ನು ತೀವ್ರವಾಗಿ ಕೊಡಬೇಕು. ಅಥವಾ ಫಲವರ್ತಿಯನ್ನು ಗುದ ದ್ವಾರದಲ್ಲಿ ಇಡಬೇಕು. ಕಾಸೋಣ ಬೆದರಿಸೋಣ ಮುಂತಾದವುಗಳನ್ನು ಮಾಡಬೇಕು. (೪೮)

ಸ್ವಯಮೇವ ನಿವೃತ್ತೇ ತು ದ್ವಿತೀಯೋ ಬಸ್ತಿರಿಷ್ಯತೇ ||೪೯||

ತೃತೀಯೋಽಪಿ ಚತುರ್ಥೋಽಪಿ ಯಾವದ್ವಾ ಸುನಿರೂಢತಾ ||

ವಿರಕ್ತವಚ್ಚ ರೋಗಾದೀನ್ವಿದ್ಯಾದ್ಯೋಗೇ ತು ಭೋಜಯೇತ್ ||೫೦||

ಕೋಷ್ಣೇನ ವಾರಿಣಾ ಸ್ನಾತಂ ತನುಧನ್ವರಸೌದನಮ್ ||

ಅರ್ಥಃ— ತಾನಾಗಿಯೆ ಬಸ್ತಿಯು ತಿರುಗಲು ಎರಡನೆಯ, ಮೂರ ನೆಯ, ನಾಲ್ಕನೆಯ ಬಸ್ತಿಗಳನ್ನೂ ಕೊಡಬೇಕು. ಅಥವಾ ಚೆನ್ನಾಗಿ ಶರೀರವು ನಿರೂಢವಾಗುವ ವರೆಗೆ ಬಸ್ತಿಗಳನ್ನು ಕೊಡಬೇಕು. ನಿರೂಹ ಬಸ್ತಿಯು ಹೀನ, ಅತಿ, ಮಿಥ್ಯಾ, ಮತ್ತು ಸಮ್ಯಗ್ಯೋಗಗಳನ್ನು ವಿರೇಚನದಂತೆ ತಿಳಿಯ ಬೇಕು. (ಅ. ಹೃ. ಸೂತ್ರ. ೧೮|೩೮) ಸಮ್ಯಗ್ಯೋಗವಾಗಿದ್ದರೆ ಬೆಚ್ಚನ್ನ ನೀರಿನಿಂದ ಸ್ನಾನಮಾಡಿಸಿ ತೆಳ್ಳಗಿನ ಜಾಂಗಲ ಮಾಂಸ ಕೂಡಿಸಿದ ಅನ್ನ ವನ್ನು ತಿನ್ನಿಸಬೇಕು. (೫೦)

ವಿಕಾರಾ ಯೇ ನಿರೂಢಸ್ಯ ಭವಂತಿ ಪ್ರಚಲೈರ್ಮಲೈಃ ||೫೧||

ತೇ ಸುಖೋಷ್ಣಾಂಬುಸಿಕ್ತಸ್ಯ ಯಾಂತಿ ಭುಕ್ತವತಃ ಶಮಮ್ ||

ಅಥ ವಾತಾರ್ದಿತಂ ಭೂಯಃ ಸದ್ಯ ಏವಾನುವಾಸಯೇತ್ ||೫೨||

ಅರ್ಥಃ— ಏಕೆಂದರೆ ದೋಷಗಳ ಸ್ಥಾನಭ್ರಂಶದಿಂದ ಉಂಟಾದ ನಿರೂಢನ ವಿಕಾರಗಳು ಬೆಚ್ಚಗಿನ ನೀರಿನಿಂದ ಸ್ನಾನಕ್ಕೆ ಹಾಕಿ ಊಟಮಾಡಿ ಸಲು ಶಾಂತವಾಗುವವು. ಅನಂತರ ಇನ್ನೂ ವಾತದಿಂದ ಪೀಡಿತನಾಗಿದ್ದರೆ ಕೂಡಲೆ ಅನುವಾಸನ ಕೊಡಬೇಕು. (೫೨)

**ಸಮ್ಯಗ್ಸ್ನಿಗ್ಧೇನಾತಿಯೋಗಾಶ್ಚ ತಸ್ಯ ಸ್ಯುಃ ಸ್ನೇಹಪೀತವತ್ ||**
**ಕಿಂಚಿತ್ಕಾಲಂ ಸ್ಥಿತೋ ಯಶ್ಚ ಸಪುರೀಷೋ ನಿವರ್ತತೇ ||೫೩||**
**ಸಾನುಲೋಮಾನಿಲಃ ಸ್ನೇಹಸ್ತತ್ಸಿದ್ಧಮನುವಾಸನಮ್ |**

ಅರ್ಥಃ— ಅನುವಾಸನದ ಸಮ್ಯಗ್, ಹೀನ, ಅತಿಯೋಗಗಳು ಸ್ನೇಹ ಪಾನದಂತೆ (ಅ. ಹೃ. ಸೂತ್ರ. ೧೬/೩೦) ಇರುತ್ತವೆ. ಸ್ನೇಹವು ಸ್ವಲ್ಪ ಹೊತ್ತು ನಿಂತು ಮಲ ಮತ್ತು ಅನುಲೋಮವಾದ ವಾಯುವಿನೊಡನೆ ತಿರುಗಿದರೆ ಅನುವಾಸನವು ಸರಿಯಾಗಿ ಆಯಿತೆಂದು ತಿಳಿಯಬೇಕು. (೫೩)

**ಏಕಂ ತ್ರೀನ್ವಾ ಬಲಾಸೇ ತು ಸ್ನೇಹಬಸ್ತೀನ್ ಪ್ರಕಲ್ಪಯೇತ್ ||೫೪||**
**ಪಂಚ ವಾ ಸಪ್ತ ವಾ ಪಿತ್ತೇ, ನವೈಕಾದಶ ವಾಽನಿಲೇ ||**
**ಪುನಸ್ತತೋಽಪ್ಯಯುಗ್ಮಾಂಸ್ತು ಪುನರಾಸ್ಥಾಪನಂ ತತಃ ||೫೫||**

ಅರ್ಥಃ— ಕಫದ ಮೇಲೆ ಒಂದು ಅಥವಾ ಮೂರು, ಪಿತ್ತವಿಕಾರದ ಮೇಲೆ ಐದು ಅಥವಾ ಏಳು, ವಾತದ ಮೇಲೆ ಒಂಭತ್ತು ಅಥವಾ ಹನ್ನೊಂದು ಅನುವಾಸನ ಬಸ್ತಿಗಳನ್ನು ಕೊಡಬೇಕು. ಆ ಮೇಲೆ ಪುನಃ ವಿಷಮಸಂಖ್ಯೆಯ ಸ್ನೇಹ ಬಸ್ತಿಗಳನ್ನು ಕೊಡಬೇಕು. ನಂತರ ಪುನಃ ನಿರೂಹ ಕೊಡಬೇಕು. (೫೫)

**ಕಫಪಿತ್ತಾನಿಲೇಷ್ವನ್ನಂ ಯೂಷಕ್ಷೀರರಸೈಃ ಕ್ರಮಾತ್ ||**

ಅರ್ಥಃ— ಕಫ ಪಿತ್ತ ವಾತ ವಿಕಾರಗಳಲ್ಲಿ ಅನ್ನವನ್ನು ಕ್ರಮವಾಗಿ ಕಟ್ಟು, ಹಾಲು, ಮಾಂಸರಸದೊಡನೆ ತಿನ್ನಬೇಕು. (೫೬)

**ವಾತಘ್ನೌಷಧನಿಷ್ಕ್ವಾಥತ್ರಿವೃತಾಸೈಂಧವೈರ್ಯುತಃ ||೫೭||**
**ಬಸ್ತಿರೇಕೋಽನಿಲೇ ಸ್ನಿಗ್ಧಃ ಸ್ವಾದ್ವಮ್ಲೋಷ್ಣೋ ರಸಾನ್ವಿತಃ |**

ಅರ್ಥಃ— ವಾತಕ್ಕೆ ವಾತನಾಶಕ(ದೇವದಾರು ಮುಂತಾದ) ಔಷಧಗಳ ಕಷಾಯ ತಿಗಡಿ ಸೈಂಧವಗಳಿಂದ ಕೂಡಿದ, ಮಧುರ ಆಮ್ಲ ಉಷ್ಣ ದ್ರವ್ಯ ಮಾಂಸರಸಯುಕ್ತ ಮತ್ತು ಸ್ನಿಗ್ಧವಾದ ನಿರೂಹ ಬಸ್ತಿಯು ಒಂದೇ ಸಾಕು. (೫೭)

**ನ್ಯಗ್ರೋಧಾದಿಗಣಕ್ವಾಥಪದ್ಮಕಾದಿಸಿತಾಯುತೌ ||೫೮||**
**ಪಿತ್ತೇ ಸ್ವಾದುಹಿಮೌ ಸಾಜ್ಯಕ್ಷೀರೇಕ್ಷುರಸಮಾಕ್ಷಿಕೌ ||**

ಅರ್ಥ:— ಪಿತ್ತಕ್ಕೆ ನ್ಯಗ್ರೋಧಾದಿಗಣದ ಕಷಾಯ, ಪದ್ಮಕಾದಿಗಣ, ಸಕ್ಕರೆ, ತುಪ್ಪ, ಹಾಲು, ಕಬ್ಬು, ಜೇನುತುಪ್ಪಗಳಿಂದ ಕೂಡಿದ ಮಧುರ, ಶೀತವಾದ ಎರಡು ನಿರೂಹ ಬಸ್ತಿಗಳನ್ನು ಕೊಡಬೇಕು. (೫೭)

**ಆರಗ್ವಧಾದಿನಿಷ್ಕ್ವಾಥವತ್ಸಕಾದಿಯುತಾಸ್ತ್ರಯಃ ॥೫೮॥**

**ರೂಕ್ಷಾಃ ಸಕ್ಷೌದ್ರಗೋಮೂತ್ರಾಸ್ತೀಕ್ಷ್ಣೋಷ್ಣಕಟುಕಾಃ ಕಫೇ ॥**
**ತ್ರಯಸ್ತೇ ಸನ್ನಿಪಾತೇಽಪಿ ದೋಷಾನ್ ಘ್ನಂತಿ ಯತಃ ಕ್ರಮಾತ್ ॥೫೯॥**

ಅರ್ಥ:— ಕಫದ ಮೇಲೆ ಆರಗ್ವಧಾದಿ ಕಷಾಯ ವತ್ಸಕಾದಿಗಣ ಜೇನತುಪ್ಪ ಗೋಮೂತ್ರಗಳಿಂದ ಕೂಡಿದ ತೀಕ್ಷ್ಣ, ಉಷ್ಣ, ಕಾರ, ರೂಕ್ಷವಾದ ಮೂರು ನಿರೂಹ ಬಸ್ತಿಗಳು ಹಿತಕರವು. ಸನ್ನಿಪಾತದಲ್ಲಿ ಕೂಡ ಮೂರು ಬಸ್ತಿಗಳನ್ನು ಕೊಡಬೇಕು. ಯಾಕೆಂದರೆ ಅವು ಅನುಕ್ರಮವಾಗಿ ಮೂರು ದೋಷಗಳನ್ನು ಕಳೆಯುತ್ತವೆ. (೫೯)

**ತ್ರಿಭ್ಯಃ ಪರಂ ಬಸ್ತಿಮತೋ ನೇಚ್ಛಂತ್ಯನ್ಯೇ ಚಿಕಿತ್ಸಕಾಃ ॥**
**ನ ಹಿ ದೋಷಶ್ಚತುರ್ಥೋಽಸ್ತಿ ಪುನರ್ದೀಯೇತ ಯಂ ಪ್ರತಿ ॥೬೦॥**

ಅರ್ಥ:— ಆ ಕಾರಣ ಕೆಲವೈದ್ಯರು ನಾಲ್ಕನೇ ಬಸ್ತಿಯನ್ನು ಅಪೇಕ್ಷಿಸುವದಿಲ್ಲ. ನಾಲ್ಕನೇ ದೋಷವೇ ಇಲ್ಲವೆಂದ ಮೇಲೆ ಯಾತಕ್ಕಾಗಿ ಪುನಃ ಕೊಡಬೇಕು ಎಂದು ಅವರು ಅನ್ನುವರು. (೬೦)

**ಉತ್ಕ್ಲೇಶನಂ ಶುದ್ಧಿಕರಂ ದೋಷಾಣಾಂ ಶಮನಂ ಕ್ರಮಾತ್ ॥**
**ತ್ರಿಧೈವಂ ಕಲ್ಪಯೇದ್ಬಸ್ತಿಮಿತ್ಯನ್ಯೇಽಪಿ ಪ್ರಚಕ್ಷತೇ ॥೬೧॥**

ಅರ್ಥ:— ಕೆಲವರು ಒಂದನ್ನು ದೋಷ ಚಲನಕ್ಕಾಗಿ, ಇನ್ನೊಂದನ್ನು ಅವುಗಳನ್ನು ಹೊರಗೆಡುವದಕ್ಕಾಗಿ, ಮತ್ತೊಂದನ್ನು ದೋಷಗಳ ಶಮನಕ್ಕಾಗಿ, ಈ ಪ್ರಕಾರ ಮೂರು ಬಸ್ತಿಗಳನ್ನು ಕೊಡಬೇಕೆಂದು ಹೇಳುತ್ತಾರೆ. (೬೧)

**ದೋಷೌಷಧಾದಿಬಲತಃ ಸರ್ವಮೇತತ್ಪ್ರಮಾಣಯೇತ್ ॥**
**ಸಮ್ಯಙ್ನಿರೂಢಲಿಂಗಂ ತು ನಾಸಂಭಾವ್ಯ ನಿವರ್ತಯೇತ್ ॥೬೨॥**

ಅರ್ಥ:— ದೋಷ ಔಷಧ ಮುಂತಾದವುಗಳ ಬಲವನ್ನು ವಿಚಾರಿಸಿ ಇವನ್ನೆಲ್ಲ ಮನ್ನಿಸಬೇಕು. ಅಂತೂ ಚೆನ್ನಾಗಿ ನಿರೂಹವಾದ ಲಕ್ಷಣವನ್ನು ಕಾಣದೆ ಬಸ್ತಿಕೊಡುವದನ್ನು ನಿಲ್ಲಿಸಬಾರದು.

**ಟಿಪ್ಪಣಿ:—** ದೋಷಗಳು ಬಲಿಷ್ಠವಿದ್ದು ಔಷಧಗಳು ಮೃದುವಿದ್ದರೆ ಹೆಚ್ಚು ಬಸ್ತಿಗಳನ್ನು ಕೊಡಬೇಕು. ಇಲ್ಲವಾದರೆ ಕಡಿಮೆ ಕೊಡಬೇಕು.

‘ಕರ್ಮಬಸ್ತಿ’ಯನ್ನು ಹೇಳುತ್ತಾರೆ. (೬೨)

**ಪ್ರಾಕ್‌ಸ್ನೇಹ ಏಕಃ ಪಂಚಾಂತೇ ದ್ವಾದಶಾಸ್ಥಾಪನಾನಿ ಚ**
**ಸಾನ್ವಾಸನಾನಿ ಕರ್ಮೈವಂ ಬಸ್ತಯಸ್ತ್ರಿಂಶದೀರಿತಾಃ ॥೬೩॥**

ಅರ್ಥ:— ಮೊದಲು ಒಂದು ಸ್ನೇಹ ಬಸ್ತಿ, ಕಡೆಗೆ ಐದು ಸ್ನೇಹ ಬಸ್ತಿ, ನಡುವೆ ಒಮ್ಮೆ ನಿರೂಹ ಒಮ್ಮೆ ಅನುವಾಸನ ಹೀಗೆ ಹನ್ನೆರಡು ನಿರೂಹ ಬಸ್ತಿ ಮತ್ತು ಹನ್ನೆರಡು ಅನುವಾಸನ ಬಸ್ತಿ, ಹೀಗೆ ಮೂವತ್ತು ಬಸ್ತಿ ಕೊಟ್ಟರೆ ಒಂದು ‘ಕರ್ಮಬಸ್ತಿ’ಯಾಗುವದು. (೬೩)

‘ಕಾಲಬಸ್ತಿ’ಯನ್ನು ಹೇಳುತ್ತಾರೆ.

**ಕಾಲಃ ಪಂಚದಶೈಕೋಽತ್ರ ಪ್ರಾಕ್ ಸ್ನೇಹೋಽಂತೇ ತ್ರಯಸ್ತಥಾ॥**
**ಷಟ್ಪಂಚಬಸ್ತ್ಯಂತರಿತಾಃ.........................**

ಅರ್ಥ:— ಮೊದಲು ಒಂದು, ಕಡೆಗೆ ಮೂರು ಹೀಗೆ ೪ ಸ್ನೇಹ ಬಸ್ತಿಗಳು, ನಡುವೆ ಒಮ್ಮೆ ನಿರೂಹ ಒಮ್ಮೆ ಸ್ನೇಹ ಹೀಗೆ ೫ ನಿರೂಹ ಬಸ್ತಿ, ೬ ಸ್ನೇಹ ಬಸ್ತಿ, ಹೀಗೆ ಹದಿನೈದು ಬಸ್ತಿಗಳಿಗೆ ‘ಕಾಲಬಸ್ತಿ’ ಅನ್ನುತ್ತಾರೆ. (೬೩॥)

‘ಯೋಗ ಬಸ್ತಿಯನ್ನು ಹೇಳುತ್ತಾರೆ.

**...............ಯೋಗೋಽಷ್ಟೌ ಬಸ್ತಯೋಽತ್ರ ತು ॥೬೪॥**
**ತ್ರಯೋ ನಿರೂಹಾಃ ಸ್ನೇಹಾಶ್ಚ ಸ್ನೇಹಾವಾದ್ಯಂತಯೋರುಭೌ ॥**

ಅರ್ಥ:— ಒಂದು ಮೊದಲು, ಒಂದು ಕಡೆಗೆ, ಹೀಗೆ ಎರಡು ಸ್ನೇಹ ಬಸ್ತಿ, ನಡುವೆ ಒಮ್ಮೆ ನಿರೂಹ ಒಮ್ಮೆ ಸ್ನೇಹ, ಹೀಗೆ ಮೂರು ನಿರೂಹ

ಮೂರು ಸ್ನೇಹಗಳು ಕೂಡಿ ಒಟ್ಟು ೮ ಬಸ್ತಿಗಳು ಇದ್ದರೆ 'ಯೋಗಬಸ್ತಿ' ಅನ್ನುತ್ತಾರೆ. (೬೪||)

**ಸ್ನೇಹಬಸ್ತಿಂ ನಿರೂಹಂ ವಾ ನೈಕಮೇವಾತಿ ಶೀಲಯೇತ್ ||೬೫||**
**ಉತ್ಕ್ಲೇಶಾಗ್ನಿವಧೌ ಸ್ನೇಹಾನ್ನಿರೂಹಾನ್ಮರುತೋ ಭಯಮ್ ||**

ಅರ್ಥ:— ಸ್ನೇಹಬಸ್ತಿ ಅಥವಾ ನಿರೂಹ ಬಸ್ತಿಗಳಲ್ಲಿ ಒಂದನ್ನೇ ಬಹಳವಾಗಿ ಕೊಡಬಾರದು. ಯಾಕೆಂದರೆ ಅತಿ ಸ್ನೇಹದಿಂದ ದೋಷಗಳ ಕೆರಳುವಿಕೆ ಮತ್ತು ಅಗ್ನಿನಾಶವಾಗುವದು. ಅತಿ ನಿರೂಹದಿಂದ ವಾತ ವಿಕಾರಗಳು ಉಂಟಾಗುವವು (೬೫||)

**ತಸ್ಮಾನ್ನಿರೂಢಃ ಸ್ನೇಹ್ಯಃ ಸ್ಯಾನ್ನಿರೂಹ್ಯಶ್ಚಾನುವಾಸಿತಃ |೬೬|**
**ಸ್ನೇಹಶೋಧನಯುಕ್ತ್ಯೈವಂ ಬಸ್ತಿಕರ್ಮ ತ್ರಿದೋಷಜಿತ್ ||**

ಅರ್ಥ:— ಆದಕಾರಣ ನಿರೂಹ ಬಸ್ತಿ ಕೊಟ್ಟವನಿಗೆ ಸ್ನೇಹಬಸ್ತಿಯನ್ನು, ಸ್ನೇಹಬಸ್ತಿ ಕೊಟ್ಟವನಿಗೆ ನಿರೂಹವನ್ನೂ ಕೊಡಬೇಕು. ಹೀಗೆ ಸ್ನೇಹ ಶೋಧನಗಳ ಯೋಜನೆಯಿಂದ ಬಸ್ತಿ ಕರ್ಮವು ಮೂರು ದೋಷಗಳನ್ನು ಗೆಲ್ಲುತ್ತದೆ. (೬೬||)

ಮಾತ್ರಾಬಸ್ತಿ ಎಂಬ ಅನುವಾಸನವನ್ನು ಹೇಳುತ್ತಾರೆ.

**ಹ್ರಸ್ವಯಾ ಸ್ನೇಹಪಾನಸ್ಯ ಮಾತ್ರಯಾ ಯೋಜಿತಃ ಸಮಃ ||೬೭||**

**ಮಾತ್ರಾಬಸ್ತಿಃ ಸ್ಮೃತಃ ಸ್ನೇಹಃ ಶೀಲನೀಯಃ ಸದಾ ಚ ಸಃ ||**
**ಬಾಲವೃದ್ಧಾಧ್ವಭಾರಸ್ತ್ರೀವ್ಯಾಯಾಮಾಸಕ್ತಚಿಂತಕೈಃ ||೬೮||**

**ವಾತಭಗ್ನಾಬಲಾಲ್ಪಾಗ್ನಿನೃಪೇಶ್ವರಸುಖಾತ್ಮಭಿಃ ||**
**ದೋಷಘ್ನೋ ನಿಷ್ಪರೀಹಾರೋ ಬಲ್ಯಃ ಸೃಷ್ಟಮಲಃ ಸುಖಃ ||೬೯||**

ಅರ್ಥ:— ಸ್ನೇಹಪಾನದ ಕನಿಷ್ಠ ಪ್ರಮಾಣ (ಎರಡು ಪ್ರಹರಗಳಲ್ಲಿ ಪಚನವಾಗುವಷ್ಟು) ದಿಂದ ಕೊಟ್ಟ ಸ್ನೇಹವು ಮಾತ್ರಾಬಸ್ತಿಯೆಂದು ಕರೆಯಲ್ಪಡುತ್ತದೆ. ಇದು ಬಾಲ, ವೃದ್ಧರಿಗೂ, ಹಾದೀ ನಡೆಯೋಣ ಭಾರ ಸ್ತ್ರೀಸಂಗ ವ್ಯಾಯಾಮ ಚಿಂತೆಗಳಿಂದ ಪೀಡಿ

ತರಿಗೂ, ವಾತ ಅಸ್ಥಿಭಂಗ ದೌರ್ಬಲ್ಯ ಅಗ್ನಿಮಾಂದ್ಯವುಳ್ಳ ಎಲ್ಲರಿಗೂ ಅರಸು ಶ್ರೀಮಂತ ಸುಖೀಜನರಿಗೂ, ಸ್ತ್ರೀ, ತಕ್ಕೊಳ್ಳಲಿಕ್ಕೆ ಯೋಗ್ಯವಾದವು. ಇವು ದೋಷನಾಶಕವೂ, ಪಥ್ಯವಿಲ್ಲದ್ದೂ, ಬಲಕರವೂ, ಸುಖಮಾತ್ರ ಪ್ರವೃತ್ತಿ ಮಾಡುವದೂ, ತಕ್ಕೊಳ್ಳಲು ತ್ರಾಸವಿಲ್ಲದ್ದೂ ಆಗಿರುವವು. (೬೯)

ಉತ್ತರ ಬಸ್ತಿಯನ್ನು ಹೇಳುತ್ತಾರೆ.

**ಬಸ್ತೌ ರೋಗೇಷು ನಾರೀಣಾಂ ಯೋನಿಗರ್ಭಾಶಯೇಷು ಚ ॥**
**ದ್ವಿತ್ರಾಸ್ಥಾಪನಶುದ್ಧೇಭ್ಯೋ ವಿದಧ್ಯಾದ್ಬಸ್ತಿಮುತ್ತರಮ್ ॥೭೦॥**

ಅರ್ಥಃ— ಗಂಡಸರ ಮೂತ್ರಾಶಯ ರೋಗದಲ್ಲಿಯೂ, ಹೆಂಗಸರ ಯೋನಿ ಗರ್ಭಾಶಯ ಬಸ್ತಿರೋಗಗಳಲ್ಲಿಯೂ ಎರಡು ಮೂರು ನಿರೂಹಬಸ್ತಿಗಳಿಂದ ಅವರನ್ನು ಶುದ್ಧಮಾಡಿ ಉತ್ತರ ಬಸ್ತಿಯನ್ನು ಕೊಡಬೇಕು. (೭೦)

**ಆತುರಾಂಗುಲಮಾನೇನ ತನ್ನೇತ್ರಂ ದ್ವಾದಶಾಂಗುಲಮ್ ॥**
**ವೃತ್ತಂ ಗೋಪುಚ್ಛವನ್ಮೂಲಮಧ್ಯಯೋಃ ಕೃತಕರ್ಣಿಕಮ್ ॥೭೧॥**

**ಸಿದ್ಧಾರ್ಥಕಪ್ರವೇಶಾಗ್ರಂ ಶ್ಲಕ್ಷ್ಣಂ, ಹೇಮಾದಿಸಂಭವಮ್ ॥**
**ಕುಂದಾಶ್ವಮಾರಸುಮನಃಪುಷ್ಪವೃಂತೋಪಮಂ ದೃಢಮ್ ॥೭೨॥**

ಅರ್ಥಃ— ಅದರ ನೇತ್ರವು ರೋಗಿಯ ಹನ್ನೆರಡು ಬೆಟ್ಟಿನಷ್ಟು ಉದ್ದ, ಗೋಪುಚ್ಛಾಕಾರ, ದುಂಡ, ಮೂಲ ಮತ್ತು ಮಧ್ಯದಲ್ಲಿ ಕರ್ಣಿಕೆಯುಳ್ಳ ನುಣುಪಾದ, ಭಂಗಾರ ಮುಂತಾದವುಗಳಿಂದ ಮಾಡಿದ್ದು, ಕುಂದ ಕಣಿಗಿಲ ಮಲ್ಲಿಗೆ ಪುಷ್ಪದ ದೇಟಿನಂತೆಯೂ, ಗಟ್ಟಿಯೂ, ಸಾಸಿವೆಯು ಕಾಳು ಪ್ರವೇಶಿಸುವಷ್ಟು ತೂತು ಉಳ್ಳದ್ದೂ ಇರಬೇಕು. (೭೨)

ಟಿಪ್ಪಣೀ:— ಇದು ಪುರುಷರದು. ಹೆಂಗಸರದನ್ನು ಮುಂದೆ (ಶ್ಲೋಕ ೭೫) ಹೇಳುತ್ತಾರೆ. (೭೨)

**ತಸ್ಯ ಬಸ್ತಿರ್ಮೃದುರ್ಲಘುರ್ಮಾತ್ರಾ ಶುಕ್ತಿರ್ವಿಕಲ್ಪ್ಯ ವಾ ॥**
**ಅಥ ಸ್ನಾತಾಶಿತಸ್ಯಾಸ್ಯ ಸ್ನೇಹಬಸ್ತಿವಿಧಾನತಃ ॥೭೩॥**

**ಋಜೋಃ ಸುಖೋಪವಿಷ್ಟಸ್ಯ ಪೀಠೇ ಜಾನುಸಮೇ ಮೃದೌ ॥**
**ಹೃಷ್ಟೇ ಮೇಢ್ರೇ ಸ್ಥಿತೇ ಚರ್ಜೌ ಶನೈಃ ಸ್ರೋತೋವಿಶುದ್ಧಯೇ ॥೭೪॥**

ಸೂಕ್ಷ್ಮಾಂ ಶಲಾಕಾಂ ಪ್ರಣಯೇತ್ತಯಾ ಶುದ್ಧೇಽನುಸೇವನಿ॥
ಆಮೇಹನಾಂತಂ ನೇತ್ರಂ ಚ ನಿಷ್ಕಂಪಂ ಗುದವತ್ತತಃ ॥೭೫॥

ಪೀಡಿತೇಽಂತರ್ಗತೇ ಸ್ನೇಹೇ ಸ್ನೇಹಬಸ್ತಿಕ್ರಮೋ ಹಿತಃ ॥

ಅರ್ಥಃ— ಇದರ ಬಸ್ತಿಯು (ಔಷಧ ಹಾಕುವ ಚೀಲು) ಮೃದು ಮತ್ತು ಹಗುರು ಇದ್ದು ಅದರ ಔಷಧ ಪ್ರಮಾಣವು ಎರಡು ತೊಲಿ ಅಥವಾ ಶಕ್ತಿ ವಯಸ್ಸು ಮುಂತಾದವುಗಳನ್ನು ವಿಚಾರಿಸಿ ಹೆಚ್ಚುಕಡಿಮೆ ಇರಬೇಕು. ಆ ಮೇಲೆ ಸ್ನೇಹಬಸ್ತಿಯ ವಿಧಿಯಂತೆ ಸ್ನಾನಮಾಡಿ ಊಟಮಾಡಿದ ನಂತರ ಮೊಳಕಾಲಿನಷ್ಟೇ ಎತ್ತರವಾದ ಮೆತ್ತನ್ನ ಆಸನದಲ್ಲಿ ಸರಳವಾಗಿ ಚೆನ್ನಾಗಿ ಕೂಡಿಸಿ ಶಿಶ್ನವು ನಿಗರಿ ಸರಳವಾಗಿ ನಿಲ್ಲಲು ಮಾರ್ಗ ಶುದ್ಧಿಯಾಗುವದಕ್ಕಾಗಿ ಮೊದಲು ಸಾವಕಾಶವಾಗಿ ಸಣ್ಣ ಶಲಾಕೆಯನ್ನು ಒಳಗೆ ಸೇರಿಸಬೇಕು. ಮಾರ್ಗವು ಅದರಿಂದ ಶುದ್ಧವಾಗಲು ಹೊಲಿಗೆ (ಗುದದಿಂದ ಶಿಶ್ನದವರೆಗೆ ಕೆಳ ಭಾಗದಲ್ಲಿ ಹೊಲಿಗೆಯಂತೆ ಇರುವ ಭಾಗ) ಯನ್ನು ಅನುಸರಿಸಿ ಶಿಶ್ನದ ಮೂಲದವರೆಗೆ ಗುದಬಸ್ತಿಯಂತೆ ಕೈಯನ್ನು ನಡುಗಿಸದೆ ನಲಿಕೆಯನ್ನು ಒಳಗೆ ಸೇರಿಸಬೇಕು. ಅಲ್ಲಿಂದ ಬಸ್ತಿಯನ್ನು ಹಿಂಡಲು ಒಳಗೆ ಸ್ನೇಹವು ಹೋಗುವದು. ಆ ಮೇಲೆ ಸ್ನೇಹ ಬಸ್ತಿಯಲ್ಲಿ ಹೇಳಿದ ಉಪಚಾರ ಮಾಡಬೇಕು. (೭೫॥)

ಬಸ್ತೀನನೇನ ವಿಧಿನಾ ದದ್ಯಾತ್ತ್ರೀಂಶ್ಚತುರೋಽಪಿ ವಾ ॥೭೬॥

ಅನುವಾಸನವಚ್ಛೇಷಂ ಸರ್ವಮೇವಾಸ್ಯ ಚಿಂತಯೇತ್ ॥

ಅರ್ಥ:— ಈ ರೀತಿಯಿಂದ ಮೂರು ನಾಲ್ಕು ಬಸ್ತಿಗಳನ್ನು ಕೊಡಬೇಕು. ಉಳಿದದ್ದನ್ನೆಲ್ಲ (ವಿಧಿ, ಪಥ್ಯ, ಸಮ್ಯಗ್ಯೋಗ, ಅಪಾಯ ಮುಂತಾದವುಗಳನ್ನು) ಅನುವಾಸನ ಬಸ್ತಿಯಂತೆ ತಿಳಿಯತಕ್ಕದ್ದು. (೭೬॥)

ಹೆಂಗಸರ ಉತ್ತರ ಬಸ್ತಿಯನ್ನು ಹೇಳುತ್ತಾರೆ.

ಸ್ತ್ರೀಣಾಮಾರ್ತವಕಾಲೇ ತು ಯೋನಿರ್ಗೃಹ್ಣಾತ್ಯಪಾವೃತೇಃ ॥೭೭॥

ವಿದಧೀತ ತದಾ ತಸ್ಮಾದನೃತಾವಪಿ ಚಾತ್ಯಯೇ ॥

**ಯೋನಿವಿಭ್ರಂಶಶೂಲೇಷು ಯೋನಿವ್ಯಾಪತ್ಸ್ವಸೃಗ್ದರೇ ॥೭೮॥**

ಅರ್ಥ:— ಸ್ತ್ರೀಯರ ಆರ್ತವ ಕಾಲದಲ್ಲಿ ಯೋನಿಯು ತೆರೆದಿರುವದ ರಿಂದ ಸ್ನೇಹವನ್ನು ಗ್ರಹಣ ಮಾಡುತ್ತದೆ. ಕಾರಣ ಆಗ್ಗೆ ಉತ್ತರ ಬಸ್ತಿ ಯನ್ನು ಕೊಡಬೇಕು. ಆದರೆ ಯೋನಿಭ್ರಂಶ, ಯೋನಿಶೂಲಿ, ಯೋನಿ ವ್ಯಾಪತ್,ರಕ್ತಪ್ರದರ ಮುಂತಾದ ರೋಗಗಳ ಕಠಿಣ ಪ್ರಸಂಗಗಳಲ್ಲಿ ಋತುಕಾ ಲವಿಲ್ಲದಿದ್ದರೂ ಕೊಡಬೇಕು. (೭೮)

**ನೇತ್ರಂ ದಶಾಂಗುಲಂ ಮುದ್ಗಪ್ರವೇಶಂ ಚತುರಂಗುಲಮ್ ।**
**ಅಪತ್ಯಮಾರ್ಗೇ ಯೋಜ್ಯಂ ಸ್ಯಾದ್ ದ್ವ್ಯಂಗುಲಂ ಮೂತ್ರವರ್ತ್ಮನಿ ॥೭೯॥**

**ಮೂತ್ರಕೃಚ್ಛ್ರವಿಕಾರೇಷು, ಬಾಲಾನಾಂ ತ್ವೇಕಮಂಗುಲಮ್ ॥**
**ಪ್ರಕುಂಚೋ ಮಧ್ಯಮಾ ಮಾತ್ರಾ ಬಾಲಾನಾಂ ಶುಕ್ತಿರೇವ ಚ ॥೮೦॥**

ಅರ್ಥ:— ಸ್ತ್ರೀಯರ ಉತ್ತರ ಬಸ್ತಿಯ ನಳಿಕೆಯು ಹತ್ತು ಅಂಗುಲ ಉದ್ದ, ಒಂದು ಹೆಸರು ಕಾಳು ಹೋಗುವಷ್ಟು ತೂತು ಉಳ್ಳದ್ದು ಇರ ಬೇಕು. ದೊಡ್ಡವರ ಯೋನಿಮಾರ್ಗದೊಳಗೆ ನಾಲ್ಕು ಅಂಗುಲದಷ್ಟು, ಮೂತ್ರಕೃಚ್ಛ್ರವಿಕಾರದಲ್ಲಿ ಮೂತ್ರ ಮಾರ್ಗದೊಳಗೆ ಎರಡು ಅಂಗುಲ ದಷ್ಟು, ಹುಡುಗಿಯರಿಗೆ ಒಂದು ಅಂಗುಲದಷ್ಟು ಪ್ರವೇಶಿಸಬೇಕು. ಪ್ರೌಢ ಸ್ತ್ರೀಯರಿಗೆ ಉತ್ತರ ಬಸ್ತಿಯ ಔಷಧದ ಮಧ್ಯಮ ಪ್ರಮಾಣವು ನಾಲ್ಕು ತೊಲಿ. ಹುಡುಗಿಯರಿಗೆ ಎರಡು ತೊಲಿ ಮಾತ್ರ. (೮೦)

**ಉತ್ತಾನಾಯಾಃ ಶಯಾನಾಯಾಃ ಸಮ್ಯಕ್ ಸಂಕೋಚ್ಯ ಸಕ್ಥಿನೀ ॥**
**ಊರ್ಧ್ವಜಾನ್ವಾಸ್ತ್ರಿಚತುರಾನಹೋರಾತ್ರೇಣ ಯೋಜಯೇತ್ ॥೮೧॥**

**ಬಸ್ತೀಂಸ್ತ್ರಿರಾತ್ರಮೇವಂ ಚ ಸ್ನೇಹಮಾತ್ರಾಂ ವಿವರ್ಧಯನ್ ॥**
**ತ್ರ್ಯಹಮೇವಂ ಚ ವಿಶ್ರಮ್ಯ ಪ್ರಣಿದಧ್ಯಾತ್ಪುನಸ್ತ್ರ್ಯಹಮ್ ॥೮೨॥**

ಅರ್ಥ:— ಸ್ತ್ರೀಯನ್ನು ಸರಿಯಾಗಿ ಅಂಗಾತ ಮಲಗಿಸಿ ಮೊಳಕಾಲು ಮೇಲೆ ಮಾಡಿಸಿ ತೊಡೆಗಳನ್ನು ಸಂಕೋಚಮಾಡಿ ಹಗಲು ರಾತ್ರಿಗಳಲ್ಲಿ

ಕೂಡಿ ಮೂರು ನಾಲ್ಕು ಸಾರೆ ಬಸ್ತಿಯನ್ನು ಕೊಡಬೇಕು. ಈ ಪ್ರಕಾರ ಮೂರು ದಿವಸ ಮಾಡಬೇಕು. ಮತ್ತು ಸ್ನೇಹದ ಪ್ರಮಾಣವನ್ನು ದಿನಾಲು ಹೆಚ್ಚಿಸುತ್ತಿರಬೇಕು. ಆಮೇಲೆ ಮೂರು ದಿವಸ ವಿಶ್ರಾಂತಿ ಕೊಟ್ಟು ಪುನಃ ಮೂರು ದಿವಸ ಬಸ್ತಿಯನ್ನು ಕೊಡಬೇಕು. (ಇದರಂತೆಯೇ ಶಿಶ್ನದಲ್ಲಿಯೂ ಕೊಡಬೇಕು.) (೮೩)

**ಪಕ್ಷಾದ್ವಿರೇಕೋ ವಮಿತೇ ತತಃ ಪಕ್ಷಾನ್ನಿರೂಹಣಂ ||**
**ಸದ್ಯೋ ನಿರೂಢಶ್ಚಾನ್ವಾಸ್ಯಃ ಸಪ್ತರಾತ್ರಾದ್ವಿರೇಚಿತಃ ||೮೪||**

ಅರ್ಥಃ— ವಮನ ತಕ್ಕೊಂಡನಂತರ ಹದಿನೈದು ದಿವಸಕ್ಕೆ ವಿರೇಚನವನ್ನು, ಅಲ್ಲಿಂದ ಹದಿನೈದು ದಿವಸಕ್ಕೆ ನಿರೂಹವನ್ನು, ನಿರೂಹ ಕೊಟ್ಟ ಮೇಲೆ ಕೂಡಲೇ ಅನುವಾಸನ ಬಸ್ತಿಯನ್ನು ಕೊಡಬೇಕು. ವಿರೇಚನದ ಏಳು ದಿವಸದನಂತರ ಅನುವಾಸನ ಕೊಡಬೇಕು. (೮೪)

**ಯಥಾ ಕುಸುಂಭಾದಿಯುತಾತ್ತೋಯಾದ್ರಾಗಂ ಹರೇತ್ಪಟಃ ||**
**ತಥಾ ದ್ರವೀಕೃತಾದ್ದೇಹಾದ್ಬಸ್ತಿರ್ನಿರ್ಹರತೇ ಮಲಾನ್ ||೮೫||**

ಅರ್ಥಃ— ಅರಿವೆಯು ಹೇಗೆ ಕುಸುಂಭ ಕೇಶರಗಳಿಂದ ಕೂಡಿದ ನೀರಿನಿಂದ ಬಣ್ಣವನ್ನಷ್ಟೇ ಎಳಕೊಳ್ಳುವದೋ ಹಾಗೆಯೇ ಬಸ್ತಿಯು ಸ್ನೇಹಾದಿಗಳಿಂದ ದ್ರವವಾದ ದೋಷಧಾತುಮಲಗಳಿಂದ ಮಲಗಳನ್ನು ಮಾತ್ರ ಹೊರಗೆ ತೆಗೆಯುವದು. (೮೫)

**ಶಾಖಾಗತಾಃ ಕೋಷ್ಠಗತಾಶ್ಚ ರೋಗಾ**
**ಮರ್ಮೋರ್ಧ್ವಸರ್ವಾವಯವಾಂಗಜಾಶ್ಚ ||**
**ಯೇ ಸಂತಿ ತೇಷಾಂ ನ ತು ಕಶ್ಚಿದನ್ಯೋ**
**ವಾಯೋಃ ಪರಂ ಜನ್ಮನಿ ಹೇತುರಸ್ತಿ ||೮೬||**

ಅರ್ಥಃ— ಕೈಕಾಲುಗಳಲ್ಲಿ ಕೋಷ್ಠದಲ್ಲಿ ಅಥವಾ ಮರ್ಮದಲ್ಲಿ ಕುತ್ತಿಗೆಯ ಮೇಲಿನ ಅವಯವಗಳಲ್ಲಿ ಅಥವಾ ಇತರಾಂಗಗಳಲ್ಲಿ ಉಂಟಾಗುವ ರೋಗಗಳ ಉತ್ಪತ್ತಿಗೆ ವಾಯುವಿನ ಹೊರ್ತಾಗಿ ಬೇರೆ ಯಾವದೂ ಕಾರಣವಿಲ್ಲ(೮೬)

ವಿಟ್‌ಶ್ಲೇಷ್ಮಪಿತ್ತಾದಿಮಲಾಚಯಾನಾಂ
ವಿಕ್ಷೇಪಸಂಹಾರಕರಃ ಸ ಯಸ್ಮಾತ್ ।
ತಸ್ಯಾತಿವೃದ್ಧಸ್ಯ ಶಮಾಯ ನಾನ್ಯ-
ದ್ಬಸ್ತೇರ್ವಿನಾ ಭೇಷಜಮಸ್ತಿ ಕಿಂಚಿತ್ ॥೮೬॥

ಅರ್ಥಃ—ವಾಯುವು ಮಲ ಪಿತ್ತ ಕಫ ಮುಂತಾದ ಎಲ್ಲ ಮಲಸಮೂಹ ಗಳನ್ನು ಅತ್ತಿತ್ತ ಚೆಲ್ಲುವದು, ನಾಶವನ್ನು ಮಾಡುವದು. ಆದ್ದರಿಂದ ಅತಿ ಪ್ರಬಲವಾದ ಆ ವಾಯುವಿನ ಶಮನ ಮಾಡುವದಕ್ಕೆ ಬಸ್ತಿಯ ಹೊರತಾಗಿ ಬೇರೆ ಯಾವದೂ ಔಷಧವಿಲ್ಲ. (೮೬)

**ತಸ್ಮಾಚ್ಚಿಕಿತ್ಸಾರ್ಧ ಇತಿ ಪ್ರದಿಷ್ಟಃ ಕೃತ್ಸ್ನಾ ಚಿಕಿತ್ಸಾಽಪಿ ಚ ಬಸ್ತಿರೇಕೈಃ ।**
**ತಥಾ ನಿಜಾಗಂತುವಿಕಾರಕಾರಿರಕ್ತೌಷಧತ್ವೇನ ಸಿರಾವ್ಯಧೋಽಪಿ ॥೮೭॥**

ಅರ್ಥಃ— ಆದ್ದರಿಂದ (ವಾತದ ೮೦, ಪಿತ್ತದ ೪೦, ಕಫದ ೨೦ ಎಂದು ಒಟ್ಟು ೧೪೦ ವಿಕಾರಗಳಲ್ಲಿ ವಾತದ ೮೦ ವಿಕಾರಗಳನ್ನು ನಾಶಮಾಡುವದರಿಂದ) ಬಸ್ತಿಯು ಅರ್ಧ ಚಿಕಿತ್ಸೆಯೆಂದು ಕೆಲವರೂ, (ಕಫ ಪಿತ್ತಗಳ ವಿಕಾರಕ್ಕೂ ವಾತವೇ ಕಾರಣವಾಗಿರುವದರಿಂದ ಅದರ ನಾಶಕವಾದ ಬಸ್ತಿಯು) ಸಂಪೂರ್ಣ ಚಿಕಿತ್ಸೆಯೇ ಎಂದೂ ಕೆಲವರು ಹೇಳುವರು. ಇದರಂತೆ ನಿಜ ಮತ್ತು ಆಗಂತು ರೋಗಗಳನ್ನು ಉಂಟುಮಾಡುವ ರಕ್ತಕ್ಕೆ ಔಷಧವಾದ ಸಿರಾವೇಧಕ್ಕೂ (ಇಸಬು ಕುರುವು ಮುಂತಾದವುಗಳನ್ನು ನಾಶಮಾಡುವದರಿಂದ) ಅರ್ಧ ಚಿಕಿತ್ಸೆಯೆಂದೂ, (ಶೀತ ಉಷ್ಣ ಸ್ನಿಗ್ಧ ರೂಕ್ಷ ಚಿಕಿತ್ಸೆಗಳಿಂದ ಸಾಧ್ಯವಾಗದ ರೋಗಗಳನ್ನು ನಾಶಮಾಡುವದರಿಂದ) ಪೂರ್ಣಚಿಕಿತ್ಸೆಯೆಂದೂ ಹೇಳುವರು. (೮೭)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ**
**ಬಸ್ತಿವಿಧಿರ್ನಾಮೈಕೋನವಿಂಶತಿತಮೋಽಧ್ಯಾಯಃ ಸಮಾಪ್ತಃ ।**

ಇತಿ ಶ್ರೀಮದಾದ್ಯಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗಹೃದಯದ ಸೂತ್ರಸ್ಥಾನದಲ್ಲಿಯ 'ಬಸ್ತಿವಿಧಿ' ಎಂಬ ೧೯ನೆಯ ಅಧ್ಯಾಯದ ಟೀಕೆಯು ಮುಗಿದುದು.

# ೨೦ನೆಯ ಅಧ್ಯಾಯವು

ಪಂಚ ಕರ್ಮಗಳಲ್ಲಿ ವಮನ, ವಿರೇಚನ, ನಿರೂಹ, ಅನ್ವಾಸನಗಳೆಂಬ ನಾಲ್ಕು ಕರ್ಮಗಳನ್ನು ಹೇಳಿ ಇನ್ನು ಮೇಲೆ ಐದನೆಯ ನಸ್ಯ ಕರ್ಮವನ್ನು ಹೇಳುತ್ತಾರೆ.

**ಅಥಾತೋ ನಸ್ಯ*ವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ |**

ಅರ್ಥ:— ಇನ್ನು ಮೇಲೆ (ಕಡೆಯದಾದ) ನಸ್ಯವಿಧಿಯ ಅಧ್ಯಾಯ ವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಅರ್ಥ:— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು

**ಊರ್ಧ್ವಜತ್ರುವಿಕಾರೇಷು ವಿಶೇಷಾನ್ನಸ್ಯಮಿಷ್ಯತೇ ||**
**ನಾಸಾ ಹಿ ಶಿರಸೋ ದ್ವಾರಂ ತೇನ ತದ್ವ್ಯಾಪ್ಯ ಹಂತಿ ತಾನ್ ||೧||**

ಅರ್ಥ:— ಜತ್ರು (ಎದೆ-ಹೆಗಲುಗಳ ಸಂಧಿ) ವಿನ ಮೇಲಿನ ವಿಕಾರ ಗಳಲ್ಲಿ ವಿಶೇಷತಃ ನಸ್ಯವನ್ನು ಉಪಯೋಗಿಸಬೇಕು. ಯಾಕೆಂದರೆ ಮೂಗು ಶಿರಸ್ಸಿನ ದ್ವಾರವು. ಆದ್ದರಿಂದ ಅದು ತಲೆಯಲ್ಲಿ ಪಸರಿಸಿ ಅಲ್ಲಿಯ ರೋಗ ಗಳನ್ನು ನಾಶ ಮಾಡುತ್ತದೆ.

ಟಿಪ್ಪಣಿ:— 'ವಿಶೇಷಾತ್' ಎಂಬ ಪದವನ್ನು ಹೇಮಾದ್ರಿಯು ಹಿಂದಿನ ಪದಕ್ಕೆ ಅನ್ವಯಮಾಡಿ ಉಳಿದ ರೋಗಗಳಲ್ಲಿಯೂ ನಸ್ಯವನ್ನು ಉಪಯೋಗಿಸ ಬಹುದು, ಎಂದು ಅರ್ಥ ಹೇಳುವನು. ಅರುಣದತ್ತನು ಮುಂದಿನ ಪದಕ್ಕೆ ಅನ್ವಯ ಮಾಡಿ ಈ ರೋಗಗಳಿಗೆ ನಸ್ಯದಂತೆ ಬೇರೆ ವಮನ ವಿರೇಚನ ಮುಂತಾದವನ್ನು ಮಾಡಬಹುದೆಂಬ ಅರ್ಥವನ್ನು ಹೇಳುವನು. " ದೇಹಲೀ–ದೀಪ–ನ್ಯಾಯ "ದಿಂದ ಎರಡೂ ಅರ್ಥಗಳು ಸಂಭವಿಸುತ್ತವೆ. ಎರಡೂ ಉಪಯುಕ್ತವಾಗಿವೆ. (೧)

---

* ನಸ್ಯವಿಧಿಯು ಚರಕದ ಸಿಂ. ೧–೨–೯ ನೇ, ಸುಶ್ರುತದ ಚಿಂ. ೪೦ ನೇ, ಅಷ್ಟಾಂಗ ಸಂಗ್ರಹದ ಸೂ. ೨೯ ನೇ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ.

**ವಿರೇಚನಂ ಬೃಂಹಣಂ ಚ ಶಮನಂ ಚ ತ್ರಿಧಾಽಪಿ ತತ್ ।**

ಅರ್ಥ:— ನಸ್ಯವಾದರೂ ವಿರೇಚನ, ಬೃಂಹಣ, ಶಮನವೆಂದು ಮೂರು ವಿಧವು. (೧)

**ವಿರೇಚನಂ ಶಿರಃಶೂಲಜಾಡ್ಯಸ್ಯಂದಗಲಾಮಯೇ ॥೨॥**

**ಶೋಫಗಂಡಕೃಮಿಗ್ರಂಥಿಕುಷ್ಠಾಽಪಸ್ಮಾರಪೀನಸೇ ।**

ಅರ್ಥ:— ವಿರೇಚನ ನಸ್ಯವು ತಲೆಶೂಲಿ ತಲೆ-ಭಾರ ಕಣ್ಣು-ಬೇನೆ ಕುತ್ತಿಗೆ-ಬೇನೆ ಬಾವು ಗಲಗಂಡ ಕೃಮಿ ಗ್ರಂಥಿ ಕುಷ್ಠ ಅಪಸ್ಮಾರ ಪೀನಸ ರೋಗಗಳಲ್ಲಿ ಉಪಯುಕ್ತವಾಗಿರುವದು. (೨)

**ಬೃಂಹಣಂ ವಾತಜೇ ಶೂಲೇ ಸೂರ್ಯಾವರ್ತೇ ಸ್ವರಕ್ಷಯೇ ॥೩॥**

**ನಾಸಾಸ್ಯಶೋಷೇ ವಾಕ್ಸಂಗೇ ಕೃಚ್ಛ್ರಬೋಧೇಽವಬಾಹುಕೇ ।**

ಅರ್ಥ:— ಬೃಂಹಣ ನಸ್ಯವು ವಾತಜನ್ಯಶೂಲ, ಸೂರ್ಯಾವರ್ತ, ಧ್ವನಿಬೀಳೋಣ, ಮೂಗು ಬಾಯಿ ಒಣಗೋಣ, ಶಬ್ದೋಚ್ಚಾರ ನೆಟ್ಟಗಾಗದಿರೋಣ, ಕಣ್ಣು ತೆರೆಯಲಿಕ್ಕೆ ತ್ರಾಸವಾಗೋಣ (ನೇತ್ರರೋಗ), ಅವಬಾಹುಕ (ವಾತರೋಗ ವಿಶೇಷ) ರೋಗಗಳಲ್ಲಿ ಉಪಯುಕ್ತವಾಗಿರುವದು. (೩)

**ಶಮನಂ ನೀಲಿಕಾವ್ಯಂಗಕೇಶದೋಷಾಕ್ಷಿರಾಜಿಷು ॥೪॥**

ಅರ್ಥ:— ಶಮನ ನಸ್ಯವು ನೀಲಿಕಾ (ಕ್ಷುದ್ರರೋಗ) ವ್ಯಂಗ (ಕ್ಷುದ್ರರೋಗ) ಕೂದಲು ಉದರೋಣ ಅಕ್ಷಿರಾಜಿ (ನೇತ್ರರೋಗ)—ಇವುಗಳಲ್ಲಿ ಉಪಯೋಗವಾಗುವದು. (೪)

**ಯಥಾಸ್ವಂ ಯೌಗಿಕೈಃ ಸ್ನೇಹೈರ್ಯಥಾಸ್ವಂ ಚ ಪ್ರಸಾಧಿತೈಃ ।**
**ಕಲ್ಕಕ್ವಾಥಾದಿಭಿಶ್ಚಾದ್ಯಂ ಮಧುಷಟ್ವಾಸವೈರಪಿ ॥೫॥**

ಅರ್ಥ:— ವಿರೇಚನ ನಸ್ಯವು ಆಯಾ ರೋಗಗಳಿಗೆ ಯೋಗ್ಯ ಔಷಧಗಳಿಂದ ಸಂಸ್ಕೃತವಾದ್ಯಯೋಗ್ಯ ಸ್ನೇಹಗಳಿಂದಲೂ ಕಲ್ಕಕಷಾಯ

ಮುಂತಾದವುಗಳಿಂದಲೂ ಮತ್ತು ಜೇನತುಪ್ಪ ಉಪ್ಪು (ಸೈಂಧವ) ಆಸವ ಗಳಿಂದಲೂ ಆಗುತ್ತವೆ.

ಟಿಪ್ಪಣೀ:— ಸಂಗ್ರಹದಲ್ಲಿ-ಅಂಜುಬುರುಕ ಸ್ತ್ರೀ ಕೃಶ ಸುಕುಮಾರ ಜನರಲ್ಲಿ ಸ್ನೇಹವನ್ನೂ, ಗುಲ್ಮರೋಗ ಸನ್ನಿಪಾತ-ಜ್ವರ ಅತಿನಿದ್ರೆ ಮನೋವಿಕಾರ ಕ್ರಿಮಿ ಶಿರೋ-ರೋಗ ಅಕ್ಷಿಸ್ಪಂದನ ತಿಮಿರ ಕೃಚ್ಛ್ರ ವಿಷ ಅಭಿಷ್ಯಂದ ಸರ್ಪದಂಶ ಮೂರ್ಛೆಗಳಲ್ಲಿ ಉಳಿದವುಗಳನ್ನು ಕೊಡಬೇಕು. ಅದರಲ್ಲಿಯೂ ದೋಷಗಳು ಹೆಚ್ಚಾಗಿದ್ದರೆ ಅಥವಾ ಶೀಘ್ರಕಾರಿಯಾಗಿದ್ದರೆ ಚೂರ್ಣವನ್ನು ಉಪಯೋಗಿಸಬೇಕೆಂದು ಹೇಳಿದೆ. ಯಾಕೆಂದರೆ ಚೂರ್ಣವು ಮೂಗಿನಲ್ಲಿ ತೀವ್ರವಾಗಿ ಆವೇಗವನ್ನುಂಟುಮಾಡುವದು. (೫)

**ಬೃಂಹಣಂ ಧನ್ವಮಾಂಸೋತ್ಥರಸಾಸೃಕ್ ಖಪುರೈರಪಿ ॥**

ಅರ್ಥ:— ಬೃಂಹಣ ನಸ್ಯವು ಜಾಂಗಲಮಾಂಸರಸ ರಕ್ತ ಮತ್ತು ಬೂರಲಅಂಟು ಮುಂತಾದವುಗಳಿಂದಲೂ ಅವುಗಳಿಂದ ಸಿದ್ಧ ಮಾಡಿದ ಅತೀಕ್ಷ್ಣ ಸ್ನೇಹಗಳಿಂದಲೂ ಆಗುತ್ತದೆ. (೫॥)

**ಶಮನಂ ಯೋಜಯೇತ್ಪೂರ್ವೈಃ ಕ್ಷೀರೇಣ ಸಲಿಲೇನ ವಾ ॥೬॥**

ಅರ್ಥ:— ಶಮನ ನಸ್ಯವು ಮೇಲೆ ಹೇಳಿದ ಅತೀಕ್ಷ್ಣ ಸ್ನೇಹಾದಿಗಳಿಂದಲೂ ಹಾಲಿನಿಂದಲೂ ನೀರಿನಿಂದಲೂ ಆಗುತ್ತದೆ.

ಟಿಪ್ಪಣೀ:— ಸುಶ್ರುತಾಚಾರ್ಯರು 'ಶಿರಸ್ಸು ವಾತಪೀಡಿತವಾಗಿ ಉಂಟಾದ ಹಲ್ಲು ಕೊದಲು ಉದರೋಣ, ದಾರುಣ, ಕರ್ಣಶೂಲ, ಕರ್ಣದಲ್ಲಿ ಧ್ವನಿ, ತಿಮಿರ, ಸ್ವರ ಭಂಗ, ನಾಸಾರೋಗ, ಬಾಯಿ ಒಣಗೋಣ, ಅಕಾಲದಲ್ಲಿ ತೊಗಲು ನಿರಿಗೆಗಟ್ಟೋಣ, ತಲೆ ಬೆಳ್ಳಗಾಗೋಣ, ಕೈಚ್ಚೋನ್ಮೀಲನ ಮುಂತಾದವುಗಳಲ್ಲಿಯೂ ಮತ್ತು ಇತರ ವಾತಪೈತ್ತಿಕ ಮುಖರೋಗಗಳಲ್ಲಿಯೂ, ವಾತ ಪಿತ್ತನಾಶಕ ದ್ರವ್ಯದಿಂದ ಸಿದ್ಧವಾದ ಸ್ನೇಹದಿಂದ ನಸ್ಯ ಕೊಡಬೇಕು. ಕಫಯುಕ್ತವಾದ ತಾಲು-ಕಂಠ-ಶಿರೋರೋಗ ಗಳಲ್ಲಿಯೂ, ಅತಿನಿದ್ರೆ ತಲೆ-ಜಡವಾಗೋಣ ತಲೆಶೂಲಿ ಪೀನಸ ಅರ್ಧಾವಭೇದಕ ಕ್ರಿಮಿ ನೆಗಡಿ ಅಪಸ್ಮಾರ ವಾಸ-ಬರದಿರೋಣ ಮುಂತಾದ ವಿಕಾರಗಳಲ್ಲಿಯೂ, ಊರ್ಧ್ವಜತ್ರುಗತವಾದ ಇತರ ಕಫದ ವಿಕಾರಗಳಲ್ಲಿಯೂ ಶಿರೋವಿರೇಚನದ್ರವ್ಯಗಳಿಂದ ಅಥವಾ ಅದರಿಂದ ಸಿದ್ಧವಾದ ಸ್ನೇಹಗಳಿಂದ ಶಿರೋವಿರೇಚನ ನಸ್ಯವನ್ನು ಕೊಡಬೇಕು ಅಭಿಷ್ಯಂದ ಸರ್ಪದಂಶ ಮೂರ್ಛೆಗಳಲ್ಲಿ ಅವಪೀಡವನ್ನು ಕೊಡಬೇಕು. ಮನೋವಿಕಾರ ಕ್ರಿಮಿ ವಿಷಪ್ರಯೋಗಗಳಲ್ಲಿ ವಿರೇಚನ ದ್ರವ್ಯಗಳ ಚೂರ್ಣಮಾಡಿ ಊದಬೇಕು. ಕ್ಷೀಣರಾದವರ ರಕ್ತಪಿತ್ತದಲ್ಲಿ ಸಕ್ಕರೆ ಕಬ್ಬಿನರಸ ಹಾಲು ತುಪ್ಪ ಮಾಂಸದ ರಸಗಳಿಂದ ಕೊಡಬೇಕು. ಕೃಶ ದುರ್ಬಲ ಅಂಜುಬುರುಕ ಸುಕುಮಾರ ಜನರಿಗೂ ಮತ್ತು ಹೆಂಗಸರಿಗೂ ಶಿರಃಶೋಧನೆಗಾಗಿ ಸ್ನೇಹಗಳನ್ನೂ ಕಲ್ಕಗಳನ್ನೂ ಕೊಡಬೇಕು' ಎಂದು ಹೇಳಿರುವರು. (೬)

ಬೇರೆ ನಸ್ಯಭೇದಗಳನ್ನು ಹೇಳುತ್ತಾರೆ.

**ಮರ್ಶಶ್ಚ ಪ್ರತಿಮರ್ಶಶ್ಚ ದ್ವಿಧಾ ಸ್ನೇಹೋತ್ರ ಮಾತ್ರಯಾ ।**
**ಕಲ್ಕಾದ್ಯೈರವಪೀಡಸ್ತು ತೀಕ್ಷ್ಣೈರ್ಮೂರ್ಧವಿರೇಚನಃ ॥೬॥**

ಅರ್ಥ:— ಪ್ರಮಾಣದ ಹೆಚ್ಚು ಕಡಿಮೆಯಿಂದ ಸ್ನೇಹದಲ್ಲಿ ಮರ್ಶ (ಬಹಳ ಸ್ನೇಹವುಳ್ಳದ್ದು), ಪ್ರತಿಮರ್ಶ (ಸ್ವಲ್ಪ ಸ್ನೇಹವುಳ್ಳದ್ದು), ಎಂಬ ಎರಡು ಭೇದಗಳು. ಪುಡಿಮಾಡಿದ ಕಲ್ಕಾದಿಗಳಿಂದ ಕೊಡುವ ನಸ್ಯವು ಅವಪೀಡವೆಂದೂ, ತೀಕ್ಷ್ಣಗಳಿಂದ ಕೊಡುವ ನಸ್ಯವು ಶಿರೋವಿರೇಚನವೆಂದೂ ಕರೆಯಲ್ಪಡುತ್ತವೆ. (೬)

**ಧ್ಮಾನಂ ವಿರೇಚನಶ್ಚೂರ್ಣೋ.........................**

ಅರ್ಥ:— ವಿರೇಚನ ಚೂರ್ಣದಿಂದ ಕೊಡಲ್ಪಡುವ ನಸ್ಯವು ಧ್ಮಾನವೆಂದು ಕರೆಯಲ್ಪಡುತ್ತದೆ. (೭)

**.ಯುಂಜ್ಯಾತ್ತಂ ಮುಖವಾಯುನಾ ॥**
**ಷಡಂಗುಲದ್ವಿಮುಖಯಾ ನಾಡ್ಯಾ ಭೇಷಜಗರ್ಭಯಾ ॥೮॥**

**ಸ ಹಿ ಭೂರಿತರಂ ದೋಷಂ ಚೂರ್ಣತ್ವಾದಪಕರ್ಷತಿ ॥**

ಅರ್ಥ:— ಆರು ಬೆರಳುದ್ದವಾದ ಎರಡೂ ಕಡೆಗೆ ಬಾಯಿಯುಳ್ಳ ಕೊಳವಿಯಲ್ಲಿ ಔಷಧವನ್ನು ಹಾಕಿ ಉಸುರಿನಿಂದ ಊದಿ ಮೂಗಿನಲ್ಲಿ ಅದನ್ನು ಕೊಡಬೇಕು. ಅದು ಪುಡಿ ಇರೋಣದರಿಂದ ಬಹಳ ದೋಷವನ್ನು ಕಳೆಯುತ್ತದೆ. (೮)

**ಪ್ರದೇಶಿನ್ಯಂಗುಲೀಪರ್ವದ್ವಯಾನ್ಮಗ್ನಸಮುದ್ಧೃತಾತ್ ॥೯॥**

**ಯಾವತ್ಪತತ್ಯಸೌ ಬಿಂದುರ್ದಶಾಷ್ಟೌ ಷಟ್ ಕ್ರಮೇಣ ತೇ ॥**
**ಮರ್ಶಸ್ಯೋತ್ಕೃಷ್ಟಮಧ್ಯೋನಾ ಮಾತ್ರಾಸ್ತಾ ಏವ ಚ ಕ್ರಮಾತ್ ॥೧೦॥**

**ಬಿಂದುದ್ವಯೋನಾಃ ಕಲ್ಕಾದೇಃ.....................**

ಅರ್ಥಃ— (ದ್ರವದಲ್ಲಿ) ತರ್ಜನೀ ಬೆರಳಿನ ಎರಡು ಖಂಡಿಕೆಗಳನ್ನು ಮುಳುಗಿಸಿ ಎತ್ತಲು ಬೀಳುವಷ್ಟು ದ್ರವವು ಬಿಂದುವೆಂದು ಕರೆಯಲ್ಪಡುತ್ತದೆ. ಇಂಥ ಹತ್ತು, ಎಂಟು, ಆರು ಬಿಂದುಗಳು ಕ್ರಮವಾಗಿ ಮರ್ಶದ ಉತ್ಕೃಷ್ಟ, ಮಧ್ಯಮ, ಕನಿಷ್ಠ ಪ್ರಮಾಣಗಳು. ಇವುಗಳಲ್ಲಿ ಎರಡು ಕಡಿಮೆಮಾಡಿದರೆ ಆಗುವ (ಎಂಟು, ಆರು, ನಾಲ್ಕು) ಬಿಂದುಗಳು ಅವಪೀಡ ಶಿರೋವಿರೇಚನಗಳ ಕ್ರಮವಾಗಿ ಉತ್ತಮ ಮಧ್ಯಮ, ಕನಿಷ್ಠ ಮಾತ್ರೆಗಳು.

ಟಿಪ್ಪಣಿಃ— ದ್ರವದಲ್ಲಿ ಎದ್ದಿ ತೆಗೆದ ಬೆರಳಿನಿಂದ ಬಿದ್ದ ಮೊದಲನೇ ಹನಿಯಷ್ಟೇ ಬಿಂದುವು ಅಲ್ಲ. ಆದರೆ ಅದರಿಂದ ಎಲ್ಲ ಬಿದ್ದ ಮೇಲೆ ಆಗುವ ಪರಿಮಾಣವು ಬಿಂದುವು. (ಹೇಮಾದ್ರಿ) (೧೦।)

……… ……………ಯೋಜಯೇನ್ನ ತು ನಾವನಮ್ ॥
ತೋಯಮದ್ಯಗರಸ್ನೇಹಪೀತಾನಾಂ ಪಾತುಮಿಚ್ಛತಾಮ್ ॥೧೧॥

ಭುಕ್ತಭಕ್ತಶಿರಃಸ್ನಾತಸ್ನಾತುಕಾಮಸ್ರುತಾಸೃಜಾಮ್ ॥
ನವಪೀನಸವೇಗಾರ್ತಸೂತಿಕಾಶ್ವಾಸಕಾಸಿನಾಮ್ ॥೧೨॥

ಶುದ್ಧಾನಾಂ ದತ್ತಬಸ್ತೀನಾಂ ತಥಾನಾರ್ತವದುರ್ದಿನೇ ॥
ಅನ್ಯತ್ರಾತ್ಯಯಿಕಾದ್ವ್ಯಾಧೇಃ……………… … ………

ಅರ್ಥಃ— ನೀರು ಮದ್ಯ ಕೃತ್ರಿಮ-ವಿಷ ಸ್ನೇಹ ಕುಡಿದವರಿಗೂ ಕುಡಿಯಲಿರುವವರಿಗೂ, ಊಟಮಾಡಿದ್ದ, ತಲೆಯ ಮೇಲೆ ಸ್ನಾನಮಾಡಿದ್ದ, ಅಥವಾ ಸ್ನಾನಮಾಡಲಿರುವ, ರಕ್ತಸ್ರಾವ ಮಾಡಿಕೊಂಡ, ಆದೇ ನೆಗಡಿ ಬಂದ, ವೇಗಪೀಡಿತ, ಬಾಣಂತಿ, ಕೆಮ್ಮು ದಮ್ಮುಗಳುಳ್ಳವರಿಗೂ ವಮನ ವಿರೇಚನ ಬಸ್ತಿ ತಕ್ಕೊಂಡವರಿಗೂ ಮತ್ತು ಅಕಾಲದಲ್ಲಿ ಮೋಡ ಬಂದಾಗ್ಗಿಯೂ ನಸ್ಯ ಕೊಡಬಾರದು. ಆದರೆ ಭಯಂಕರ ರೋಗವಿದ್ದರೆ ಮಾತ್ರ ನಸ್ಯವನ್ನು ಕೊಡಬೇಕು.

ಟಿಪ್ಪಣಿ:— ನೀರು ಮದ್ಯ ಮುಂತಾದವುಗಳನ್ನು ಕುಡಿದವರಿಗೂ ಕುಡಿಯಲಿರುವವರಿಗೂ ನಸ್ಯವನ್ನು ಕೊಟ್ಟರೆ ಮೂಗು ಬಾಯಿ ಸೋರುವದು, ತಲೆ ನೋಯುವದು. ಊಟ ಮಾಡಿದವನಿಗೆ ಕೊಟ್ಟರೆ ಮೇಲಿನ ಸ್ರೋತಸ್ಸುಗಳನ್ನು ಆವರಿಸಿ ವಾಂತಿ ಶ್ವಾಸ ಕಾಸ ನೆಗಡಿಗಳನ್ನೂ, ತಲೆಯ ಮೇಲೆ ಸ್ನಾನ ಮಾಡಿದವನಿಗೆ ತಲೆ

ಕಣ್ಣು ಕಿವಿಗಳಲ್ಲಿ ಶೂಲೆ ಕರ್ಣರೋಗ ಪೀನಸ ಪಕ್ಷಘಾತಗಳಲ್ಲಿ ರುಚಿ ಅರ್ದಿತ ಶಿರಃಕಂಪಗಳನ್ನೂ, ಸ್ನಾನ ಮಾಡಿದವನಿಗೆ ಶೀತಪ್ರತಿಶ್ಯಾಯ, ಅರುಚಿ, ನೆಗಡಿ ಗಳನ್ನೂ, ರಕ್ತಸ್ರಾವವಾದವನಿಗೆ ಕೃಶತ್ವ ಅರುಚಿ ಅಗ್ನಿಮಾಂದ್ಯಗಳನ್ನೂ, ಅದೇ ನೆಗಡಿ ಬಂದವನಿಗೆ ಸ್ರೋತಸ್ಸುಗಳ ಪ್ರತಿಬಂಧದಿಂದ ಮತ್ತೂ ನೆಗಡಿ ಕೂಡಲು ಉಪರೋಧ ಕೃಮಿ ಕಂಡೂ ಮುಂತಾದವುಗಳನ್ನೂ, ವೇಗಧಾರಣ ಮಾಡಿದವನಿಗೆ ವೇಗಧಾರಣಜನ್ಯ ರೋಗಗಳನ್ನೂ, ಬಾಣಂತಿಗೆ ರಕ್ತಸ್ರಾವಜನ್ಯ ರೋಗಗಳನ್ನೂ, ಕೆಮ್ಮು ದಮ್ಮು ನೆಗಡಿಯುಳ್ಳವನಿಗೆ ಆಯಾ ರೋಗಗಳ ವೃದ್ಧಿಯನ್ನೂ, ವಮನ ರೇಚನ ಬಸ್ತಿಗಳನ್ನು ತೆಗೆದುಕೊಂಡವರ ಸ್ರೋತಸ್ಸುಗಳು ತೆರವಾದ್ದರಿಂದ ಕೆಮ್ಮು ದಮ್ಮು ಮುಂತಾದವುಗಳನ್ನೂ ಉಂಟುಮಾಡುವದು. ಅಕಾಲದಲ್ಲಿ ನಸ್ಯ ಒದಾಗ್ಗೆ ಕೊಟ್ಟರೆ ಒಮ್ಮೆಲೆ ಶೈತ್ಯ ಉಂಟಾಗುವದರಿಂದ ತಲೆಶೂಲೆ, ನಡುಗು, ಮಾಂದ್ಯ, ಕಾಲು ನೇತ್ರಗಳಲ್ಲಿ ಕಂಡೂ ಮತ್ತು ಪಾಕ ಮನ್ಯಾಸ್ತಂಭ ಕಂಠರೋಗ ನೆಗಡಿ ಮುಂತಾ ದವುಗಳನ್ನು ಉಂಟುಮಾಡುವವು. ಈ ದೋಷಗಳು ಉಂಟಾಗಲು ಆಯಾ ರೋಗ ಸ್ಥಾನವನ್ನು ವಿಚಾರಿಸಿ ಸ್ನೇಹ, ಸ್ವೇದ, ಶಿರೋವಿರೇಚನ, ಅವಪೀಡ, ಧೂಮ, ಗಂಡೂಷ ಮುಂತಾದವುಗಳನ್ನು ಮಾಡಬೇಕು. ವಿಶೇಷ ಚಿಕಿತ್ಸೆಯನ್ನು ಸಂಗ್ರಹ ದಲ್ಲಿ ನೋಡಬೇಕು. (೧೨॥)

................ಅಥ ನಸ್ಯಂ ಪ್ರಯೋಜಯೇತ್ ॥೧೩॥
ಪ್ರಾತಃ ಶ್ಲೇಷ್ಮಣಿ, ಮಧ್ಯಾಹ್ನೇ ಪಿತ್ತೇ, ಸಾಯಂನಿಶೋಶ್ಚಲೇ ॥

ಅರ್ಥಃ— ಕಫ ರೋಗದಲ್ಲಿ ಮುಂಜಾನೆ, ಪಿತ್ತ ರೋಗದಲ್ಲಿ ಮಧ್ಯಾಹ್ನಕ್ಕೆ, ವಾತರೋಗದಲ್ಲಿ ಸಂಜೆಗೆ ಮತ್ತು ರಾತ್ರಿಯಲ್ಲಿ ನಸ್ಯವನ್ನು ಕೊಡಬೇಕು.

ಟಿಪ್ಪಣಿ:— ಸಂಗ್ರಹದಲ್ಲಿ ಲಾಲಾಸ್ರಾವ, ಸುಪ್ತಿ, ಪ್ರಲಾಪ, ಹಲ್ಲು ಕಟಕಟಿ ಮಾಡೋಣ, ಕೃಚ್ಛ್ರೋನ್ಮೀಲ, ಬಾಯಿ ಸಾರೋಣ, ಕರ್ಣನಾದ, ತೃಷ್ಣಾ, ಅರ್ದಿತ, ಶಿರೋರೋಗ, ಶ್ವಾಸ, ಕಾಸ, ಜಾಗರಣೆಗಳಲ್ಲಿ ರಾತ್ರಿ ಕೊಡಬೇಕೆಂದು ಹೇಳಿದೆ. (೧೩॥)

ಸ್ವಸ್ಥವೃತ್ತೇ ತು ಪೂರ್ವಾಹ್ಣೇ ಶರತ್ಕಾಲವಸಂತಯೋಃ ॥೧೪॥
ಶೀತೇ ಮಧ್ಯಂದಿನೇ, ಗ್ರೀಷ್ಮೇ ಸಾಯಂ, ವರ್ಷಾಸು ಸಾತಪೇ ॥

ಅರ್ಥ:— ನಿರೋಗಿಗೆ ಶರತ್ ವಸಂತ ಋತುಗಳಿದ್ದರೆ ಪೂರ್ವಾಹ್ಣ ದಲ್ಲಿ, ಹೇಮಂತ ಶಿಶಿರ ಋತುಗಳಿದ್ದರೆ ಮಧ್ಯಾಹ್ನದಲ್ಲಿ, ಗ್ರೀಷ್ಮ ಋತು

ವಿದ್ದರೆ ಸಾಯಂಕಾಲದಲ್ಲಿ, ವರ್ಷಾಋತುವಿನಲ್ಲಿ ಬಿಸಿಲು ಇದ್ದಾಗ್ಗೆ ನಸ್ಯ ವನು ಕೊಡಬೇಕು. (೧೪)

**ವಾತಾಭಿಭೂತೇ ಶಿರಸಿ ಹಿಧ್ಮಾಯಾಮಪತಾನಕೇ** ॥೧೫॥
**ಮನ್ಯಾಸ್ತಂಭೇ ಸ್ವರಭ್ರಂಶೇ ಸಾಯಂಪ್ರಾತರ್ದಿನೇ ದಿನೇ** ॥

ಅರ್ಥಃ— ವಾತದ ಶಿರೋರೋಗ, ಬಿಕ್ಕು, ಧನುರ್ವಾತ ಮನ್ಯಾಸ್ತಂಭ, ಸ್ವರಭ್ರಂಶಗಳಲ್ಲಿ ದಿನಾಲು ಮುಂಜಾನೆ ಮತ್ತು ಸಂಜೆಗೆ ನಸ್ಯವನ್ನು ಕೊಡಬೇಕು. (೧೫)

**ಏಕಾಹಾಂತರಮನ್ಯತ್ರ ಸಪ್ತಾಹಂ ಚ ತದಾಚರೇತ್** ॥೧೬॥

ಅರ್ಥಃ— ಇತರ ರೋಗಗಳಲ್ಲಿ ಒಂದು ದಿನ ಬಿಟ್ಟು ಒಂದು ದಿನ ಕೊಡಬೇಕು. ನಸ್ಯವನ್ನು ಏಳು ದಿವಸಗಳವರೆಗೆ ಮಾತ್ರ ಕೊಡಬೇಕು. (೧೬)

ನಸ್ಯವಿಧಿಯನ್ನು ಹೇಳುತ್ತಾರೆ.

**ಸ್ನಿಗ್ಧಸ್ವಿನ್ನೋತ್ತಮಾಂಗಸ್ಯ ಪ್ರಾಕ್ಕೃತಾವಶ್ಯಕಸ್ಯ ಚ** ॥
**ನಿವಾತಶಯನಸ್ಥಸ್ಯ ಜತ್ರೂರ್ಧ್ವಂ ಸ್ವೇದಯೇತ್ ಪುನಃ** ॥೧೭॥

**ಅಥೋತ್ತಾನರ್ಜುದೇಹಸ್ಯ ಪಾಣಿಪಾದೇ ಪ್ರಸಾರಿತೇ** ॥
**ಕಿಂಚಿದುನ್ನತಪಾದಸ್ಯ ಕಿಂಚಿನ್ಮೂರ್ಧನಿ ನಾಮಿತೇ** ॥೧೮॥

**ನಾಸಾಪುಟಂ ಪಿಧಾಯೈಕಂ ಪರ್ಯಾಯೇಣ ನಿಷೇಚಯೇತ್** ॥
**ಉಷ್ಣಾಂಬುತಪ್ತಂ ಭೈಷಜ್ಯಂ ಪ್ರನಾಡ್ಯಾ ಪಿಚುನಾಽಥವಾ** ॥೧೯॥

ಅರ್ಥಃ— ಮೊದಲು ಮಲಮೂತ್ರ ವಿಸರ್ಜನ ಮಾಡಿಸಿ ರೋಗಿಯ ತಲೆಗೆ ಸ್ನೇಹ ಸ್ವೇದ ಕೊಟ್ಟು ಗಾಳಿಯಿಲ್ಲದ ಸ್ಥಳದಲ್ಲಿ ಹಾಸಿಗೆಯ ಮೇಲೆ ಕೂಡಿಸಿ ಪುನಃ ಹೆಗಲು ಕುತ್ತಿಗೆಯ ಸಂದಿಯ ಮೇಲ್ಭಾಗಕ್ಕೆ ಸ್ವೇದ ಮಾಡಬೇಕು. ಆಮೇಲೆ ಅಂಗಾತ ಸರಳ ಮಲಗಿಸಿ ಕೈಕಾಲು ಚಾಚಿಸಿ ಕಾಲನ್ನು ಸ್ವಲ್ಪ ಎತ್ತರಿಸಿ ತಲೆಯನ್ನು ಸ್ವಲ್ಪಬಗ್ಗಿಸಿ ಒಂದು ಮೂಗಿನ ಹೊಳ್ಳೆಯನ್ನು ಮುಚ್ಚಿ ಬಿಸಿ ನೀರಿನಿಂದ ಕಾದ ಔಷಧವನ್ನು ಕೊಳವೆಯಿಂದ ಅಥವಾ ಪಿಚು

ಸ್ನೇಹಂ ವಿರೇಚನಸ್ಯಾಂತೇ ದದ್ಯಾದ್ದೋಷಾದ್ಯಪೇಕ್ಷಯಾ ॥

ಅರ್ಥಃ— ವಿರೇಚನ ನಸ್ಯದ ನಂತರ ದೋಷಗಳ ವಿಚಾರಮಾಡಿ ಅದಕ್ಕೆ ತಕ್ಕ ಸ್ನೇಹನಸ್ಯವನ್ನು ಕೊಡಬೇಕು. (೨೧॥)

ನಸ್ಯಾಂತೇ ವಾಕ್ಶತಂ ತಿಷ್ಠೇದುತ್ತಾನಃ..............

ಅರ್ಥಃ— ನಸ್ಯ ಕೊಟ್ಟಮೇಲೆ ೨೦೦ ಮಾತ್ರಾಕಾಲದಷ್ಟು ಅಂಗಾತ ಹಾಗೇ ಮಲಗಬೇಕು. (೨೧॥)

.................................ಧಾರಯೇತ್ತತಃ ॥೨೨॥
ಧೂಮಂ ಪೀತ್ವಾ ಕವೋಷ್ಣಾಂಬುಕವಲಾನ್ ಕಂಠಶುದ್ಧಯೇ ॥

ಅರ್ಥಃ— ಆ ಮೇಲೆ ಧೂಮಪಾನ ಮಾಡಿ ಕಂಠಶುದ್ಧಿಯು ಸಲುವಾಗಿ ಬೆಚ್ಚಗಿನ ನೀರಿನ ಕವಲಗಳನ್ನು ಹಿಡಿಯುಬೇಕು. (೨೨॥)

ಸ್ನೇಹನ ನಸ್ಯದ ಸಮ್ಯಗ್ಯೋಗವನ್ನು ಹೇಳುತ್ತಾರೆ.

ಸಮ್ಯಕ್‌ಸ್ನಿಗ್ಧೇ ಸುಖೋಚ್ಛ್ವಾಸಸ್ವಪ್ನಬೋಧಾಕ್ಷಪಾಟವಮ್ ॥೨೩॥

ಅರ್ಥಃ— ತಲೆಯು ಸರಿಯಾಗಿ ಸ್ನಿಗ್ಧವಾಗಲು ಉಚ್ಛ್ವಾಸ ನಿದ್ರೆ ಎಚ್ಚರಿಕೆ ಇಂದ್ರಿಯಗಳಲ್ಲಿ ಪಟುತ್ವ-ಇವು ಚನ್ನಾಗಿ ಆಗುವವು. (೨೩)

ಸ್ನೇಹನ ನಸ್ಯದ ಹೀನಯೋಗವನ್ನು ಹೇಳುತ್ತಾರೆ.

ರೂಕ್ಷೇಽಕ್ಷಿಸ್ತಬ್ಧತಾ ಶೋಷೋ ನಾಸಾಸ್ಯೇ ಮೂರ್ಧಶೂನ್ಯತಾ ॥

ಅರ್ಥಃ— ತಲೆಯು ರುಕ್ಷ(ಹೀನಯೋಗ)ವಾದರೆ ಕಣ್ಣು ಸ್ತಬ್ಧವಾಗುವದು, ಮೂಗು ಬಾಯಿ ಒಣಗುವವು, ತಲೆಯು ಶೂನ್ಯವಾಗುವದು.(೨೩॥)

ಸ್ನೇಹನ ನಸ್ಯದ ಅತಿಯೋಗವನ್ನು ಹೇಳುತ್ತಾರೆ.

ಸ್ನಿಗ್ಧೇಽತಿಕಂಡೂಗುರುತಾಪ್ರಸೇಕಾರುಚಿಪೀನಸಾಃ ॥೨೪॥

ಅರ್ಥ:— ಅತಿ ಸ್ನಿಗ್ಧವಾಗಲು ಕಂಠದ ಗುರುತ್ವ ಮೂಗಿನಲ್ಲಿ-ನೀರು-ಸೋರುವಿಕೆ ಅರುಚಿ ನೆಗಡಿಗಳು ಉಂಟಾಗುವವು. (೨೪)

ವಿರೇಚನ ನಸ್ಯದ ಸಮ್ಯಗ್ಯೋಗವನ್ನು ಹೇಳುತ್ತಾರೆ.

**ಸುವಿರಿಕ್ತೇಽಕ್ಷಿಲಘುತಾವಕ್ತ್ರಸ್ವರವಿಶುದ್ಧಯಃ ||**

ಅರ್ಥ:— ಸರಿಯಾಗಿ ಶಿರೋವಿರೇಚನವಾಗಲು ಕಣ್ಣುಗಳು ಹಗು-ರಾಗುವವು. ಸ್ವರ ಮುಖಗಳು ಶುದ್ಧವಾಗುವವು. (೨೪||)

ವಿರೇಚನ ನಸ್ಯದ ಹೀನಯೋಗ, ಅತಿಯೋಗಗಳನ್ನು ಹೇಳುತ್ತಾರೆ.

**ದುರ್ವಿರಿಕ್ತೇ ಗದೋದ್ರೇಕಃ, ಕ್ಷಾಮತಾಽತಿವಿರೇಚಿತೇ ||೨೫||**

ಅರ್ಥ:— ಸರಿಯಾಗಿ ರೇಚನವಾಗದಿದ್ದರೆ ಬೇನೆ ಹೆಚ್ಚಾಗುವದು. ಅತಿರೇಚನವಾಗಲು ಕೃಶತ್ವ ಉಂಟಾಗುವದು (೨೫)

**ಪ್ರತಿಮರ್ಶಃ ಕ್ಷತಕ್ಷಾಮಬಾಲವೃದ್ಧಸುಖಾತ್ಮಸು ||**
**ಪ್ರಯೋಜ್ಯೋಽಕಾಲವರ್ಷೇಽಪಿ...........**

ಅರ್ಥ:— ಗಾಯವಾದ, ಕೃಶ, ಬಾಲ, ವೃದ್ಧ, ಸುಕುಮಾರರಿಗೆ ಪ್ರತಿಮರ್ಶ ನಸ್ಯವನ್ನು ಕೊಡಬೇಕು. ಅದನ್ನು ಅಕಾಲ ಮಳೆಯಲ್ಲಿಯೂ ಕೂಡ ಕೊಡಬಹುದು. (೨೫||)

**........................ನ ತ್ವಿಷ್ಟೋ ದುಷ್ಟಪೀನಸೇ |೨೬||**
**ಮದ್ಯಪೀತೇಽಬಲಶ್ರೋತ್ರೇ ಕೃಮಿದೂಷಿತಮೂರ್ಧನಿ ||**
**ಉತ್ಕೃಷ್ಟೋತ್ಕ್ಲಿಷ್ಟದೋಷೇ ಚ, ಹೀನಮಾತ್ರತಯಾ ಹಿ ಸಃ ||೨೭||**

ಅರ್ಥ:— ಆದರೆ ದುಷ್ಟಪೀನಸ (ನಾಸಾರೋಗ) ದವನಿಗೆ, ಮದ್ಯ ಕುಡಿದವನಿಗೆ, ಕಿವಿ ಅಶಕ್ತ ಇರುವವನಿಗೆ, ತಲೆಯಲ್ಲಿ ಕ್ರಿಮಿ ಇದ್ದವನಿಗೆ, ಬಹಳ ದೋಷ ಇದ್ದವನಿಗೆ, ದೋಷೋತ್ಕ್ಲೇಶವುಳ್ಳವನಿಗೆ, ಮಾತ್ರ ಕೊಡ ಬಾರದು. ಯಾಕೆಂದರೆ (ಪ್ರತಿಮರ್ಶವು) ಅಲ್ಪ ಪ್ರಮಾಣದಲ್ಲಿ ಇರುವದು. (ಆದ್ದರಿಂದ ದೋಷಗಳನ್ನು ಹೊರದೂಡದೇ ಕೇವಲ ಉತ್ಕ್ಲೇಶ ಮಾಡಿ ವಿಕಾರಗಳನ್ನು ಉಂಟುಮಾಡುವದು.) (೨೭)

ನಿಶಾಹರ್ಭುಕ್ತವಾಂತಾಹಃಸ್ವಪ್ನಾಧ್ವಶ್ರಮರೇತಸಾಮ್ ||
ಶಿರೋಽಭ್ಯಂಜನಗಂಡೂಷಪ್ರಸ್ರಾವಾಂಜನವರ್ಚಸಾಮ್ ||೨೮||
ದಂತಕಾಷ್ಠಸ್ಯ ಹಾಸಸ್ಯ ಯೋಜ್ಯೋಽನಂತೇಽಸೌ ದ್ವಿಬಿಂದುಕಃ ||

ಅರ್ಥಃ— ಈ ಎರಡು ಹನಿಯ ಪ್ರತಿಮರ್ಶ ನಸ್ಯವನ್ನು (೧) ರಾತ್ರಿ, (೨) ಹಗಲು, (೩) ಊಟ, (೪) ವಾಂತಿ, (೫) ಹಗಲು ನಿದ್ರೆ, (೬) ಹಾದಿ ನಡೆಯೋಣ, (೭) ಶ್ರಮ, (೮) ಮೈಥುನ, (೯) ಶಿರೋಽಭ್ಯಂಗ, (೧೦) ಗಂಡೂಷ, (೧೧) ಮೂತ್ರವಿಸರ್ಜನ (೧೨) ಅಂಜನ, (೧೩) ಮಲ ವಿಸರ್ಜನ, (೧೪) ದಂತಧಾವನ, (೧೫) ನಗೆ—ಇವುಗಳ ಕೊನೆಗೆ ಕೊಡಬೇಕು. (೨೮||)

ಪಂಚಸು ಸ್ರೋತಸಾಂ ಶುದ್ಧಿಃ ಕ್ಲಮನಾಶಸ್ತ್ರಿಷು ಕ್ರಮಾತ್ ||೨೯||
ದೃಗ್ಬಲಂ ಪಂಚಸು ತತೋ ದಂತದಾರ್ಢ್ಯಂ ಮರುಚ್ಛಮಃ ||

ಅರ್ಥಃ— ಮೊದಲಿನ ಐದು ಕಾಲಗಳಲ್ಲಿ ಪ್ರತಿಮರ್ಶ ಕೊಡಲು ಸ್ರೋತಸ್ಸುಗಳ ಶೋಧನವಾಗುವದು. ಮುಂದಿನ ಮೂರು ಕಾಲಗಳಲ್ಲಿ ಕೊಡಲು ಶ್ರಮ ಪರಿಹಾರವಾಗುವದು. ಅದರ ಮುಂದಿನ ಐದುಕಾಲಗಳಲ್ಲಿ ಕೊಡಲು ಕಣ್ಣಿಗೆ ಬಲ ಬರುವದು. ದಂತ ಧಾವನದ ನಂತರ ಕೊಡಲು ಹಲ್ಲುಗಳು ಗಟ್ಟಿಯಾಗುವವು. ನಗೆಯ ನಂತರ ಕೊಡಲು ವಾತದ ಶಮನ ವಾಗುವದು. (೨೯||)

ನ ನಸ್ಯಮೂನಸಪ್ತಾಬ್ದೇ ನಾತೀತಾಶೀತಿವತ್ಸರೇ ||೩೦||
ನ ಚೋನಾಷ್ಟಾದಶೇ ಧೂಮಃ, ಕವಲೋ ನೋನಪಂಚಮೇ ||
ನ ಶುದ್ಧಿರೂನದಶಮೇ ನ ಚಾತಿಕ್ರಾಂತಸಪ್ತತೌ ||೩೧||

ಅರ್ಥ:— ೭ ವರ್ಷಕ್ಕಿಂತ ಕಡಿಮೆ ೮೦ ಕ್ಕಿಂತ ಹೆಚ್ಚಿನ ವಯಸ್ಸಿನವರಿಗೆ ನಸ್ಯ ಕೊಡಬಾರದು. ೧೮ಕ್ಕಿಂತ ಕಡಿಮೆ ವಯಸ್ಸಿನವರಿಗೆ ಧೂಮ ಕೊಡಬಾರದು. ಮತ್ತು ೫ಕ್ಕಿಂತ ಕಡಿಮೆ ವಯಸ್ಸಿನವರಿಗೆ ಕವಲ ಕೊಡಬಾರದು. ಮತ್ತು ೧೦ಕ್ಕಿಂತ ಕಡಿಮೆ ೭೦ ಕ್ಕಿಂತ ಹೆಚ್ಚಿನವಯಸ್ಸಿನವರಿಗೆ ಶೋಧನ ಕೊಡಬಾರದು.

ಟಿಪ್ಪಣೀ:— ಇಲ್ಲಿ ಶೋಧನವೆಂದರೆ ವಮನ ವಿರೇಚನ ನಿರೂಹಗಳು ಎಂದು ಸರ್ವಾಂಗಸುಂದರಕಾರರು ಹೇಳುತ್ತಾರೆ. ಆದರೆ ಪದಾರ್ಥಚಂದ್ರಿಕಾಕಾರರು ಹುಡುಗರಿಗೆ ಕಫರೋಗಗಳೇ ಹೆಚ್ಚಿರುವದರಿಂದ ಕಫದ ಶುದ್ಧಿ ಶೋಧನವಾದ ವಮನವನ್ನು ಕೊಡದಿರುವದು ಅಯುಕ್ತವಾದ್ದರಿಂದ ಇಲ್ಲಿ ಶೋಧನವೆಂದರೆ ವಿರೇಚನ ಎಂದು ಅರ್ಥವನ್ನು ಹೇಳಿರುವರು. (೨೯)

**ಆಜನ್ಮಮರಣಂ ಶಸ್ತಃ ಪ್ರತಿಮರ್ಶಸ್ತು ಬಸ್ತಿವತ್ ॥**
**ಮರ್ಶವಚ್ಚ ಗುಣಾನ್ ಕುರ್ಯಾತ್ಸ ಹಿ ನಿತ್ಯೋಪಸೇವನಾತ್ ॥೩೦॥**

**ನ ಚಾತ್ರ ಯಂತ್ರಣಾ ನಾರ್ತಿರ್ವ್ಯಾಪದ್ಭ್ಯೋ ಮರ್ಶವದ್ಭಯಮ್ ॥**

ಅರ್ಥ:— ಆದರೆ ಪ್ರತಿಮರ್ಶವು ಬಸ್ತಿಯಂತೆ ಜನ್ಮದಿಂದ ಮರಣದವರೆಗೆ ಹಿತಕರವಾಗಿದೆ. ಮತ್ತು ನಿತ್ಯ ಸೇವಿಸುವದರಿಂದ ಇದು ಮರ್ಶದಂತೆ ಗುಣಕೊಡುವದು. ಇದಕ್ಕೆ ಪಥ್ಯವೂ ಇಲ್ಲ. ಹೆಚ್ಚು ಕಡಿಮೆಯಾದಲ್ಲಿ ಮರ್ಶದಂತೆ ಅಪಾಯವೂ ಆಗುವದಿಲ್ಲ. (೩೦)

**ತೈಲಮೇವ ಚ ನಸ್ಯಾರ್ಥೇ ನಿತ್ಯಾಭ್ಯಾಸೇನ ಶಸ್ಯತೇ ॥೩೧॥**
**ಶಿರಸಃ ಶ್ಲೇಷ್ಮಧಾಮತ್ವಾತ್ಸ್ನೇಹಾಃ ಸ್ವಸ್ಥಸ್ಯ ನೇತರೇ ॥**

ಅರ್ಥ:— ನಿರೋಗಿಗೆ ನಿತ್ಯ ಉಪಯೋಗಿಸಲಿಕ್ಕೆ ತಿಲತೈಲನಸ್ಯವೇ ಒಳ್ಳೇದು. ಯಾಕೆಂದರೆ ತಲೆಯು ಕಫಸ್ಥಾನವಾದ್ದರಿಂದ ಇತರ ಸ್ನೇಹಗಳು ಹಿತಕರವಲ್ಲವು. ಏಕೆಂದರೆ ಅವು ಕಫವನ್ನುಂಟುಮಾಡುವವು(೩೧)

**ಆಶುಕೃಚ್ಚಿರಕಾರಿತ್ವಂ ಗುಣೋತ್ಕರ್ಷಾಪಕೃಷ್ಟತಾ ॥೩೨॥**
**ಮರ್ಶೇ ಚ ಪ್ರತಿಮರ್ಶೇ ಚ ವಿಶೇಷೋ ನ ಭವೇದ್ಯದಿ ॥**
**ಕೋ ಮರ್ಶಂ ಸಪರೀಹಾರಂ ಸಾಪದಂ ಚ ಭಜೇತ್ತತಃ ॥೩೩॥**

ಅರ್ಥ:— ಮರ್ಶದಿಂದ ತೀವ್ರವಾಗಿ ಮತ್ತು ಹೆಚ್ಚು ಗುಣ ಬರುವದು. ಪ್ರತಿಮರ್ಶದಿಂದ ತಡವಾಗಿ ಮತ್ತು ಸ್ವಲ್ಪ ಗುಣಬರುವದು. ಹೀಗೆ ಇವುಗಳಲ್ಲಿ ಹೆಚ್ಚು ಕಡಿಮೆ ಇಲ್ಲದೇ ಇದ್ದರೆ, ಯಾವನು ಕಠಿಣಪಥ್ಯವಿರುವಂಥ, ಹೆಚ್ಚುಕಡಿಮೆಯಾದರೆ ಅಪಾಯವಾಗುವಂಥ ಮರ್ಶನಸ್ಯವನ್ನು ಸೇವಿಸುವನು ? (೩೩)

ಅಚ್ಛಪಾನವಿಚಾರಾಖ್ಯೌ ಕುಟೀವಾತಾತಪಸ್ಥಿತೀ ..
ಅನ್ವಾಸನಮಾತ್ರಾಬಸ್ತೀ ಚ ತದ್ವದೇವ ವಿನಿರ್ದಿಶೇತ್ ||೩೬||

ಅರ್ಥ:— ಇದರಂತೆಯೇ ಶುದ್ಧ ಸ್ನೇಹಪಾನ ಮತ್ತು ವಿಚಾರಣಾ ಸ್ನೇಹಪಾನ, ಕುಟೀ ಪ್ರಾವೇಶಿಕ ಮತ್ತು ವಾತಾತಪಿಕ ರಸಾಯನ, ಅನ್ವಾಸನಬಸ್ತಿ ಮಾತ್ರಾಬಸ್ತಿಗಳನ್ನು ತಿಳಿಯಬೇಕು.

ಟಿಪ್ಪಣಿ:— ಅಂದರೆ ಮೊದಲಿನವು ಶೀಘ್ರ ಮತ್ತು ಹೆಚ್ಚು ಗುಣಕಾರಿ ಇದ್ದದರಿಂದ ಪಥ್ಯದ ದುಃಖವನ್ನೂ ಆಪಾಯದ ಭೀತಿಯನ್ನೂ ಅಂಗೀಕರಿಸಿ ಅವುಗಳನ್ನು ಸೇವಿಸುವರು ಎಂದು ಭಾವವು. (೩೬)

ಜೀವಂತೀಜಲದೇವದಾರುಜಲದತ್ವಕ್‌ಸೇವ್ಯಗೋಪೀಹಿಮಂ |
ದಾರ್ವೀತ್ವಙ್ಮಧುಕಪ್ಲವಾಗುರುವರೀಪುಂಡ್ರಾಹ್ವಬಿಲ್ವೋತ್ಪಲಮ್ ||
ಧಾವನ್ಯೌ ಸುರಭಿಂ ಸ್ಥಿರೇ ಕೃಮಿಹರಂ ಪತ್ರಂ ತ್ರುಟಿಂ ರೇಣುಕಾಂ|
ಕಿಂಜಲ್ಕಂ ಕಮಲಾದ್ಬಲಾಂ ಶತಗುಣೇ ದಿವ್ಯೇಽಂಭಸಿ ಕ್ವಾಥಯೇತ್ ||೩೭||

ತೈಲಾದ್ರಸಂ ದಶಗುಣಂ ಪರಿಶೇಷ್ಯ ತೇನ |
ತೈಲಂ ಪಚೇಚ್ಚ ಸಲಿಲೇನ ದಶೈವ ವಾರಾನ್ ||
ಪಾಕೇ ಕ್ಷಿಪೇಚ್ಚ ದಶಮೇ ಸಮಮಾಜದುಗ್ಧಂ |
ನಸ್ಯಂ ಮಹಾಗುಣಮುಶಂತ್ಯಣುತೈಲಮೇತತ್ ||೩೮||

ಅರ್ಥ:— ಜೀವಂತಿ, ಬಾಳದಬೇರು, ದೇವದಾರು, ಜೇಕಿನಗಡ್ಡೆ, ದಾಲಚಿನ್ನಿ, ಕರೆಬಾಳದಬೇರು, ಅನಂತಮೂಲ, ಚಂದನ, ಮರ ಅರಿಷಣದ ತೊಗಟೆ, ಜೇಷ್ಠಮಧು, ಕ್ಷುದ್ರಮುಸ್ತೆ, ಅಗುರು, ಶತಾವರಿ, ಬಿಳೀಕಮಲ, ಬಿಲ್ವ, ನೀಲ ಕಮಲ, ನೆಲಗುಳ್ಳ, ಹೆಬ್ಬಗುಳ್ಳ, ರಾಸ್ನಾ, ಒಂದೆಲೆ ಮತ್ತು ಮೂರೆಲೆ ಹೊನ್ನಿ, ವಾಯುವಿಡಂಗ, ತಮಾಲಪತ್ರ, ಯಾಲಕ್ಕಿ, ರೇಣುಕ ಬೀಜ, ಕಮಲದ ಕೇಶರ, ಕಳ್ಳಂಗಡ್ಲೆ ಇವುಗಳನ್ನು ನೂರು ಪಟ್ಟು ಮಳೆಯ ನೀರಿನಲ್ಲಿ ಕುದಿಸಬೇಕು. ಹೀಗೆ ಕುದಿಸಿ ೧/೮ ಉಳಿಯಲು ಅದರಲ್ಲಿ ಆದರ ೧/೧೦ ತೈಲಹಾಕಿ ಕುದಿಸಿ ತೈಲ ಸಿದ್ಧಮಾಡಬೇಕು. ಈ ಪ್ರಕಾರ ೧೦ಸಾರೆ ಅದೇಅದೇ ತೈಲವನ್ನು ಸಿದ್ಧಮಾಡಬೇಕು. ಹತ್ತನೇ ಪಾಕದಲ್ಲಿ ಅಷ್ಟೇ

ಆಡಿನ ಹಾಲನ್ನು ಹಾಕಬೇಕು. ಮಹಾಗುಣಕಾರಿ ನಸ್ಯವಾದ ಇದಕ್ಕೆ ಅಣು ತೈಲವೆಂದು ಕರೆಯುವರು.

**ಟಿಪ್ಪಣಿ:—** ಅತ್ಯಂತ ಅಣು (ಸೂಕ್ಷ್ಮ) ವಾದ ಶಿರಾಸ್ರೋತಸ್ಸುಗಳಲ್ಲಿ ಕೂಡ ಇದು ಪ್ರವೇಶಮಾಡುವದರಿಂದ ಅಣುತೈಲವೆಂದು. ಇದಕ್ಕೆ ಅನ್ವರ್ಥ ನಾಮವದೆ. (೩೮)

**ಘನೋನ್ನತಪ್ರಸನ್ನತ್ವಕ್ ಸ್ಕಂಧಗ್ರೀವಾಸ್ಯವಕ್ಷಸಃ ।**
**ದೃಢೇಂದ್ರಿಯಾಸ್ತ್ವಪಲಿತಾ ಭವೇಯುರ್ನಸ್ಯಶೀಲಿನಃ ॥ ೩೯ ॥**

ಅರ್ಥ:— ನಿತ್ಯ ನಸ್ಯವನ್ನು ಸೇವಿಸುವವರ ತ್ವಚೆ, ಹೆಗಲು, ಕುತ್ತಿಗೆ, ಮೋರೆ, ಎದೆಗಳು ಗಟ್ಟಿ, ಎತ್ತರ ಮತ್ತು ತೇಜಸ್ವಿ ಆಗುವವು. ಅವರ ಇಂದ್ರಿಯುಗಳು ದೃಢವಾಗುವವು. ಮತ್ತು ಕೂದಲುಗಳು ಬಿಳ್ಳಗಾಗುವದಿಲ್ಲ. (೩೯)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ನಸ್ಯವಿಧಿರ್ನಾಮ ವಿಂಶೋऽಧ್ಯಾಯಃ ಸಮಾಪ್ತಃ ।**

ಇತಿ ಶ್ರೀಮದಾದ್ಯಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗಹೃದಯದ ಸೂತ್ರಸ್ಥಾನದಲ್ಲಿಯ 'ನಸ್ಯವಿಧಿ' ಎಂಬ ೨೦ ನೆಯ ಅಧ್ಯಾಯದ ಟೀಕೆಯು ಮುಗಿದುದು.

# ೨೧ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ ಉರ್ಧ್ವಾಂಗ ಚಿಕಿತ್ಸೆಯಾದ ನಸ್ಯ ಕರ್ಮವನ್ನು ಹೇಳಿದರು ಇನ್ನು ಮೇಲೆ ಉರ್ಧ್ವಾಂಗದ ಇತರ ಕರ್ಮಗಳಾದ ಧೂಮವಿಧಿ ಮುಂತಾದವುಗಳನ್ನು ಮುಂದಿನ ನಾಲ್ಕು ಅಧ್ಯಾಯಗಳಲ್ಲಿ ಹೇಳುತ್ತಾರೆ. ಅದರಲ್ಲಿಯೂ ನಸ್ಯದ ನಂತರ ಧೂಮಪಾನ ಮಾಡಬೇಕೆಂದು ಹೇಳಿದ್ದರಿಂದ ಅದನ್ನು ಮೊದಲು ಹೇಳುತ್ತಾರೆ.

**ಅಥಾತೋ ಧೂಮ*ಪಾನವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ |**

ಅರ್ಥಃ— ಇನ್ನು ಮೇಲೆ ಧೂಮಪಾನ ವಿಧಾನದ ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಅರ್ಥಃ— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಜತ್ರೂರ್ಧ್ವಕಫವಾತೋತ್ಥವಿಕಾರಾಣಾಮಜನ್ಮನೇ ||**
**ಉಚ್ಛೇದಾಯ ಚ ಜಾತಾನಾಂ ಪಿಬೇದ್ಧೂಮಂ ಸದಾತ್ಮವಾನ್ ||೧||**

ಅರ್ಥಃ— ಕುತ್ತಿಗೆಯ ಮೇಲಿನ ಕಫರೋಗ, ವಾತರೋಗ ಮತ್ತು ಕಫವಾತರೋಗಗಳು ಉಂಟಾಗಬಾರದೆಂದು ಮತ್ತು ಉಂಟಾದವು ನಾಶವಾಗಬೇಕೆಂದು ಹಿತಾಹಾರ ವಿಹಾರ ಮಾಡುತ್ತ ಧೂಮಪಾನವನ್ನು ಮಾಡಬೇಕು. (೧)

**ಸ್ನಿಗ್ಧೋ ಮಧ್ಯಃ ಸ ತೀಕ್ಷ್ಣಶ್ಚ ವಾತೇ ವಾತಕಫೇ ಕಫೇ ||**
**ಯೋಜ್ಯಃ.............................................**

ಅರ್ಥಃ— ಅದು ಸ್ನಿಗ್ಧ, ಮಧ್ಯಮ ಮತ್ತು ತೀಕ್ಷ್ಣವೆಂದು ಮೂರು ಪ್ರಕಾರವುಳ್ಳದ್ದು. ಅವನ್ನು ಕ್ರಮದಿಂದ ವಾತದಲ್ಲಿಯೂ, ವಾತಕಫದಲ್ಲಿಯೂ, ಮತ್ತು ಕಫದಲ್ಲಿಯೂ ಉಪಯೋಗಿಸಬೇಕು.

* ಧೂಮಪಾನವಿಧಿಯು ಚರಕದ ಸೂ. ೫ನೇ, ಸುಶ್ರುತದ ಚಿ. ೪೦ನೇ ಅಷ್ಟಾಂಗ ಸಂಗ್ರಹದ ಸೂ. ೩೦ ನೇ ಅಧ್ಯಾಯದಲ್ಲಿ ಹೇಳಿದೆ.

ಟಿಪ್ಪಣಿ:— ಸ್ನಿಗ್ಧಕ್ಕೆ ಬೃಂಹಣ ಮತ್ತು ಮೃದು ಎಂದೂ, ಮಧ್ಯಮಕ್ಕೆ ಶಮನ ಮತ್ತು ಪ್ರಾಯೋಗಿಕ ಎಂದೂ, ತೀಕ್ಷ್ಣಕ್ಕೆ ಶೋಧನ ಮತ್ತು ವಿರೇಚನ ಎಂದೂ ಕರೆಯುವರು. ಇದರ ಹೊರತೂ ಕಾಸಘ್ನ, ವಾಮನ, ವ್ರಣಧೂಪನ ಎಂಬ ಬೇರೆ ಮೂರು ಧೂಮದ ಪ್ರಕಾರಗಳಿರುತ್ತವೆ. (೧)

...............ನ ರಕ್ತಪಿತ್ತಾತಿವಿರಿಕ್ತೋದರಮೇಹಿಷು ॥೨॥

ತಿಮಿರೋರ್ಧ್ವಾನಿಲಾಧ್ಮಾನರೋಹಿಣೀದತ್ತಬಸ್ತಿಷು ॥

ಮತ್ಸ್ಯಮದ್ಯದಧಿಕ್ಷೀರಕ್ಷೌದ್ರಸ್ನೇಹವಿಷಾಶಿಷು ॥೩॥

ಶಿರಸ್ಯಭಿಹತೇ ಪಾಂಡುರೋಗೇ ಜಾಗರಿತೇ ನಿಶಿ ॥

ಅರ್ಥ:— ರಕ್ತಪಿತ್ತವಿಕಾರವುಳ್ಳವರಿಗೂ, ವಿರೇಚನ ಮತ್ತು ಬಸ್ತಿ ತಕ್ಕೊಂಡವರಿಗೂ, ಉದರ ಮೇಹ ತಿಮಿರ ಊರ್ಧ್ವವಾತ ಹೊಟ್ಟೆಯುಬ್ಬೋಣ ರೋಹಿಣೀ (ಕಂಠರೋಗ) ರೋಗಿಗಳಿಗೂ, ಮೀನ ಮದ್ಯ ಮೊಸರು ಹಾಲು ಜೇನುತುಪ್ಪ ಸ್ನೇಹ ವಿಷ ಸೇವನೆಮಾಡಿದವರಿಗೂ, ಪಾಂಡುರೋಗಿಗಳಿಗೂ ತಲೆಗೆ ಪೆಟ್ಟು ಹತ್ತಿದವರಿಗೂ, ರಾತ್ರಿಯಲ್ಲಿ ಜಾಗರಣೆ ಮಾಡಿದವರಿಗೂ ಧೂಮಪಾನ ಕೊಡಬಾರದು. (೩॥)

ರಕ್ತಪಿತ್ತಾಂಧ್ಯಬಾಧಿರ್ಯತೃಣ್ಮೂರ್ಛಾಮದಮೋಹಕೃತ್ ॥೪॥

ಧೂಮೋಽಕಾಲೇಽತಿಪೀತೋ ವಾ ತತ್ರ ಶೀತೋ ವಿಧಿರ್ಹಿತಃ ॥

ಅರ್ಥ:— ಅಕಾಲದಲ್ಲಿ ಅಥವಾ ಹೆಚ್ಚು ಧೂಮಪಾನ ಮಾಡಿದರೆ ಅದು ರಕ್ತ-ಪಿತ್ತ ಅಂಧತ್ವ, ಕಿವುಡತನ ನೀರಡಿಕೆ ಮೂರ್ಛೆ ಮದಮೋಹಗಳನ್ನುಂಟುಮಾಡುತ್ತದೆ. ಅದರ ಮೇಲೆ ಶೀತೋಪಚಾರವು ಹಿತಕರವು.

ಟಿಪ್ಪಣಿ:— ಸಂಗ್ರಹದಲ್ಲಿ ಅತಿ ಧೂಮಪಾನವು ಭ್ರಮ ಜ್ವರ ತಲೆ ಕಾಯೋಣ ಇಂದ್ರಿಯನಾಶ ಬಾಯಿ ಒಣಗೋಣ ಮುಖಪಾಕ ಕಣ್ಣುಗೆ-ಕತ್ತಲೆಬರೋಣ ರಕ್ತಪಿತ್ತ ಅರ್ದಿತಗಳನ್ನೂ ಒಮ್ಮೊಮ್ಮೆ ಮೃತ್ಯುವನ್ನು ಉಂಟು ಮಾಡುವವು. ಆ ಪಿತ್ತವು ವಾತ ಅಥವಾ ಕಫದಿಂದ ಕೂಡಿಕೊಂಡಿದ್ದರೆ ಅದಕ್ಕೆ ಯಥಾಯೋಗ್ಯವಾದ ಸ್ನಿಗ್ಧ, ರುಕ್ಷ, ಶೀತವಾದ ಕಷಾಯಪಾನ ನಸ್ಯ ಮುಖಲೇಪ ಅಂಜನ ಪರಿಷೇಕ ಮುಂತಾದವುಗಳನ್ನು ಮಾಡಬೇಕು ಎಂದು ಹೇಳಿದೆ. (೪)

ಕ್ಷುತಜೃಂಭಿತವಿಣ್ಮೂತ್ರಸ್ತ್ರೀಸೇವಾಶಸ್ತ್ರಕರ್ಮಣಾಮ್ ॥೫॥

ಹಾಸಸ್ಯ ದಂತಕಾಷ್ಠಸ್ಯ ಧೂಮಮಂತೇ ಪಿಬೇನ್ಮೃದುಮ್ ॥

ಅರ್ಥಃ— ಶೀನು ಆಕಳಿಕೆ ಮಲಮೂತ್ರವಿಸರ್ಜನೆ ಮೈಥುನ ಶಸ್ತ್ರಕ್ರಿಯೆ ನಗೆ ದಂತಧಾವನಗಳ ಕೊನೆಗೆ ಮೃದು ಧೂಮಪಾನ ಮಾಡಬೇಕು. (೫)

ಕಾಲೇಷ್ವೇಷು ನಿಶಾಹಾರನಾವನಾಂತೇ ಚ ಮಧ್ಯಮಮ್ ॥೬॥

ಅರ್ಥಃ— ಈ ಕಾಲಗಳಲ್ಲಿ, ರಾತ್ರಿ ಊಟದನಂತರ ಮತ್ತು ನಸ್ಯದ ನಂತರ ಮಧ್ಯಮ ಧೂಮಪಾನ ಮಾಡಬೇಕು. (೬)

ನಿದ್ರಾನಸ್ಯಾಂಜನಸ್ನಾನಚ್ಛರ್ದಿತಾಂತೇ ವಿರೇಚನಮ್ ॥

ಅರ್ಥ:— ನಿದ್ರೆ ನಸ್ಯ ಅಂಜನ ಸ್ನಾನ ಮತ್ತು ವಮನಗಳ ನಂತರ ವಿರೇಚನ ಧೂಮವನ್ನು ಕುಡಿಯಬೇಕು. (೬½)

ಧೂಮದ ನಲಿಕೆಯನ್ನು ಹೇಳುತ್ತಾರೆ.

ಬಸ್ತಿನೇತ್ರಸಮದ್ರವ್ಯಂ ತ್ರಿಕೋಶಂ ಕಾರಯೇದೃಜು ॥೭॥

ಮೂಲಾಗ್ರೇಽಂಗುಷ್ಠಕೋಲಾಸ್ಥಿಪ್ರವೇಶಂ ಧೂಮನೇತ್ರಕಮ್ ॥

ತೀಕ್ಷ್ಣಸ್ನೇಹನಮಧ್ಯೇಷು ತ್ರೀಣಿ ಚತ್ವಾರಿ ಪಂಚ ಚ ॥೮॥

ಅಂಗುಲಾನಾಂ ಕ್ರಮಾತ್ಪಾತುಃ ಪ್ರಮಾಣೇನಾಷ್ಟಕಾನಿ ತತ್ ॥

ಅರ್ಥ:— ಧೂಮಪಾನದ ನಲಿಕೆಯು ಬಸ್ತಿಯ ನಲಿಕೆಯನ್ನು ಮಾಡುವ ದ್ರವ್ಯ (ಧಾತು ಕಟ್ಟಿಗೆ ಎಲವು ಬಿದುರು) ಗಳಿಂದ ಮಾಡಿದ್ದೂ, ಮೂರು ಕೋಶಗಳುಳ್ಳದ್ದೂ, ಸರಳವೂ, ಮೂಲದಲ್ಲಿ ಹೆಬ್ಬೆಟ್ಟು ಹಿಡಿಯುವಷ್ಟು ತುದಿಯಲ್ಲಿ ಬಾರಿಬೀಜ ಹಿಡಿಯುವಷ್ಟು ಛಿದ್ರವುಳ್ಳದ್ದೂ ಇರಬೇಕು. ಉದ್ದ ಳತೆಯಲ್ಲಿ ಆ ನಲಿಕೆಯು ಧೂಮಪಾನ ಮಾಡುವವನ ೩ಳ ಬೆರಳಿನಷ್ಟು,

ತೀಕ್ಷ್ಣಧೂಮದಲ್ಲಿಯೂ, ೩೨ ರಷ್ಟು ಸ್ನೇಹನಧೂಮದಲ್ಲಿಯೂ, ೪೦ ರಷ್ಟು ಮಧ್ಯಧೂಮದಲ್ಲಿಯೂ ಇರಬೇಕು.

**ಟಿಪ್ಪಣೆ:—** ಸಂಗ್ರಹದಲ್ಲಿ ಹೀಗೆ ಮಾಡುವದರಿಂದ ಹೊಗೆಯು ದೂರ ದಿಂದ ಬರುವದರಿಂದಲೂ ಮತ್ತು ನಳಿಕೆಯ ಕೋಶಗಳಲ್ಲಿ [illegible] ತಡೆದು ತಣ್ಣಗಾಗಿ ಬರುವದರಿಂದಲೂ ಬಾಧಕನಾಗದು ಎಂದು ಹೇಳಿದ್ದಾರೆ. (೮)

ಧೂಮಪಾನ ವಿಧಿಯನ್ನು ಹೇಳುತ್ತಾರೆ.

**ಋಜೂಪವಿಷ್ಟಸ್ತಚ್ಚೇತಾ ವಿವೃತಾಸ್ಯಸ್ತ್ರಿಪರ್ಯಯಮ್ ।೯।**
**ಪಿಧಾಯ ಛಿದ್ರಮೇಕೈಕಂ ಧೂಮಂ ನಾಸಿಕಯಾ ಪಿಬೇತ್ ॥**

**ಅರ್ಥ:—** ಸರಳವಾಗಿ ಕುಳಿತು ಅದರ ಕಡೆಗೆ ಲಕ್ಷ್ಯವಿಟ್ಟು ಬಾಯಿ ತೆರೆದು ಒಂದು ಮೂಗಿನಹೊರಳೆಯನ್ನು ಮುಚ್ಚಿ ಎರಡನೇದರಿಂದ ಆ ಧೂಮ ವನ್ನು ಎಳೆಕೊಳ್ಳಬೇಕು. ಆಮೇಲೆ ಅದನ್ನು ಮುಚ್ಚಿ ಮತ್ತೊಂದರಿಂದ ಎಳೆಕೊಳ್ಳಬೇಕು. ಹೀಗೆ ಮೂರು ಪರ್ಯಾಯ ಮಾಡಬೇಕು.

**ಟಿಪ್ಪಣೆ:—** ಒಮ್ಮೆ ತಕ್ಕೊಂಡು ಬಿಡುವದಕ್ಕೆ 'ಅಪಾನ'ವೆಂದೂ ಹೀಗೆ ಮೂರು ಸಾರೆ ಮಾಡಿದರೆ 'ಪರ್ಯಾಯ' ವೆಂದೂ ಹೆಸರು. (೯)

**ಪ್ರಾಕ್ಪಿಬೇನ್ನಾಸಯೋತ್ಕ್ಲಿಷ್ಟೇ ದೋಷೇ ಘ್ರಾಣಶಿರೋಗತೇ ।೧೦।**
**ಉತ್ಕ್ಲೇಶನಾರ್ಥಂ ವಕ್ತ್ರೇಣ, ವಿಪರೀತಂ ತು ಕಂಠಗೇ ॥**

**ಅರ್ಥ:—** ಮೂಗು ಮತ್ತು ತಲೆಯಲ್ಲಿಯ ದೋಷಗಳು ಉತ್ಕ್ಲೇಶ (ಕೆರಳುವಿಕೆ) ಹೊಂದಿದ್ದರೆ, ಮೊದಲು ಮೂಗಿನಿಂದ, ಉತ್ಕ್ಲೇಶವಾಗಬೇಕಾದರೆ ಮೊದಲು ಬಾಯಿಯಿಂದ ಸೇದಬೇಕು. ಆದರೆ ಕಂಠದಲ್ಲಿಯ ದೋಷಗಳ ಉತ್ಕ್ಲೇಶಕ್ಕಾಗಿ ಮೊದಲು ಮೂಗಿನಿಂದ ಇಲ್ಲವಾದರೆ ( ಉತ್ಕ್ಲೇಶ ಹೊಂದಿದ್ದರೆ ) ಬಾಯಿಯಿಂದ ಸೇದಬೇಕು. (೧೦)

**ಮುಖೇನೈವೋದ್ವಮೇದ್ಧೂಮಂ ನಾಸಯಾ ದೃಗ್ವಿಘಾತಕೃತ್ ॥೧೧॥**

ಅರ್ಥ:— ಹೊಗೆಯನ್ನು ಬಾಯಿಯಿಂದಲೇ ಬಿಡಬೇಕು. ಮೂಗಿನಿಂದ ಬಿಟ್ಟರೆ ಕಣ್ಣಿಗೆ ಅಪಾಯವಾಗುವದು. (೧)

**ಆಕ್ಷೇಪಮೋಕ್ಷೈಃ ಪಾತವ್ಯೋ ಧೂಮಸ್ತು ತ್ರಿಸ್ತ್ರಿಭಿಸ್ತ್ರಿಭಿಃ||**

ಅರ್ಥ:— ಹೀಗೆ ಸೇದುವದು ಮತ್ತು ಬಿಡುವದು ಮೂರು ಮೂರು ಸಾರೆ ಮಾಡತಕ್ಕದ್ದು. ಹೀಗೆ ಮಾಡುವದರಿಂದ ಒಂದು ಧೂಮಪಾನ ಆಗುವದು. ಇಂಥ ಮೂರು ಧೂಮಪಾನ ಮಾಡಬೇಕು. (೧೧||)

**ಅಹ್ನಃ ಪಿಬೇತ್ಸಕೃತ್ಸ್ನಿಗ್ಧಂ, ದ್ವಿರ್ಮಧ್ಯಂ, ಶೋಧನಂ ಪರಮ್||೧೨||**
**ತ್ರಿಚತುರ್ವಾ.........................**

ಅರ್ಥ:— ಹಗಲಿನಲ್ಲಿ ಸ್ನಿಗ್ಧ ಧೂಮವನ್ನು ಒಂದು ಸಾರೆ, ಮಧ್ಯ ಧೂಮಗಳನ್ನು ೨ ಸಾರೆ, ಕಡೆಯದಾದ ಶೋಧನ ಧೂಮವನ್ನು ೩ ಅಥವಾ ೪ ಸಾರೆ ಕುಡಿಯಬೇಕು. (೧೨)

**ಮೃದೌ ತತ್ರ ದ್ರವ್ಯಾಣ್ಯಗುರುಗುಗ್ಗುಲು ||**
**ಮುಸ್ತಸ್ಥೌಣೇಯಶೈಲೇಯನಲದೋಶೀರವಾಲಕಮ್ ||೧೩||**

**ವರಾಂಗಕೌಂತೀಮಧುಕಬಿಲ್ವಮಜ್ಜೈಲವಾಲುಕಮ್ ||**
**ಶ್ರೀವೇಷ್ಟಕಂ ಸರ್ಜರಸೋ ಧ್ಯಾಮಕಂ ಮದನಂ ಪ್ಲವಮ್ ||೧೪||**

**ಶಲ್ಲಕೀ ಕುಂಕುಮಂ ಮಾಷಾ ಯವಾಃ ಕುಂದುರಕಸ್ತಿಲಾಃ ||**
**ಸ್ನೇಹಃ ಫಲಾನಾಂ ಸಾರಾಣಾಂ ಮೇದೋ ಮಜ್ಜಾ ವಸಾ ಘೃತಮ್ ||೧೫||**

ಅರ್ಥ:— ಮೃದು ಧೂಮದಲ್ಲಿ ಅಗುರು, ಗುಗ್ಗುಳು, ಜೇಕು, ಸ್ಥೌಣೇಯ, ಕಲ್ಲುಹೂವು, ಜಟಮಾಂಸೀ, ಕರೇಬಾಳದ ಬೇರು, ಸುಗಂಧಬಾಳದ ಬೇರು, ದಾಲಚಿನ್ನಿ, ರೇಣುಕಬೀಜ, ಜೇಷ್ಠಮಧು, ಬಿಲ್ವದ ತಿರುಳು ಏಲವಾಲುಕ (ಸುಗಂಧದ್ರವ್ಯವಿಶೇಷ), ಗಂಧಾಬಿರೋಜಾ, ರಾಳ, ರೋಹಿಸಹುಲ್ಲು, ಮೇಣ, ಸಣ್ಣಜೇಕು, ಶಲ್ಲಕೀಬೇರು, ಕೇಶರ, ಉದ್ದು,

ಜಪಿ, ರಾಲ್ಲಕೀಗಿಡದ ಅಂಟು, ಎಳ್ಳು, (ಆಕ್ರೋಟ, ಹಿಂಗು ಇತ್ಯಾದಿ) ಫಲಗಳ ಎಣ್ಣೆ, (ದೇವದಾರು ಮುಂತಾದ) ಗಿಡಗಳ ಕಟ್ಟಿಗೆಗಳ ಎಣ್ಣೆ, ಮೇಣ, ಮಜ್ಜೆ, ನೆಣ, ತುಪ್ಪಗಳನ್ನು ಉಪಯೋಗಿಸಬೇಕು. (೧೫)

**ಶಮನೇ ಶಲ್ಲಕೀ ಲಾಕ್ಷಾ ಪೃಥ್ವೀಕಾ ಕಮಲೋತ್ಪಲಮ್ ।**
**ನ್ಯಗ್ರೋಧೋದುಂಬರಾಶ್ವತ್ಥಪ್ಲಕ್ಷರೋಧ್ರತ್ವಚಃ ಸಿತಾ ॥೧೬॥**

**ಯಷ್ಟೀಮಧು ಸುವರ್ಣತ್ವಕ್ ಪದ್ಮಕಂ ರಕ್ತಯಷ್ಟಿಕಾ ।**
**ಗಂಧಾಶ್ಚಾಕುಷ್ಠತಗರಾಃ..............................**

ಅರ್ಥ:— ಶಮನ ಧೂಮದಲ್ಲಿ ಶಲ್ಲಕೀ ಅಂಟು, ಅರಗು, ಸಣ್ಣ ಯಾಲಕ್ಕಿ, ಕೆಂಪು ಕಮಲ, ನೀಲ ಕಮಲ, ಆಲ ಅತ್ತಿ ಅರಳೆ ಬಸರೀ ಲೋಧ ಗಿಡಗಳ ತೊಗಟೆ, ಸಕ್ಕರೆ, ಜೇಷ್ಠಮಧು, ಶಕ್ಕಿ, ಪದ್ಮಕಾಷ್ಠ, ಮಂಜಿಷ್ಠೆ, ಮತ್ತು ಕೋಷ್ಠ ತಗರದ ಹೊರ್ತು ಬೇರೆ ಗಂಧ ದ್ರವ್ಯಗಳನ್ನು ಉಪಯೋಗಿಸಬೇಕು. (೧೬॥)

**..............................ತೀಕ್ಷ್ಣೇ ಜ್ಯೋತಿಷ್ಮತೀ ನಿಶಾ ॥೧೬॥**

**ದಶಮೂಲಮನೋಹ್ವಾಲಂ ಲಾಕ್ಷಾ ಶ್ವೇತಾ ಫಲತ್ರಯಮ್ ॥**
**ಗಂಧದ್ರವ್ಯಾಣಿ ತೀಕ್ಷ್ಣಾನಿ ಗಣೋ ಮೂರ್ಧವಿರೇಚನಃ ॥೧೮**

ಅರ್ಥಃ— ತೀಕ್ಷ್ಣ (ವಿರೇಚನ) ಧೂಮದಲ್ಲಿ ಮಾಲಕಾಂಗೋಣೀ, ಅರಿಷಣ, ದಶಮೂಲ, ಮನಸೀಳ, ಹರತಾಳ, ಅರಗು, ಕಿಣಿಹಿಬೇರು, ತ್ರಿಫಳಾ ಮತ್ತು ತೀಕ್ಷ್ಣಗಂಧದ್ರವ್ಯ (ಕೋಷ್ಠ ತಗರ ಮುಂತಾದವು) ಗಳನ್ನೂ ಶಿರೋವಿರೇಚನ (ಸೂತ್ರ. ೧೫।೪)ಗಣವನ್ನೂ ಉಪಯೋಗಿಸಬೇಕು. (೧೮)

ಧೂಮಪಾನದ ಬಸ್ತಿ ಮಾಡುವ ರೀತಿಯನ್ನು ಹೇಳುತ್ತಾರೆ.

**ಜಲೇ ಸ್ಥಿತಾಮಹೋರಾತ್ರಮಿಷೀಕಾಂ ದ್ವಾದಶಾಂಗುಲಾಮ್ ॥**
**ಪಿಷ್ಟೈರ್ಧೂಮೌಷಧೈರ್ಜೀವಂ ಸಂಚಕೃತ್ವಾಃ ಪ್ರಲೇಪಯೇತ್ ॥೧೯॥**

**ವರ್ತಿರಂಗುಷ್ಠಕಸ್ಥೂಲಾ ಯವಮಧ್ಯಾ ಯಥಾ ಭವೇತ್ ॥**

**ಛಾಯಾಶುಷ್ಕಾಂ ವಿಗರ್ಭಾಂ ತಾಂ ಸ್ನೇಹಾಭ್ಯಕ್ತಾಂ ಯಥಾ ಯಥಮ್ ॥೨೦॥**

**ಧೂಮನೇತ್ರಾರ್ಪಿತಾಂ ಪಾತುಮಗ್ನಿಪ್ಲುಷ್ಟಾಂ ಪ್ರಯೋಜಯೇತ್॥**

ಅರ್ಥಃ— ಹನ್ನೆರಡು ಬೆರಳು ಉದ್ದವಿದ್ದ ದರ್ಭದ ಕಡ್ಡಿಯನ್ನು ತಕ್ಕೊಂಡು ಒಂದು ಹಗಲು ಒಂದು ರಾತ್ರಿ ನೀರಲ್ಲಿ ನೆನಿಸಿ ಅದಕ್ಕೆ ಮೇಲೆ ಹೇಳಿದ ಧೂಮೌಷಧದ ಕಲ್ಕಗಳನ್ನು ಐದು ಸಾರೆ ಹೆಬ್ಬಟ್ಟಿನಂತೆ ದಪ್ಪಾಗುವಂತೆ ಮತ್ತು ಅದರ ಮಧ್ಯವು ಯವಾಕಾರ ಆಗುವಂತೆ ಲೇಪಿಸಬೇಕು. ಅದನ್ನು ನೆರಳಲ್ಲಿ ಒಣಗಿಸಿ ಆ ಮೇಲೆ ಅದರ ನಡುವಿನ ಕಡ್ಡಿಯನ್ನು ತೆಗೆದು ಹಾಕಬೇಕು. ಧೂಮಪಾನ ಮಾಡುವಾಗ್ಗೆ ಆಯಾ ರೋಗಕ್ಕೆ ಅನುಗುಣವಾದ (ಘೃತ, ತೈಲ ಮುಂತಾದ) ಸ್ನೇಹವನ್ನು ಅದಕ್ಕೆ ಹಚ್ಚಿ ಚಿಲಿಮೆಯಲ್ಲಿಟ್ಟು ಬೆಂಕಿ ಹಚ್ಚಿ ಸೇದಲಿಕ್ಕೆ ಉಪಯೋಗಿಸಬೇಕು. (೨೦॥)

ಬೇರೆ, ಧೂಮಪಾನದ ಭೇದವನ್ನು ಹೇಳುತ್ತಾರೆ.

**ಶರಾವಸಂಪುಟಚ್ಛಿದ್ರೇ ನಾಡೀಂ ನ್ಯಸ್ಯ ದಶಾಂಗುಲಾಮ್ ॥೨೧॥**

**ಅಷ್ಟಾಂಗುಲಾಂ ವಾ ವಕ್ತ್ರೇಣ ಕಾಸವಾನ್ ಧೂಮಮಾಪಿಬೇತ್ ॥**

**ಅರ್ಥಃ**— ಕೆಮ್ಮಿಗಾಗಿ ಧೂಮಪಾನಮಾಡುವದಾದರೆ ಹರಿವಾಣದ ಸಂಪುಟದ ತೂತಿನಲ್ಲಿ ಹನ್ನೆರಡು ಅಥವಾ ಎಂಟು ಬೆರಳು ಉದ್ದಾದ ನಳಿಕೆಯನ್ನು ಜೋಡಿಸಿ ನಲಿಕೆಯಿಂದ ಬರುವ ಹೊಗೆಯನ್ನು ಬಾಯಿಯಿಂದ ಎಳಕೊಳ್ಳಬೇಕು.

**ಟಿಪ್ಪಣೆ**— ಒಂದು ಹರಿವಾಣದಲ್ಲಿ ಕೆಂಡಗಳನ್ನು ಹಾಕಿ ಆದರ ಮೇಲೆ ಕಾಸನಾಶಕ ಔಷಧಗಳ ಚೂರ್ಣ ಅಥವಾ ಕಲ್ಕವನ್ನು ಹಾಕಬೇಕು. ಆದರ ಮೇಲೆ ಒಂದು ನಲಿಕೆಯನ್ನು ಜೋಡಿಸಿದ ಹರಿವಾಣವನ್ನು ಡಬ್ಬುಹಾಕಲು ಆ ನಲಿಕೆಯಿಂದ ಹೊಗೆ ಬರುವದು. ಅದನ್ನು ಕುಡಿಯಬೇಕು. (೨೧॥)

**ಕಾಸಃ ಶ್ವಾಸಃ ಪೀನಸೋ ವಿಸ್ವರತ್ವಂ**

**ಪೂತಿರ್ಗಂಧಃ ಪಾಂಡುತಾ ಕೇಶದೋಷಃ** ॥೨೨॥

**ಕರ್ಣಾಸ್ಯಾಕ್ಷಿಸ್ರಾವಕಂಡ್ವರ್ತಿಜಾಡ್ಯಮ್**

**ತಂದ್ರಾ ಹಿಧ್ಮಾ ಧೂಮಪಂ ನ ಸ್ಪೃಶಂತಿ ॥**

ಅರ್ಥಃ— ಧೂಮಪಾನಮಾಡುವವನಿಗೆ ಕೆಮ್ಮು, ದಮ್ಮು, ಪೀನಸ, ಧ್ವನಿ ಒಡೆಯೋಣ, ಬಾಯಿ ಮೂಗಿನಿಂದ ದುರ್ಗಂಧ ವಾಸ, ನೋರೆ ಬೆಳ್ಳಗಾಗೋಣ, ಕೂದಲುಗಳ ವಿಕಾರ, ಕಿವಿ ಬಾಯಿ ಕಣ್ಣುಗಳ ಸ್ರಾವ, ತಿಂಡಿ, ಚುಚ್ಚುವಿಕೆ, ಜಡತ್ವ, ಆಲಸ್ಯ, ಬಿಕ್ಕುಗಳು ಉಂಟಾಗುವದಿಲ್ಲ.

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ**

**ಧೂಮಪಾನವಿಧಿರ್ನಾಮೈಕವಿಂಶತಿತಮೋಽಧ್ಯಾಯಃ ಸಮಾಪ್ತಃ ।**

ಇತಿ ಶ್ರೀಮದಾದ್ಯಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗಹೃದಯದ ಸೂತ್ರಸ್ಥಾನದಲ್ಲಿಯ 'ಧೂಮಪಾನವಿಧಿ' ಎಂಬ ೨೧ ನೆಯ ಅಧ್ಯಾಯದ ಟೀಕೆಯು ಮುಗಿದುದು.



# ೨೨ನೆಯ ಅಧ್ಯಾಯವು

ಧೂಮಪಾನದ ನಂತರ ಗಂಡೂಷಾದಿಗಳನ್ನು ಮಾಡಬೇಕೆಂದು ಹೇಳಿದ್ದರಿಂದ ಅವನ್ನು ಹೇಳುತ್ತಾರೆ.

**ಅಥಾತೋ *ಗಂಡೂಷಾದಿವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ ||**

ಅರ್ಥಃ— ಇನ್ನುಮೇಲೆ ಗಂಡೂಷ, ಕವಲ, ಪ್ರತಿಸಾರಣ, ಮುಖಾಲೇಪ, ಮೂರ್ಧತೈಲ, ಕರ್ಣಪೂರಣಗಳನ್ನು ಹೇಳುವ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಅರ್ಥಃ—ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

(ಅ) ಗಂಡೂಷವನ್ನು ಹೇಳುತ್ತಾರೆ.

**ಚತುಷ್ಪ್ರಕಾರೋ ಗಂಡೂಷಃ ಸ್ನಿಗ್ಧಃ ಶಮನಶೋಧನೌ ||**
**ರೋಪಣಶ್ಚ..........................................**

ಅರ್ಥಃ— ಸ್ನಿಗ್ಧ, ಶಮನ, ಶೋಧನ, ರೋಪಣ ಎಂದು ಗಂಡೂಷವು ನಾಲ್ಕು ಪ್ರಕಾರದ್ದು.

**ಟಿಪ್ಪಣೀ—** ಬಾಯಿಯಲ್ಲಿ ಹಿಡಿದ ದ್ರವವು ಅಗಳಾಡದಷ್ಟು ತುಂಬಿಕೊಂಡಿದ್ದರೆ ಅದಕ್ಕೆ ಗಂಡೂಷವೆಂದೂ, ಅಗಳಾಡುವಷ್ಟು ಸ್ವಲ್ಪ ಮಾತ್ರವಿದ್ದರೆ ಅದಕ್ಕೆ ಕವಲವೆಂದೂ ಅನ್ನುತ್ತಾರೆ ಎಂದು ಇದೇ ಅಧ್ಯಾಯದಲ್ಲಿಯೇ ಮುಂದೆ (ಶ್ಲೋಕ ೧೨) 'ಅಸಂಚಾರ್ಯೋ ಮುಖೇ ಪೂರ್ಣೇ ಗಂಡೂಷಃ ಕವಲೋಽನ್ಯಥಾ' ಎಂದು ಹೇಳಿದ್ದಾರೆ. (೧)

**..................ತ್ರಯಸ್ತತ್ರ ತ್ರಿಷು ಯೋಜ್ಯಾಶ್ಚಲಾದಿಷು** ||೧||
**ಅಂತ್ಯೋ ವ್ರಣಘ್ನಃ..........................................**

---

* ಗಂಡೂಷಾದಿವಿಧಿಯು ಚರಕದ ಸೂಂ ೫ ನೇ, ಸುಶ್ರುತದ ಚಿಂ. ೪೦ ನೇ ೪೧೦ ೧೯ ನೇ, ಅಷ್ಟಾಂಗ ಸಂಗ್ರಹದ ಸೂಂ ೩೧ ನೇ ಅಧ್ಯಾಯದಲ್ಲಿ ಹೇಳಿದೆ,

ಅರ್ಥ— ಇವುಗಳಲ್ಲಿ ವಾತಕ್ಕೆ ಸ್ನಿಗ್ಧ, ಪಿತ್ತಕ್ಕೆ ಶಮನ ಗಂಡೂಷಗಳನ್ನು ಮಾಡಬೇಕು. ಕಡೆಯದಾದ ರೋಪಣ ಗಂಡೂಷವು ಮುಖವ್ರಣ ನಾಶಕವಾಗಿದೆ. (೧)

...................... ಸ್ನಿಗ್ಧೋಽತ್ರ ಸ್ವಾದ್ವಮ್ಲಪಟುಸಾಧಿತೈಃ ।

ಸ್ನೇಹೈಃ..................................................................

ಅರ್ಥ— ಇವುಗಳಲ್ಲಿ ಸ್ನಿಗ್ಧ ಗಂಡೂಷವು ಸಿಹಿ ಹುಳಿ ಮತ್ತು ಉಪ್ಪು ರಸಗಳಿಂದ ಸಿದ್ಧಪಡಿಸಿದ ಸ್ನೇಹಗಳಿಂದ ಆಗುತ್ತದೆ. (೧॥)

ಸಂಶಮನಸ್ತಿಕ್ತಕಷಾಯಮಧುರೌಷಧೈಃ ॥೨॥

ಅರ್ಥಃ— ಶಮನ ಗಂಡೂಷವು ಕಹಿ ಒಗರು ಸಿಹಿ ಔಷಧಗಳಿಂದ ಸಿದ್ಧವಾಗುತ್ತದೆ. (೨)

ಶೋಧನಸ್ತಿಕ್ತಕಟ್ವಮ್ಲಪಟೂಷ್ಣೈಃ......................

ಅರ್ಥಃ— ಶೋಧನ ಗಂಡೂಷವು ಕಹಿ ಕಾರ ಹುಳಿ ಉಪ್ಪು ಉಷ್ಣ ಔಷಧಗಳಿಂದ ಮಾಡಲ್ಪಡುತ್ತದೆ. (೨।)

.ರೋಪಣಃ ಪುನಃ ।

ಕಷಾಯತಿಕ್ತೈಃ..

ಅರ್ಥಃ— ಆದರೆ ರೋಪಣ ಗಂಡೂಷವು ಒಗರು ಕಹಿ ಔಷಧಗಳಿಂದ ಮಾಡಲ್ಪಡುತ್ತದೆ. (೨॥)

ಗಂಡೂಷಗಳು ದ್ರವವಿರಬೇಕಾದ್ದರಿಂದ ಅವುಗಳಲ್ಲಿ ಹಾಕಬೇಕಾದ ದ್ರವಗಳನ್ನು ಹೇಳುತ್ತಾರೆ.

...............ತತ್ರ ಸ್ನೇಹಾಃ ಕ್ಷೀರಂ ಮಧೂದಕಮ್ ॥೩॥

ಶುಕ್ತಂ ಮದ್ಯಂ ರಸೋ ಮೂತ್ರಂ ಧಾನ್ಯಮ್ಲಂ ಚ ಯಥಾಯಥಮ್
ಕಲ್ಕೈರ್ಯುಕ್ತಂ ವಿಪಕ್ವಂ ವಾ ಯಥಾಸ್ಪರ್ಶಂ ಪ್ರಯೋಜಯೇತ್ ॥೪॥

ಅರ್ಥ:— ಆ ಗಂಡೂಷಗಳಲ್ಲಿ ಸ್ನೇಹ, ಹಾಲು, ಜೇನುತುಪ್ಪ, ನೀರು, ಶುಕ್ತ, ಮದ್ಯ, ಮಾಂಸರಸ, ಗೋಮೂತ್ರ, ಅಂಬಲಿಗಳಲ್ಲಿ ಆಯಾ ರೋಗಕ್ಕೆ ಯೋಗ್ಯವಾದದ್ದನ್ನು ತಕ್ಕ ಕಲ್ಕಗಳಿಂದ ಕೂಡಿಸಿ ಅಥವಾ ಸಿದ್ಧಮಾಡಿ ಬೇನೆಗೆ ಯೋಗ್ಯವಾಗುವಂತೆ ಶೀತ ಉಷ್ಣ ಅಥವಾ ಬೆಚ್ಚಗೆ ಇದ್ದಾಗ್ಗೆ ಉಪಯೋಗಿಸಬೇಕು.

ಟಿಪ್ಪಣಿ:— ಗಂಡೂಷಸಾಮಾನ್ಯಕ್ಕೆ ಉಪಯೋಗಬೀಳುವ ದ್ರವ್ಯಗಳನ್ನು ಇಲ್ಲಿ ಹೇಳಿದ್ದಾರೆ. ಆದರೆ ಸಂಗ್ರಹದಲ್ಲಿ ಯಾವ ಯಾವ ಗಂಡೂಷಕ್ಕೆ ಯಾವ ಯಾವ ದ್ರವ ಮತ್ತು ಸ್ಪರ್ಶ ಬೇಕೆಂಬುದನ್ನು ಬೇರೆ ಬೇರೆಯಾಗಿ ಈ ಪ್ರಕಾರ ಹೇಳಿದ್ದಾರೆ. 'ಸ್ನಿಗ್ಧ ಗಂಡೂಷವು ಮಧುರ ಹುಳಿ ಉಪ್ಪು ಮತ್ತು ಉಷ್ಣ ಔಷಧ ಗಳಿಂದ ಸಿದ್ಧವಾದ ಅಥವಾ ಯುಕ್ತವಾದ ಬಹಳ ಬಿಸಿಯಿಲ್ಲದ ಸ್ನೇಹ ಮಾಂಸರಸ ತಿಲಕಲ್ಕದ ನೀರು ಅಥವಾ ಹಾಲುಗಳಿಂದಲೂ, ಶಮನ ಗಂಡೂಷವು ಕಹಿ ಒಗರು ಸಿಹಿ ಶೀತಗಳಾದ ಪಡುವಲ ಬೇವು ನೇರಿಲ ಮಾವು ಮಲ್ಲಿಗೆಗಳ ಎಳೆ ನೀಲಕಮಲ ಜೇಷ್ಠಮಧುಗಳ ಕಷಾಯ ಸಕ್ಕರೆ ನೀರು ಜೇನು ಹಾಲು ಕಬ್ಬಿನ ರಸ ತುಪ್ಪ ಮೊದಲಾದವುಗಳಿಂದಲೂ, ಶೋಧನ ಗಂಡೂಷವು ಕಾರ ಹುಳಿ ಉಪ್ಪು ಉಷ್ಣಗಳಾದ ಶಿರೋವಿರೇಚನ ಮುಂತಾದ ದ್ರವ್ಯಗಳಿಂದ ಕೂಡಿದ ಅಥವಾ ಸಿದ್ಧವಾದ ಶುಕ್ತ ಮದ್ಯ ಅಂಬಲಿ ಗೋಮೂತ್ರಗಳಿಂದ ಸಿದ್ಧವಾಗುತ್ತದೆ.' (೪)

**ದಂತಹರ್ಷೇ ದಂತಚಾಲೇ ಮುಖರೋಗೇ ಚ ವಾತಿಕೇ ||**
**ಸುಖೋಷ್ಣಮಥವಾ ಶೀತಂ ತಿಲಕಲ್ಕೋದಕಂ ಹಿತಮ್ ||೫||**
**ಗಂಡೂಷಧಾರಣೇ ನಿತ್ಯಂ ತೈಲಂ ಮಾಂಸರಸೋऽಥವಾ ||**

ಅರ್ಥ:— ದಂತಹರ್ಷ ಮತ್ತು ದಂತಚಾಲ (ಹಲ್ಲು ಅಗಳಾಡೋಣ) ಮತ್ತು ವಾತಿಕ ಮುಖರೋಗದಲ್ಲಿ ದೋಷಾನುಸಾರವಾಗಿ ಶೀತ ಅಥವಾ ಬೆಚ್ಚಗಿನ ಎಳ್ಳಿನ (ಎಳ್ಳು ನೀರು ಅರೆದು ಸಿದ್ಧವಾದ) ನೀರು ಹಿತಕರವು. ನಿರೋಗಿಯು ದಿನಾಲು ತೈಲ ಅಥವಾ ಮಾಂಸರಸವನ್ನು ಗಂಡೂಷಕ್ಕಾಗಿ ಉಪಯೋಗಿಸಬೇಕು. (೫)

**ಊಷಾದಾಹಾನ್ವಿತೇ ಪಾಕೇ ಕ್ಷತೇ ಚಾಗಂತುಸಂಭವೇ ||೬||**
**ವಿಷೇ ಕ್ಷಾರಾಗ್ನಿದಗ್ಧೇ ಚ ಸರ್ಪಿರ್ಧಾರ್ಯಂ ಪಯೋऽಥವಾ ||**

ಅರ್ಥ:— ಕ್ಷಾರದಿಂದ ಅಥವಾ ಬೆಂಕಿಯಿಂದ ಆಗುವಂಥ ದಾಹವುಳ್ಳ ಮುಖಪಾಕದಲ್ಲಿ ಅಥವಾ ಆಗಂತುಕ್ಷತದಲ್ಲಿ ಅಥವಾ ವಿಷ ಕ್ಷಾರ ಅಗ್ನಿಗಳಿಂದ ಸುಟ್ಟಲ್ಲಿ ತುಪ್ಪವನ್ನು ಅಥವಾ ಹಾಲನ್ನು ಬಾಯಿಯಲ್ಲಿ ಹಿಡಿಯಬೇಕು. (೬॥)

**ವೈಶದ್ಯಂ ಜನಯತ್ಯಾಶು ಸಂದಧಾತಿ ಮುಖವ್ರಣಾನ್ ॥೭॥**

**ದಾಹತೃಷ್ಣಾಪ್ರಶಮನಂ ಮಧುಗಂಡೂಷಧಾರಣಮ್ ।**

ಅರ್ಥ:— ಜೇನಿನ ಗಂಡೂಷವು ಬಾಯಿಯನ್ನು ಶೀಘ್ರವಾಗಿ ಸ್ವಚ್ಛ ಮಾಡುತ್ತದೆ. ಮುಖದಲ್ಲಿದ್ದ ವ್ರಣಗಳನ್ನು ಮಾಯಿಸುತ್ತದೆ. ದಾಹ ನೀರಡಿಕೆಗಳನ್ನು ಕಳೆಯುತ್ತದೆ. (೭॥)

**ಧಾನ್ಯಾಮ್ಲಮಾಸ್ಯವೈರಸ್ಯಮಲದೌರ್ಗಂಧ್ಯನಾಶನಮ್ ॥೮॥**

**ತದೇವಾಲವಣಂ ಶೀತಂ ಮುಖಶೋಷಹರಂ ಪರಮ್ ॥**

ಅರ್ಥ:— ಅಂಬಲಿಯ ಗಂಡೂಷವು ಮುಖದ ಅರುಚಿ ಮಲ ಮತ್ತು ದುರ್ಗಂಧವನ್ನು ನಾಶಮಾಡುತ್ತದೆ. ಉಪ್ಪು ಹಾಕದ ಅಂಬಲಿಯನ್ನು ತಣ್ಣಗೆ ಮಾಡಿ ಬಾಯಿಯಲ್ಲಿ ಹಿಡಿದರೆ ಮುಖಶೋಷವನ್ನು ಚನ್ನಾಗಿ ಕಳೆಯುವದು. (೮॥)

**ಆಶು ಕ್ಷಾರಾಂಬುಗಂಡೂಷೋ ಭಿನತ್ತಿ ಶ್ಲೇಷ್ಮಣಶ್ಚಯಮ್ ॥೯॥**

ಅರ್ಥ:— ಕ್ಷಾರ ಕೂಡಿದ ನೀರಿನ ಗಂಡೂಷವು ಕಫಸಂಚಯವನ್ನು ಕೂಡಲೇ ಕಳೆಯುವದು. (೯)

**ಸುಖೋಷ್ಣೋದಕಗಂಡೂಷೈರ್ಜಾಯತೇ ವಕ್ತ್ರಲಾಘವಮ್ ।**

ಅರ್ಥ:— ಬೆಚ್ಚಗಿನ ನೀರಿನ ಗಂಡೂಷಗಳಿಂದ ಬಾಯಿಯು ಹಗುರಾಗುತ್ತದೆ. (೯॥)

**ನಿವಾತೇ ಸಾತಪೇ ಸ್ವಿನ್ನಮೃದಿತಸ್ಕಂಧಕಂಧರಃ ॥೧೦॥**

**ಗಂಡೂಷಮಪಿಬನ್ ಕಿಂಚಿದುನ್ನತಾಸ್ಯೋ ವಿಧಾರಯೇತ್ ॥
ಕಫಪೂರ್ಣಾಸ್ಯತಾ ಯಾವತ್ಸ್ರವದ್ಘ್ರಾಣಾಕ್ಷಿನಾಸತಾ**

ಅರ್ಥಃ— ಹೆಗಲು ಕುತ್ತಿಗೆಗಳನ್ನು ಮೊದಲು ಕಾಸಿ ಆಮೇಲೆ ಒತ್ತಿಸಿಕೊಂಡು ಗಾಳಿಯಿಲ್ಲದ ಆದರೆ ಬಿಸಿಲುಳ್ಳ ಸ್ಥಳದಲ್ಲಿ ಕೂತು ಮೋರೆ ಯನ್ನು ಸ್ವಲ್ಪ ಮೇಲಕ್ಕೆತ್ತಿ ಕಫದಿಂದ ಬಾಯಿಯು ತುಂಬುವ ವರೆಗೆ ಅಥವಾ ಮೂಗು ಕಣ್ಣುಗಳಿಂದ ನೀರು ಸೋರುವವರೆಗೆ ಗಂಡೂಷಗಳನ್ನು ಕುಡಿಯದೆ ಬಾಯಿಯಲ್ಲಿ ಹಿಡಿಯಬೇಕು.

ಟಿಪ್ಪಣಿ:— ಸಂಗ್ರಹದಲ್ಲಿ "ಕವಲವನ್ನು ಹಿಡಿದಾಗ್ಗೆ ಗಲ್ಲದ ಕಡೆಗೆ ಒಮ್ಮೆ ಮತ್ತು ಕುತ್ತಿಗೆ ಕಡೆಗೆ ಒಮ್ಮೆ ತಿರುಗಾಡಿಸಬೇಕು. ಇದೇ ಕವಲದ ವಿಶೇಷ ಕಾರ್ಯವು ಆಮೇಲೆ ಪುನಃ ಸ್ವೇದ ಮತ್ತು ಮರ್ದನಗಳನ್ನು ಮಾಡಿಕೊಳ್ಳಬೇಕು. ಅಂದರೆ ಕಫವು ಉತ್ಕ್ಲೇಶಹೊಂದಿ ಬಾಯಿಯಲ್ಲಿ ಬರುವದು. ಸಾಧಾರಣವಾಗಿ ೩-೫ ಅಥವಾ ೭ ಗಂಡೂಷಗಳನ್ನು ಹಿಡಿಯಬೇಕು. ಸ್ವಾಸ್ಥ್ಯ ಉಂಟಾದರೆ ಸಮ್ಯಗ್ಯೋಗ ವೆಂದೂ, ಜಾಡ್ಯ ಅರುಚಿ ಬಾಯಿಗೆ ನೀರು ಬಿಡೋಣ ಬಾಯಿಯಲ್ಲಿ ಜಿಗಟು ಇದ್ದರೆ ಅಯೋಗವೆಂದೂ, ಮುಖಶೋಷ ಮುಖಪಾಕ ದಣವು ಅರುಚಿ ಎಡೆ ಹಾರೋಣ ಧ್ವನಿ-ಕುಗ್ಗೋಣ ಕರ್ಣನಾದಗಳಿಂದ ಅತಿಯೋಗವೆಂದೂ ತಿಳಿಯ ತಕ್ಕದ್ದು ಎಂದು ಹೆಚ್ಚಿಗೆ ಹೇಳಿರುವರು. (೧೦)

(ಅ) ಕವಲವನ್ನು ಹೇಳುತ್ತಾರೆ.

**ಅಸಂಚಾರ್ಯೋ ಮುಖೇ ಪೂರ್ಣೇ ಗಂಡೂಷಃ ಕವಲೋಽನ್ಯಥಾ ॥**

ಅರ್ಥ:— ಬಾಯಿಯಲ್ಲಿ ಹಿಡಿದ ದ್ರವ ಪದಾರ್ಥವು ಅಗಳಾಡ ದಷ್ಟು ತುಂಬಿದ್ದರೆ ಗಂಡೂಷವೆಂದೂ ಅಗಳಾಡುವಂತೆ ಇದ್ದರೆ ಕವಲ ವೆಂದೂ ಕರೆಯಲ್ಪಡುವದು. (೧೧॥)

**ಮನ್ಯಾಶಿರಃಕರ್ಣಮುಖಾಕ್ಷಿರೋಗಾಃ
ಪ್ರಸೇಕಕಂಠಾಮಯವಕ್ತ್ರಶೋಷಾಃ ॥೧೨॥
ಹೃಲ್ಲಾಸತಂದ್ರಾರುಚಿಪೀನಸಾಶ್ಚ ಸಾಧ್ಯಾ ವಿಶೇಷಾತ್ಕವಲಗ್ರಹೇಣ ॥**

ಅರ್ಥಃ— ಕವಲಗಳಿಂದ ವಿಶೇಷವಾಗಿ ಹೆಡಕು ತಲೆ ಕಿವಿ ಮುಖ ಕಣ್ಣುರೋಗಗಳೂ ಬಾಯಿಗೆ ನೀರು ಬಿಡೋಣ ಕಂಠರೋಗ ಬಾಯಿ ಒಣ ಗೋಣ ಓಕರಿಕೆ ತಂದ್ರೆ ಅರುಚಿ ನೆಗಡಿಗಳೂ ದೂರಾಗುತ್ತವೆ. (೧೨॥)

ಪ್ರತಿಸಾರಣವನ್ನು ಹೇಳುತ್ತಾರೆ,

**ಕಲ್ಕೋ ರಸಕ್ರಿಯಾ ಚೂರ್ಣಸ್ತ್ರಿವಿಧಂ ಪ್ರತಿಸಾರಣಮ್ ॥೧೩॥**

**ಯುಂಜ್ಯಾತ್ತತ್ಕಫರೋಗೇಷು ಗಂಡೂಷವಿಹಿತೌಷಧೈಃ ॥**

ಅರ್ಥ:— ಪ್ರತಿಸಾರಣವು ಕಲ್ಕ, ಅವಲೇಹ (ಜೇನು ಮುಂತಾದುದು ಕೂಡಿಸಿದ ಚೂರ್ಣ), ಮತ್ತು ಚೂರ್ಣವೆಂದು ಮೂರುವಿಧವು. ಅದನ್ನು ಶೋಧನ ಗಂಡೂಷಕ್ಕೆ ಹೇಳಿದ ಔಷಧಗಳಿಂದ ಸಿದ್ಧಪಡಿಸಿ ಕಫರೋಗಗಳಲ್ಲಿ ಉಪಯೋಗಿಸಬೇಕು.

**ಟಿಪ್ಪಣಿ:—** ಇದು ಬೆರಳಿನಿಂದ ಹಚ್ಚಿ ತಿಕ್ಕಲ್ಪಡುತ್ತದೆ (ಪ್ರತಿ ಸಾರ್ಯತೇ ಇತಿ). ಆ ಕಾರಣ ಪ್ರತಿಸಾರಣವೆಂದು ಕರೆಯಲ್ಪಡುತ್ತದೆ. (೧೩)

(ಅ) ಮುಖಲೇಪವನ್ನು ಹೇಳುತ್ತಾರೆ.

**ಮುಖಾಲೇಪಸ್ತ್ರಿಧಾ ದೋಷವಿಷಹಾ ವರ್ಣಕೃಚ್ಚ ಸಃ ॥೧೪॥**

**ಉಷ್ಣೋ ವಾತಕಫೇ ಶಸ್ತಃ, ಶೇಷೇಷ್ವತ್ಯರ್ಥಶೀತಲಃ ॥**

ಅರ್ಥ:— ಮುಖಲೇಪವು ದೋಷಘ್ನ, ವಿಷಘ್ನ, ಮತ್ತು ವರ್ಣಕರವೆಂದು ಮೂರು ವಿಧವು. ಅದು ವಾತದಲ್ಲಿ ಮತ್ತು ಕಫದಲ್ಲಿ ಮತ್ತು ವಾತಕಫದಲ್ಲಿ ಉಷ್ಣವಾಗಿರಬೇಕು. ಉಳಿದ ಕಡೆಗಳಲ್ಲಿ ಅಂದರೆ ಪಿತ್ತ, ವಿಷ, ವರ್ಣಕರದಲ್ಲಿ ಅದು ಬಹಳ ಶೀತವಾಗಿರಬೇಕು. (೧೪)

**ತ್ರಿಪ್ರಮಾಣಶ್ಚತುರ್ಭಾಗತ್ರಿಭಾಗಾರ್ಧಾಂಗುಲೋನ್ನತಿಃ ॥೧೫॥**

ಅರ್ಥ:— ಅದರ ಎತ್ತರ (ಹೀನ,ಉತ್ತಮ,ಮಧ್ಯಮ) ಪ್ರಮಾಣಗಳು ಅಂಗುಲಿಯ ೧/೪, ೧/೩, ೧/೨ ಈ ಪ್ರಕಾರ ಮೂರು ಇರುತ್ತವೆ. (೧೫)

**ಅಶುಷ್ಕಸ್ಯ ಸ್ಥಿತಿಸ್ತಸ್ಯ, ಶುಷ್ಕೋ ದೂಷಯತಿ ಚ್ಛವಿಮ್ ॥**
**ತಮಾರ್ದ್ರಯಿತ್ವಾಪನಯೇತ್ತದಂತೇಽಭ್ಯಂಗಮಾಚರೇತ್ ॥೧೬॥**

ಅರ್ಥ:— ಒಣಗುವ ವರೆಗೆ ಮಾತ್ರ ಅದನ್ನು ಇಡಬೇಕು. ಯಾಕೆಂದರೆ ಒಣಗಿದ ಮೇಲೆ ಅದು ಕಾಂತಿಯನ್ನು ಕಳೆಯುವದು. ಅದನ್ನು ನೆನೆಸಿ ತೆಗೆಯಬೇಕು. ಆಮೇಲೆ ಅಭ್ಯಂಗ ಮಾಡಬೇಕು. (೧೬)

ವಿವರ್ಜಯೇದ್ದಿವಾಸ್ವಪ್ನಭಾಷಾಗ್ನ್ಯಾತಪಶುಕ್ಕ್ರುಧಃ ||

ಅರ್ಥಃ— ಹಗಲು ಮಲಗೋಣ, ಬಹಳ ಮಾತಾಡೋಣ, ಬೆಂಕಿ ಕಾಸೋಣ, ಬಿಸಿಲು, ಶೋಕ, ಸಿಟ್ಟುಗಳನ್ನು ಬಿಡಬೇಕು. (೧೬||)

ನ ಯೋಜ್ಯಃ ಪೀನಸೇಽಜೀರ್ಣೇ ದತ್ತನಸ್ಯೇ ಹನುಗ್ರಹೇ ||೧೭||
ಅರೋಚಕೇ ಜಾಗರಿತೇ ಸ ತು ಹಂತಿ ಸುಯೋಜಿತಃ ||
ಅಕಾಲಪಲಿತವ್ಯಂಗವಲೀತಿಮಿರನೀಲಿಕಾಃ ||೧೮||

ಅರ್ಥಃ— ನೆಗಡಿ ಅಜೀರ್ಣ ನಸ್ಯಸೇವನ ಹನುಗ್ರಹ ಅರುಚಿಗಳುಳ್ಳವರಿಗೂ ರಾತ್ರಿಯಲ್ಲಿ ಜಾಗರಣೆ ಮಾಡಿದವನಿಗೂ ಮುಖಲೇಪವನ್ನು ಮಾಡಬಾರದು. ಯೋಗ್ಯರೀತಿಯಿಂದ ಮಾಡಿದ ಮುಖಲೇಪವು ಅಕಾಲದಲ್ಲಿ ಕೂದಲು ಬೆಳ್ಳಗಾಗೋಣ, ವ್ಯಂಗ, ಮೈಮೇಲೆ ನಿರಿಗೆ ಬೀಳೋಣ, ತಿಮಿರ, ನೀಲಿಕೆಗಳನ್ನು ಕಳೆಯುವದು. (೧೮)

ಕೋಲಮಜ್ಜಾ ವೃಷಾನ್ಮೂಲಂ ಶಾಬರಂ ಗೌರಸರ್ಷಪಾಃ ||
ಸಿಂಹೀಮೂಲಂ ತಿಲಾಃ ಕೃಷ್ಣಾ ದಾರ್ವೀತ್ವಙ್ನಿಸ್ತುಷಾ ಯವಾಃ||೧೯||
ದರ್ಭಮೂಲಹಿಮೋಶೀರಶಿರೀಷಮಿಶಿತಂಡುಲಾಃ ||
ಕುಮುದೋತ್ಪಲಕಲ್ಹಾರದೂರ್ವಾಮಧುಕಚಂದನಮ್ ||೨೦||
ಕಾಲೀಯಕತಿಲೋಶೀರಮಾಂಸೀತಗರಪದ್ಮಕಮ್ ||
ತಾಲೀಸಗುಂದ್ರಾಪುಂಡ್ರಾಹ್ವಯಷ್ಟೀಕಾಶನತಾಗುರು ||೨೧||
ಇತ್ಯರ್ಧಾರ್ಧೋದಿತಾ ಲೇಪಾ ಹೇಮಂತಾದಿಷು ಷಟ್ ಸ್ಮೃತಾಃ ||

ಅರ್ಥಃ—(೧) ಬೋರೆಯ ಮಜ್ಜೆ, ಆಡಸಲ ಬೇರು, ಬಿಳೀ ಲೋಧ್ರ, ಬಿಳೀ ಸಾಸಿವೆ. (೨) ಹೆಬ್ಬುಗುಳ್ಳಬೇರು, ಕರೇ ಎಳ್ಳು, ಮರಅರಿಷಣದ ತೊಗಟೆ, ಹೊಟ್ಟು ಇಲ್ಲದ ಮುಳಜವೆ. (೩) ದರ್ಭಮೂಲ, ಬಿಳೀಚಂದನ, ಲಾಳದ ಬೇರು, ಸಿರಸಲತೊಟೆ, ಬಡೇಸೋಪ, ಅಕ್ಕಿ. (೪) ಬಿಳೀ ಕಮಲ, ನೀಲ ಕಮಲ, ಕರೇ ಕಮಲ, ಕರಿಕೆ, ಜೇಷ್ಠಮಧು, ಚಂದನ. (೫) ಹಳದಿ

ಚಂದನ, ಕರೇ ಎಳ್ಳು, ಬಾಳದ ಬೇರು, ಪಟಿಕಪಾಷಿ, ತಗರ, ಪದ ಶಾಣ (೬) ತಾಲೀಸ ಪತ್ರ, ಗುಂಪ್ರಾ ಹುಲ್ಲು, ಬಿಳೇ ಕಮಲ, ಜ್ಯೇಷ್ಠಮಧು, ಕಾಸಿ (ಕಾಕೇಮಣಿ ಹುಲ್ಲು), ತಗರ, ಅಗರು ಈ ಪ್ರಕಾರ ಅರ್ಧ ಅರ್ಧ ಶ್ಲೋಕ ಗಳಲ್ಲಿ ಹೇಳಿದ ೬ ಲೇಪಗಳು ಕ್ರಮವಾಗಿ ಹೇಮಂತ ಮೊದಲಾದ ಆರು ಋತುಗಳಲ್ಲಿ ಅತಿ ಉಪಯುಕ್ತವಾಗಿವೆ. (೨೧)

**ಮುಖಾಲೇಪನಶೀಲಾನಾಂ ದೃಢಂ ಭವತಿ ದರ್ಶನಮ್** ೨೨

**ವದನಂ ಚಾಪರಿಮ್ಲಾನಂ ಶ್ಲಕ್ಷ್ಣಂ ತಾಮರಸೋಪಮಮ್ ॥**

ಅರ್ಥ:— ಮುಖಲೇಪವನ್ನು ನೇಮದಿಂದ ಮಾಡುವಂಥವರ ದೃಷ್ಟಿಯು ಬಲಿಷ್ಠವಾಗುವದು. ಮೋರೆಯಾದರೂ ಬಾಡದೆ ಕಮಲದಂತೆ ತೇಜಃಪುಂಜವಾಗುವದು. (೨೨)

ಮೂರ್ಧತೈಲವನ್ನು ಹೇಳುತ್ತಾರೆ.

**ಅಭ್ಯಂಗಸೇಕಪಿಚವೋ ಬಸ್ತಿಶ್ಚೇತಿ ಚತುರ್ವಿಧಮ್** ೨೩

**ಮೂರ್ಧ್ನಿತೈಲಂ ಬಹುಗುಣಂ ತದ್ವಿದ್ಯಾದುತ್ತರೋತ್ತರಮ್ ॥**

ಅರ್ಥ:— ಮೂರ್ಧತೈಲವು ಅಭ್ಯಂಗ, ಪರಿಷೇಕ, ಪಿಚು (ಅರಳೆಯಿಂದ ಮಾಡಿದ ಒಂದು ತರದ ಬತ್ತಿ), ಬಸ್ತಿ ಎಂದು ನಾಲ್ಕು ಪ್ರಕಾರಗಳು. ಇವುಗಳಲ್ಲಿ ಹಿಂದುಹಿಂದಿನದಕ್ಕಿಂತ ಮುಂದುಮುಂದಿನದು ಹೆಚ್ಚು ಗುಣವುಳ್ಳದ್ದು. (೨೩)

**ತತ್ರಾಭ್ಯಂಗಃ ಪ್ರಯೋಕ್ತವ್ಯೋ ರೌಕ್ಷ್ಯಕಂಡೂಮಲಾದಿಷು** ೨೪

ಅರ್ಥ:— ರೂಕ್ಷತೆ ಕಂಡೂ ಮಲಗಳಲ್ಲಿ ಅಭ್ಯಂಗವನ್ನು ಪ್ರಯೋಗಿಸಬೇಕು. (೨೪)

**ಅರೂಂಷಿಕಾಶಿರಸ್ತೋದದಾಹಪಾಕವ್ರಣೇಷು ತು ॥**
**ಪರಿಷೇಕಃ, ಪಿಚುಃ ಕೇಶಶಾತಸ್ಫುಟನಧೂಪನೇ** ೨೫
**ನೇತ್ರಸ್ತಂಭೇ ಚ.**

ಅರ್ಥ:— ಅರೂಂಷಿಕೆ (ತಲೆಯಲ್ಲಿ ಆಗುವ ಒಂದು ತರದ ಹುಣ್ಣು) ತಲೆನೋವು ದಾಹ ಪಾಕ ವ್ರಣಗಳಲ್ಲಿ ಪರಿಷೇಕವು ಹಿತಕರವು. ಕೂದಲು ಉದರೋಣ ಕೂದಲು-ಶೀಳೋಣ ತಲೆಯಿಂದ ಹೊಗೆ ಹೊರಟಂತೆ-ಆಗೋಣ, ನೇತ್ರ-ಸ್ತಂಭಗಳಲ್ಲಿ ಪಿಚುವನ್ನು ಉಪಯೋಗಿಸಬೇಕು. (೩೫)

....................ಬಸ್ತಿಸ್ತು ಪ್ರಸುಪ್ತ್ಯರ್ದಿತಜಾಗರೇ ॥
ನಾಸಾಸ್ಯಶೋಷೇ ತಿಮಿರೇ ಶಿರೋರೋಗೇ ಚ ದಾರುಣೇ ॥೩೬॥

ಅರ್ಥ:— ಸ್ಪರ್ಶಜ್ಞಾನವಾಗದಿರೋಣ, ಅರ್ದಿತ,ನಿದ್ರಾನಾಶ,ಬಾಯಿ ಮೂಗು ಒಣಗೋಣ, ತಿಮಿರ, ಭಯಂಕರ ಶಿರೋರೋಗಗಳಲ್ಲಿ ಬಸ್ತಿಯ ಉಪಯೋಗಮಾಡಬೇಕು. (೩೬)

ಶಿರೋಬಸ್ತಿ ವಿಧಿಯನ್ನು ಹೇಳುತ್ತಾರೆ.

ವಿಧಿಸ್ತಸ್ಯ ನಿಷಣ್ಣಸ್ಯ ಪೀಠೇ ಜಾನುಸಮೇ ಮೃದೌ ॥
ಶುದ್ಧಾಕ್ತಸ್ವಿನ್ನದೇಹಸ್ಯ ದಿನಾಂತೇ ಗವ್ಯಮಾಹಿಷಮ್ ॥೩೭॥

ದ್ವಾದಶಾಂಗುಲವಿಸ್ತೀರ್ಣಂ ಚರ್ಮಪಟ್ಟಂ ಶಿರಃಸಮಮ್ ॥
ಆಕರ್ಣಬಂಧನಸ್ಥಾನಂ ಲಲಾಟೇ ವಸ್ತ್ರವೇಷ್ಟಿತೇ ॥೩೮॥

ಚೈಲವೇಣಿಕಯಾ ಬದ್ಧ್ವಾಮಾಷಕಲ್ಕೇನ ಲೇಪಯೇತ್ ॥
ತತೋ ಯಥಾವ್ಯಾಧಿ ಶೃತಂ ಸ್ನೇಹಂ ಕೋಷ್ಣಂ ನಿಷೇಚಯೇತ್ ॥೩೯॥

ಊರ್ಧ್ವಂ ಕೇಶಭುವೋ ಯಾವದಂಗುಲಮ್................

ಅರ್ಥ:— ಅದರ ವಿಧಿಯೆಂದರೆ ರೋಗಿಗೆ ಮೊದಲೇ ವಮನಾದಿಗಳನ್ನು ಕೊಟ್ಟು ಶೋಧನಮಾಡಿ ಆಮೇಲೆ ಅಭ್ಯಂಗ ಮತ್ತು ಸ್ವೇದಮಾಡಿ ಸಂಜೆಯ ಮುಂದೆ ಮೊಳಕಾಲು ಮಟ್ಟು ಎತ್ತರವಾದ ಮೆತ್ತನ್ನ ಆಸನದಲ್ಲಿ ಕೂಡ್ರಿಸಿ ಹಣೆಗೆ ವಸ್ತ್ರವನ್ನು ಸುತ್ತಿ ಅದರ ಮೇಲೆ ತಲೆಯ ಪರಿಘದಷ್ಟು ಉದ್ದವಾದ ೧೨ ಬೆರಳು ಎತ್ತರವಾದ ಆಕಳ ಅಥವಾ ಎಮ್ಮೆಯ ತೊಗಲಿನ ಪಟ್ಟಿಯನ್ನು ಕಿವಿಯ ವರೆಗೆ ಬಸ್ತಿಯನ್ನು ಕಟ್ಟುವ ಸ್ಥಳದಲ್ಲಿ ಸುತ್ತಿ ಮೇಲೆ

ಅರಿವೆಯ ಪಟ್ಟಿಯಿಂದ ಕಟ್ಟಬೇಕು. ಸಂಧಿಗೆ ಹುಲ್ಲಿನ ಕಲ್ಕದಿಂದ ಲೇಪನ ಮಾಡಬೇಕು. ಆಮೇಲೆ ಅದರಲ್ಲಿ ಆಯಾ ದೋಷಗಳಿಗೆ ತಕ್ಕ ಔಷಧಗಳಿಂದ ಸಿದ್ಧಪಡಿಸಿದ ಬೆಚ್ಚಗಿನ ಸ್ನೇಹವನ್ನು ತಲೆಯ ಮೇಲೆ ೧ ಬೆರಳು ಎತ್ತರ ಬರುವ ವರೆಗೆ ಹಾಕಬೇಕು. (೨೮)

......................................ಧಾರಯೇದ್ಧ್ಯುತಮ್ ॥
ಆವಕ್ತ್ರನಾಸಿಕೋತ್ಕ್ಲೇದಾತ್......................

ಅರ್ಥ:— ಆ ಸ್ನೇಹವನ್ನು ಮೂಗು ಬಾಯಿಗಳಿಂದ ನೀರು ಸೋರುವ ವರೆಗೆ ಇಡಬೇಕು. (೨೯ ½)

.ದಶಾಷ್ಟೌ ಷಟ್ ಚಲಾದಿಷು ॥೩೦॥
ಮಾತ್ರಾಸಹಸ್ರಾಣ್ಯರುಜೇ ತ್ವೇಕಂ.

ಅರ್ಥ:— ಅದನ್ನು ವಾತದಲ್ಲಿ ಹತ್ತು ಸಾವಿರ ಮಾತ್ರೆ, ಪಿತ್ತದಲ್ಲಿ ಎಂಟು ಸಾವಿರ ಮಾತ್ರೆ, ಕಫದಲ್ಲಿ ಆರು ಸಾವಿರ ಮಾತ್ರೆ ಇಡಬೇಕು. ಬೇನೆ ಇಲ್ಲದವರಿಗೆ ಅಂದರೆ ನಿರೋಗಿಗೆ ಒಂದು ಸಾವಿರ ಮಾತ್ರೆ ಇಡಬೇಕು. (೩೦)

...........................ಸ್ಕಂಧಾದಿ ಮರ್ದಯೇತ್ ॥
ಮುಕ್ತಸ್ನೇಹಸ್ಯ.........................................

ಅರ್ಥ:—ಅದನ್ನು ತೆಗೆದ ಮೇಲೆ ಹೆಗಲು ಕುತ್ತಿಗೆ ತಲೆ ಮುಂತಾದವುಗಳನ್ನು ಚನ್ನಾಗಿ ಮರ್ದಿಸಬೇಕು. (೩೦॥)

.ಪರಮಂ ಸಪ್ತಾಹಂ ತಸ್ಯ ಸೇವನಮ್

ಅರ್ಥ:— ಬಸ್ತಿ ಕೊಡುವ ಅವಧಿಯು ಮೂರು, ಐದು, ಏಳು ದಿವಸ ಇದಕ್ಕೂ ಹೆಚ್ಚಿಗೆ ಕೊಡಬಾರದು. (೩೧)

(ಅ) ಕರ್ಣ ಪೂರಣವನ್ನು ಹೇಳುತ್ತಾರೆ.

ಧಾರಯೇತ್ಪೂರಣಂ ಕರ್ಣೇ ಕರ್ಣಮೂಲಂ ವಿಮರ್ದಯನ್ ॥
ರುಜಃ ಸ್ಯಾನ್ಮಾರ್ದವಂ ಯಾವನ್ಮಾತ್ರಾಶತಮವೇದನೇ ॥೩೨॥

ಅರ್ಥಃ— ಕರ್ಣ-ಮೂಲವನ್ನು ಮರ್ದಿಸುತ್ತ ಬೇನೆಯು ಕಡಿಮೆಯಾಗುವ ವರೆಗೆ ಕಿವಿಯಲ್ಲಿ ಔಷಧವನ್ನು ಹಾಕುತ್ತಿರಬೇಕು. ನೋವು ಇಲ್ಲದಾಗ್ಗೆ ಅಂದರೆ ನಿರೋಗಿ ಮನುಷ್ಯನಿಗೆ ನೂರು ಮಾತ್ರೆಯ ಕಾಲ ಇಡಬೇಕು. (೩೨)

ಯಾವತ್ಪರ್ಯೇತಿ ಹಸ್ತಾಗ್ರಂ ದಕ್ಷಿಣಂ ಜಾನುಮಂಡಲಮ್ ||
ನಿಮೇಷೋನ್ಮೇಷಕಾಲೇನ ಸಮಂ ಮಾತ್ರಾ ತು ಸಾ ಸ್ಮೃತಾ ||೩೩||

ಅರ್ಥಃ— ಮಾತ್ರಾ ಅಂದರೆ ಬಲಗೈತುದಿಯು ಬಲ ಮೊಳಕಾಲನ್ನು ಒಮ್ಮೆ ಸುತ್ತಿ ಬರುವ ಕಾಲವು; ಅಥವಾ ಕಣ್ಣು ಮುಚ್ಚಿ ತೆಗೆಯುವದಕ್ಕೆ ಬೇಕಾದ ಕಾಲವು. (೩೩)

ಕಚಸದನಸಿತತ್ವಪಿಂಜರತ್ವಂ ಪರಿಫುಟನಂ
ಶಿರಸಃ ಸಮೀರರೋಗಾನ್ ||
ಜಯತಿ, ಜನಯತೀಂದ್ರಿಯಪ್ರಸಾದಂ
ಸ್ವರಹನುಮೂರ್ಧಬಲಂ ಚ ಮೂರ್ಧತೈಲಮ್

ಅರ್ಥಃ— ತಲೆಗೆ ಎಣ್ಣೆ ಉಣಿಸೋಣದರಿಂದ ಕೂದಲು ಉದರೋಣ ಬೆಳ್ಳಗಾಗೋಣ ನಸುಗೆಂಪಾಗೋಣ ಸೀಳೋಣ ಮತ್ತು ತಲೆಯ ವಾತರೋಗಗಳು ನಾಶವಾಗಿ ಚಕ್ಷುರಾದಿ ಇಂದ್ರಿಯಗಳಿಗೆ ಪ್ರಸನ್ನತೆ ಮತ್ತು ಸ್ವರ ಗದ್ದ ತಲೆಗಳಿಗೆ ಬಲವು ಬರುತ್ತದೆ. (೩೪)

ಇತಿ ಅಷ್ಟಾಂಗಹೃದಯಸಂಹಿತಾಯಾಂ ಗಂಡೂಷಾದಿ-
ವಿಧಿರ್ನಾಮ ದ್ವಾವಿಂಶತಿತಮೋಽಧ್ಯಾಯಃ ಸಮಾಪ್ತಃ |

ಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಸೂತ್ರಸ್ಥಾನದಲ್ಲಿಯ 'ಗಂಡೂಷಾದಿವಿಧಿ' ಎಂಬ ೨೨ ನೆಯ ಅಧ್ಯಾಯದ ಟೀಕೆಯು ಮುಗಿದುದು.

# ೨೩ನೆಯ ಅಧ್ಯಾಯವು

ಈ ಅಧ್ಯಾಯದಲ್ಲಿ ಊರ್ಧ್ವಾಂಗದ ಚಿಕಿತ್ಸೆಯ ಪ್ರಸಂಗದಿಂದ ಆಶ್ಚ್ಯೋತನ, ಅಂಜನವಿಧಿಗಳನ್ನು ಹೇಳುತ್ತಾರೆ.

**ಅಥಾಽತ *ಆಶ್ಚ್ಯೋತನಾಂಜನವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ |**

ಅರ್ಥ:— ಇನ್ನು ಮೇಲೆ ಆಶ್ಚ್ಯೋತನ (ಪರಿಷೇಕ) ಮತ್ತು ಅಂಜನಗಳ ವಿಧಿಯನ್ನು ಹೇಳುವ ಅಧ್ಯಾಯವನ್ನು ಹೇಳುವೆವು.

**ಟಿಪ್ಪಣಿ:**— ಆಶ್ಚ್ಯೋತನವೆಂದರೆ ಕಣ್ಣುಗಳಲ್ಲಿ ಎಲ್ಲ ಕಡೆಗೂ ಹೋಗುವಂತೆ ಹಾಕುವ ದ್ರವವು (ಆಶ್ಚ್ಯೋತ್ಯತೇ ಅನೇನ ಇತಿ). ಅಂಜನವೆಂದರೆ ನೀರನ್ನು ಒಸರಿಸುವದು (ಅಂಜಯತಿ ಇತಿ).

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಅರ್ಥ:— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಸರ್ವೇಷಾಮಕ್ಷಿರೋಗಾಣಾಮಾದಾವಾಶ್ಚ್ಯೋತನಂ ಹಿತಮ್ |**
**ರುಕ್ತೋದಕಂಡೂಘರ್ಷಾಶ್ರುದಾಹರಾಗನಿಬರ್ಹಣಮ್** ||೧||

ಅರ್ಥ:— ಎಲ್ಲ ಕಣ್ಣು ಬೇನೆಗಳಿಗೆ ಮೊದಲು ಪರಿಷೇಕವನ್ನು ಹಾಕಬೇಕು. ಅದು ನೋವು ಹೊಡೆತ, ತಿಂಡಿ, ಚುಚ್ಚೋಣ, ನೀರು ಸೋರುವಿಕೆ, ಉರಿ, ಕೆಂಪು ಬಣ್ಣಗಳನ್ನು ನಾಶಮಾಡುವದು. (೧)

**ಉಷ್ಣಂ ವಾತೇ, ಕಫೇ ಕೋಷ್ಣಂ, ತಚ್ಛೀತಂ ರಕ್ತಪಿತ್ತಯೋಃ ||**

ಅರ್ಥ:— ಪರಿಷೇಕವು ವಾತದಲ್ಲಿ ಉಷ್ಣ, ಕಫದಲ್ಲಿ ಬೆಚ್ಚಗೆ, ರಕ್ತ ಪಿತ್ತಗಳಲ್ಲಿ ತಣ್ಣಗೆ ಇರಬೇಕು (೨)

ಆಶ್ಚ್ಯೋತನವಿಧಿಯನ್ನು ಹೇಳುತ್ತಾರೆ.

---

* ಆಶ್ಚ್ಯೋತ್ಯನಾಂಜನ ವಿಧಿಯನ್ನು ಚರಕದ ಚಿಂ ೨೬ ನೇ, ಸುಶ್ರುತದ ಉಂ ೧೮ ನೇ ಅಷ್ಟಾಂಗಸಂಗ್ರಹದ ಸೂ. ೩೨ ನೇ ಅಧ್ಯಾಯದಲ್ಲಿ ಹೇಳಲಾಗಿದೆ.

(ಅ) ಆಶ್ಚ್ಯೋತನವನ್ನು ಹಾಕುವ ವಿಧಿಯನ್ನು ಹೇಳುತ್ತಾರೆ.

**ನಿವಾತಸ್ಥಸ್ಯ ವಾಮೇನ ಪಾಣಿನೋನ್ಮೀಲ್ಯ ಲೋಚನಮ್ ॥೨॥**

**ಶುಕ್ತೌ ಪ್ರಲಂಬಯಾನ್ಯೇನ ಪಿಚುವರ್ತ್ಯಾ ಕನೀನಿಕೇ ॥**
**ದಶ ದ್ವಾದಶ ವಾ ಬಿಂದೂನ್ ದ್ವ್ಯಂಗುಲಾದವಸೇಚಯೇತ್ ॥೩॥**

ಅರ್ಥಃ— ಗಾಳಿಯಿಲ್ಲದಲ್ಲಿ ರೋಗಿಯ ಕಣ್ಣನ್ನು ಎಡಗೈಯಿಂದ ತೆರೆದು ಬಲಗೈಯಲ್ಲಿ ಹಿಡಿದ ಸಿಂಪಿನಲ್ಲಿ ಜೋತಾಡುವ ಬತ್ತಿಯಿಂದ ಮೂಗಿನ ಹತ್ತಿರದ ಮೂಲೆಯಲ್ಲಿ ಎರಡು ಬಟ್ಟು ಎತ್ತರದ ಮೇಲಿಂದ ಹತ್ತು ಅಥವಾ ಹನ್ನೆರಡು ಹನಿಗಳನ್ನು ಹಾಕಬೇಕು. (೩)

**ತತಃ ಪ್ರಮೃಜ್ಯ ಮೃದುನಾ ಚೈಲೇನ, ಕಫವಾತಯೋಃ ॥**
**ಅನ್ಯೇನ ಕೋಷ್ಣಪಾನೀಯಪ್ಲುತೇನ ಸ್ವೇದಯೇನ್ಮೃದು ॥೪॥**

ಅರ್ಥಃ— ಆಮೇಲೆ ಮೆತ್ತನ್ನ ಅರಿವೆಯಿಂದ ಒರಿಸಬೇಕು. ರೋಗವು ಕಫ ವಾತ ಜನ್ಯವಾಗಿದ್ದರೆ ಬೆಚ್ಚನ್ನ ನೀರಿನಲ್ಲಿ ತೋಯಿಸಿದ ಬೇರೆ ಅರಿವೆಯಿಂದ ಆ ಮೇಲೆ ಮೃದುವಾಗಿ ಕಾಸಬೇಕು. (೪)

**ಅತ್ಯುಷ್ಣತೀಕ್ಷ್ಣಂ ರುಗ್ರಾಗದೃಙ್ನಾಶಾಯಾಕ್ಷಿಸೇಚನಮ್ ॥**
**ಅತಿಶೀತಂ ತು ಕುರುತೇ ನಿಸ್ತೋದಸ್ತಂಭವೇದನಾಃ ॥೫॥**

**ಕಷಾಯವರ್ತ್ಮತಾಂ ಘರ್ಷಂ ಕೃಚ್ಛ್ರಾದುನ್ಮೇಷಣಂ ಬಹು ॥**
**ವಿಕಾರವೃದ್ಧಿಮತ್ಯಲ್ಪಂ ಸಂರಂಭಮುಪರಿಸ್ರುತಮ್**

ಅರ್ಥಃ— ಆಶ್ಚ್ಯೋತನವು ಬಹಳ ತೀಕ್ಷ್ಣ, ಅಥವಾ ಬಹಳ ಉಷ್ಣವಾಗಿದ್ದರೆ ನೋವನ್ನೂ ಕೆಂಪು ಬಣ್ಣವನ್ನೂ ದೃಷ್ಟಿನಾಶವನ್ನೂ ಉಂಟುಮಾಡುತ್ತದೆ. ಅದೇ ಅತಿ ಶೀತವಾಗಿದ್ದರೆ ಕಣ್ಣು ಸೂಜಿಯಿಂದ ಚುಚ್ಚಿದಂತೆ ಸೆಟೆದಂತೆ ಆಗುವದು. ಶೂಲ ಬರುವದು, ಆಶ್ಚ್ಯೋತನವು ಹೆಚ್ಚಾದರೆ ರೆಪ್ಪೆಗಳು ಬಿರುಸಾಗುವವು. ಅವು ಒಂದಕ್ಕೊಂದು ತಿಕ್ಕುವವು. ಕಣ್ಣು ತೆರೆಯಲು ತ್ರಾಸವಾಗುವದು. ಅತಿ ಸ್ವಲ್ಪವಾದರೆ ವಿಕಾರಗಳ ವೃದ್ಧಿಯಾಗುವದು. ಹಾಕಿದ ಔಷಧವನ್ನು ಹಿಂದುಗಡೆ ಬಸಿದು ತೆಗೆಯದಿದ್ದರೆ ಅದು ಕ್ಷೋಭ ಬಾವು ಮುಂತಾದ ಉಪದ್ರವಗಳನ್ನು ಉಂಟುಮಾಡುವದು. (೬

**ಗತ್ವಾ ಸಂಧಿಶಿರೋಘ್ರಾಣಮುಖಸ್ರೋತಾಂಸಿ ಭೇಷಜಮ್ ।**
**ಊರ್ಧ್ವಗಾನ್ನಯನೇ ನ್ಯಸ್ತಮಪವರ್ತಯತೇ ಮಲಾನ್ ॥೭॥**

ಅರ್ಥ:— ಕಣ್ಣಲ್ಲಿ ಹಾಕಿದ ಔಷಧವು ಕಣ್ಣಿನ ಸಂಧಿ ತಲೆ ಮೂಗು ಬಾಯಿಗಳ ಸ್ರೋತಸ್ಸುಗಳನ್ನು ಸೇರಿ ಮೇಲೆ ಇದ್ದಂಥ ಎಲ್ಲ ಮಲಗಳನ್ನು ಕೆಳಗೆ ಎಳೆದುಕೊಂಡು ಬರುತ್ತದೆ. (೭)

ಇನ್ನು ಮೇಲೆ ಅಂಜನವನ್ನು ಹೇಳುತ್ತಾರೆ.

**ಅಥಾಂಜನಂ ಶುದ್ಧತನೋರ್ನೇತ್ರಮಾತ್ರಾಶ್ರಯೇ ಮಲೇ ।**
**ಪಕ್ವಲಿಂಗೇಽಲ್ಪಶೋಫಾರ್ತಿಕಂಡೂಪೈಚ್ಛಿಲ್ಯಲಕ್ಷಿತೇ ॥೮॥**

**ಮಂದಘರ್ಷಾಶ್ರುರಾಗೇಽಕ್ಷ್ಣಿ ಪ್ರಯೋಜ್ಯಂ ಘನದೂಷಿಕೇ ।**
**ಅರ್ತೇ ಪಿತ್ತಕಫಾಸೃಗ್ಭಿರ್ಮಾರುತೇನ ವಿಶೇಷತಃ ॥೯॥**

ಅರ್ಥ:— ಅಂಜನ ಹಾಕಬೇಕಾದರೆ ಶರೀರ ಶುದ್ಧಿ ಮಾಡಿರಬೇಕು. ದೋಷಗಳು ಕಣ್ಣುಗಳಲ್ಲಿ ಮಾತ್ರವಿದ್ದು ಅವು ಪಕ್ವವಾಗಿದ್ದರೆ ಮತ್ತು ಪಿತ್ತ ಕಫ ರಕ್ತಗಳಿಂದ-ವಿಶೇಷವಾಗಿ ವಾತದಿಂದ ಪೀಡಿತವಾಗಿದ್ದರೆ ಅಂಜನವನ್ನು ಹಾಕಬೇಕು. ದೋಷಗಳು ಪಕ್ವವಾದ ಲಕ್ಷಣವೆಂದರೆ ತುರಿಕೆ ಜಿಗಟುಗಳು ಹೆಚ್ಚುವವು. ಮತ್ತು ಬಾವು, ಚುಚ್ಚುವಿಕೆ, ನೀರ್ಗು ಕೆಂಪು ಬಣ್ಣಗಳು ಕಡಿಮೆಯಾಗುವವು. ಪಿಚ್ಚು ಗಟ್ಟಿಯಾಗುವದು. (೯)

**ಲೇಖನಂ ರೋಪಣಂ ದೃಷ್ಟಿಪ್ರಸಾದನಮಿತಿ ತ್ರಿಧಾ ॥**
**ಅಂಜನಮ್ ...........................................**

ಅರ್ಥ:— ಅಂಜನವು, ಲೇಖನ, ರೋಪಣ, ದೃಷ್ಟಿಪ್ರಸಾದನವೆಂದು ಮೂರು ವಿಧವು.

**ಟಿಪ್ಪಣೀ:—** ಲೇಖನವೆಂದರೆ ಶುಕ್ರ ಅರ್ಮ ಮೊದಲಾದವುಗಳನ್ನು ಕೊರಗಿಸುವದು (ಲಿಖ್ಯತೇ ಅನೇನ ಇತಿ ಲೇಖನಂ). ರೋಪಣವೆಂದರೆ ಮಾಯಿಸುವದು (ರೋಪ್ಯತೇ ಅನೇನ ಇತಿ ರೋಪಣಂ). ಪ್ರಸಾದನವೆಂದರೆ ಸ್ವಚ್ಛಮಾಡುವದು (ಪ್ರಸಾದ್ಯತೇ ಅನೇನ ಇತಿ ಪ್ರಸಾದನಂ). (೧೦)

**................ಲೇಖನಂ ತತ್ರ ಕಷಾಯಾಮ್ಲಪಟೂಷ್ಣೈಃ ॥೧೦॥**
**ರೋಪಣಂ ತಿಕ್ತಕೈರ್ದ್ರವ್ಯೈಃ ಸ್ವಾದುಶೀತೈಃ ಪ್ರಸಾದನಮ್ ॥**

ಅರ್ಥಃ— ಅವುಗಳಲ್ಲಿ ಲೇಖನ-ಅಂಜನವು, ಒಗರು ಹುಳಿ ಉಪ್ಪು ಕಾರ ದ್ರವ್ಯಗಳಿಂದಲೂ; ರೋಪಣ-ಅಂಜನವು, ಕಹಿ ವಸ್ತುಗಳಿಂದಲೂ; ಪ್ರಸಾದನ-ಅಂಜನವು ಮಧುರ ಶೀತ ದ್ರವ್ಯಗಳಿಂದಲೂ ಮಾಡಲ್ಪಡುತ್ತದೆ. (೧೦॥)

**ದಶಾಂಗುಲಾ ತನುರ್ಮಧ್ಯೇ ಶಲಾಕಾ ಮುಕುಲಾನನಾ ॥೧೨॥**

**ಪ್ರಶಸ್ತಾ, ಲೇಖನೇ ತಾಮ್ರೀ, ರೋಪಣೇ ಕಾಲಲೋಹಜಾ ॥**
**ಅಂಗುಲೀ ಚ, ಸುವರ್ಣೋತ್ಥಾ ರೂಪ್ಯಜಾ ಚ ಪ್ರಸಾದನೇ ॥೧೩॥**

ಅರ್ಥಃ— ಅಂಜನಕ್ಕೆ ಹತ್ತು ಅಂಗುಲ ಉದ್ದವಾದ, ( ಅಲಸಂದಿಯಷ್ಟು ದಪ್ಪಾದ) ಮಧ್ಯದಲ್ಲಿ ಸಣ್ಣಾದ, ಎರಡೂ ತುದಿಗಳಲ್ಲಿ ಮೊಗ್ಗೆಯಂತಿರುವ ಶಲಾಕೆಯು ಇರಬೇಕು. ಆ ಶಲಾಕೆಯು ಲೇಖನಕ್ಕೆ ತಾಮ್ರದ್ದೂ, ರೋಪಣಕ್ಕೆ ಉಕ್ಕಿನದೂ ಮತ್ತು ಬೆರಳೂ ಒಳ್ಳೇದು. ಪ್ರಸಾದನಕ್ಕೆ ಬಂಗಾರದ ಅಥವಾ ಬೆಳ್ಳಿಯ ಶಲಾಕೆಯು ಪ್ರಶಸ್ತವು. (೧೩)

**ಪಿಂಡೋ ರಸಕ್ರಿಯಾ ಚೂರ್ಣಸ್ತ್ರಿಧೈವಾಂಜನಕಲ್ಪನಾ ॥**
**ಗುರೌ ಮಧ್ಯೇ ಲಘೌ ದೋಷೇ ತಾಃ ಕ್ರಮೇಣ ಪ್ರಯೋಜಯೇತ್ ॥೧೪॥**

ಅರ್ಥಃ— ಅಂಜನವು ಪಿಂಡ, ರಸಕ್ರಿಯೆ, ಚೂರ್ಣವೆಂದು ಮೂರೇ ಪ್ರಕಾರವುಳ್ಳದ್ದು. ಅವುಗಳನ್ನು ಕ್ರಮವಾಗಿ ಬಹಳ, ಮಧ್ಯಮ ಮತ್ತು ಸ್ವಲ್ಪ ದೋಷವಿದ್ದಾಗ್ಗೆ ಉಪಯೋಗಿಸಬೇಕು.

**ಟಿಪ್ಪಣಿ:—** ದ್ರವದಲ್ಲಿ ಚೂರ್ಣ ಹಾಕಿ ( ಗುಳಿಗೆಯಾಗುವಂತೆ ) ಗಟ್ಟಿ ಮಾಡಿದ್ದು ಪಿಂಡ ಎಂದೂ, ಕಷಾಯವನ್ನು ಕುದಿಸಿ ಲೇಪದಂತೆ ಗಟ್ಟಿ ಮಾಡಿದ್ದು ರಸಕ್ರಿಯೆ ಎಂದೂ, ಕೇವಲ ಪುಡಿಯು ಚೂರ್ಣ ಎಂದೂ ಕರೆಯಲ್ಪಡುತ್ತದೆ (೧೪)

**ಹರೇಣುಮಾತ್ರಾ ಪಿಂಡಸ್ಯ ವೇಲ್ಲಮಾತ್ರಾ ರಸಕ್ರಿಯಾ ॥**
**ತೀಕ್ಷ್ಣಸ್ಯ, ದ್ವಿಗುಣಂ ತಸ್ಯ ಮೃದುನಃ................**

ಅರ್ಥ:— ತೀಕ್ಷ್ಣ ದ್ರವ್ಯದಿಂದ ಮಾಡಿದ ಪಿಂಡದ ಪ್ರಮಾಣವು ರೇಣುಕಬೀಜದಷ್ಟು, ತೀಕ್ಷ್ಣ ರಸಕ್ರಿಯೆಯು ವಾವಡಿಂಗದಷ್ಟು ಇರಬೇಕು. ಆದರೆ ಅವು ಮೃದು ದ್ರವ್ಯದಿಂದ ಮಾಡಲ್ಪಟ್ಟಿದ್ದರೆ ಅದರ ಇಮ್ಮಡಿ ಇರಬೇಕು. (೧೪॥)

ಚೂರ್ಣಿತಸ್ಯ ಚ ॥೧೫॥

ದ್ವೇ ಶಲಾಕೇ ತು ತೀಕ್ಷ್ಣಸ್ಯ ತಿಸ್ರಸ್ತದಿತರಸ್ಯ ಚ ॥

ಅರ್ಥ:— ಚೂರ್ಣವು ತೀಕ್ಷ್ಣವಿದ್ದರೆ ಎರಡು ಶಲಾಕೆ. ಮೃದು ವಿದ್ದರೆ ಮೂರು ಶಲಾಕೆ ಹಾಕಬೇಕು.

ಟಿಪ್ಪಣಿ:— ಲೇಖನ-ಅಂಜನವನ್ನು ತಾಮ್ರ ಬೆಳ್ಳಿ ಕಂಚಿನ ಪಾತ್ರೆಗಳಲ್ಲಿಯೂ ರೋಪಣವನ್ನು ಬಂಗಾರ ಆಲ ಶಂಖದ ಪಾತ್ರೆಗಳಲ್ಲಿಯೂ, ಪ್ರಸಾದನವನ್ನು ಸ್ಫಟಿಕ ಬಸರಿ ಚಂದನಗಳ ಪಾತ್ರೆಗಳಲ್ಲಿ ಇಡಬೇಕು. ಅಂದರೆ ಅದು ಕೆಡುವದಿಲ್ಲ. (೧೫॥)

ನಿಶಿ ಸ್ವಪ್ನೇ ನ ಮಧ್ಯಾಹ್ನೇ ಮ್ಲಾನೇ ನೋಷ್ಣಗಭಸ್ತಿಭಿಃ ॥೧೬॥
ಅಕ್ಷಿರೋಗಾಯ ದೋಷಾಃ ಸ್ಯುರ್ವರ್ಧಿತೋತ್ಪೀಡಿತದ್ರುತಾಃ ॥
ಪ್ರಾತಃ ಸಾಯಂ ಚ ತಚ್ಛಾಂತ್ಯೈ ವ್ಯಭ್ರೇಽರ್ಕೇಽತ-
ತೋಽಂಜಯೇತ್ಸದಾ ॥೧೬॥

ಅರ್ಥ:— ರಾತ್ರಿಯಲ್ಲಿ, ಮಲಗುವಾಗ್ಗೆ, ಮಧ್ಯಾಹ್ನದಲ್ಲಿ, ಅಥವಾ ಬಿಸಿಲಿನಿಂದ ಕಣ್ಣುಗಳು ಬಾಡಿದಾಗ್ಗೆ ಅಂಜನವನ್ನು ಹಾಕಬಾರದು. ಹಾಗೆ ಮಾಡಿದರೆ ಅವು ರಾತ್ರಿಯಲ್ಲಿ ನಿದ್ರೆಯಿಂದ ವೃದ್ಧಿಹೊಂದಿ ಮಧ್ಯಾಹ್ನದಲ್ಲಿ ಅನ್ನಪಾನಗಳಿಂದ ಕ್ಷೋಭಿತವಾಗಿ ಮತ್ತು ಬಿಸಲಿನಿಂದ ದ್ರವರೂಪ ಹೊಂದಿ ಕಣ್ಣಿಗೆ ಅಪಾಯವನ್ನುಂಟುಮಾಡುತ್ತವೆ. ಆದಕಾರಣ ಅದರ ಶಮನಕ್ಕಾಗಿ ಮುಂಜಾನೆ ಅಥವಾ ಮೂರೂಸಂಜೆಗೆ ಮೋಡಗಳಿಲ್ಲದ ದಿವಸ ಅಂಜನ ಹಾಕತಕ್ಕದ್ದು. (೧೬)

ಮತಭೇದವನ್ನು ಹೇಳುತ್ತಾರೆ.

ವದಂತ್ಯನ್ಯೇ ತು ನ ದಿವಾ ಪ್ರಯೋಜ್ಯಂ ತೀಕ್ಷ್ಣಮಂಜನಮ್ ॥
ವಿರೇಕದುರ್ಬಲಂ ಚಕ್ಷುರಾದಿತ್ಯಂ ಪ್ರಾಪ್ಯ ಸೀದತಿ ॥೧೭॥

ಸ್ವಷ್ಟೇನ ರಾತ್ರೌ ಕಾಲಸ್ಯ ಸೌಮ್ಯತ್ವೇನ ಚ ತರ್ಪಿತಾ ॥
ಶೀತಸಾತ್ಮ್ಯ ದೃಗಾಗ್ನೇಯೀ ಸ್ಥಿರತಾಂ ಲಭತೇ ಪುನಃ ॥೧೯॥

ಅರ್ಥಃ— ಕೆಲವು ಆಚಾರ್ಯರು ಹಗಲು ತೀಕ್ಷ್ಣವಾದ ಅಂಜನವನ್ನು ಹಾಕಬಾರದು. ಯಾಕೆಂದರೆ ತೀಕ್ಷ್ಣ ಅಂಜನದಿಂದ ನೀರು ಸೋರಿ ಅಶಕ್ತವಾದ ಕಣ್ಣು, ಸೂರ್ಯ (ಪ್ರಕಾಶ) ನಿಂದ ಬಲಹೀನವಾಗುವದು. ಆದರೆ ರಾತ್ರಿಯಲ್ಲಿ ಹಾಕಲು ಅಗ್ನಿ ತತ್ವ ಪ್ರಧಾನವಾದ ಅಂತೆಯೇ ಶೀತದಿಂದ ಶಾಂತವಾಗುವ ದೃಷ್ಟಿಯು, ಮಲಗುವದರಿಂದಲೂ ಕಾಲವು ಶೀತವಾಗಿರುವದರಿಂದಲೂ ಶಾಂತಿಯನ್ನು ಹೊಂದಿ ಮತ್ತೆ ಸ್ಥೈರ್ಯವನ್ನು ಹೊಂದುತ್ತದೆ. ಕಾರಣ ರಾತ್ರಿಯಲ್ಲಿಯೇ ತೀಕ್ಷ್ಣ ಅಂಜನವನ್ನು ಹಾಕಬೇಕು. ಎಂದು ಹೇಳುವರು. (೧೯)

ಆದರ ವಿರುದ್ಧವಾದ ತಮ್ಮ ಮತವನ್ನು ಹೇಳುತ್ತಾರೆ.

ಅತ್ಯುದ್ರಿಕ್ತೇ ಬಲಾಸೇ ತು ಲೇಖನೀಯೇಽಥವಾ ಗದೇ ॥
ಕಾಮಮಹ್ನ್ಯಪಿ ನಾತ್ಯುಷ್ಣೇ ತೀಕ್ಷ್ಣಮಕ್ಷ್ಣಿ ಪ್ರಯೋಜಯೇತ್ ॥೨೦॥

ಅರ್ಥಃ— ಕಫವು ಬಹಳ ಉದ್ರೇಕವನ್ನು ಹೊಂದಿದ್ದರೆ ಅಥವಾ ರೋಗವು ಲೇಖನಕ್ಕೆ ಯೋಗ್ಯವಾಗಿದ್ದರೆ ಬಹಳ ಬಿಸಿಲು ಇಲ್ಲದ ಹಗಲಿನಲ್ಲಿ ಕೂಡ ತೀಕ್ಷ್ಣವಾದ ಅಂಜನವನ್ನು ಕಣ್ಣಲ್ಲಿ ಹಾಕಬೇಕು. (೨೦)

ಅಶ್ಮನೋ ಜನ್ಮ ಲೋಹಸ್ಯ ತತ ಏವ ಚ ತೀಕ್ಷ್ಣತಾ ॥
ಉಪಘಾತೋಽಪಿ ತೇನೈವ ತಥಾ ನೇತ್ರಸ್ಯ ತೇಜಸಃ ॥೨೧॥

ಅರ್ಥಃ— ಹೇಗೆ ಲೋಹದ ಉತ್ಪತ್ತಿಯು ಕಲ್ಲಿನಿಂದ, ಅದರ ತೀಕ್ಷ್ಣತೆಯು ಅದರಿಂದಲೇ, ಅದರ ನಾಶವೂ ಅದರಿಂದಲೇ ಆಗುತ್ತದೊ ಹಾಗೆ ತೇಜಸ್ಸಿನಿಂದಲೇ ದೃಷ್ಟಿಯ ಉತ್ಪತ್ತಿಯು ಮತ್ತು ಅದರಿಂದಲೇ ಅದರ ತೀಕ್ಷ್ಣತೆಯು ಮತ್ತು ಅದರಿಂದಲೇ ಅದರ ನಾಶವು ಆಗುವದು. (೨೧)

ನ ರಾತ್ರಾವಪಿ ಶೀತೇಽತಿ ನೇತ್ರೇ ತೀಕ್ಷ್ಣಾಂಜನಂ ಹಿತಮ್ ॥
ದೋಷಮಸ್ರಾವಯತ್ಸ್ತಂಭಕಂಡೂಜಾಡ್ಯಾದಿಕಾರಿ ತತ್ ॥೨೨॥

ಅರ್ಥಃ— ಅತಿ ಶೀತ ವಿಕಾರದಲ್ಲಿ ರಾತ್ರಿಯಲ್ಲಿ ತೀಕ್ಷ್ಣವಾದ ಅಂಜನವನ್ನು ಕಣ್ಣಲ್ಲಿ ಹಾಕಬಾರದು. ಯಾಕೆಂದರೆ ಆಗ್ಗೆ ಕಾಲದ ಶೈತ್ಯ ದಿಂದ ಅದು ದೋಷಸ್ರಾವವನ್ನು ಮಾಡದೆ ಸ್ತಂಭ ತುರಿ ಜಡತ್ವ ಶೋಷ ಮುಂತಾದವುಗಳನ್ನು ಉಂಟುಮಾಡುವದು. (೨೨)

ನಾಂಜಯೇದ್ಭೀತವಮಿತವಿರಿಕ್ತಾಶಿತವೇಗಿತೇ ||
ಕ್ರುದ್ಧ ಜ್ವರಿತತಾಂತಾಕ್ಷಿಶಿರೋರುಕೆಕ್ಶೋಕಜಾಗರೇ ||೨೩||

ಅದೃಷ್ಟೇಽರ್ಕೇ ಶಿರಃಸ್ನಾತೇ ಪೀತಯೋರ್ಧೂಮಮದ್ಯಯೋಃ ||
ಅಜೀರ್ಣೇಽಗ್ನ್ಯರ್ಕಸಂತಪ್ತೇ ದಿವಾಸುಪ್ತೇ ಪಿಪಾಸಿತೇ ||೨೪||

ಅರ್ಥಃ— ಅಂಜಿದವನಿಗೂ, ಕಾರಿದವನಿಗೂ, ವಿರೇಚನ ತಕ್ಕೊಂಡ ವನಿಗೂ, ಉಂಡವನಿಗೂ, ವೇಗಧಾರಣ ಮಾಡಿದವನಿಗೂ, ಸಿಟ್ಟಾದವ ನಿಗೂ, ಜ್ವರ ಉಳ್ಳವನಿಗೂ, ಕಣ್ಣಿಗೆ ಶ್ರಮವಾದವನಿಗೂ, ತಲೆಶೂಲಿ ಉಳ್ಳ ವನಿಗೂ, ದುಃಖಿತನಿಗೂ, ರಾತ್ರಿ ಜಾಗರಣೆ ಮಾಡಿದವನಿಗೂ ತಲೆಯ ಮೇಲೆ ಸ್ನಾನ ಮಾಡಿದವನಿಗೂ, ಧೂಮ ಮದ್ಯಪಾನ ಮಾಡಿದವನಿಗೂ, ಅಜೀರ್ಣ ಆದವನಿಗೂ, ಬೆಂಕಿ ಬಿಸಿಲು ಕಾಸಿಕೊಂಡವನಿಗೂ, ಹಗಲು ಮಲಗಿದವ ನಿಗೂ, ನೀರಡಿಸಿದವನಿಗೂ, ಮೋಡ ಹಾಕಿದಾಗ್ಗೆಯೂ ಅಂಜನವನ್ನು ಕೊಡಬಾರದು.

ಟಿಪ್ಪಣಿ:— ಸಂಗ್ರಹದಲ್ಲಿ 'ಮೇಲೆ ಹೇಳಿದ ಪ್ರಸಂಗಗಳಲ್ಲಿ ಅಂಜನವನ್ನು ಕೊಟ್ಟರೆ ಉಷ್ಣತೆಯು ಮೇಲಕ್ಕೇರಿ ಕ್ಷೋಭ, ಅಶ್ರು, ವೇದನೆ, ದಾಹ, ಕೆಂಪು ಬಣ್ಣ, ಪಿಚ್ಚು, ಕಣ್ಣು ಚುಚ್ಚುವಿಕೆ, ಕಣ್ಣು ತೆರೆಯಲಿಕ್ಕೆ ತ್ರಾಸವಾಗೋಣ, ಬಾವು, ಶುಕ್ರ, ತಿಮಿರ ಮುಂತಾದವುಗಳನ್ನುಂಟು ಮಾಡುತ್ತದೆ.' ಎಂದು ಹೇಳಿದೆ. (೨೪)

ಅತಿತೀಕ್ಷ್ಣಮೃದುಸ್ತೋಕಬಹ್ವಚ್ಛಘನಕರ್ಕಶಮ್ ||
ಅತ್ಯರ್ಥಶೀತಲಂ ತಪ್ತಮಂಜನಂ ನಾವಚಾರಯೇತ್ ||೨೫||

ಅರ್ಥಃ— ಬಹಳ ತೀಕ್ಷ್ಣ ಅಥವಾ ಬಹಳ ಮೃದು, ಬಹಳ ಸ್ವಲ್ಪ ಅಥವಾ ಬಹಳ ಹೆಚ್ಚು, ಅತಿದ್ರವ ಅಥವಾ ಅತಿಗಟ್ಟಿ, ಅತಿ ಬಿರುಸು, ಅತಿ ಶೀತ ಅಥವಾ ಅತಿ ಕಾಯ್ದ ಅಂಜನವನ್ನು ಹಾಕಬಾರದು.

ಟಿಪ್ಪಣೀ:— ಅಂಜನ ವಿಧಿಯು:— ರೋಗಿಯನ್ನು ಸರಿಯಾಗಿ ಕೂಡಿಸಿ ವೈದ್ಯನೂ ಸರಿಯಾಗಿ ಕೂತು ಎಡಗೈಯಿಂದ ಮೇಲಿನ ರೆಪ್ಪೆ ಮೇಲಕ್ಕೆ ಸರಿಸಿ ಕರೀ ಗುಡ್ಡಿಯ ಕೆಳಭಾಗದಲ್ಲಿ ಕನೀನಿಕೆ ಹಿಡಿದು ಅಪಾಂಗದ ವರೆಗೆ ಅಂಜನವನ್ನು ಒಯ್ಯಬೇಕು. (೨೫)

ಅಥಾನುನ್ಮೀಲಯನ್ ದೃಷ್ಟಿಮಂತಃ ಸಂಚಾರಯೇಚ್ಛನೈಃ ||
ಅಂಜಿತೇ ವರ್ತ್ಮನೀ ಕಿಂಚಿಚ್ಚಾಲಯೇಚ್ಚೈವ ಮಂಜನಮ್ ||೨೬||

ತೀಕ್ಷ್ಣಂ ವ್ಯಾಪ್ನೋತಿ ಸಹಸಾ ನ ಚೋನ್ಮೇಷನಿಮೇಷಣಮ್ ||
ನಿಷ್ಪೀಡನಂ ಚ ವರ್ತ್ಮಭ್ಯಾಂ ಕ್ಷಾಲನಂ ವಾ ಸಮಾಚರೇತ್ ||೨೭||

ಅರ್ಥ:— ಅಂಜನ ಹಾಕಿದ ಮೇಲೆ ಕಣ್ಣು ತೆರೆಯದೆ ಒಳಗಿಂದಲೇ ಗುಡ್ಡಿಯನ್ನು ಸಾವಕಾಶವಾಗಿ ತಿರುಗಿಸಬೇಕು. ರೆಪ್ಪೆಗಳನ್ನು ಸಾವಕಾಶವಾಗಿ ಸ್ವಲ್ಪ ಅಗಲಾಡಿಸಬೇಕು. ಹೀಗೆ ಮಾಡೋಣದರಿಂದ ತೀಕ್ಷ್ಣ ಅಂಜನವು ಕಣ್ಣಲ್ಲಿ ಪಸರಿಸುವದು. ಆದರೆ ಒಮ್ಮೆಲೇ ಕಣ್ಣು ತೆರೆಯೋಣ, ಮುಚ್ಚೋಣ ರೆಪ್ಪೆಗಳನ್ನು ತಿಕ್ಕೋಣ ಅಥವಾ ಕಣ್ಣು ತೊಳೆಯೋಣ ಮುಂತಾದವುಗಳನ್ನು ಮಾಡಬಾರದು. (೨೭)

ಅಪೇತಾಷಧಸಂರಂಭಂ ನಿರ್ವೃತಂ ನಯನಂ ಯದಾ ||
ವ್ಯಾಧಿದೋಷರ್ತುಯೋಗ್ಯಾಭಿರದ್ಭಿಃ ಪ್ರಕ್ಷಾಲಯೇತ್ತದಾ ||೨೮||

ಅರ್ಥ:— ಯಾವಾಗ್ಗೆ ಔಷಧದಿಂದಾದ ಕ್ಷೋಭವು ಹೋಗಿ ಕಣ್ಣಿಗೆ ಆರಾಮವೆನಿಸುವದೋ ಆಗ್ಗೆ ಬೇನೆ ದೋಷ ಮತ್ತು ಋತುಗಳಿಗೆ ಯೋಗ್ಯವಾದ ತಣ್ಣನ್ನ, ಬಿಸಿ ಅಥವಾ ಬೆಚ್ಚಗಿನ ನೀರಿನಿಂದ ಅದನ್ನು ತೊಳೆಯಬೇಕು. (೨೮)

ದಕ್ಷಿಣಾಂಗುಷ್ಠಕೇನಾಕ್ಷಿ ತತೋ ವಾಮಂ ಸವಾಸಸಾ ||
ಊರ್ಧ್ವವರ್ತ್ಮನಿ ಸಂಗೃಹ್ಯ ಶೋಧ್ಯಂ ವಾಮೇನ ಚೇತರತ್ ||೨೯||

ಅರ್ಥ:— ಆಮೇಲೆ ಅರಿವೆ ಸುತ್ತಿದ ಬಲ ಹೆಬ್ಬಟ್ಟಿನಿಂದ ಎಡಗಣ್ಣನ್ನು ಮೇಲಿನ ರೆಪ್ಪೆಯಲ್ಲಿ ಹಿಡಿದು ತೊಳೆಯಬೇಕು. ಇದರಂತೆ ಅರಿವೆ ಸುತ್ತಿದ ಎಡ ಹೆಬ್ಬಟ್ಟಿನಿಂದ ಹಿಡಿದು ಬಲಗಣ್ಣನ್ನು ತೊಳೆಯಬೇಕು. (೨೯)

**ವರ್ತ್ಮಪ್ರಾಪ್ತೋಽಂಜನಾದ್ದೋಷೋ**
**ರೋಗಾನ್ ಕುರ್ಯಾದತೋಽನ್ಯಥಾ ॥**

ಅರ್ಥಃ— ಹೀಗೆ ತೊಳೆಯದಿದ್ದರೆ ರೆಪ್ಪೆಯಲ್ಲಿ ಕೂತ ಅಂಜನದಿಂದ ದೋಷವು ಉಂಟಾಗಿ ರೋಗವನ್ನುಂಟು ಮಾಡೀತು. (೨೯॥)

**ಕಂಡೂಜಾಡ್ಯೇಽಂಜನಂ ತೀಕ್ಷ್ಣಂ ಧೂಮಂ**
**ವಾ ಯೋಜಯೇತ್ಪುನಃ ॥೩೦॥**

ಅರ್ಥಃ— ಅಂಜನ ಮಾಡಿದ ಮೇಲೆಯೂ ತುರಿ ಮತ್ತು ಜಡತ್ವಗಳು ಉಂಟಾದರೆ ತೀಕ್ಷ್ಣ ಅಂಜನವನ್ನು ಅಥವಾ ಧೂಮವನ್ನು ಪ್ರಯೋಗಿಸಬೇಕು. (೩೦)

**ತೀಕ್ಷ್ಣಾಂಜನಾಭಿತಪ್ತೇ ತು ಚೂರ್ಣಪ್ರತ್ಯಂಜನಂ ಹಿಮಮ್ ॥**

ಅರ್ಥಃ— ತೀಕ್ಷ್ಣ ಅಂಜನದಿಂದ ಕಣ್ಣು ತಪ್ತವಾದರೆ ಪ್ರತ್ಯಂಜನ ಚೂರ್ಣವು ಹಿತಕರವು. (೩೦॥)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ಆಶ್ಚ್ಯೋತ-ನಾಂಜನವಿಧಿರ್ನಾಮ ತ್ರಯೋವಿಂಶೋಽಧ್ಯಾಯಃ ಸಮಾಪ್ತಃ ।**

**ಇತಿಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಸೂತ್ರಸ್ಥಾನದಲ್ಲಿಯ 'ಆಶ್ಚ್ಯೋತನಾಂಜನವಿಧಿ' ಎಂಬ ೨೩ನೆಯ ಅಧ್ಯಾಯದಟೀಕೆಯು ಮುಗಿದುದು.**

# ೨೪ನೆಯ ಅಧ್ಯಾಯವು

ಆಶ್ಚ್ಯೋತನ ಅಂಜನಗಳಿಂದ ಕಣ್ಣಿಗೆ ಬಂದ ದೌರ್ಬಲ್ಯವನ್ನು ಕಳೆಯುವದಕ್ಕಾಗಿ ಮಾಡಬೇಕಾದ ತರ್ಪಣ, ಪುಟ-ಪಾಕ ವಿಧಿಯನ್ನು ಹೇಳುತ್ತಾರೆ.

**ಅಥಾಽತಸ್ತರ್ಪ*ಣಪುಟಪಾಕವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ |**

ಅರ್ಥ:— ಇನ್ನು ಮೇಲೆ ತರ್ಪಣ, ಪುಟ-ಪಾಕಗಳ ವಿಧಿಯನ್ನು ಹೇಳುವ ಅಧ್ಯಾಯವನ್ನು ಹೇಳುವೆವು.

**ಟಿಪ್ಪಣಿ:—** ತರ್ಪಣವೆಂದರೆ ಕಣ್ಣಿನ ಆರೋಗ್ಯವನ್ನು ಸಂಪಾದಿಸಿ ಸುಖ ಕೊಡುವ ಔಷಧವು (ತರ್ಪಯತಿ ಇತಿ ತರ್ಪಣಂ). ಈ ಅರ್ಥವನ್ನು ಮುಂದೆ ಮೂಲಕಾರರೇ ಪ್ರಕಾಶ ಕ್ಷಮತಾ ಎಂಬ (೧೧ ನೇ) ಶ್ಲೋಕದಲ್ಲಿ ಸ್ಪಷ್ಟ ಮಾಡಿರುವರು. ಪುಟಪಾಕವನ್ನು ಮುಂದೆ (೧೭ ನೇ ಶ್ಲೋಕದಲ್ಲಿ) ಹೇಳಿರುವರು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಅರ್ಥ:— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು

(ಅ) ತರ್ಪಣದ ವಿಷಯ ದೇಶಕಾಲಗಳನ್ನು ಹೇಳುತ್ತಾರೆ.

**ನಯನೇ ತಾಽಮ್ಯತಿ ಸ್ತಬ್ಧೇ ಶುಷ್ಕೇ ರೂಕ್ಷೇಽಭಿಘಾತಿತೇ ||**
**ವಾತಪಿತ್ತಾತುರೇ ಜಿಹ್ಮೇ ಶೀರ್ಣಪಕ್ಷ್ಮಾವಿಲೇಕ್ಷಣೇ** ||೧||
**ಕೃಚ್ಛ್ರೋನ್ಮೀಲಶಿರಾಹರ್ಷಶಿರೋತ್ಪಾತತಮೋಽರ್ಜುನೈಃ ||**
**ಸ್ಯಂದಮಂಥಾನ್ಯತೋವಾತವಾತಪರ್ಯಾಯಶುಕ್ರಕೈಃ ||** ||೨||
**ಆತುರೇ ಶಾಂತರಾಗಾಶ್ರುಶೂಲಸಂರಂಭದೂಷಿಕೇ ||**
**ನಿವಾತೇ ತರ್ಪಣಂ ಯೋಜ್ಯಂ ಶುದ್ಧಯೋರ್ಮೂರ್ಧಕಾಯಯೋಃ** ||೩||
**ಕಾಲೇ ಸಾಧಾರಣೇ ಪ್ರಾತಃ ಸಾಯಂ ವೋತ್ತಾನಶಾಯಿನಃ**

ಅರ್ಥ:— ಕಣ್ಣಿನ ಅಶಕ್ತಿ, ಸ್ತಂಭ, ಶುಷ್ಕತೆ, ರೂಕ್ಷತೆ, ಅಭಿಘಾತ, ವಾತ ಪಿತ್ತ ವಿಕಾರ, ವಕ್ರತೆ, ಎವೆ ಉದರೋಣ, ಅಸ್ಪಷ್ಟ ಕಾಣೋಣ,

*ತರ್ಪಣ ಪುಟಪಾಕವಿಧಿಯನ್ನು ಸುಶ್ರುತದ ಉಂ ೧೮ನೇ, ಅಷ್ಟಾಂಗ ಸಂಗ್ರಹದ ಸೂ. ೩೩ ನೇ ಅಧ್ಯಾಯದಲ್ಲಿ ಹೇಳಲಾಗಿದೆ. ಚರಕದಲ್ಲಿ ಹೇಳಿಲ್ಲ.

ತೆರೆಯುಲಿಕ್ಕೆ ತ್ರಾಸವಾಗೋಣ, ಶಿರಾಹರ್ಷ, ಶಿರೋತ್ಪಾತ, ತಿಮಿರ, ಅರ್ಜುನ, ಅಭಿಷ್ಯಂದ, ಅಧಿಮಂಥ, ಅನ್ಯತೋವಾತ, ವಾತಪರ್ಯಾಯ, ಶುಕ್ರ (ಹೂ ಬೀಳೋಣ), ಮುಂತಾದ ರೋಗಗಳಲ್ಲಿ ಕಣ್ಣಿನ ಕೆಂಪು, ನೀರು, ಶೂಲ, ಕ್ಷೋಭ, ಪಿಚ್ಚುಗಳು ಕಡಿಮೆಯಾದ ಮೇಲೆ ಅವನ ತಲೆ ಮತ್ತು ದೇಹಗಳನ್ನುವಮನ ವಿರೇಚನ ನಸ್ಯಗಳಿಂದ ಶುದ್ಧಮಾಡಿ ಚಳಿ ಬಿಸಿಲು ಬಹಳ ವಿಲ್ಲದ ಕಾಲದಲ್ಲಿ ಅಂದರೆ ಶ್ರಾವಣ ಕಾರ್ತಿಕ ಚೈತ್ರಮಾಸಗಳಲ್ಲಿ ಗಾಳಿ ಇಲ್ಲದ ಸ್ಥಳದಲ್ಲಿ ದೋಷಾನುಸಾರವಾಗಿ ಮುಂಜಾನೆ ಅಥವಾ ಸಂಜೆಗೆ ರೋಗಿಯನ್ನು ಅಂಗಾತ ಮಲಗಿಸಿ ತರ್ಪಣ ಔಷಧವನ್ನು ಹಾಕಬೇಕು. (೩||)

ಇನ್ನು ಮೇಲೆ ತರ್ಪಣವಿಧಿಯನ್ನು ಹೇಳುತ್ತಾರೆ.

**ಯವಮಾಷಮಯೀಂ ಪಾಲೀಂ ನೇತ್ರಕೋಶಾದ್ಬಹಿಃ ಸಮಾಮ್ ||೪||**
**ದ್ವ್ಯಂಗುಲೋಚ್ಚಾಂ ದೃಢಾಂ ಕೃತ್ವಾಯಥಾಸ್ವಂ ಸಿದ್ಧಮಾವಪೇತ್||**
**ಸರ್ಪಿರ್ನಿಮೀಲಿತೇ ನೇತ್ರೇ ತಪ್ತಾಂಬುಪ್ರವಿಲಾಯಿತಮ್ |೫||**

ಅರ್ಥ:— ನೇತ್ರ ಕೋಶದ ಹೊರಗೆ ಜವಿ ಉದ್ದಿನ ಹಿಟ್ಟುಗಳಿಂದ ಎರಡು ಬೆರಳು ಎತ್ತರ ಮತ್ತು ಗಟ್ಟಿಯಾದ ಕಟ್ಟೆಯನ್ನು ಸಮವಾಗಿ ಕಟ್ಟಿ ದೋಷಾನುಸಾರವಾಗಿ ಸಿದ್ಧಮಾಡಿದ ತುಪ್ಪವನ್ನು ಬಿಸಿನೀರಿನಿಂದ ಕರಗಿಸಿ ಕಣ್ಣು ಮುಚ್ಚಿಸಿ ಸುರುವಬೇಕು. (೫)

**ನಕ್ತಾಂಧ್ಯವಾತತಿಮಿರಕೃಚ್ಛ್ರಬೋಧಾದಿಕೇ ವಸಾಮ್ ||**
**ಆಪಕ್ಷ್ಮಾಗ್ರಾತ್... ....... ..................................**

ಅರ್ಥಃ— ಇರುಳುಗಣ್ಣು, ವಾತರೋಗ, ತಿಮಿರ, ಕೃಚ್ಛ್ರಬೋಧ ಮುಂತಾದ ರೋಗಗಳಲ್ಲಿ ರೋಗಾನುಸಾರ ಸಿದ್ಧಪಡಿಸಿದ ನೆಣವನ್ನು ಹಾಕಬೇಕು. ಇವನ್ನು ಎವೆಯ ತುದಿ ಮುಚ್ಚುವ ವರೆಗೆ ಹಾಕಬೇಕು.

**ಟಿಪ್ಪಣೀಃ—** ಸಂಗ್ರಹದಲ್ಲಿ ರೋಗಿಯು ತಿಂದ ಅನ್ನವು ಪಚನವಾದ ನಂತರ ಗಾಳಿ ಧೂಳಿ ಬಿಸಿಲುಗಳಿಲ್ಲದ, ಹಳದಿ ನೀಲಿ ತೆರೆಯನ್ನು ಹಾಕಿದ ಮನೆಯಲ್ಲಿ ಸುಖವಾಗಿ ಮಲಗಿಸಿ ಎವೆಯ ತುದಿ ಮತ್ತು ಹುಬ್ಬುಗಳು ಮುಳುಗುವ ವರೆಗೆ ಹಾಕಬೇಕೆಂದು ಹೆಚ್ಚಿಗೆ ಹೇಳಿದೆ. (೫||)

.ಅಥೋನ್ಮೇಷಂ ಶನಕೈಸ್ತಸ್ಯ ಕುರ್ವತಃ ||೬||

ಮಾತ್ರಾ ವಿಗಣಯೇತ್ತತ್ರ ವರ್ತ್ಮಸಂಧಿಸಿತಾಸಿತೇ ||
ದೃಷ್ಟೌ ಚ ಕ್ರಮಶೋ ವ್ಯಾಧೌ ಶತಂ ತ್ರೀಣಿ ಚ ಪಂಚ ಚ ||೭||

ಶತಾನಿ ಸಪ್ತ ಚಾಷ್ಟೌ ಚ ದಶ ಮಂಥೇ ದಶಾನಿಲೇ ||
ಪಿತ್ತೇ ಷಟ್ ಸ್ವಸ್ಥವೃತ್ತೇ ಚ ಬಲಾಸೇ ಪಂಚ ಧಾರಯೇತ್ ||೮||

ಅರ್ಥ— ಆಮೇಲೆ ಸಾವಕಾಶವಾಗಿ ಕಣ್ಣು ತೆರೆಯಬೇಕು. ಆ ಸ್ನೇಹವನ್ನು ಎವೆರೋಗದಲ್ಲಿ ೧೦೦ ಮಾತ್ರಾ ಕಾಲದ ವರೆಗೆ, ನೇತ್ರ ಸಂಧಿ ರೋಗದಲ್ಲಿ ೩೦೦ ಮಾತ್ರಾಕಾಲದ ವರೆಗೆ,ಬಿಳೀಗುಡ್ಡೆಯ ರೋಗಗಳಲ್ಲಿ ೫೦೦ ಮಾತ್ರಾಕಾಲದ ವರೆಗೆ, ಕರೇಗುಡ್ಡೆಯ ರೋಗಗಳಲ್ಲಿ ೭೦೦ ಮಾತ್ರಾಕಾಲದ ವರೆಗೆ, ದೃಷ್ಟಿರೋಗದಲ್ಲಿ ೮೦೦ ಮಾತ್ರಾಕಾಲದ ವರೆಗೆ, ಅಧಿಮಂಥ ರೋಗದಲ್ಲಿ ಮತ್ತು ವಾತ ರೋಗದಲ್ಲಿ ೧೦೦೦ ಮಾತ್ರಾಕಾಲದ ವರೆಗೆ, ಪಿತ್ತರೋಗದಲ್ಲಿ ೬೦೦ ಮಾತ್ರಾಕಾಲದ ವರೆಗೆ, ನಿರೋಗಿಗೆ ೬೦೦ ಮಾತ್ರಾಕಾಲದ ವರೆಗೆ ಕಫದಲ್ಲಿ ೫೦೦ ಮಾತ್ರಾಕಾಲದ ವರೆಗೆ ಇಡಬೇಕು. (೮)

ಕೃತ್ವಾಽಪಾಂಗೇ ತತೋ ದ್ವಾರಂ ಸ್ನೇಹಂ ಪಾತ್ರೇ ನಿಗಾಲಯೇತ್ ||
ಪಿಬೇಚ್ಚ ಧೂಮಂ, ನೇಕ್ಷೇತ ವ್ಯೋಮ ರೂಪಂ ಚ ಭಾಸ್ವರಮ್ ||೯||

ಅರ್ಥ— ಆಮೇಲೆ ಅಪಾಂಗದ ಕಡೆಗೆ ಆ ಕಟ್ಟೆಗೆ ದ್ವಾರವನ್ನು ಮಾಡಿ ಸ್ನೇಹವನ್ನು ಒಂದು ಪಾತ್ರೆಯಲ್ಲಿ ಕೆಡವಬೇಕು. ಆಮೇಲೆ ಧೂಮ ಪಾನ ಮಾಡಬೇಕು. ಆಕಾಶ ಬೆಂಕಿ ಬಿಸಿಲು ಮುಂತಾದ ಹೊಳೆಯುವ ಪದಾರ್ಥ ನೋಡಬಾರದು. (೯)

ಇತ್ಥಂ ಪ್ರತಿದಿನಂ ವಾಯೌ, ಪಿತ್ತೇ ತ್ವೇಕಾಂತರಂ, ಕಫೇ ||
ಸ್ವಸ್ಥೇ ಚ ದ್ವ್ಯಂತರಂ ದದ್ಯಾದಾತೃಪ್ತೇರಿತಿ ಯೋಜಯೇತ್ ||೧೦||

ಅರ್ಥಃ— ಈ ಪ್ರಕಾರ ವಾತ ವಿಕಾರದಲ್ಲಿ ದಿನಾಲು, ಪಿತ್ತ ವಿಕಾರದಲ್ಲಿ ಒಂದು ದಿನ ಬಿಟ್ಟು ಒಂದು ದಿನ, ಕಫದಲ್ಲಿ ಮತ್ತು ನಿರೋಗಾವಸ್ಥೆಯಲ್ಲಿ ಎರಡು ದಿವಸ ಬಿಟ್ಟು ಒಂದು ದಿನ ಹೀಗೆ ನೇತ್ರ ತರ್ಪಣವು ಚನ್ನಾಗಿ ಆಗುವ ವರೆಗೆ ಹಾಕುತ್ತಿರಬೇಕು. (೧೦)

ತರ್ಪಣದ ಸಮ್ಯಗ್ಯೋಗ, ಹೀನಯೋಗ, ಅತಿಯೋಗಗಳನ್ನು ಹೇಳುತ್ತಾರೆ.

**ಪ್ರಕಾಶಕ್ಷಮತಾ ಸ್ವಾಸ್ಥ್ಯಂ ವಿಶದಂ ಲಘು ಲೋಚನಮ್ ॥**
**ತೃಪ್ತೇ, ವಿಪರ್ಯಯೋಽತೃಪ್ತೇಽತಿತೃಪ್ತೇ ಶ್ಲೇಷ್ಮಜಾ ರುಜಃ ॥೧೧॥**

ಅರ್ಥ:— ನೇತ್ರದ ತರ್ಪಣವು ಸರಿಯಾಗಿ ಆಯಿತೆಂದರೆ ಪ್ರಕಾಶ ಸಹನ ಸ್ವಾಸ್ಥ್ಯಗಳು ಉಂಟಾಗಿ ಕಣ್ಣು ಹಗುರು ಮತ್ತು ಸ್ವಚ್ಛವಾಗುವದು. ತರ್ಪಣವು ಚನ್ನಾಗಿ ಆಗದಿದ್ದರೆ ಇದರ ವಿಪರೀತ ಲಕ್ಷಣಗಳು ಅಂದರೆ ಪ್ರಕಾಶ ಸಹನವಾಗದಿರೋಣ, ಅಸ್ವಸ್ಥತೆ, ಕಣ್ಣು ಹೊಲಸು ಮತ್ತು ಜಡವಾಗೋಣ ಮುಂತಾದವುಗಳು ಉಂಟಾಗುವವು. ತರ್ಪಣವು ಹೆಚ್ಚಾದರೆ ಕಫದ ವಿಕಾರ ಗಳುಂಟಾಗುವವು. (೧೧)

ಪುಟಪಾಕದ ವಿಷಯವನ್ನು ಹೇಳುತ್ತಾರೆ.

**ಸ್ನೆಹಪೀತಾ ತನುರಿವ ಕ್ಲಾಂತಾ ದೃಷ್ಟಿರ್ಹಿ ಸೀದತಿ ॥**
**ತರ್ಪಣಾನಂತರಂ ತಸ್ಮಾದ್ದೃಗ್ಬಲಾಧಾನಕಾರಿಣಮ್ ॥೧೨॥**
**ಪುಟಪಾಕಂ ಪ್ರಯುಂಜೀತ ಪೂರ್ವೋಕ್ತೇಷ್ವೇವ ಯಕ್ಷ್ಮಸು ॥**

ಅರ್ಥಃ— ಸ್ನೇಹಪಾನದಿಂದ ಶರೀರವು ಮಾಂದ್ಯವನ್ನು ತಳೆಯು ವಂತೆ ದೃಷ್ಟಿಯೂ ಬಲಹೀನವಾಗುವದು. ಆದ್ದರಿಂದ ಮೇಲೆ ಹೇಳಿದ ರೋಗ ಗಳಲ್ಲಿ ತರ್ಪಣದ ನಂತರ ದೃಷ್ಟಿಗೆ ಬಲವನ್ನು ಕೊಡುವ ಪುಟಪಾಕವನ್ನು ಯೋಜಿಸಬೇಕು. (೧೨॥)

**ಸ ಪಾತೇ ಸ್ನೇಹನಃ ಶ್ಲೇಷ್ಮಸಹಿತೇ ಲೇಖನೋ ಹಿತಃ ॥೧೩॥**
**ದೃಗ್ದೌರ್ಬಲ್ಯೇಽನಿಲೇ ಪಿತ್ತೇ ರಕ್ತೇ ಸ್ವಸ್ಥೇ ಪ್ರಸಾದನಃ ॥**

ಅರ್ಥಃ— ವಾತ ರೋಗದಲ್ಲಿ ಸ್ನೇಹನ ಪುಟಪಾಕ ಕಫವಾತದಲ್ಲಿ ಲೇಖನ ಪುಟಪಾಕ, ದೃಷ್ಟಿಯ ದೌರ್ಬಲ್ಯ ವಾತ ಪಿತ್ತ ರಕ್ತ ವಿಕಾರ ಗಳಲ್ಲಿ ಮತ್ತು ಆರೋಗ್ಯಾವಸ್ಥೆಯಲ್ಲಿ ಪ್ರಸಾದನ ಪುಟ-ಪಾಕವು ಹಿತಕರವು. (೧೩॥)

ಇನ್ನು ಮೇಲೆ ಹೇಳಿದ ಪುಟಪಾಕ ಔಷಧಗಳ ವಿಧಿಯನ್ನು ಹೇಳುತ್ತಾರೆ.

**ಭೂಶಯಪ್ರಸಹಾನೂಪಮೇದೋಮಜ್ಜವಸಾಮಿಷೈಃ ॥೧೪॥**
**ಸ್ನೇಹನಂ ಪಯಸಾ ಪಿಷ್ಟೈರ್ಜೀವನೀಯೈಶ್ಚ ಕಲ್ಪಯೇತ್ ॥**

ಅರ್ಥಃ— ಸ್ನೇಹನ ಪುಟ-ಪಾಕವನ್ನು ಬಿಲೇಶಯ ಪ್ರಸಹ ಅನೂಪ ಪ್ರಾಣಿಗಳ ಮೇದ ಮಜ್ಜ ನೆಣ ಮಾಂಸಗಳಿಂದಲೂ ಹಾಲಿನಿಂದ ಅರೆದ ಜೀವನೀಯ ಔಷಧಗಳಿಂದಲೂ ಸಿದ್ಧಪಡಿಸಬೇಕು. (೧೪||)

**ಮೃಗಪಕ್ಷಿಯಕೃನ್ಮಾಂಸಮುಕ್ತಾಯಸ್ತಾಮ್ರಸೈಂಧವೈಃ ||೧೫||**

**ಸ್ರೋತೋಜಶಂಖಫೇನಾಲೈರ್ಲೇಖನಂ ಮಸ್ತುಕಲ್ಕಿತೈಃ ||**

ಅರ್ಥಃ— ಲೇಖನ ಪುಟ ಪಾಕವನ್ನು ಜಾಂಗಲ ಮೃಗ ಪಕ್ಷಿಗಳ ಯಕೃತ್ ಮತ್ತು ಮಾಂಸ ಮತ್ತು ಲೋಹ ತಾಮ್ರ ಸೈಂಧವಗಳಿಂದಲೂ (ಮೊಸರಿನ ಮೇಲಿನ ನೀರಿನಲ್ಲಿ ಕರಿದ) ಸ್ರೋತೋಂಜನ ಶಂಖ ಕಡಲುನೊರೆ ಹರಿತಾಳಗಳಿಂದಲೂ ಸಿದ್ಧಪಡಿಸಬೇಕು. (೧೫||)

**ಮೃಗಪಕ್ಷಿಯಕೃನ್ಮಜ್ಜವಸಾಂತ್ರಹೃದಯಾಮಿಷೈಃ ||೧೬||**

**ಮಧುರೈಃ ಸಘೃತೈಃ ಸ್ತನ್ಯಕ್ಷೀರಪಿಷ್ಟೈಃ ಪ್ರಸಾದನಂ ||**

ಅರ್ಥ:— ಪ್ರಸಾದನ ಪುಟ-ಪಾಕವನ್ನು ಮೃಗಪಕ್ಷಿಗಳ ಯಕೃತ್ ಮಜ್ಜ ನೆಣ ಕರಳು ಹೃದಯ ಮಾಂಸಗಳಿಂದಲೂ ಸ್ತನ್ಯ ಹಾಲುಗಳೊಡನೆ ಅರೆದು ತುಪ್ಪ ಕೂಡಿಸಿದ ಜೀವನೀಯ ಔಷಧಗಳಿಂದಲೂ ಸಿದ್ಧ ಪಡಿಸಬೇಕು. (೧೬||)

ಪುಟಪಾಕದ ಸಾಮಾನ್ಯ ಕಲ್ಪನೆಯನ್ನು ಹೇಳುತ್ತಾರೆ.

**ಬಿಲ್ವಮಾತ್ರಂ ಪೃಥಕ್ ಪಿಂಡಂ ಮಾಂಸಭೇಷಜಕಲ್ಕಯೋಃ ||೧೭||**

**ಉರುಬೂಕವಟಾಂಭೋಜಪತ್ರೈಃ ಸ್ನೇಹಾದಿಷು ಕ್ರಮಾತ್ ||**

**ಸೀಷ್ಟಯಿತ್ವಾ ಮೃದಾ ಲಿಪ್ತಂ ಧವಧನ್ವನಗೋಮಯೈಃ ||೧೮||**

**ಪಚೇತ್ಪ್ರದೀಪ್ತೈರಗ್ನ್ಯಾಭಂ ಪಕ್ವಂ ನಿಷ್ಪೀಡ್ಯ ತದ್ರಸಮ್ ||**
**ನೇತ್ರೇ ತರ್ಪಣವದ್ಯುಂಜ್ಯಾತ್........ .. ........ ...........**

ಅರ್ಥ:— ಮಾಂಸ ಮತ್ತು ಔಷಧ ಕಲ್ಕಗಳ ನಾಲ್ಕು ನಾಲ್ಕು ತೊಲೆಯ ಮುದ್ದೆಯನ್ನು ಕೂಡಿಸಿ, ಅದನ್ನು ಸ್ನೇಹನ ಪುಟ-ಪಾಕ ಮಾಡ

ಬೇಕಾಗಿದ್ದರೆ, ಔಡಲ ಎಲೆಯಲ್ಲಿಯೂ, ಲೇಖನ ಪುಟ-ಪಾಕ ಮಾಡಬೇಕಾಗಿದ್ದರೆ ಆಲದ ಎಲೆಗಳಲ್ಲಿಯೂ, ಪ್ರಸಾದನ ಪುಟಪಾಕ ಮಾಡಬೇಕಾಗಿದ್ದರೆ ಕಮಲಪತ್ರಗಳಲ್ಲಿಯೂ ಸುತ್ತಿ ಮೇಲೆ ಕರೇ ಮಣ್ಣನ್ನು ಮೆತ್ತಿ ಒಣಗಿಸಿ ಧವ (ದಿಂದಲು), ಧನ್ವನ, ಕಾಕುಳ್ಳುಗಳ ಬೆಂಕಿಯಿಂದ ಬೇಯಿಸಬೇಕು. ಅದು ಬೆಂದು ಮೇಲಿನ ಮಣ್ಣು ಅಗ್ನಿಯಂತೆ ಕೆಂಪಾಗಲು ಅದನ್ನು ತಕ್ಕೊಂಡು ಹಿಂಡಿ ಆ ರಸವನ್ನು ಕಣ್ಣಲ್ಲಿ ತರ್ಪಣದಂತೆ ಹಾಕಬೇಕು.

**ಟಿಪ್ಪಣಿ:**—'ಕ್ರಮಾತ್' ಎಂಬ ಶಬ್ದವನ್ನು 'ಧವ ಧನ್ವನ ಗೋಮಯೈಃ' ಎಂಬ ಪದಕ್ಕೆ ಅನ್ವಯ ಹಚ್ಚಿ ಮೇಲೆ ಹೇಳಿದ ಮೂರು ಪುಟ-ಪಾಕಗಳನ್ನು ಈ ಮೂರು ಕಟ್ಟಿಗೆಗಳಿಂದ ಕ್ರಮವಾಗಿ ಬೇಯಿಸಬೇಕೆಂದು ಕೆಲವರು ಹೇಳುವರು. ಆದರೆ ಧವಾದಿಗಳ ಈ ತ್ರಿತ್ವ ಸಂಖ್ಯೆಯು ಯಾದೃಚ್ಛಿಕವಾಗಿದೆಯೇ ಹೊರ್ತು ವಿವಕ್ಷಿತವಲ್ಲ. ಸಂಗ್ರಹದಲ್ಲಿ ಒಂಭತ್ತು ತರದ ಕಟ್ಟಿಗೆಗಳನ್ನು ಹೇಳಿದ್ದಾರೆ. ಆದ್ದರಿಂದ 'ಯಥಾಸಂಖ್ಯಂ ಸಮಾನಾಂ' ಎಂಬ ನ್ಯಾಯವು ಇಲ್ಲಿ ಹತ್ತದು. (೧೮||)

**..........................ಶತಂ ದ್ವೇ ತ್ರೀಣಿ ಧಾರಯೇತ್ ||೧೯||**

**ಲೇಖನಸ್ನೇಹನಾಂತ್ಯೇಷು..........................**

ಅರ್ಥಃ— ಲೇಖನದಲ್ಲಿ ೧೦೦ ಮಾತ್ರೆ, ಸ್ನೇಹನದಲ್ಲಿ ೨೦೦ ಮಾತ್ರೆ, ಪ್ರಸಾದದದಲ್ಲಿ ೩೦೦ ಮಾತ್ರೆಯ ವರೆಗೆ ಅದನ್ನು ಇಡಬೇಕು. (೧೯|)

**.......................ಕೋಷ್ಣೌ ಪೂರ್ವೌ, ಹಿಮೋಽಪರಃ ||**

**ಧೂಮಪೋಽಂತೇ ತಯೋರೇವ......................**

ಅರ್ಥಃ— ಮೊದಲಿನವೆರಡು (ಲೇಖನ,ಸ್ನೇಹನ)ಬೆಚ್ಚಗೆ, ಕಡೆಯದು ಶೀತವಾಗಿರಬೇಕು. ಸ್ನೇಹನ ಲೇಖನಗಳ ಕೊನೆಗೆ ಮಾತ್ರ ಅವುಗಳಿಂದ ಹೆಚ್ಚಾದ ಕಫದ ಶಾಂತಿಗಾಗಿ ಧೂಮಪಾನವನ್ನು ಮಾಡಬೇಕು. (೧೯||)

**..............................ಯೋಗಾಸ್ತತ್ರ ಚ ತೃಪ್ತಿವತ್ ||೨೦||**

ಅರ್ಥಃ— ಈ ಪುಟಪಾಕಗಳ ಸಮ್ಯಗ್ಯೋಗ, ಅಯೋಗ, ಅತಿಯೋಗಗಳನ್ನು ತರ್ಪಣದಂತೆಯೇ ತಿಳಿದುಕೊಳ್ಳಬೇಕು. (೨೦)

**ತರ್ಪಣಂ ಪುಟಪಾಕಂ ಚ ನಸ್ಯಾನರ್ಹೇ ನ ಯೋಜಯೇತ್ ||**

ಅರ್ಥಃ— ನಸ್ಯಕ್ಕೆ ಅಯೋಗ್ಯನಾದವನಿಗೆ (ಅ. ೨೦-೧೧) ತರ್ಪಣ ಮತ್ತು ಪುಟ-ಪಾಕವನ್ನು ಕೊಡಬಾರದು. (೨೦||)

**ಯಾವಂತ್ಯಹಾನಿ ಯುಂಜೀತ ದ್ವಿಸ್ತತೋ ಹಿತಭಾಗ್ಭವೇತ್ ||೨೧||**

ಅರ್ಥಃ— ಎಷ್ಟು ದಿವಸಗಳ ವರೆಗೆ ತರ್ಪಣ ಪುಟಪಾಕಗಳನ್ನು ಉಪಯೋಗಿಸುವನೋ ಅದರ ಇಮ್ಮಡಿ ದಿವಸಗಳ ವರೆಗೆ ಪಥ್ಯದಿಂದ ಇರಬೇಕು. (೨೧)

**ಮಾಲತೀಮಲ್ಲಿಕಾಪುಷ್ಪೈರ್ಬದ್ಧಾಕ್ಷೋ ನಿವಸೇನ್ನಿಶಾಮ್ ||**

ಅರ್ಥಃ— ರಾತ್ರಿಯಲ್ಲಿ ಮಾಲತಿ ಮತ್ತು ಮಲ್ಲಿಗೆಯ ಹೂಗಳಿಂದ ಕಣ್ಣು ಕಟ್ಟಿಕೊಂಡು ಮಲಗಬೇಕು. (೨೧||)

**ಸರ್ವಾತ್ಮನಾ ನೇತ್ರಬಲಾಯ ಯತ್ನಂ**
**ಕುರ್ವೀತ ನಸ್ಯಾಂಜನತರ್ಪಣಾದ್ಯೈಃ ||೨೨||**

**ದೃಷ್ಟಿಶ್ಚ ನಷ್ಟಾ ವಿವಿಧಂ ಜಗಚ್ಚ**
**ತಮೋಮಯಂ ಜಾಯತ ಏಕರೂಪಮ್ ||**

ಅರ್ಥ:— ನಸ್ಯ ಅಂಜನ ತರ್ಪಣ ಪುಟಪಾಕ ಹಿತಾಹಾರ-ವಿಹಾರ ಮುಂತಾದ ಎಲ್ಲ ರೀತಿಯಿಂದಲೂ ನೇತ್ರಕ್ಕೆ ಬಲಬರುವಂತೆ ಯತ್ನಮಾಡ ತಕ್ಕದ್ದು. ಯಾಕೆಂದರೆ ದೃಷ್ಟಿಯು ನಷ್ಟವಾದರೆ ವಿವಿಧವಾದ ಈ ಜಗತ್ತು ತಮೋಮಯವಾದ ಒಂದೇ ರೂಪವನ್ನು ಹೊಂದುವದು. (೨೨||)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ತರ್ಪಣಪುಟಪಾಕವಿಧಿರ್ನಾಮ ಚತುರ್ವಿಂಶೋಽಧ್ಯಾಯಃ ಸಮಾಪ್ತಃ |**

ಇತಿ ಶ್ರೀಮದಾದ್ಯಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗಹೃದಯದ ಸೂತ್ರಸ್ಥಾನದಲ್ಲಿಯ 'ತರ್ಪಣಪುಟಪಾಕವಿಧಿ' ಎಂಬ ೨೪ ನೆಯ ಅಧ್ಯಾಯದ ಟೀಕೆಯು ಮುಗಿದ್ದುದು.

# ೨೫ನೆಯ ಅಧ್ಯಾಯವು

ಹಿಂದಿನ ಅಧ್ಯಾಯಗಳಲ್ಲಿ ಹೇಳಿದ ಬಸ್ತಿ, ನಸ್ಯ, ಅಂಜನ ಮುಂತಾದವುಗಳನ್ನು ಕೊಡುವದಕ್ಕೆ ಯಂತ್ರಗಳ ಅವಶ್ಯಕತೆ ಇದ್ದದರಿಂದ ಆ ಯಂತ್ರಗಳನ್ನೂ ಪ್ರಸಂಗತಃ ಇತರ ಯಂತ್ರಗಳನ್ನೂ ಹೇಳುತ್ತಾರೆ.

**ಅಥಾತೋ *ಯಂತ್ರವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ |**

ಅರ್ಥಃ— ಇನ್ನು ಮೇಲೆ ಯಂತ್ರವಿಧಿಯ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ||**

ಅರ್ಥಃ— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ನಾನಾವಿಧಾನಾಂ ಶಲ್ಯಾನಾಂ ನಾನಾದೇಶಪ್ರಬಾಧಿನಾಂ ||**
**ಆಹರ್ತುಮಭ್ಯುಪಾಯೋ ಯಸ್ತದ್ಯಂತ್ರಂ ಯಚ್ಚ ದರ್ಶನೇ ||೧||**
**ಅರ್ಶೋಭಗಂದರಾದೀನಾಂ ಶಸ್ತ್ರಕ್ಷಾರಾಗ್ನಿಯೋಜನೇ ||**
**ಶೇಷಾಂಗಪರಿರಕ್ಷಾಯಾಂ ತಥಾ ಬಸ್ತ್ಯಾದಿಕರ್ಮಣಿ ||೨||**
**ಘುಟಿಕಾಲಾಬುಶೃಂಗಂ ಚ ಜಾಂಬವೌಷ್ಠಾದಿಕಾನಿ ಚ ||**

ಅರ್ಥಃ— ಅನೇಕ ಅವಯವಗಳನ್ನು ಪೀಡಿಸುವ ನಾನಾತರದ ಶಲ್ಯಗಳನ್ನು ತೆಗೆಯುವದಕ್ಕೂ, ಮತ್ತು ಮೂಲವ್ಯಾಧಿ ಭಗಂದರ ಮುಂತಾದವುಗಳನ್ನು ನೋಡುವದಕ್ಕೂ, ಶಸ್ತ್ರ ಕ್ಷಾರ ಅಗ್ನಿ ಕರ್ಮಗಳನ್ನು ಮಾಡುವಾಗ್ಗೆ ಸಮೀಪದ ಬೇರೆ ಅವಯವಗಳ ರಕ್ಷಣೆಗೂ, ಬಸ್ತಿ ನಸ್ಯ ಮುಂತಾದವುಗಳನ್ನು ಮಾಡುವದಕ್ಕೂ ಸಾಧನವಾದ ವಸ್ತುವಿಗೆ ಮತ್ತು ಮಿಳ್ಳಿ, ಅಲಾಬು, ಶೃಂಗ, ಜಾಂಬವೌಷ್ಠ ಮುಂತಾದವುಗಳಿಗೆ ಯಂತ್ರವೆಂದೆನ್ನುವರು.

**ಟಿಪ್ಪಣಿ:—** ಜಾಂಬವೌಷ್ಠವೆಂದರೆ ನೇರಿಲ ಹಣ್ಣಿನಂತೆ ಮುಖವುಳ್ಳ ಕ್ಷಾರ, ದಾಹಗಳಿಗಾಗಿ ಮಾಡಿದ ಶಲಾಕೆಯು. ೩||)

---

* ಯಂತ್ರವಿಧಿಯನ್ನು ಸುಶ್ರುತದ ಸೂಂ ೭ ನೇ, ಅಷ್ಟಾಂಗ ಸಂಗ್ರಹ ಸೂಂ ೩೪ ನೇ ಅಧ್ಯಾಯದಲ್ಲಿ ಹೇಳಲಾಗಿದೆ. ಚರಕದಲ್ಲಿ ಹೇಳಿಲ್ಲ.

ಅನೇಕರೂಪಕಾರ್ಯಾಣಿ ಯಂತ್ರಾಣಿ ವಿವಿಧಾನ್ಯತಃ ||೩||

ವಿಕಲ್ಪ್ಯ ಕಲ್ಪಯೇದ್ಬುದ್ಧ್ಯಾ ಯಥಾಸ್ಥೂಲಂ ತು ವಕ್ಷ್ಯತೇ||

ಅರ್ಥಃ— ಅವುಗಳ ಆಕಾರ ಮತ್ತು ಕಾರ್ಯಗಳು ಬೇರೆ ಬೇರೆಯಾಗಿರುವದರಿಂದ ಯಂತ್ರಗಳು ವಿವಿಧವಾಗಿವೆ. ಅವುಗಳನ್ನು ಬುದ್ಧಿಯಿಂದ ಆಲೋಚಿಸಿ ಸಿದ್ಧಮಾಡತಕ್ಕದ್ದು, ಇಲ್ಲಿ ಮುಖ್ಯವಾದವು (ಸ್ವಸ್ತಿಕ, ಸಂದಂಶ, ತಾಲ, ನಾಡೀ, ಶಲಾಕಾ, ಅನುಯಂತ್ರ ಎಂಬ ಆರು ಯಂತ್ರಗಳು) ಹೇಳಲ್ಪಡುತ್ತವೆ. (೩||)

ತುಲ್ಯಾನಿ ಕಂಕಸಿಂಹರ್ಕ್ಷಕಾಕಾದಿಮೃಗಪಕ್ಷಿಣಾಮ್ ||೪||

ಮುಖೈರ್ಮುಖಾನಿ ಯಂತ್ರಾಣಾಂ ಕುರ್ಯಾತ್ತತ್ಸಂಜ್ಞಕಾನಿ ಚ ||

ಅರ್ಥಃ— ಕಂಕ, ಸಿಂಹ, ಕರಡಿ, ಕಾಗಿ ಮುಂತಾದ ಪಶುಪಕ್ಷಿಗಳ ಮುಖದಂತೆ ಯಂತ್ರಗಳ ಮುಖವನ್ನು ಮಾಡಬೇಕು. ಮತ್ತು ಅವುಗಳಿಗೆ ಕಂಕಮುಖ, ಸಿಂಹಮುಖ ಇತ್ಯಾದಿ ಆ ಪಶುಪಕ್ಷಿಗಳ ಹೆಸರನ್ನಿಡಬೇಕು. (೪||)

ಸ್ವಸ್ತಿಕ ಯಂತ್ರವನ್ನು ಹೇಳುತ್ತಾರೆ.

ಅಷ್ಟಾದಶಾಂಗುಲಾಯಾಮಾನ್ಯಾಯಸಾನಿ ಚ ಭೂರಿಶಃ ||೫||

ಮಸೂರಾಕಾರಪರ್ಯಂತೈಃ ಕಂಠೇ ಬದ್ಧಾನಿ ಕೀಲಕೈಃ ||

ವಿದ್ಯಾತ್ಸ್ವಸ್ತಿಕಯಂತ್ರಾಣಿ ಮೂಲೇಽಂಕುಶನತಾನಿ ಚ ||೬||

ತೈರ್ದುರ್ಗ್ರಹ್ಯೈರಸ್ಥಿಸಂಲಗ್ನಶಲ್ಯಾಹರಣಮಿಷ್ಯತೇ ||

ಅರ್ಥಃ— ಹದಿನೆಂಟು ಅಂಗುಲ ಉದ್ದ ಬಹುಶಃ ಉಕ್ಕಿನಿಂದಲೇ ಮಾಡಿದ ಮಸೂರ(ಚನ್ನಂಗಿ ಬೇಳೆ)ದ ಆಕಾರದ ತುದಿಯುಳ್ಳ ಕೀಲಗಳಿಂದ ತುದಿಯಲ್ಲಿ ಜೋಡಿಸಲ್ಪಟ್ಟ, ಬೊಡ್ಡೆಯಲ್ಲಿ ಅಂಕುಶದಂತೆ ಮಣಿದ ಯಂತ್ರಗಳಿಗೆ ಸ್ವಸ್ತಿಕ-ಯಂತ್ರವೆಂಬ ಹೆಸರು. ಗಟ್ಟಿಯಾದ ಅವುಗಳಿಂದ ಎಲುವಿನಲ್ಲಿ ನಟ್ಟ ಶಲ್ಯವನ್ನು ಕಿತ್ತಬೇಕು. (೬||)

ನಾಲ್ಕು ಪ್ರಕಾರದ ಸಂದಂಶ-ಯಂತ್ರಗಳನ್ನು ಹೇಳುತ್ತಾರೆ.

**ಕೀಲಬದ್ಧವಿಮುಕ್ತಾಗ್ರೌ ಸಂದಂಶೌ ಷೋಡಶಾಂಗುಲೌ ॥೭॥**
**ತ್ವಕ್ಶಿರಾಸ್ನಾಯುಪಿಶಿತಲಗ್ನಶಲ್ಯಾಪಕರ್ಷಣೌ ॥**

ಅರ್ಥಃ— ಸಂದಂಶ ಯಂತ್ರಗಳಲ್ಲಿ ಕೀಲದಿಂದ ಕಟ್ಟಿದ ಮುಖವುಳ್ಳದ್ದೊಂದು, ಕಟ್ಟದಿದ್ದ ಮುಖವುಳ್ಳದ್ದೊಂದು—ಹೀಗೆ ಎರಡು ಪ್ರಕಾರವಿರುತ್ತವೆ. ಅವುಗಳ ಪ್ರಮಾಣವು ಹದಿನಾರು ಅಂಗುಲ. ಅವು ತ್ವಚಿ ಶಿರಾ ಸ್ನಾಯು ಮಾಂಸಗಳಲ್ಲಿ ಸೇರಿದ ಶಲ್ಯಗಳನ್ನು ಎಳಕೊಳ್ಳುವವು. (೭)

**ಷಡಂಗುಲೋಽನ್ಯೋ ಹರಣೇ ಸೂಕ್ಷ್ಮಶಲ್ಯೋಪಪಕ್ಷ್ಮಣಾಂ ॥೮॥**

ಅರ್ಥಃ— ಮತ್ತೊಂದು ಆರು ಅಂಗುಲ ಉದ್ದವಾದ ಸಂದಂಶವು ಸೂಕ್ಷ್ಮವಾದ ಶಲ್ಯ, ಒಳಗಿನ ಎವೆಗಳನ್ನು ಜಗ್ಗುವದಕ್ಕಾಗಿ ಇರುತ್ತದೆ. (೮)

**ಮುಚುಂಡೀ ಸೂಕ್ಷ್ಮದಂತರ್ಜುಮೂರ್ಲೇ ರುಚಕಭೂಷಣಾ ॥**
**ಗಂಭೀರವ್ರಣಮಾಂಸಾನಾಮರ್ಮಣಃ ಶೇಷಿತಸ್ಯ ಚ ॥೯॥**

ಅರ್ಥಃ— ಸಣ್ಣ ಹಲ್ಲುಗಳುಳ್ಳ, ಸರಳವಾದ, ಮೂಲದಲ್ಲಿ ಸಣ್ಣ ಉಂಗುರ ಉಳ್ಳ ಸಂದಂಶವು ಮುಚುಂಡಿಯು. ಅದು ಗಂಭೀರ ವ್ರಣದಲ್ಲಿರುವ ಮಾಂಸಗಳ ಮತ್ತು ಅರ್ಮ (ನೇತ್ರರೋಗ) ದ ಛೇದಮಾಡಿ ಉಳಿದ ಭಾಗಗಳ ಹರಣಕ್ಕೆ ಉಪಯುಕ್ತವು. (೯)

ಎರಡು ಪ್ರಕಾರದ ತಾಲ-ಯಂತ್ರಗಳನ್ನು ಹೇಳುತ್ತಾರೆ.

**ದ್ವೇ ದ್ವಾದಶಾಂಗುಲೇ ಮತ್ಸ್ಯತಾಲವತ್ ದ್ವ್ಯೇಕತಾಲಕೇ ॥**
**ತಾಲಯಂತ್ರೇ ಸ್ಮೃತೇ ಕರ್ಣನಾಡೀಶಲ್ಯಾಪಹಾರಿಣೀ ॥೧೦॥**

ಅರ್ಥ:— ದ್ವಿತಾಲಕ, ಏಕತಾಲಕವೆಂದು ಹನ್ನೆರಡು ಬೆರಳು ಉದ್ದವಾದ ತಾಲ-ಯಂತ್ರಗಳಿರುತ್ತವೆ. ದ್ವಿತಾಲವು ಎರಡೂ ಕಡೆಗೆ, ಏಕತಾಲವು ಒಂದೇ ಕಡೆಗೆ ಮೀನಿನ ಕಂಠತಾಲದಂತೆ ಇರುತ್ತವೆ. ಅವು ಕರ್ಣರಂಧ್ರದಲ್ಲಿದ್ದ ಶಲ್ಯವನ್ನು ತೆಗೆಯುವವು. (೧೦)

ನಾಡೀ-ಯಂತ್ರಗಳನ್ನು ಹೇಳುತ್ತಾರೆ.

**ನಾಡೀಯಂತ್ರಾಣಿ ಸುಷಿರಾಣ್ಯೇಕಾನೇಕಮುಖಾನಿ ಚ ॥**
**ಸ್ರೋತೋಗತಾನಾಂ ಶಲ್ಯಾನಾಮಾಮಯಾನಾಂ ಚ ದರ್ಶನೇ॥೧೧॥**

**ಕ್ರಿಯಾಣಾಂ ಸುಕರತ್ವಾಯ ಕುರ್ಯಾದಾಚೂಷಣಾಯ ಚ ॥**
**ತದ್ವಿಸ್ತಾರಪರೀಣಾಹದೈರ್ಘ್ಯಂ ಸ್ರೋತೋಽನುರೋಧತಃ ॥೧೨॥**

ಅರ್ಥಃ— ನಾಡೀಯಂತ್ರಗಳು ಪೊಳ್ಳಾಗಿರುವವು. ಅವಕ್ಕೆ ಒಂದು ಅಥವಾ ಹಲವು ಮುಖಗಳಿರುವವು. ಅವು ಸ್ರೋತಸ್ಸುಗಳಲ್ಲಿಯ ಶಲ್ಯಗಳನ್ನು ಅಥವಾ ಬೇನೆಗಳನ್ನು ನೋಡುವದಕ್ಕಾಗಿಯೂ ಶಸ್ತ್ರಕ್ಷಾರಾದಿ ಕರ್ಮಗಳ ಸೌಕರ್ಯಕ್ಕಾಗಿಯೂ ವಿಷ ಕೆಟ್ಟರಕ್ತ ಮುಂತಾದ್ದನ್ನು ಬಾಯಿಂದ ಎಳಕೊಳ್ಳುವದಕ್ಕಾಗಿಯೂ ಇರುತ್ತವೆ. ಅವುಗಳ ಸ್ಥೂಲತ್ವ ಮತ್ತು ತೂತುಗಳ ವಿಸ್ತಾರ ಉದ್ದಳತೆಗಳು ಆಯಾ ಸ್ರೋತಸ್ಸುಗಳಿಗೆ ಅನುರೂಪವಾಗಿರುವವು. (೧೨)

**ದಶಾಂಗುಲಾಽರ್ಧನಾಹಾಽಂತಃಕಂಠಶಲ್ಯಾವಲೋಕಿನೀ ॥**
**ನಾಡೀ.**

ಅರ್ಥಃ— ಕಂಠಶಲ್ಯ ನೋಡುವದಕ್ಕಾಗಿ ಹತ್ತು ಅಂಗುಲ ಉದ್ದ ಐದು ಅಂಗುಲ ಸ್ಥೂಲ ನಾಡೀಯಂತ್ರವಿರುತ್ತದೆ. (೧೨

**...............ಪಂಚಮುಖಚ್ಛಿದ್ರಾ ಚತುಷ್ಕರ್ಣಸ್ಯ ಸಂಗ್ರಹೇ ॥೧೩॥**

**ವಾರಂಗಸ್ಯ, ದ್ವಿಕರ್ಣಸ್ಯ ತ್ರಿಚ್ಛಿದ್ರಾ ತತ್ಪ್ರಮಾಣತಃ ॥**

ಅರ್ಥಃ— ನಾಲ್ಕು ಕರ್ಣಗಳುಳ್ಳ ವಾರಂಗವನ್ನು ಹಿಡಿಯುವದಕ್ಕಾಗಿ ಮುಖದಲ್ಲಿ ಐದು ಛಿದ್ರವುಳ್ಳ, ಎರಡು ಕರ್ಣವುಳ್ಳ ವಾರಂಗವನ್ನು ಹಿಡಿಯುವದಕ್ಕಾಗಿ ಮೂರು ಛಿದ್ರವುಳ್ಳ, ಎರಡು ನಾಡಿಗಳು ಇರುತ್ತವೆ. ಇವುಗಳ ಛಿದ್ರಗಳು ವಾರಂಗದ ಪ್ರಮಾಣದಷ್ಟು ಇರುತ್ತವೆ.

**ಟಿಪ್ಪಣೆ:—** ವಾರಂಗವೆಂದರೆ ಹಿಡಿಕೆಯನ್ನು ಕೂಡಿಸುವದಕ್ಕಾಗಿ ಮಾಡಿದ ಕೀಲಗಳು, ಕರ್ಣವೆಂದರೆ ಅದರ ಶಾಖೆಗಳು. (೧೪॥)

ಬೇರೆ ನಾಡೀ-ಯಂತ್ರಗಳನ್ನು ಹೇಳುತ್ತಾರೆ.

**ವಾರಂಗಕರ್ಣಸಂಸ್ಥಾನಾನಾಹದೈರ್ಘ್ಯಾನುರೋಧತಃ ||೧೪||**

**ನಾಡೀರೇವಂವಿಧಾಶ್ಚಾನ್ಯಾ ದ್ರಷ್ಟುಂ ಶಲ್ಯಾನಿ ಕಾರಯೇತ್ ||**

ಅರ್ಥಃ— ಇದರಂತೆ ಶಲ್ಯಗಳನ್ನು ನೋಡುವದಕ್ಕಾಗಿ ವಾರಂಗದ ಕರ್ಣದ ಅಗಲು ಉದ್ದ ಆಕಾರಗಳಿಗೆ ಅನುಸಾರವಾಗಿ ಇಂಥ ಬೇರೆ ಬೇರೆ ನಾಡಿಗಳನ್ನು ಮಾಡಿಸಬೇಕು.

ಶಲ್ಯನಿರ್ಘಾತಿನೀ-ನಾಡಿಯನ್ನು ಹೇಳುತ್ತಾರೆ.

**ಪದ್ಮಕರ್ಣಿಕಯಾ ಮೂರ್ಧ್ನಿ ಸದೃಶೀ ದ್ವಾದಶಾಂಗುಲಾ ||೧೫||**

**ಚತುರ್ಥಸುಷಿರಾ ನಾಡೀ ಶಲ್ಯನಿರ್ಘಾತಿನೀ ಮತಾ ||**

ಅರ್ಥಃ— ಮುಂದೆ ಕಮಲದ ಕರ್ಣಿಕೆಯಂತೆ ಇದ್ದು ನಾಲ್ಕನೆಯ ಭಾಗ (ಮೂರುಅಂಗುಲ) ತೂತುಳ್ಳ ಹನ್ನೆರಡು ಅಂಗುಲ ಉದ್ದವಾದ ನಾಡೀಯಂತ್ರವು ಶಲ್ಯ ನಿರ್ಘಾತಿನಿಯು. (೧೫||)

ಅರ್ಶೋ-ಯಂತ್ರವನ್ನು ಹೇಳುತ್ತಾರೆ.

**ಅರ್ಶಸಾಂ ಗೋಸ್ತನಾಕಾರಂ ಯಂತ್ರಕಂ ಚತುರಂಗುಲಮ್ ||೧೬||**

**ನಾಹೇ ಪಂಚಾಂಗುಲಂ ಪುಂಸಾಂ ಪ್ರಮದಾನಾಂ ಷಡಂಗುಲಮ್ ||**

**ದ್ವಿಚ್ಛಿದ್ರಂ ದರ್ಶನೇ ವ್ಯಾಧೇರೇಕಚ್ಛಿದ್ರಂ ತು ಕರ್ಮಣಿ ||೧೭||**

**ಮಧ್ಯೇಽಸ್ಯ ತ್ರ್ಯಂಗುಲಂ ಛಿದ್ರಮಂಗುಷ್ಠೋದರವಿಸ್ತೃತಮ್ ||**

**ಅರ್ಧಾಂಗುಲೋಚ್ಛ್ರಿತೋದ್ವೃತ್ತಕರ್ಣಿಕಂ ಚ ತದೂರ್ಧ್ವತಃ||೧೮||**

ಅರ್ಥಃ— ಅರ್ಶೋಯಂತ್ರವು ಗೋಸ್ತನದಂತೆ ಆಕಾರವುಳ್ಳದ್ದು ನಾಲ್ಕು ಬಟ್ಟು ಉದ್ದ, ಗಂಡಸಿದ್ದರೆ ಐದು ಅಂಗುಲ, ಹೆಂಗಸಿದ್ದರೆ ಆರು ಅಂಗುಲ ಪರಿಘವುಳ್ಳದ್ದು ಇರಬೇಕು. ರೋಗ ನೋಡುವದಕ್ಕಾಗಿ ಇದ್ದರೆ ಎರಡೂ ಮಗ್ಗಲಿಗೆ ತೂತು ಇರಬೇಕು. ಶಸ್ತ್ರಕ್ಷಾರ ಮುಂತಾದ ಕ್ರಿಯೆಗಳಿ

ಗಾಗಿ ಇದ್ದರೆ ಒಂದೇ ಮಗ್ಗಲಿಗೆ ತೂತು ಇರಬೇಕು. ಅದರ ನಡುವೆ ಮೂರು ಬೆರಳು ಉದ್ದವಾದ, ಅಂಗುಷ್ಠದಷ್ಟು ಅಗಲವಾದ ತೂತು ಇರಬೇಕು. ಮೇಲ್ಭಾಗಕ್ಕೆ ಅರ್ಧಾಂಗುಲ ಎತ್ತರವಾದ ಮತ್ತು ಹೊರವೈಯಲ್ಲಿ ಬಗ್ಗಿದ ಅಂಚು ಇರಬೇಕು. (೧೮)

ಶಮೀ-ಯಂತ್ರ ಭಗಂದರ-ಯಂತ್ರಗಳನ್ನು ಹೇಳುತ್ತಾರೆ.

**ಶಮ್ಯಾಖ್ಯಂ ತಾದೃಗಚ್ಛಿದ್ರಂ ಯಂತ್ರಮರ್ಶಃಪ್ರಪೀಡನಮ್ ||**
**ಸರ್ವಥಾऽಪನಯೇದೋಷ್ಠಂ ಛಿದ್ರಾದೂರ್ಧ್ವಂ ಭಗಂದರೇ ||೧೯||**

ಅರ್ಥಃ— ಮೂಲವ್ಯಾಧಿಯ ಮೊಳಕೆಗಳನ್ನು ಒತ್ತುವದಕ್ಕಾಗಿ ಛಿದ್ರವಿರದ ಅಂಥದೇ ಒಂದು ಯಂತ್ರವಿರುತ್ತದೆ. ಅದಕ್ಕೆ ಶಮೀ ಎಂಬ ಹೆಸರು. ತೂತಿನ ಮೇಲಿನ ಅಂಚನ್ನು ತೆಗೆದರೆ ಭಗಂದರ-ಯಂತ್ರವಾಗುವದು. (೧೯)

ಘ್ರಾಣಾರ್ಬುದ-ನಾಡಿಯನ್ನು ಹೇಳುತ್ತಾರೆ.

**ಘ್ರಾಣಾರ್ಬುದಾರ್ಶಸಾಮೇಕಚ್ಛಿದ್ರಾ ನಾಡ್ಯಂಗುಲದ್ವಯಾ ||**
**ಪ್ರದೇಶಿನೀಪರೀಣಾಹಾ ಸ್ಯಾದ್ಭಗಂದರಯಂತ್ರವತ್ ||೨೦||**

ಅರ್ಥಃ— ಮೂಗಿನಲ್ಲಿಯ ಅರ್ಬುದ ಅರ್ಶಗಳಿಗಾಗಿ ಒಂದೇ ತೂತುಳ್ಳ ಎರಡು ಅಂಗುಲ ಉದ್ದವಾದ ತರ್ಜನಿಯಷ್ಟು ದಪ್ಪಾದ ಭಗಂದರ-ಯಂತ್ರದಂಥ ನಾಡೀ ಇರುತ್ತದೆ. (೨೦)

ಅಂಗುಲಿತ್ರಾಣಕ-ನಾಡಿಯನ್ನು ಹೇಳುತ್ತಾರೆ.

**ಅಂಗುಲಿತ್ರಾಣಕಂ ದಾಂತಂ ವಾರ್ಕ್ಷಂ ವಾ ಚತುರಂಗುಲಮ್ ||**
**ದ್ವಿಚ್ಛಿದ್ರಂ ಗೋಸ್ತನಾಕಾರಂ ತದ್ವಕ್ತ್ರವಿವೃತೌ ಸುಖಮ್ ||೨೧||**

ಅರ್ಥಃ— ಅಂಗುಲಿತ್ರಾಣಕವೆಂಬ ನಾಲ್ಕು ಬೆರಳು ಉದ್ದನ್ನ ಗೋಸ್ತನಾಕಾರದ ಎರಡು ತೂತುಳ್ಳ ಆನೇ ಹಲ್ಲಿನ ಅಥವಾ ಕಟ್ಟಿಗೆಯ ಯಂತ್ರವಿರುತ್ತದೆ. ಅದು ಬಾಯಿಯನ್ನು ತೆರೆಯುವದಕ್ಕಾಗಿ ಉಪಯುಕ್ತವು. (೨೧)

ಯೋನಿವ್ರಣೇಕ್ಷಣ-ನಾಡಿಯನ್ನು ಹೇಳುತ್ತಾರೆ.

**ಯೋನಿವ್ರಣೇಕ್ಷಣಂ ಮಧ್ಯೇ ಸುಷಿರಂ ಷೋಡಶಾಂಗುಲಂ ॥**
**ಮುದ್ರಾಬದ್ಧಂ ಚತುರ್ಭಿತ್ತಮಂಭೋಜಮುಕುಲಾನನಮ್ ॥೨೨॥**

**ಚತುಃಶಲಾಕಮಾಕ್ರಾಂತಂ ಮೂಲೇ ತದ್ವಿಕಸೇನ್ಮುಖೇ ॥**

ಅರ್ಥಃ— ಯೋನಿವ್ರಣೇಕ್ಷಣ ಯಂತ್ರವು ಮಧ್ಯದಲ್ಲಿ ಪೊಳ್ಳು, ಹದಿನಾರು ಅಂಗುಲ ಉದ್ದ, ಅಲ್ಲಾಡದ ಉಂಗುರದಿಂದ ಕಟ್ಟಲ್ಪಟ್ಟದ್ದು ನಾಲ್ಕು ಎಲೆಗಳುಳ್ಳದ್ದು, ಕಮಲದಮೊಗ್ಗೆಯಂತೆ ಬಾಯಿಯುಳ್ಳದ್ದೂ ನಾಲ್ಕು ಶಲಾಕೆಗಳುಳ್ಳದ್ದೂ ಇರುತ್ತದೆ. ಅದರ ಬೊಡ್ಡೆಯಲ್ಲಿ ಒತ್ತಲು ಬಾಯಿಯು ತೆರೆಯುತ್ತದೆ. (೨೨॥)

ನಾಡೀವ್ರಣಾಭ್ಯಂಜನ, ನಾಡೀವ್ರಣಕ್ಷಾಲನ ಯಂತ್ರಗಳನ್ನು ಹೇಳುತ್ತಾರೆ.

**ಯಂತ್ರೇ ನಾಡೀವ್ರಣಾಭ್ಯಂಗಕ್ಷಾಲನಾಯ ಷಡಂಗುಲೇ ॥೨೩॥**

**ಬಸ್ತಿಯಂತ್ರಾಕೃತೀ ಮೂಲೇ ಮುಖೇಽಂಗುಷ್ಠಕಲಾಯಕೇ ॥**
**ಅಗ್ರತೋಽಕರ್ಣಿಕೇ ಮೂಲೇ ನಿಬದ್ಧ ಮೃದುಚರ್ಮಣೀ ॥೨೪॥**

ಅರ್ಥಃ— ನಾಡೀವ್ರಣದಲ್ಲಿ ಎಣ್ಣೆ ಹಾಕುವದಕ್ಕಾಗಿಯೂ ತೊಳೆಯುವದಕ್ಕಾಗಿಯೂ ಆರಾರು ಅಂಗುಲದ, ಬಸ್ತಿಯಂತ್ರಾಕಾರದ, ಬೊಡ್ಡೆಯಲ್ಲಿ ಹೆಬ್ಬಟ್ಟು ಹೋಗುವಷ್ಟು ತುದಿಯಲ್ಲಿ ಬಟಗಡ್ಲೆ ಹೋಗುವಷ್ಟು ತೂತುಳ್ಳ, ತುದಿಗೆ ಕರ್ಣಿಕೆ ಇರದ, ಮೂಲದಲ್ಲಿ ಮೃದು ಚರ್ಮವನ್ನು ಹಾಕಿದ, ಎರಡು ಯಂತ್ರಗಳಿರುತ್ತವೆ. (೨೪)

**ದ್ವಿದ್ವಾರಾ ನಲಿಕಾ ಪಿಚ್ಛನಲಿಕಾ ವೋದಕೋದರೇ ॥**

ಅರ್ಥಃ— ಜಲೋದರದಲ್ಲಿ ನೀರು ತೆಗೆಯುವದಕ್ಕಾಗಿ ಎರಡು ಬಾಯಿಯ ನಳಿಕೆಯು ಅಥವಾ ನವಿಲುಗರಿಯ ನಲಿಕೆಯು ಇರುವದು (ಇದು ಜಲೋದರಯಂತ್ರವು). (೨೪॥)

**ಧೂಮಬಸ್ತ್ಯಾದಿಯಂತ್ರಾಣಿ ನಿರ್ದಿಷ್ಟಾನಿ ಯಥಾಯಥಮ್ ॥೨೫॥**

ಅರ್ಥ:— ಧೂಮಯಂತ್ರ, ಬಸ್ತಿಯಂತ್ರ, ಮುಂತಾದವುಗಳು ಆಯಾ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿವೆ. (೨೫)

ಶೃಂಗ-ನಾಡಿಯನ್ನು ಹೇಳುತ್ತಾರೆ.

**ತ್ರ್ಯಂಗುಲಾಸ್ಯಂ ಭವೇಚ್ಛೃಂಗಂ ಚೂಷಣೇಽಷ್ಟಾದಶಾಂಗುಲಮ್॥**
**ಅಗ್ರೇ ಸಿದ್ಧಾರ್ಥಕಚ್ಛಿದ್ರಂ ಸುನದ್ಧಂ ಚೂಚುಕಾಕೃತಿ ॥೨೬॥**

ಅರ್ಥ:— ಬಾಯಿಂದ (ದೂಷಿತ ರಕ್ತ, ವಿಷಗಳನ್ನು) ಜಗ್ಗುವದಕ್ಕಾಗಿ ಹದಿನೆಂಟು ಅಂಗುಲ ಉದ್ದವಾದ, ಮೂರು ಅಂಗುಲ ಪರಿಘ ಬಾಯಿಯುಳ್ಳ, ತುದಿಯಲ್ಲಿ ಸಾಸಿವೆ ಕಾಳು ಹೋಗುವಷ್ಟು ಛಿದ್ರವುಳ್ಳ, ಸ್ತ್ರೀಯರ ಸ್ತನಾಗ್ರದ ಆಕಾರವುಳ್ಳ, ಚನ್ನಾಗಿ ಕೂಡಿಸಿದ ಒಂದು ಶೃಂಗ (ತುಂಬಡಿ) ಇರುತ್ತದೆ. (೨೬)

ಅಲಾಬು-ನಾಡಿಯನ್ನು ಹೇಳುತ್ತಾರೆ.

**ಸ್ಯಾದ್ದ್ವಾದಶಾಂಗುಲೋಽಲಾಬುರ್ನಾಹೇ ತ್ವಷ್ಟಾದಶಾಂಗುಲಃ ॥**
**ಚತುಸ್ತ್ರ್ಯಂಗುಲವೃತ್ತಾಸ್ಯೋ ದೀಪ್ತೋಽಂತಃ ಶ್ಲೇಷ್ಮರಕ್ತಹೃತ್॥೨೭॥**

ಅರ್ಥ:— ಹನ್ನೆರಡು ಬಟ್ಟು ಉದ್ದ, ಹದಿನೆಂಟು ಬೆರಳು ಸ್ಥೂಲ, ಮೂರು ನಾಲ್ಕು ಬೆರಳು ಹಿಡಿಯುವಷ್ಟು ದುಂಡಾದ ಬಾಯಿಯುಳ್ಳ ಅಲಾಬು ಎಂಬ ಯಂತ್ರವು ಇರುತ್ತದೆ. ಒಳಗೆ ಅರಳಿ ಮುಂತಾದ್ದನ್ನು ಹಾಕಿ ಹೊತ್ತಿಸಲು ಅದು ದೂಷಿತ ಕಫ ರಕ್ತವನ್ನು ಎಳಕೊಳ್ಳುವದು. (೨೭)

ಘಟೀ-ನಾಡಿಯನ್ನು ಹೇಳುತ್ತಾರೆ.

**ತದ್ವದ್ಘಟೀ ಹಿತಾ ಗುಲ್ಮವಿಲಯೋನ್ನಮನೇ ಚ ಸಾ ॥**

ಅರ್ಥ:— ಘಟೀಯಂತ್ರದ ಆಕೃತಿ ಕಾರ್ಯಗಳಾದರೂ ಇದರಂತೆ ಇದ್ದು ಅದು ಗುಲ್ಮವನ್ನು ಕರಗಿಸುವದಕ್ಕೂ ಮೇಲೆ ಎಬ್ಬಿಸುವದಕ್ಕೂ ಬರುತ್ತದೆ. (೨೭॥)

ಶಲಾಕಾ ಯಂತ್ರಗಳನ್ನು ಹೇಳುತ್ತಾರೆ.

**ಶಲಾಕಾಖ್ಯಾನಿ ಯಂತ್ರಾಣಿ ನಾನಾಕರ್ಮಾಕೃತೀನಿ ಚ ||೨೮||**

**ಯಥಾಯೋಗಪ್ರಮಾಣಾನಿ..............................**

ಅರ್ಥಃ— ಶಲಾಕೆ ಎಂಬ ಯಂತ್ರಗಳು ಅನೇಕ ಆಕಾರದವೂ, ಅನೇಕ ಕ್ರಿಯೆಗೆ ಉಪಯುಕ್ತವೂ, ಆಯಾ ಕ್ರಿಯೆಗಳಿಗೆ ತಕ್ಕ ಪ್ರಮಾಣ ವುಳ್ಳವುಗಳೂ ಇರಬೇಕು. (೨೮।)

ಏಷಣೀ ಶಲಾಕೆಗಳನ್ನು ಹೇಳುತ್ತಾರೆ.

**..............................ತೇಷಾಮೇಷಣಕರ್ಮಣಿ ||**

**ಉಭೇ ಗಂಡೂಪದಮುಖೇ..............................**

ಅರ್ಥಃ— ಅವುಗಳಲ್ಲಿ ಗಂಡೂಪದ (ಮಳೆ ಹುಳ)ದಂತೆ ಮುಖವುಳ್ಳ ಎರಡು ಶಲಾಕೆಗಳು ನಾಡೀವ್ರಣದ ಗತಿ ಹುಡುಕುವದಕ್ಕೆ ಉಪಯೋಗ ವಾಗುತ್ತವೆ. (೨೮।।)

ಶಲ್ಯಹಾರಿಣೀ·ಶಲಾಕಾಯಂತ್ರಗಳನ್ನು ಹೇಳುತ್ತಾರೆ.

**..............................ಸ್ರೋತೋಭ್ಯಃ ಶಲ್ಯಹಾರಿಣೀ ||೨೯||**

**ಮಸೂರದಲವಕ್ತ್ರೇ ದ್ವೇ ಸ್ಯಾತಾಮಷ್ಟನವಾಂಗುಲೇ ||**

ಅರ್ಥ— ಸ್ರೋತಸ್ಸಿನಲ್ಲಿಯ ಶಲ್ಯವನ್ನು ತೆಗೆಯುವದಕ್ಕಾಗಿ ಎಂಟು ಅಥವಾ ಒಂಭತ್ತು ಬೆರಳು ಉದ್ದವಾದ ಮಸೂರದ ಬೇಳೆಯಂತೆ ಮುಖವುಳ್ಳ ಎರಡು ಶಲಾಕಾ ಯಂತ್ರಗಳಿರುತ್ತವೆ. (೨೯।।)

ಶಂಕುಗಳನ್ನು ಹೇಳುತ್ತಾರೆ.

**ಶಂಕವಃ ಷಡುಭೌ ತೇಷಾಂ ಷೋಡಶದ್ವಾದಶಾಂಗುಲೌ ||೩೦||**

**ವ್ಯೂಹನೇಽಹಿಫಣಾವಕ್ತ್ರೌ..............................**

ಅರ್ಥ— ಶಂಕುಗಳು ಆರು. ಅವುಗಳಲ್ಲಿ ಎರಡು, ಹದಿನಾರು ಮತ್ತು ಹನ್ನೆರಡು ಅಂಗುಲ ಉದ್ದವಿದ್ದು ಸರ್ಪದ ಹೆಡೆಯಂತೆ ಅವುಗಳ ಮುಖವಿರು

ತ್ತದೆ. ಅವು ಚಲ್ಲಾಪಿಲ್ಲಿಯಾದ ಮಾಂಸವನ್ನು ಆಯಾ ಸ್ಥಳಗಳಲ್ಲಿ ಕೂಡಿಸಲು ಉಪಯುಕ್ತವಾಗಿವೆ. (೩೦|)

ಚಾಲನ-ಶಂಕುಗಳನ್ನು ಹೇಳುತ್ತಾರೆ.

**.ದ್ವೌ ದಶದ್ವಾದಶಾಂಗುಲೌ॥**
**ಚಾಲನೇ ಶರಪುಂಖಾಸ್ಯೌ.**

ಅರ್ಥ:— ಹತ್ತು ಮತ್ತು ಹನ್ನೆರಡು ಅಂಗುಲ ಉದ್ದವಾದ ಬಾಣದ ಪುಚ್ಛದಂತೆ ಮುಖವಿರುವ ಎರಡು ಶಂಕುಗಳು ಇರುತ್ತವೆ. ಅವು ಶಲ್ಯವನ್ನು ಅಗಳಾಡಿಸಲು ಬೇಕಾಗುತ್ತವೆ. (೩೦

ಆಹರಣ-ಶಂಕುಗಳನ್ನು ಹೇಳುತ್ತಾರೆ.

**.ಆಹಾರ್ಯೇ ಬಡಿಶಾಕೃತೀ ॥೩೧॥**

ಅರ್ಥಃ— ಉಳಿದ ಎರಡು ಶಂಕುಗಳ ಮುಖಗಳು ಮೀನ ಹಿಡಿಯುವ ಕೊಂಡೆಯಂತೆ ಇರುತ್ತವೆ. ಅದರಿಂದ ಶಲ್ಯಗಳನ್ನು ಜಗ್ಗಿ ತೆಗೆಯಲ್ಪಬರುತ್ತದೆ. (೩೧)

ಗರ್ಭ—ಶಂಕುಗಳನ್ನು ಹೇಳುತ್ತಾರೆ.

**ನತೋಽಗ್ರೇ ಶಂಕುನಾ ತುಲ್ಯೋ ಗರ್ಭಶಂಕುರಿತಿ ಸ್ಮೃತಃ ॥**
**ಅಷ್ಟಾಂಗುಲಾಯತಸ್ತೇನ ಮೂಢಗರ್ಭಂ ಹರೇತ್ ಸ್ತ್ರಿಯಾಃ ॥೩೨॥**

ಅರ್ಥಃ— ತುದಿಯಲ್ಲಿ ಬಗ್ಗಿದ ಶಂಕುವಿನ ಆಕಾರದ ಎಂಟು ಅಂಗುಲ ಉದ್ದವಾದ ಗಭ-ಶಂಕುವೆಂಬ ಯಂತ್ರವಿರುತ್ತದೆ. ಅದರಿಂದ ಹೆಂಗಸರ ಅಡ್ಡಬಂದ ಗರ್ಭವನ್ನು ತೆಗೆಯಬೇಕು. (೩೨)

ಸರ್ಪಫಣಾ-ಶಲಾಕಾ-ಯಂತ್ರವನ್ನು ಹೇಳುತ್ತಾರೆ.

**ಅಶ್ಮರ್ಯಾಹರಣಂ ಸರ್ಪಫಣಾವದ್ವಕ್ತ್ರಮುಗ್ರತಃ ॥**

ಅರ್ಥಃ— ತುದಿಯಲ್ಲಿ ಹಾವಿನ ಹೆಡೆಯಂತೆ ಮುಖವುಳ್ಳ ಒಂದು ಯಂತ್ರವಿರುತ್ತದೆ. ಅದಕ್ಕೆ ಸರ್ಪಫಣಾ ಯಂತ್ರವೆನ್ನುವರು. ಇದು ಮೂತ್ರಾಶ್ಮರಿಯನ್ನು ತೆಗೆಯಲಿಕ್ಕೆ ಬರುವದು. (೩೨॥)

ಶರಪುಂಖಶಲಾಕಾ-ಯಂತ್ರವನ್ನು ಹೇಳುತ್ತಾರೆ.

**ಶರಪುಂಖಮುಖಂ ದಂತಪಾತನಂ ಚತುರಂಗುಲಮ್ ||೩೩||**

ಅರ್ಥಃ— ನಾಲ್ಕು ಬೆರಳು ಉದ್ದವಾದ ಬಾಣದ ಮುಖವುಳ್ಳ ಶರಪುಂಖಮುಖವೆಂಬ ಯಂತ್ರವಿರುತ್ತದೆ. ಅದು ಹಲ್ಲುಗಳನ್ನು ಕಿತ್ತಿತೆಗೆಯು ಲಿಕ್ಕೆ ಬರುತ್ತದೆ. (೩೩)

ಪ್ರಮಾರ್ಜನೀ-ಶಲಾಕೆಗಳನ್ನು ಹೇಳುತ್ತಾರೆ.

**ಕಾರ್ಪಾಸವಿಹಿತೋಷ್ಣೀಷಾಃ ಶಲಾಕಾಃ ಷಟ್ ಪ್ರಮಾರ್ಜನೇ ||**

ಅರ್ಥ:— ಒರಸಿ ತೆಗೆಯುವದಕ್ಕಾಗಿ ತುದಿಗೆ ಅರಳಿಸುತ್ತಿದ್ದ ಆರು ಶಲಾಕೆಗಳಿರುತ್ತವೆ. (೩೩||)

ಪಾಯುಪ್ರಮಾರ್ಜನೀ-ಶಲಾಕೆಗಳನ್ನು ಹೇಳುತ್ತಾರೆ.

**ಪಾಯೂಪಾಸನ್ನದೂರಾರ್ಥೇ ದ್ವೇ ದಶದ್ವಾದಶಾಂಗುಲೇ ||೩೪||**

ಅರ್ಥ:— ಗುದದಲ್ಲಿ ಸಮೀಪದ ಮತ್ತು ದೂರದ ಕಾರ್ಯಕ್ಕಾಗಿ ಹತ್ತು ಮತ್ತು ಹನ್ನೆರಡು ಅಂಗುಲ ಉದ್ದವಾದ ಎರಡು ಶಲಾಕೆಗಳು ಇರುತ್ತವೆ. (೩೪)

ಘ್ರಾಣಕರ್ಣಪ್ರಮಾರ್ಜನೀ-ಶಲಾಕೆಗಳನ್ನು ಹೇಳುತ್ತಾರೆ.

**ದ್ವೇ ಷಟ್ಸಪ್ತಾಂಗುಲೇ ಘ್ರಾಣೇ ದ್ವೇ ಕರ್ಣೇಽಷ್ಟನವಾಂಗುಲೇ ||**

ಅರ್ಥಃ— ಮೂಗಿನಲ್ಲಿಯ ಕೆಲಸಕ್ಕಾಗಿ ಆರು ಮತ್ತು ಏಳು ಅಂಗುಲ ಉದ್ದವಾದ ಎರಡು ಶಲಾಕೆಗಳೂ ಅದರಂತೆ ಕಿವಿಯ ಸಲುವಾಗಿ ಎಂಟು ಒಂಭತ್ತು ಅಂಗುಲ ಉದ್ದವುಳ್ಳ ಎರಡು ಶಲಾಕೆಗಳೂ ಇರುತ್ತವೆ. (೩೪||)

ಕರ್ಣಶೋಧನ-ಯಂತ್ರವನ್ನು ಹೇಳುತ್ತಾರೆ.

**ಕರ್ಣಶೋಧನಮಶ್ವತ್ಥಪತ್ರಪ್ರಾಂತಂ ಸ್ರುವಾನನಮ್ ||೩೫||**

ಅರ್ಥಃ— ಅರಳೆಯ ಎಲೆಯಂತೆ ತುದಿಯುಳ್ಳ, ಸ್ರುವ (ಯಜ್ಞದಲ್ಲಿ ಉಪಯೋಗಿಸುವ ಸವಟು) ದಂತೆ ಮುಖವುಳ್ಳ ಕರ್ಣಶೋಧನ ಎಂಬ ಯಂತ್ರವಿರುತ್ತದೆ. (೩೫)

**ಶಲಾಕಾಜಾಂಬವೌಷ್ಠಾನಾಂ ಕ್ಷಾರೇಽಗ್ನೌ ಚ ಪೃಥಕ್‌ತ್ರಯಮ್**
**ಯುಂಜ್ಯಾತ್ ಸ್ಥೂಲಾಣುದೀರ್ಘಾಣಾಮ್...........................**

ಅರ್ಥಃ— ಕ್ಷಾರ ಹಚ್ಚುವದಕ್ಕಾಗಿ ದಪ್ಪ ಸಣ್ಣ ಉದ್ದವಾದ ಮೂರು ಶಲಾಕೆಗಳೂ ಅಗ್ನಿಕರ್ಮಕ್ಕಾಗಿ ನೇರಲ ಹಣ್ಣಿನಂತೆ ಮುಖವುಳ್ಳ ಮೂರು ಮೊಳೆಗಳೂ ಇರುತ್ತವೆ. ಅವನ್ನು (ಯೋಗ್ಯವಾಗಿ) ಉಪಯೋಗಿಸಬೇಕು. (೩೫½)

ಅಂತ್ರವೃದ್ಧಿದಾಹಕ-ಶಲಾಕೆಯನ್ನು ಹೇಳುತ್ತಾರೆ.

**..........................................ಶಲಾಕಾಮಂತ್ರವರ್ಧ್ಮನಿ ||೩೬||**
**ಮಧ್ಯೋರ್ಧ್ವವೃತ್ತದಂಡಾಂ ಚ ಮೂಲೇ ಚಾರ್ಧೇಂದುಸನ್ನಿಭಾಮ್||**

ಅರ್ಥಃ— ಅಂತರ್ಗಳ ವಿಕಾರದಲ್ಲಿ ಶಲಾಕೆಯು ಮಧ್ಯದ ಮುಂದಿನ ಅರ್ಧ ಭಾಗವು ವರ್ತುಲಾಕಾರವಾಗಿಯೂ, ಕೆಳಗೆ ಅರ್ಧಚಂದ್ರಾಕೃತಿಯಾಗಿಯೂ ಇರಬೇಕು. (೩೬½)

ನಾಸಾಶೋರ್ಬುದದಾಹಕ-ಶಲಾಕೆಯನ್ನು ಹೇಳುತ್ತಾರೆ.

**ಕೋಲಾಸ್ಥಿದಲತುಲ್ಯಾಸ್ಯಾ ನಾಸಾಶೋರ್ಬುದದಾಹಕೃತ್ ||೩೭||**

ಅರ್ಥಃ— ಬೋರೆಯ ಬೀಜಾರ್ಧದಂತೆ ಮುಖವುಳ್ಳ ಶಲಾಕೆಯು ಮೂಗಿನಲ್ಲಿಯ ಅರ್ಶ ಅರ್ಬುದಗಳನ್ನು ಸುಡಲಿಕ್ಕೆ ಬರುತ್ತದೆ. (೩೭)

ದರ್ವೀ ಎಂಬ ಶಲಾಕೆಗಳನ್ನು ಹೇಳುತ್ತಾರೆ.

**ಅಷ್ಟಾಂಗುಲಾ ನಿಮ್ನಮುಖಾಸ್ತಿಸ್ರಃ ಕ್ಷಾರೌಷಧಕ್ರಮೇ ||**
**ಕನೀನೀಮಧ್ಯಮಾನಾಮೀನಖಮಾನಸಮೈರ್ಮುಖೈಃ |೩೮|**

ಅರ್ಥ:— ಕ್ಷಾರ ಮತ್ತು ಔಷಧಗಳನ್ನು ಹಚ್ಚುವದಕ್ಕಾಗಿ ತಗ್ಗು ಬಾಯಿಯು ಎಂಟು ಬೆರಳು ಉದ್ದವಾದ, ಕನೀನಿಕೆ ಮಧ್ಯಮ ಅನಾಮಿಕ ಬೆರಳುಗಳ ಉಗುರಿನಷ್ಟು ಮುಖವುಳ್ಳ ಮೂರು ಶಲಾಕೆಗಳು ಇರುತ್ತವೆ

**ಸ್ವಂಸ್ವ ಮುಕ್ತಾನಿ ಯಂತ್ರಾಣಿ ಮೇಢ್ರಶುದ್ಧ್ಯಂಜನಾದಿಷು ||**

ಅರ್ಥ:— ಉತ್ತರ ಬಸ್ತಿ ಅಂಜನ ಮುಂತಾದ ಕಾರ್ಯಕ್ಕಾಗಿ ಯಂತ್ರಗಳು ಆಯಾ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿವೆ. (೩೮||)

ಅನು-ಯಂತ್ರಗಳನ್ನು ಹೇಳುತ್ತಾರೆ.

**ಅನುಯಂತ್ರಾಣ್ಯಯಸ್ಕಾಂತರಜ್ಜುವಸ್ತ್ರಾಶ್ಮಮುದ್ಗರಾಃ |೩೯||**

**ವಧ್ರಾಂತ್ರಜಿಹ್ವಾಬಾಲಾಶ್ಚ ಶಾಖಾನಖಮುಖದ್ವಿಜಾಃ ||**

**ಕಾಲಃ ಪಾಕಃ ಕರಃ ಪಾದೋ ಭಯಂ ಹರ್ಷಶ್ಚ, ತತ್ಕ್ರಿಯಾಃ ||೪೦||**

**ಉಪಾಯವಿತ್ಪ್ರವಿಭಜೇದಾಲೋಚ್ಯ ನಿಪುಣಂ ಧಿಯಾ ||**

ಅರ್ಥ:— ಲೋಹ ಚುಂಬಕ, ಹಗ್ಗ, ವಸ್ತ್ರ, ಕಲ್ಲು, ಸುತ್ತಿಗೆ, ತೊಗಲಿನಪಟ್ಟಿ, ಅಂತ್ರ, ನಾಲಿಗೆ, ಕೂದಲು, ಟೊಂಗೆ, ಉಗುರು, ಬಾಯಿ, ಹಲ್ಲು, ಕಾಲ, ಪಚನ, ಕೈ, ಕಾಲು, ಭಯ, ಹರ್ಷ-ಇವು ೧೯ ಅನು ಯಂತ್ರಗಳು. ಉಪಾಯಜ್ಞನಾದ ವೈದ್ಯನು ಇವುಗಳ ಬೇರೆ ಬೇರೆ ಕರ್ಮಗಳನ್ನು ಬುದ್ಧಿಯಿಂದ ಚನ್ನಾಗಿ ವಿಚಾರಿಸಿ ಮಾಡಿಕೊಳ್ಳಬೇಕು. (೪೦||)

ಮೇಲೆ ಹೇಳಿದ ಯಂತ್ರಗಳ ಕಾರ್ಯಗಳನ್ನು ಹೇಳುತ್ತಾರೆ.

**ನಿರ್ಘಾತನೋನ್ಮಥನಪೂರಣಮಾರ್ಗಶುದ್ಧಿ**
**ಸಂವ್ಯೂಹನಾಹರಣಬಂಧನಪೀಡನಾನಿ ||೪೧||**

**ಆಚೂಷಣೋನ್ನಮನನಾಮನಚಾಲಭಂಗ**
**ವ್ಯಾವರ್ತನರ್ಜುಕರಣಾನಿ ಚ ಯಂತ್ರಕರ್ಮ ||**

ಅರ್ಥಃ — ಜಗ್ಗೋಣ, ಕಡೆಯೋಣ, ತುಂಬೋಣ, ಮಾರ್ಗ ಶುದ್ಧಿ, ಇಷ್ಟಸ್ಥಳಕ್ಕೆ ತರೋಣ, ತಕ್ಕೊಳ್ಳೋಣ, ಕಟ್ಟೋಣ, ಒತ್ತೋಣ, ಹೀರೋಣ, ಮೇಲಕ್ಕೆತ್ತೋಣ, ಕೆಳಗೆ ಒತ್ತೋಣ, ಅಗಳಾಡಿಸೋಣ, ಮುರಿಯೋಣ, ತಿರುಗಿಸೋಣ, ಸರಳಮಾಡೋಣ—ಇವು ಯಂತ್ರ ಕರ್ಮಗಳು. (೪೧||)

ಟಿಪ್ಪಣಿ:— ಸಂಗ್ರಹದಲ್ಲಿ ಇನ್ನು ಒಂಭತ್ತು ಹೆಚ್ಚಿಗೆ ಕರ್ಮಗಳನ್ನು ಹೇಳಿದ್ದಾರೆ. ಸಾಕಷ್ಟಕ್ಕಿಂತ ಗಿಡ್ಡ ಅಥವಾ ಉದ್ದ, ದಪ್ಪ ಅಥವಾ ತೆಳ್ಳಗೆ, ಡೊಂಕ, ಸರಿಯಾಗಿ ಹಿಡಿಯಲಿಕ್ಕೆ ಅಥವಾ ಹಿಡಿಯಲಿಕ್ಕೇ ಬರದಂತೆ ಇರೋಣ, ಶೈಥಿಲ್ಯ—ಇವು ಯಂತ್ರದ ದೋಷಗಳು.

ವಿವರ್ತತೇ ಸಾಧ್ವವಗಾಹತೇ ಚ
ಗ್ರಾಹ್ಯಂ ಗೃಹೀತ್ವೋದ್ಧರತೇ ಚ ಯಸ್ಮಾತ್ ||೪೨||

ಯಂತ್ರೇಷ್ವತಃ ಕಂಕಮುಖಂ ಪ್ರಧಾನಂ
ಸ್ಥಾನೇಷು ಸರ್ವೇಷ್ವಧಿಕಾರಿ ಯಚ್ಚ ||

ಅರ್ಥಃ— ಕಂಕಮುಖವು ಒಳಗೆ ಸಹಜವಾಗಿ ಸೇರುತ್ತದೆ ಮತ್ತು ತಿರುಗಿ ಬರುತ್ತದೆ. ಹಿಡಿಯುತಕ್ಕದ್ದನ್ನು ಹಿಡಿದು ಹೊರಗೆ ತರುತ್ತದೆ ಮತ್ತು ಎಲ್ಲ ಸ್ಥಾನಗಳಲ್ಲಿ ಉಪಯೋಗ ಬೀಳುತ್ತದೆ. ಆದಕಾರಣ ಎಲ್ಲ ಯಂತ್ರಗಳಲ್ಲಿ ಕಂಕಮುಖವು ಶ್ರೇಷ್ಠವು. (೪೨||)

ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ
ಯಂತ್ರವಿಧಿರ್ನಾಮ ಪಂಚವಿಂಶತಿತಮೋಽಧ್ಯಾಯಃ ಸಮಾಪ್ತಃ |

ಇತಿ ಶ್ರೀ ಮದಾದ್ಯಬಾಬಾಚಾರ್ಯಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗ ಹೃದಯದ ಸೂತ್ರಸ್ಥಾನದಲ್ಲಿಯ 'ಯಂತ್ರವಿಧಿ' ಎಂಬ ೨೫ ನೆಯ ಅಧ್ಯಾಯದ ಟೀಕೆಯು ಮುಗಿಯಿತು.

# ೨೬ನೆಯ ಅಧ್ಯಾಯವು

ಚಿಕಿತ್ಸೆಯ ಉಪಕರಣಸಂಗತಿಯಿಂದ ಯಂತ್ರಗಳ ನಂತರ ಶಸ್ತ್ರಗಳನ್ನು ಹೇಳುತ್ತಾರೆ.

**ಅಥಾತಃ ಶಸ್ತ್ರ*ವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥಃ— ಇನ್ನು ಮೇಲೆ ಶಸ್ತ್ರವಿಧಿಯ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾ ಹುರಾತ್ರೇಯಾದಯೋ ಮಹರ್ಷಯಃ ॥**

ಅರ್ಥಃ—ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಷಡ್ವಿಂಶತಿಃ ಸುಕರ್ಮಾರೈರ್ಘಟಿತಾನಿ ಯಥಾವಿಧಿ ॥**
**ಶಸ್ತ್ರಾಣಿ ರೋಮವಾಹೀನಿ ಬಾಹುಲ್ಯೇನಾಂಗುಲಾನಿ ಷಟ್ ॥೧**
**ಸುರೂಪಾಣಿ ಸುಧಾರಾಣಿ ಸುಗ್ರಹಾಣಿ ಚ ಕಾರಯೇತ್ ॥**
**ಅಕರಾಲಾನಿ ಸುಧ್ಮಾತಸುತೀಕ್ಷ್ಣಾವರ್ತಿತೇಽಯಸಿ ॥೨॥**
**ಸಮಾಹಿತಮುಖಾಗ್ರಾಣಿ ನೀಲಾಂಭೋಜಚ್ಛವೀನಿ ಚ ॥**
**ನಾಮಾನುಗತರೂಪಾಣಿ ಸದಾ ಸನ್ನಿಹಿತಾನಿ ಚ ॥೩॥**
**ಸ್ವೋನ್ಮಾನಾರ್ಧಚತುರ್ಥಾಂಶಫಲಾನ್ಯೇಕೈಕಶೋಽಪಿ ಚ**
**ಪ್ರಾಯೋ ದ್ವಿತ್ರಾಣಿ ಯುಂಜೀತ ತಾನಿ ಸ್ಥಾನವಿಶೇಷತಃ ॥೪॥**

ಅರ್ಥಃ— ಚಲೋ ಕಂಬಾರರಿಂದ ಶಾಸ್ತ್ರದಲ್ಲಿ ಹೇಳಿದಂತೆ ೨೬ ಶಸ್ತ್ರಗಳನ್ನು ಮಾಡಿಸಬೇಕು. ಅವು ಕೂದಲು ತೆಗೆಯುವಂಥವೂ, ಬಹುಶಃ ೬ ಬೆರಳು ಉದ್ದವಾದಂಥವೂ, ಸುಂದರವೂ, ತೀಕ್ಷ್ಣಧಾರೆಯುಳ್ಳವೂ, ಚಲೋ ಹಿಡಿಕೆಯುಳ್ಳವೂ, ಸರಳವೂ, ಚನ್ನಾಗಿ ಕರಗಿಸಿದ ತೀಕ್ಷ್ಣ ಉಕ್ಕಿನಿಂದ ಮಾಡಿದ ಮುಖಾಗ್ರವುಳ್ಳವೂ, ನೀಲ ಕಮಲದಂತೆ ಕಾಂತಿಯುಳ್ಳಂಥವೂ, ಹೆಸರಿಗೆ ತಕ್ಕ ಆಕಾರವುಳ್ಳಂಥವೂ ಇರಬೇಕು. ಅವುಗಳ ಪ್ರಮಾಣದ ಅರ್ಧ ಅಥವಾ ನಾಲ್ಕನೆಯ ಅಂಶ ಅದರ ಎಲೆ ಇರಬೇಕು. ಇವನ್ನು ಯಾವಾಗಲೂ

---

* ಶಸ್ತ್ರವಿಧಿಯನ್ನು ಸುಶ್ರುತದ ಸೂತ್ರಸ್ಥಾನ ೮, ೧೩ ನೇ, ಅಷ್ಟಾಂಗ ಸಂಗ್ರಹ ಸೂತ್ರಸ್ಥಾನ ೩೪–೩೫ ನೇ ಅಧ್ಯಾಯಗಳಲ್ಲಿ ಹೇಳಿದ್ದಾರೆ. ಚರಕದಲ್ಲಿ ಹೇಳಿಲ್ಲ.

ಹತ್ತಿರ ಇಟ್ಟುಕೊಂಡು ಪ್ರಾಯಃ ಒಂದೊಂದನ್ನಾಗಿ ಅಥವಾ ಸ್ಥಾನ ವಿಶೇಷ ವನ್ನು ನೋಡಿ ೨-೩ ಉಪಯೋಗಿಸಬೇಕು. (೪)

ಮಂಡಲಾಗ್ರ··ಶಸ್ತ್ರವನ್ನು ಹೇಳುತ್ತಾರೆ.

**ಮಂಡಲಾಗ್ರಂ ಫಲೇ ತೇಷಾಂ ತರ್ಜನ್ಯಂತರ್ನಖಾಕೃತಿ ॥**
**ಲೇಖನೇ ಛೇದನೇ ಯೋಜ್ಯಂ ಪೋಥಕೀಶುಂಡಿಕಾದಿಷು ॥೫॥**

ಅರ್ಥಃ— ಇವುಗಳಲ್ಲಿ ಮಂಡಲಾಗ್ರವೆಂಬ ಶಸ್ತ್ರವು ತರ್ಜನೀ ಬೆರಳಿನ ಒಳ ಉಗುರಿನಂತೆ ಇರುತ್ತದೆ. ಇದನ್ನು ಅರಿ, ಶುಂಡಿಕಾ (ಕಿರಿನಾಲಿಗೆ) ಮುಂತಾದವುಗಳನ್ನು ಕೆರೆಯುವದಕ್ಕಾಗಿಯೂ ಕೊಯ್ಯುವದಕ್ಕಾಗಿಯೂ ಉಪಯೋಗಿಸಬೇಕು. (೫)

ವೃದ್ಧಿಪತ್ರ··ಶಸ್ತ್ರವನ್ನು ಹೇಳುತ್ತಾರೆ.

**ವೃದ್ಧಿಪತ್ರಂ ಕ್ಷುರಾಕಾರಂ ಛೇದಭೇದನಪಾಟನೇ ॥**
**ಋಜ್ವಗ್ರಮುನ್ನತೇ ಶೋಫೇ ಗಂಭೀರೇ ಚ ತದನ್ಯಥಾ ॥೬॥**

**ನತಾಗ್ರಂ ಪೃಷ್ಠತೋ †ದೀರ್ಘಹ್ರಸ್ವವಕ್ತ್ರಂ ಯಥಾಶ್ರಯಮ್ ॥**

ಅರ್ಥಃ— ವೃದ್ಧಿಪತ್ರವು ಕತ್ತಿಯಂತೆ ಇರುತ್ತದೆ. ಅದು ಕೊಯ್ಯೋಣ ಸೀಳೋಣ ಹರಿಯೋಣಗಳಲ್ಲಿ ಉಪಯುಕ್ತವು. ಮೇಲ್ಭಾಗದ ಬಾವಿನಲ್ಲಿ ಸರಳ ತುದಿಯುಳ್ಳ ವೃದ್ಧಿಪತ್ರವನ್ನೂ, ಗಂಭೀರ ಬಾವಿನಲ್ಲಿ ಬೆನ್ನಿನ ಕಡೆಗೆ ಮಣಿದ ವೃದ್ಧಿಪತ್ರವನ್ನೂ ಉಪಯೋಗಿಸಬೇಕು. ಕೀವು ಮುಂತಾದವುಗಳ ಆಶಯದ ಅನುಸಾರ ಅದರ ಬಾಯಿಯನ್ನು ಉದ್ದ ಅಥವಾ ಗಿಡ್ಡ ಮಾಡಿರ ಬೇಕು. (೬॥)

ಉತ್ಪಲಪತ್ರ ಮತ್ತು ಅಧ್ಯರ್ಧಧಾರ ಮತ್ತು ಸರ್ಪಾಸ್ಯ ಶಸ್ತ್ರಗಳನ್ನು ಹೇಳುತ್ತಾರೆ.

**ಉತ್ಪಲಾಧ್ಯರ್ಧಧಾರಾಖ್ಯೇ ಭೇದನೇ ಛೇದನೇ ತಥಾ ॥೭॥**
**ಸರ್ಪಾಸ್ಯಂ ಘ್ರಾಣಕರ್ಣಾರ್ಶಶ್ಛೇದನೇಽರ್ಧಾಂಗುಲಂ ಫಲೇ ॥**

† ಈ ವಿಶೇಷಣವನ್ನು ಅರುಣದತ್ತನು ಮುಂದಿನ ಶಸ್ತ್ರಗಳಿಗೆ ಹಚ್ಚಿರುತ್ತಾನೆ.

ಅರ್ಥಃ— ಕೊಯ್ಯೋಣ ಕಡಿಯೋಣಗಳಲ್ಲಿ ಉಪಯುಕ್ತವಾದ ಉತ್ಪಲಪತ್ರ ಅಧ್ಯರ್ಧಧಾರವೆಂಬ ಎರಡು ಶಸ್ತ್ರಗಳು ಇರುತ್ತವೆ. ಮೂಗು ಕಿವಿಗಳ ಅರ್ಶದ ಛೇದನಕ್ಕಾಗಿ ಅರ್ಧಾಂಗುಲ ಧಾರೆಯುಳ್ಳ ಸರ್ಪಮುಖ ವೆಂಬ ಶಸ್ತ್ರವಿರುತ್ತದೆ. (೭||)

ಹುಡುಕಲಿಕ್ಕೆ ಉಪಯುಕ್ತವಾದ ಏಷಣೀ-ಶಸ್ತ್ರವನ್ನು ಹೇಳುತ್ತಾರೆ.

**ಗತೇರನ್ವೇಷಣೇ ಶ್ಲಕ್ಷ್ಣಾ ಗಂಡೂಪದಮುಖ್ಯೈಷಣೀ ||೮||**

ಅರ್ಥಃ— ನಾಡೀ ವ್ರಣದ ಗತಿಯನ್ನು ನೋಡುವದಕ್ಕಾಗಿ ನುಣು ಪಾದ, ಮಳೆಹುಳದಂತೆ ಮುಖವುಳ್ಳ ಏಷಣೀ ಎಂಬ ಶಸ್ತ್ರವಿರುತ್ತದೆ. (೮)

ಸೀಳುವದಕ್ಕೆ ಉಪಯುಕ್ತವಾದ ಏಷಣೀ-ಶಸ್ತ್ರವನ್ನು ಹೇಳುತ್ತಾರೆ.

**ಭೇದನಾರ್ಥೇಽಪರಾ ಸೂಚೀಮುಖಾ ಮೂಲನಿವಿಷ್ಟಖಾ ||**

ಅರ್ಥಃ— ಸೀಳುವದಕ್ಕಾಗಿ ಮೂಲದಲ್ಲಿ ತೂತುಳ್ಳ ಸೂಚೀಮುಖ ಎಂಬ ಬೇರೆ ಏಷಣೀ ಇರುತ್ತದೆ.

**ಟಿಪ್ಪಣೀ:—** ಇದರಿಂದ ವ್ರಣದಲ್ಲಿ ಕ್ಷಾರ ಹಚ್ಚಿದ ಧಾರವನ್ನು ಸೇರಿಸಿ ಒಡೆಯುವರು. (೮||)

ವೇತಸ-ಶಸ್ತ್ರವನ್ನು ಹೇಳುತ್ತಾರೆ.

**ವೇತಸಂ ವ್ಯಧನೇ... ..........................................**

ಅರ್ಥಃ— ಕಡಿಯುವದಕ್ಕಾಗಿ (ಬೆತ್ತದ ಎಲೆಯಂಥ ವೇತಸ ವೆಂಬ ಶಸ್ತ್ರವು ಇರುತ್ತದೆ. (೮|||)

ಶರಾರೀಮುಖ, ತ್ರಿಕೂರ್ಚಕ ಎಂಬ ಎರಡು ಶಸ್ತ್ರಗಳನ್ನು ಹೇಳುತ್ತಾರೆ.

**.ಸ್ರಾವ್ಯೇ ಶರಾರ್ಯಾಸ್ಯತ್ರಿಕೂರ್ಚಕೇ ||೯||**

ಅರ್ಥಃ— ಶರಾರೀ-ಮುಖ, ತ್ರಿಕೂರ್ಚಕವೆಂಬ ಶಸ್ತ್ರಗಳು ಕಚ್ಚು ಹಾಕಿ ರಕ್ತಸ್ರಾವಕ್ಕೆ ಉಪಯುಕ್ತವಾದವುಗಳು. (೯)

ಕುಶಪತ್ರ, ಆಟೀಮುಖ ಎಂಬ ಎರಡು ಶಸ್ತ್ರಗಳನ್ನು ಹೇಳುತ್ತಾರೆ.

**ಕುಶಾಟೀವದನೇ ಸ್ರಾವ್ಯೇ ದ್ವ್ಯಂಗುಲಂ ಸ್ಯಾತ್ತಯೋಃ ಫಲಮ್ ॥**

ಅರ್ಥಃ— ಎರಡು ಬೆರಳು ಎಲೆಯುಳ್ಳ ಕುಶಮುಖ ಆಟೀಮುಖ ಗಳೆಂಬ ಎರಡು ಶಸ್ತ್ರಗಳು ಸ್ರಾವಕ್ಕಾಗಿ ಉಪಯುಕ್ತವಿರುತ್ತವೆ. (೯॥)

ಅಂತರ್ಮುಖ-ಶಸ್ತ್ರಗಳನ್ನು ಹೇಳುತ್ತಾರೆ.

**ತದ್ವದಂತರ್ಮುಖಂ ತಸ್ಯ ಫಲಮಧ್ಯರ್ಧಮಂಗುಲಮ್ ॥೧೦॥**
**ಅರ್ಧಚಂದ್ರಾನನಂ ಚೈತತ್..........................**

ಅರ್ಥಃ— ಒಂದೂವರೆ ಬೆರಳು ಎಲೆಯುಳ್ಳ ಅಂತರ್ಮುಖ ಎಂಬ ಶಸ್ತ್ರವು ಅದರಂತೆಯೇ ಸ್ರಾವಕ್ಕಾಗಿ ಇರುತ್ತದೆ. ಅದಕ್ಕೆ ಅರ್ಧಚಂದ್ರಾಸ್ಯ ಎಂಬ ಹೆಸರೂ ಉಂಟು. (೧೦।)

ವ್ರೀಹಿಮುಖ ಶಸ್ತ್ರವನ್ನು ಹೇಳುತ್ತಾರೆ.

**..............................ತಥಾಽಧ್ಯರ್ಧಾಂಗುಲಂ ಫಲೇ ॥**
**ವ್ರೀಹಿವಕ್ತ್ರಂ ಪ್ರಯೋಜ್ಯಂ ಚ ತಚ್ಛಿರೋದರಯೋರ್ವ್ಯಧೇ ॥೧೧॥**

ಅರ್ಥ:—ವ್ರೀಹಿಮುಖ (ಭತ್ತದಂತೆ ಮುಖವುಳ್ಳ) ಎಂಬ ಒಂದೂವರೆ ಅಂಗುಲದ ಧಾರೆಯುಳ್ಳ ಶಸ್ತ್ರವನ್ನು ಶಿರಾ ಉದರಗಳ ಭೇದದಲ್ಲಿ ಉಪಯೋಗಿಸಬೇಕು. (೧೧)

ಕುಠಾರೀ ಶಸ್ತ್ರವನ್ನು ಹೇಳುತ್ತಾರೆ.

**ಪೃಥುಃ ಕುಠಾರೀ ಗೋದಂತಸದೃಶಾರ್ಧಾಂಗುಲಾನನಾ ॥**
**ತಯೋರ್ಧ್ವದಂಡಯಾ ವಿಧ್ಯೇದುಪರ್ಯಸ್ಥ್ನಾಂ ಸ್ಥಿತಾಂ ಶಿರಾಮ್ ॥೧೨॥**

ಅರ್ಥ:— ಕುಠಾರೀ ಎಂಬ ಶಸ್ತ್ರವು ದೊಡ್ಡದೂ ಆಕಳ ಹಲ್ಲಿನ ಆಕಾರದ ಅರ್ಧ ಅಂಗುಲದ ಎಲೆಯುಳ್ಳದ್ದೂ ಉದ್ದವಾದ ಕಾವುಳ್ಳದ್ದೂ ಇರುತ್ತದೆ. ಅದರಿಂದ ಎಲಬಿನ ಮೇಲಿದ್ದ ಶಿರೆಯನ್ನು ಕತ್ತರಿಸಬೇಕು. (೧೨)

ಶಲಾಕಾ-ಶಸ್ತ್ರವನ್ನು ಹೇಳುತ್ತಾರೆ.

**ತಾಮ್ರೀ ಶಲಾಕಾ ದ್ವಿಮುಖೀ ಮುಖೇ ಕುರುಬಕಾಕೃತಿಃ ॥**
**ಲಿಂಗನಾಶಂ ತಯಾ ವಿಧ್ಯೇತ್..........................**

ಅರ್ಥ:— ಮುಳಜಾಜಿಯ ಮೊಗ್ಗೆಯಂತೆ ಮುಖವುಳ್ಳ ಎರಡು ಮೋರೆಯ ತಾಮ್ರದ ಶಲಾಕೆ ಇರುತ್ತದೆ. ಇದರಿಂದ ಲಿಂಗನಾಶ (ಮೋತೀ ಬಿಂದು)ವನ್ನು ತೆಗೆಯಬೇಕು. (೧೨॥)

ಅಂಗುಲಿ-ಶಸ್ತ್ರವನ್ನು ಹೇಳುತ್ತಾರೆ.

**..........................ಕುರ್ಯಾದಂಗುಲಿಶಸ್ತ್ರಕಮ್ ॥೧೩॥**

**ಮುದ್ರಿಕಾನಿರ್ಗತಮುಖಂ ಫಲೇ ತ್ವರ್ಧಾಂಗುಲಾಯತಮ್ ॥**
**ಯೋಗತೋ ವೃದ್ಧಿಪತ್ರೇಣ ಮಂಡಲಾಗ್ರೇಣ ವಾ ಸಮಮ್ ॥೧೪॥**

**ತತ್ಪ್ರದೇಶಿನ್ಯಗ್ರಪರ್ವಪ್ರಮಾಣಾರ್ಪಣಮುದ್ರಿಕಮ್ ॥**
**ಸೂತ್ರಬದ್ಧಂ ಗಲಸ್ರೋತೋರೋಗಚ್ಛೇದನಭೇದನೇ ॥೧೫॥**

ಅರ್ಥಃ— ಗಂಟಲದಲ್ಲಿಯ ರೋಗಗಳ ಛೇದನ-ಭೇದನಕ್ಕಾಗಿ ಅಂಗುಲಿ-ಶಸ್ತ್ರ ಎಂಬ ಶಸ್ತ್ರವಿರುತ್ತದೆ. ಅದರ ಎಲೆಯು ಅರ್ಧಾಂಗುಲವಿದ್ದು ಆಕಾರವು ವೃದ್ಧಿಪತ್ರ ಅಥವಾ ಮಂಡಲಾಗ್ರದಷ್ಟು ಇರುತ್ತದೆ. ವೈದ್ಯನ ತರ್ಜನಿಯ ತುದಿಯ ಗಣಿಕೆಗೆ ಸೇರುವಷ್ಟು ಒಂದು ಮುದ್ರಿಕೆಯಿದ್ದು ಅದರಲ್ಲಿ ಮುಖವು ಹೊರಗೆಬರುವಂತೆ ಅದನ್ನು ಕೂಡಿಸಬೇಕು. ಅದಕ್ಕೆ ದಾರ ಕಟ್ಟಿ ಮುಂಗೈಗೆ ಕಟ್ಟಬೇಕು. (೧೫)

ಬಡಿಶ-ಶಸ್ತ್ರವನ್ನು ಹೇಳುತ್ತಾರೆ.

**ಗ್ರಹಣೇ ಶುಂಡಿಕಾರ್ಮಾದೇರ್ಬಡಿಶಂ ಸುನತಾನನಮ್ ॥೧೬॥**

ಅರ್ಥ:— ಕಿರಿನಾಲಿಗೆ ಮತ್ತು ಗುಡ್ಡಿಯ ಮೇಲೆ ಬೆಳೆದ ಮಾಂಸಗಳನ್ನು ಹಿಡಿಯುವದಕ್ಕಾಗಿ ಮೋರೆ ಬಗ್ಗಿದ ಬಡಿಶ (ಗಾಳ) ಎಂಬ ಶಸ್ತ್ರವಿರುತ್ತದೆ. (೧೬॥)

ಕರಪತ್ರ-ಶಸ್ತ್ರವನ್ನು ಹೇಳುತ್ತಾರೆ.

**ಛೇದೇಽಸ್ಥ್ನಾಂ ಕರಪತ್ರಂ ತು ಖರಧಾರಂ ದಶಾಂಗುಲಮ್ ||೧೬||**
**ವಿಸ್ತಾರೇ ದ್ವ್ಯಂಗುಲಂ ಸೂಕ್ಷ್ಮದಂತಂ ಸುತ್ಸರುಬಂಧನಮ್ ||**

ಅರ್ಥಃ— ಎಲಬುಗಳನ್ನು ಕೊಯ್ಯಲಿಕ್ಕೆ ಕರಪತ್ರವೆಂಬ ಶಸ್ತ್ರವಿರುತ್ತದೆ. ಅದರ ಧಾರೆಯು ಬಿರುಸು ಇರುತ್ತದೆ. ಅದು ೧೦ ಅಂಗುಲ ಉದ್ದ, ೨ ಅಂಗುಲ ಅಗಲ ಇದ್ದು, ಅದಕ್ಕೆ ಸೂಕ್ಷ್ಮವಾದ ಹಲ್ಲುಗಳೂ ಗಟ್ಟಿಯಾದ ಹಿಡಿಕೆಯೂ ಇರುತ್ತದೆ. (೧೬||)

ಕರ್ತರೀ-ಶಸ್ತ್ರವನ್ನು ಹೇಳುತ್ತಾರೆ.

**ಸ್ನಾಯುಸೂತ್ರಕಚಚ್ಛೇದೇ ಕರ್ತರೀ ಕರ್ತರೀನಿಭಾ ||೧೭||**

ಅರ್ಥಃ— ಸ್ನಾಯು ದಾರ ಕೇಶಗಳನ್ನು ಕತ್ತರಿಸುವದಕ್ಕಾಗಿ ಕತ್ತರಿಯಂಥ ಕರ್ತರೀ ಎಂಬ ಶಸ್ತ್ರವಿರುತ್ತದೆ. (೧೭)

ನಖ-ಶಸ್ತ್ರವನ್ನು ಹೇಳುತ್ತಾರೆ.

**ವಕ್ರರ್ಜುಧಾರಂ ದ್ವಿಮುಖಂ ನಖಶಸ್ತ್ರಂ ನವಾಂಗುಲಮ್ ||**
**ಸೂಕ್ಷ್ಮಶಲ್ಯೋದ್ಧೃತಿಚ್ಛೇದಭೇದಪ್ರಚ್ಛಾನಲೇಖನೇ ||೧೮||**

ಅರ್ಥಃ— ಸೂಕ್ಷ್ಮ ಶಲ್ಯಗಳನ್ನು ಕಿತ್ತುವದಕ್ಕಾಗಿ ಒಡೆಯೋಣ ಸೀಳೋಣ ಕಚ್ಚುಹಾಕೋಣ ಕೆರೆಯೋಣಕ್ಕಾಗಿ ೯ ಅಂಗುಲದ ಒಂದು ಕಡೆಗೆ ಡೊಂಕು, ಒಂದು ಕಡೆಗೆ ಸರಳ ಹೀಗೆ ಎರಡು ಮುಖವುಳ್ಳ ನಖಶಸ್ತ್ರವಿರುತ್ತದೆ. (೧೮)

ದಂತಲೇಖನ-ಶಸ್ತ್ರವನ್ನು ಹೇಳುತ್ತಾರೆ.

**ಏಕಧಾರಂ ಚತುಷ್ಕೋಣಂ ಪ್ರಬದ್ಧಾಕೃತಿ ಚೈಕತಃ ||**
**ದಂತಲೇಖನಕಂ, ತೇನ ಶೋಧಯೇದ್ದಂತಶರ್ಕರಾಮ್ ||೧೯||**

ಅರ್ಥಃ— ಚತುಷ್ಕೋಣವುಳ್ಳ, ಒಂದು ಧಾರೆಯು, ಒಂದು ಕಡೆಗೆ ಮಂಡಾದ, ದಂತ ಲೇಖನಕವೆಂಬ ಶಸ್ತ್ರವಿರುತ್ತದೆ. ಅದರಿಂದ ದಂತ-ಶರ್ಕರೆಯನ್ನು ತೆಗೆಯಬೇಕು. (೧೯)

ಮೂರು ಸೂಜಿಗಳನ್ನು ಹೇಳುತ್ತಾರೆ.

**ವೃತ್ತಾ ಗೂಢದೃಢಾಃ ಪಾಶೇ ತಿಸ್ರಃ ಸೂಚ್ಯೋಽತ್ರ ಸೀವನೇ ॥**
**ಮಾಂಸಲಾನಾಂ ಪ್ರದೇಶಾನಾಂ ತ್ರ್ಯಸ್ರಾ ತ್ರ್ಯಂಗುಲಮಾಯತಾ ॥೨೦॥**
**ಅಲ್ಪಮಾಂಸಾಸ್ಥಿಸಂಧಿಸ್ಥವ್ರಣಾನಾಂ ದ್ವ್ಯಂಗುಲಾಯತಾ ॥**
**ವ್ರೀಹಿವಕ್ತ್ರಾ ಧನುರ್ವಕ್ರಾ ಪಕ್ವಾಮಾಶಯಮರ್ಮಸು ॥೨೧॥**
**ಸಾ ಸಾರ್ಧದ್ವ್ಯಂಗುಲಾ...............................**

ಅರ್ಥಃ— ಹೊಲಿಯುವದಕ್ಕೆ ತೂತಿನ ಕಡೆಗೆ ಗೂಢ ಮತ್ತು ಗಟ್ಟಿಯಾದ ದುಂಡನ್ನ ೩ ಸೂಜಿಗಳಿರುತ್ತವೆ. ಅವುಗಳಲ್ಲಿ ಮಾಂಸಮಯ ದೇಶಗಳನ್ನು ಹೊಲಿಯುವದಕ್ಕಾಗಿ ೩ ಅಂಗುಲ ಉದ್ದವಾದ ಒಂದು ಮೂರೇಣಿನ ಸೂಜಿ ಇರುತ್ತದೆ. ಸ್ವಲ್ಪ ಮಾಂಸ ಮತ್ತು ಅಸ್ಥಿಸಂಧಿಗಳಲ್ಲಿದ್ದ ವ್ರಣಗಳಿಗಾಗಿ ೨ ಅಂಗುಲ ಉದ್ದವಿದ್ದ ಒಂದು ಸೂಜಿ ಇರುತ್ತದೆ. ಇದರಂತೆ ಪಕ್ವಾಶಯ ಆಮಾಶಯ ಮರ್ಮಗಳಿಗಾಗಿ ೨॥ ಅಂಗುಲ ಉದ್ದವಾದ, ಧನುಷ್ಯದಂತೆ ಮಣಿದ, ಭತ್ತದಂತೆ ತುದಿಯುಳ್ಳ ಒಂದು ಸೂಜಿ ಇರುತ್ತದೆ. (೨೧)

ಕೂರ್ಚವನ್ನು ಹೇಳುತ್ತಾರೆ.

**...............ಸರ್ವವೃತ್ತಾಸ್ತಾಶ್ಚತುರಂಗುಲಾಃ ॥**
**ಕೂರ್ಚೋ ವೃತ್ತೈಕಪೀಠಸ್ಥಾಃ ಸಪ್ತಾಷ್ಟೌ ವಾ ಸುಬಂಧನಾಃ॥೨೨॥**
**ಸ ಯೋಜ್ಯೋ ನೀಲಿಕಾವ್ಯಂಗಕೇಶಶಾತೇಷು ಕುಟ್ಟನೇ ॥**

ಅರ್ಥಃ— ಎಲ್ಲ ಕಡೆಗೂ ದುಂಡಾದ ನಾಲ್ಕು ಬೆರಳು ಉದ್ದವಾದ ೭-೮ ಸೂಜಿಗಳನ್ನು ಒಂದು ದುಂಡನ್ನ ಪೀಠದಲ್ಲಿ ಗಟ್ಟಿಯಾಗಿ ಕಟ್ಟಿದ್ದರೆ ಕೂರ್ಚವೆನ್ನುವರು. ಅದನ್ನು ನೀಲಿಕೆ, ವ್ಯಂಗ, ಕೂದಲು ಉದರಿದ ಸ್ಥಳಗಳಲ್ಲಿ ಚುಚ್ಚುವದಕ್ಕಾಗಿ ಉಪಯೋಗಿಸುವರು. (೨೨)

ಖಜವನ್ನು ಹೇಳುತ್ತಾರೆ.

**ಅರ್ಧಾಂಗುಲಮುಖೈರ್ವೃತ್ತೈರಷ್ಟಾಭಿಃ ಕಂಟಕೈಃ ಖಜಃ ॥೨೩॥**

ಪಾಣಿಭ್ಯಾಂ ಮಥ್ಯಮಾನೇನ ಘ್ರಾಣಾತ್ತೇನ ಹರೇದಸೃಕ್ ॥

ಅರ್ಥ:— ಅರ್ಧ ಬೆರಳಿನಷ್ಟು ತುದಿಯುಳ್ಳ ದುಂಡನ್ನ ಎಂಟು ಮುಳ್ಳುಗಳಿಂದ ಮಾಡಿದ ಕಡಗೋಲ (ಖಜ) ಇರುತ್ತದೆ. ಅದನ್ನು ಮೂಗಿನಲ್ಲಿ ಹಾಕಿ ಕೈಗಳಿಂದ ಕಡೆದು ರಕ್ತವನ್ನು ತೆಗೆಯಬೇಕು. (೨೩॥)

ಯೂಥಿಕಾ-ಶಸ್ತ್ರವನ್ನು ಹೇಳುತ್ತಾರೆ.

ವ್ಯಥನಂ ಕರ್ಣಪಾಲೀನಾಂ ಯೂಥಿಕಾ ಮುಕುಲಾನನಮ್ ॥೨೪॥

ಅರ್ಥ:— ಕಿವಿಯ ಹಾಲಿಯನ್ನು ಚುಚ್ಚುವದಕ್ಕಾಗಿ ಮೊಗ್ಗೆಯ ಮುಖದ ಯೂಥಿಕಾ ಎಂಬ ಶಸ್ತ್ರವಿರುತ್ತದೆ. (೨೪)

ಆರಾ-ಶಸ್ತ್ರವನ್ನ ಹೇಳುತ್ತಾರೆ.

ಆರಾಽರ್ಧಾಂಗುಲವೃತ್ತಾಸ್ಯಾ ತತ್ಪ್ರವೇಶಾ ತಥೋರ್ಧ್ವತಃ ॥
ಚತುರಸ್ರಾ ತಯಾ ವಿಧ್ಯೇಚ್ಛೋಫಂ ಪಕ್ವಾಮಸಂಶಯೇ ॥೨೫॥

ಕರ್ಣಪಾಲೀಂ ಚ ಬಹಲಾಮ್.....................

ಅರ್ಥ:— ತುದಿಯಲ್ಲಿ ಅರ್ಧಾಂಗುಲ ವರ್ತುಲವುಳ್ಳ ಅದರ ಮೇಲೆ ಅಷ್ಟೇ (ಅರ್ಧಾಂಗುಲ) ಚತುಷ್ಕೋಣವುಳ್ಳ ಆರಾ ಎಂಬ ಶಸ್ತ್ರ ವಿರುತ್ತದೆ. ಪಕ್ವ ಅಥವಾ ಆಮ ಸಂಶಯ ಬಂದಾಗ್ಗೆ ಬಾವನ್ನು ಅದರಿಂದ ಚುಚ್ಚಬೇಕು. ಅರ್ಧಾಂಗುಲವನ್ನು ಅದರಲ್ಲಿ ಪ್ರವೇಶಮಾಡಿಸಬೇಕು. ದಪ್ಪಾದ ಕಿವಿಯ ಹಾಲೆಯನ್ನೂ ಇದರಿಂದ ಚುಚ್ಚಬೇಕು. (೨೫।)

ಕರ್ಣಪಾಲೀವೇಧನೀ ಸೂಚಿಯನ್ನು ಹೇಳುತ್ತಾರೆ.

.ಬಹಲಾಯಾಶ್ಚ ಶಸ್ಯತೇ
ಸೂಚೀ ತ್ರಿಭಾಗಸುಷಿರಾ ತ್ರ್ಯಂಗುಲಾ ಕರ್ಣವೇಧನೀ ॥೨೬॥

ಅರ್ಥ:— ದಪ್ಪವಾದ ಕಿವಿಯ ಹಾಲಿಯನ್ನು ಚುಚ್ಚುವದಕ್ಕೆ ಕರ್ಣವೇಧ ಎಂಬ ಶಸ್ತ್ರವಿರುತ್ತದೆ. ಅದು ಮೂರು ಅಂಗುಲ ಉದ್ದವಿದ್ದು ಅದರ ೩।೪ ಭಾಗ ಪೊಳ್ಳು ಇರುತ್ತದೆ. (೨೬)

ಅನುಶಸ್ತ್ರಗಳನ್ನು ಹೇಳುತ್ತಾರೆ.

**ಜಲೌಕಃಕ್ಷಾರದಹನಕಾಚೋಪಲನಖಾದಯಃ ॥**
**ಅಲೌಹಾನ್ಯನುಶಸ್ತ್ರಾಣಿ ತಾನ್ಯೇವಂ ಚ ವಿಕಲ್ಪಯೇತ್ ॥೨೭॥**

**ಅಪರಾಣ್ಯಪಿ ಯಂತ್ರಾದೀನ್ಯುಪಯೋಗಂ ಚ ಯೌಗಿಕಮ್ ॥**

ಅರ್ಥಃ— ಜಿಗಳೆ, ಕ್ಷಾರ, ಅಗ್ನಿ, ಕಾಜು, ಕಲ್ಲು, ಉಗುರು ಮುಂತಾದವುಗಳು ಲೋಹದಿಂದಾಗದ ಅನುಶಸ್ತ್ರಗಳು. ಇದರಂತೆ ಎರಡನೆಯ ಯಂತ್ರ ಉಪಯಂತ್ರ ಶಸ್ತ್ರಗಳನ್ನೂ ಅವುಗಳ ಯೋಗ್ಯ ಉಪಯೋಗವನ್ನೂ ಕಾರ್ಯಾನುಸಾರವಾಗಿ ಕಲ್ಪನೆಯಿಂದ ಮಾಡಿಕೊಳ್ಳಬೇಕು. (೨೭॥)

ಶಸ್ತ್ರಗಳ ಕರ್ಮಗಳನ್ನು ಹೇಳುತ್ತಾರೆ.

**ಉತ್ಪಾಟ್ಯಪಾಟ್ಯಸೀವ್ಯೈಷ್ಯಲೇಖ್ಯಪ್ರಚ್ಛಾನಕುಟ್ಟನಮ್ ॥೨೮॥**

**ಛೇದ್ಯಂ ಭೇದ್ಯಂ ವ್ಯಧೋ ಮಂಥೋಗ್ರಹೋ ದಾಹಶ್ಚ ತತ್ಕ್ರಿಯಾಃ।**

ಅರ್ಥ:— ಕಿತ್ತೋಣ, ಹರಿಯೋಣ, ಹೊಲಿಯೋಣ, ಹುಡುಕೋಣ, ಕೆರೆಯೋಣ, ಕಚ್ಚುಹಾಕೋಣ, ಕುಟ್ಟೋಣ, ಕೊಯ್ಯೋಣ, ಒಡೆಯೋಣ, ಚುಚ್ಚೋಣ, ಕಡಿಯೋಣ, ಹಿಡಿಯೋಣ, ಮತ್ತು ಸುಡೋಣ—ಇವು ಶಸ್ತ್ರದ ಕರ್ಮಗಳು. (೨೮॥)

ಶಸ್ತ್ರದೋಷಗಳನ್ನು ಹೇಳುತ್ತಾರೆ.

**ಕುಂಠಖಂಡತನುಸ್ಥೂಲಹ್ರಸ್ವದೀರ್ಘತ್ವವಕ್ರತಾಃ ॥೨೯॥**

**ಶಸ್ತ್ರಾಣಾಂ ಖರಧಾರತ್ವಮಷ್ಟೌ ದೋಷಾಃ ಪ್ರಕೀರ್ತಿತಾಃ ॥**

ಅರ್ಥ:— ಮೊಂಡ ಇರೋಣ, ಸೀಳುವಿಕೆ, ಬಹಳ ದಪ್ಪ ಅಥವಾ ತೆಳ್ಳಗಿರೋಣ, ಬಹಳ ಉದ್ದ ಅಥವಾ ಗಿಡ್ಡ ಇರೋಣ, ಡೊಂಕು ಇರೋಣ, ಬಿರುಸು ಧಾರೆ, ಇವು ಶಸ್ತ್ರಗಳ ಎಂಟು ದೋಷಗಳು ಎಂದು ಹೇಳಲ್ಪಟ್ಟಿವೆ. (೨೯॥)

ಶಸ್ತ್ರಗ್ರಹಣ ವಿಧಿಯನ್ನು ಹೇಳುತ್ತಾರೆ.

ಛೇದಭೇದನಲೇಖ್ಯಾರ್ಥಂ ಶಸ್ತ್ರಂ ವೃಂತಫಲಾಂತರೇ ||೩೦||
ತರ್ಜನೀಮಧ್ಯಮಾಂಗುಷ್ಠೈರ್ಗೃಹ್ಣೀಯಾತ್ಸುಸಮಾಹಿತಃ ||

ಅರ್ಥಃ— ಕೊಯ್ಯೋಣ, ಒಡೆಯೋಣ, ಕೆರೆಯೋಣ ಈ ಕಾರ್ಯ ಗಳಲ್ಲಿ ತರ್ಜನೀ ಮಧ್ಯಮ ಅಂಗುಷ್ಠಗಳಿಂದ ಶಸ್ತ್ರಗಳನ್ನು ಹಿಡಿಕೆ ಎಲೆಗಳ ನಡುವೆ ಲಕ್ಷ್ಯಗೊಟ್ಟು ಹಿಡಿಯಬೇಕು. (೩೦||)

ವಿಸ್ರಾವಣಾನಿ ವೃಂತಾಗ್ರೇ ತರ್ಜನ್ಯಂಗುಷ್ಠಕೇನ ಚ ||೩೧||

ತಲಪ್ರಚ್ಛನ್ನವೃಂತಾಗ್ರಂ ಗ್ರಾಹ್ಯಂ ವ್ರೀಹಿಮುಖಂ ಮುಖೇ ||
ಮೂಲೇಷ್ವಾಹರಣಾರ್ಥಾನಿ ಕ್ರಿಯಾಸೌಕರ್ಯತೋಽಪರಮ್ ||೩೨||

ಅರ್ಥ:— ರಕ್ತಸ್ರಾವ ಮಾಡುವವುಗಳನ್ನು ತರ್ಜನೀ ಮತ್ತು ಅಂಗುಷ್ಠದಿಂದ ಹಿಡಿಕೆಯ ತುದಿಗೆ ಹಿಡಿಯಬೇಕು. ವ್ರೀಹಿಮುಖ-ಶಸ್ತ್ರ ವನ್ನು ಅಂಗೈಯಲ್ಲಿ ಹಿಡಿಕೆಯ ತುದಿಯು ಮುಚ್ಚುವಂತೆ ಅದರ ಮುಖ ದಲ್ಲಿ ಹಿಡಿಯಬೇಕು. ಶಲ್ಯವನ್ನು ತೆಗೆಯುವದಕ್ಕಾಗಿದ್ದ ಯಂತ್ರಗಳನ್ನು ಬೊಡ್ಡೆಯಲ್ಲಿ ಹಿಡಿಯಬೇಕು. ಉಳಿದ ಶಸ್ತ್ರಗಳನ್ನು ಕ್ರಿಯೆಗಳಿಗೆ ಸುಲಭ ವಾಗುವಂತೆ ಹಿಡಿಯಬೇಕು. (೬೨)

ಶಸ್ತ್ರಕೋಶವನ್ನು ಹೇಳುತ್ತಾರೆ.

ಸ್ಯಾನ್ನವಾಂಗುಲವಿಸ್ತಾರಃ ಸುಘನೋ ದ್ವಾದಶಾಂಗುಲಃ ||
ಕ್ಷೌಮಪತ್ರೋರ್ಣಕೌಶೇಯದುಕೂಲಮೃದುಚರ್ಮಜಃ ||೩೩||

ವಿನ್ಯಸ್ತಪಾಶಃ ಸುಸ್ಯೂತಃ ಸಾಂತರೋರ್ಣಾಸ್ಥಶಸ್ತ್ರಕಃ ||
ಶಲಾಕಾಪಿಹಿತಾಸ್ಯಶ್ಚ ಶಸ್ತ್ರಕೋಶಃ ಸುಸಂಚಯಃ ||೩೪||

ಅರ್ಥಃ— ಶಸ್ತ್ರಕೋಶವು ೯ ಅಂಗುಲ ವಿಸ್ತಾರ ೧೨ ಅಂಗುಲ ಉದ್ದ ಮತ್ತು ಗಟ್ಟಿಯಾದದ್ದೂ ತಾಗ ಧೌತ-ರೇಶಿಮೆ ರೇಶಿಮೆ ಮೆತ್ತನ್ನ ಅರಿವೆ ಅಥವಾ ಮೃದು ಚರ್ಮದಿಂದ ಮಾಡಿದ್ದು ಇರಬೇಕು. ಚನ್ನಾಗಿ ಹೊಲಿದದ್ದೂ ನಡುನಡುವೆ ಉಣ್ಣಿ ಹಾಕಿ ಶಸ್ತ್ರಗಳನ್ನು ಇಡುವಂತೆ

ಮಾಡಿದ್ದೂ ಬಹಳ ಶಸ್ತ್ರಗಳು ಹಿಡಿಯುವಂಥದೂ ಸರಗುಣಿಕೆಯುಳ್ಳದ್ದೂ ಇರಬೇಕು. ಅದರ ಬಾಯಿಯನ್ನು ಶಲಾಕೆಯಿಂದ ಮುಚ್ಚಿರಬೇಕು. (೩೪)

ಸುಕುಮಾರ ಜನರಿಗಾಗಿ ಜಿಗಳೆಗಳನ್ನು ಹೇಳುತ್ತಾರೆ.

**ಜಲೌಕಸಸ್ತು ಸುಖಿನಾಂ ರಕ್ತಸ್ರಾವಾಯ ಯೋಜಯೇತ್ ||**

ಅರ್ಥಃ— ಸುಖಿ ಜನರ ರಕ್ತಸ್ರಾವವನ್ನು ಯಂತ್ರದ ಬದಲಾಗಿ ಜಿಗಳೆಯಿಂದ ಮಾಡಬೇಕು. (೩೪||)

**ದುಷ್ಟಾಂಬುಮತ್ಸ್ಯಭೇಕಾಹಿಶವಕೋಥಮಲೋದ್ಭವಾಃ ||೩೫||**
**ರಕ್ತಾಃ ಶ್ವೇತಾ ಭೃಶಂ ಕೃಷ್ಣಾಶ್ಚಪಲಾಃ ಸ್ಥೂಲಪಿಚ್ಛಿಲಾಃ ||**
**ಇಂದ್ರಾಯುಧವಿಚಿತ್ರೋರ್ಧ್ವರಾಜಯೋ ರೋಮಶಾಶ್ಚ ತಾಃ ||೩೬||**
**ಸವಿಷಾ ವರ್ಜಯೇತ್... ... ..............................**

ಅರ್ಥಃ— ಕೆಟ್ಟ ನೀರಿನಲ್ಲಿ ಅಥವಾ ಮೀನು ಕಪ್ಪೆ ಹಾವುಗಳ ಶರೀರ ಕೊಳೆಯೋಣದರಿಂದ ಉತ್ಪನ್ನವಾದ ಮಲದಲ್ಲಿ ಉಂಟಾದ, ಕೆಂಪು ಬಿಳಿ ಬಹಳ ಕಪ್ಪು ಚಂಚಲ ದಪ್ಪ ಹೆಡಸ್ಥೆಡಸು ಕಾಮನ ಬಿಲ್ಲಿನಂತೆ ವಿಚಿತ್ರ ಗೆರೆಗಳುಳ್ಳ, ಮೈಮೇಲೆ ಕೂದಲುಗಳುಳ್ಳ ಜಿಗಳೆಗಳು ವಿಷಯುಕ್ತವೆಂದು ತಿಳಿದು ಅವನ್ನು ಬಿಡಬೇಕು. (೩೬।)

**.................. ..........ತಾಭಿಃ ಕಂಡೂಪಾಕಜ್ವರಭ್ರಮಾಃ ||**
**ವಿಷಪಿತ್ತಾಸ್ರನುತ್ಕಾರ್ಯಂ ತತ್ರ..........................**

ಅರ್ಥಃ— ಅವುಗಳಿಂದ ತಿಂಡಿ ಪಾಕ ಜ್ವರ ಭ್ರಮಗಳುಂಟಾಗುವವು. ಅವುಗಳ ಮೇಲೆ ವಿಷ ಮತ್ತು ರಕ್ತ-ಪಿತ್ತ-ನಾಶಕ ಉಪಾಯಮಾಡಬೇಕು.

**............................ಶುದ್ಧಾಂಬುಜಾಃ ಪುನಃ ೩೭।|**

**ನಿರ್ವಿಷಾಃ ಶೈವಲಶ್ಯಾವಾ ವೃತ್ತಾ ನೀಲೋರ್ಧ್ವರಾಜಯಃ ||**
**ಕಷಾಯಪೃಷ್ಠಾಸ್ತನ್ವಂಗ್ಯಃ ಕಿಂಚಿತ್ಪೀತೋದರಾಶ್ಚ ಯಾಃ ||೩೮||**

ಅರ್ಥ:— ಆದರೆ ಶುದ್ಧ ನೀರಿನಲ್ಲಿ ಹುಟ್ಟಿದವು ಹಾವಸಿಯಂತೆ ಹಸರುಗಪ್ಪು, ದುಂಡ, ಮೇಲೆ ಕರೆ ಉದ್ದ ಗೆರೆಗಳುಳ್ಳಂಥವೂ, ಸ್ವಲ್ಪ ಕಪ್ಪು ಬಣ್ಣದ ಬೆನ್ನುಳ್ಳ, ಬಡಕ, ಸ್ವಲ್ಪ ಹಳದೀ ಹೊಟ್ಟೆಯುಳ್ಳಂಥವೂ ಇರುತ್ತವೆ. ಅವು ನಿರ್ವಿಷ ಎಂದು ತಿಳಿಯಬೇಕು. (೩೮)

**ತಾ ಅಪ್ಯಸಮ್ಯಗ್ವಮನಾತ್ಪ್ರತತಂ ಚ ನಿಪಾತನಾತ್ ॥**
**ಸೀದಂತೀಃ ಸಲಿಲಂ ಪ್ರಾಪ್ಯ ರಕ್ತಮತ್ತಾ ಇತಿ ತ್ಯಜೇತ್ ॥೩೯॥**

ಅರ್ಥ:— ಅವುಗಳಾದರೂ ನೆಟ್ಟಗೆ ವಾಂತಿ ಮಾಡಿಸದೆ ಹೋದರೆ ಅಥವಾ ಮೇಲೆ ಮೇಲೆ ಹಚ್ಚಿದರೆ ರಕ್ತದಿಂದ ಮತ್ತವಾಗುತ್ತವೆ. ಅವುಗಳ ಲಕ್ಷಣವೇನಂದರೆ ನೀರಿನಲ್ಲಿ ಹಾಕಲು ಸ್ತಬ್ಧವಾಗಿ ಬೀಳುತ್ತವೆ. ಅವನ್ನು ಬಿಡಬೇಕು (ಹಚ್ಚಬಾರದು.) (೩೯)

**ಅಥೇತರಾ ನಿಶಾಕಲ್ಕಯುಕ್ತೇಽಂಭಸಿ ಪರಿಪ್ಲುತಾಃ ॥**
**ಅವಂತಿಸೋಮೇ ತಕ್ರೇ ವಾ ಪುನಶ್ಚಾಶ್ವಾಸಿತಾ ಜಲೇ ॥೪೦॥**

**ಲಾಗಯೇದ್ಘೃತಮೃತ್ಸ್ತನ್ಯಶಸ್ತ್ರರಕ್ತನಿಪಾತನೈಃ ॥**
**ಪಿಬಂತೀರುನ್ನತಸ್ಕಂಧಾಶ್ಛಾದಯೇನ್ಮೃದುವಾಸಸಾ ॥೪೧॥**

ಅರ್ಥ:— ಆಗ್ಗೆ ಬೇರೆ(ಚಲೋ)ಜಿಗಳೆಗಳನ್ನು ಅರಿಷಣದ ಕಲ್ಕಗಳಿಂದೆ ಕೂಡಿದ ನೀರಿನಲ್ಲಿ ಅಥವಾ ಅಂಬಲಿಯಲ್ಲಿ ಇಲ್ಲವೆ ಮಜ್ಜಿಗೆಯಲ್ಲಿ ಹಾಕಿ ತೆಗೆದು ಆ ಮೇಲೆ ನೀರಿನಲ್ಲಿ ಹಾಕಬೇಕು. ಅದರಿಂದ ಚೇತರಿಸಿಕೊಂಡ ನಂತರ ಹಚ್ಚುವ ಸ್ಥಳದಲ್ಲಿ ತುಪ್ಪ ಮಣ್ಣು ಮೊಲೆಹಾಲು ಹಚ್ಚಿ ಅಥವಾ ರಕ್ತ ತೆಗೆದು ಅವುಗಳನ್ನು ಹಚ್ಚಬೇಕು. ರಕ್ತವನ್ನು ಕುಡಿಯಹತ್ತಲು ಅವುಗಳ ಹೆಗಲು ಗಡುತರವಾಗಹತ್ತುವದು. ಆಗ್ಗೆ ಅವುಗಳನ್ನು ಮೆತ್ತನ್ನ ಅರಿವೆ ಗಳಿಂದ ಮುಚ್ಚಬೇಕು. (೪೧)

**ಸಂಪೃಕ್ತಾದ್ದುಷ್ಟಶುದ್ಧಾಸ್ರಾಜ್ಜಲೌಕಾ ದುಷ್ಟಶೋಣಿತಮ್ ॥**
**ಆದತ್ತೇ ಪ್ರಥಮಂ ಹಂಸಃ ಕ್ಷೀರಂ ಕ್ಷೀರೋದಕಾದಿವ ॥೪೨॥**

ಅರ್ಥಃ— ಹಂಸವು ನೀರು ಕೂಡಿದ ಹಾಲಿನಿಂದ ಹಾಲನ್ನೇ ಮಾತ್ರ ಎಳೆದುಕೊಳ್ಳುವಂತೆ ಜಿಗಳಿಯು ಶುದ್ಧ ರಕ್ತದಲ್ಲಿ ಕೂಡಿದ ಅಶುದ್ಧ ರಕ್ತವನ್ನೇ ಮೊದಲು ಎಳೆದುಕೊಳ್ಳುವದು. (೪೨)

**ದಂಶಸ್ಯತೋದೇ ಕಂಡ್ವಾಂ ವಾ ಮೋಕ್ಷಯೇದ್ವಾಮಯೇಚ್ಚತಾಮ್ ||**
**ಪಟುತೈಲಾಕ್ತವದನಾಂ ಶ್ಲಕ್ಷ್ಣಕಂಡನರೂಕ್ಷಿತಾಮ್ ||೪೩||**

ಅರ್ಥಃ— ದಂಶವು ಉರಿಯುಹತ್ತಿದರೆ ಅಥವಾ ತುರಿಸಹತ್ತಿದರೆ ಅದನ್ನು ಬಿಡಿಸಿ ಅದರ ಬಾಯಿಗೆ ಉಪ್ಪು ಎಣ್ಣೆ ಹಚ್ಚಿ ಅಕ್ಕಿಯ ಸಣ್ಣ ಹೊಟ್ಟು ಅದರ ಮೇಲೆ ಹಾಕಿ ಅದನ್ನು ರುಕ್ಷಮಾಡಿ ಕಾರಿಸಬೇಕು (೪೩)

**ರಕ್ಷನ್ ರಕ್ತಮುದಾದ್ಘ್ರಾಯ್ಯಃ ಸಪ್ತಾಹಂ ತಾ ನ ಪಾತಯೇತ್ ||**

ಅರ್ಥಃ— ಆ ಮೇಲೆ ೭ ದಿವಸಗಳ ವರೆಗೆ ಅವನ್ನು ಹಚ್ಚಬಾರದು. ಇಲ್ಲವಾದರೆ ರಕ್ತದಿಂದ ಮತ್ತವಾಗುವವು. (೪೩||)

**ಪೂರ್ವವತ್ ಪಟುತಾ ದಾರ್ಢ್ಯಂ ಸಮ್ಯಗ್ವಾಂತೇ ಜಲೌಕಸಾಮ್ |೪೪|**

ಅರ್ಥಃ— ಜಿಗಳೆಗಳಿಗೆ ಚನ್ನಾಗಿ ವಾಂತಿ ಮಾಡಿಸಲು ಅವು ಮೊದಲಿನಂತೆ ಗಟ್ಟಿ ಮತ್ತು ಚುರುಕು ಆಗುವವು. (೪೪)

**ಕ್ಲಮೋಽತಿಯೋಗಾನ್ಮೃತ್ಯುರ್ವಾ ದುರ್ವಾಂತೇ ಸ್ತಬ್ಧತಾ ಮದಃ ||**

ಅರ್ಥಃ— ವಮನವು ಅತಿಯಾಗಲು ದಣುವು ಅಥವಾ ಮೃತ್ಯುವು ಉಂಟಾಗುವದು ನೆಟ್ಟಗೆ ವಮನವಾಗದಿರಲು ಸ್ತಬ್ಧ ಮತ್ತು ಉನ್ಮತ್ತವಾಗುವವು. (೪೪||)

**ಅನ್ಯತ್ರಾನ್ಯತ್ರ ತಾಃ ಸ್ಥಾಪ್ಯಾ ಘಟೇ ಮೃತ್ಸ್ನಾಂಬುಗರ್ಭಿಣಿ ||೪೫||**
**ಲಾಲಾದಿಕೋಥನಾಶಾರ್ಥಂ ಸವಿಷಾಃ ಸ್ಯುಸ್ತದನ್ವಯಾತ್ ||**

ಅರ್ಥಃ— ಅವುಗಳನ್ನು ಮಣ್ಣು ನೀರು ಹಾಕಿದ ಗಡಿಗೆಗಳಲ್ಲಿ ಬೇರೆ ಬೇರೆಯಾಗಿ ಇಡಬೇಕು. ಇಲ್ಲವಾದರೆ ಪರಸ್ಪರ ಜೊಲ್ಲು ಮಲಮೂತ್ರಗಳ ಕೊಳೆಯು ಸಂಪರ್ಕದಿಂದ ಅವು ವಿಷಯುಕ್ತವಾಗುವವು. (೪೫||)

ವಾತಾದಿಧಾಮ ವಾ ಶೃಂಗಜಲೌಕೋಽಲಾಬುಭಿಃ ಕ್ರಮಾತ್ ||

ಅರ್ಥಃ — ಅಥವಾ ವಾತ, ಪಿತ್ತ, ಕಫ, ಸ್ಥಾನಗಳಲ್ಲಿದ್ದ ರಕ್ತವನ್ನು ತೆಗೆಯಲು ಕ್ರಮದಿಂದ ತುಂಬಡಿ, ಜಿಗಳೆ, ಅಲಾಬುಗಳನ್ನು ಹಚ್ಚಬೇಕು. (೫೪||)

ಸ್ರುತಾಸೃಜಃ ಪ್ರದೇಹಾದ್ಯೈಃ ಶೀತೈಃ ಸ್ಯಾದ್ವಾಯುಕೋಪತಃ ||೫೫||
ಸತೋದಕಂಡೂಃ ಶೋಫಸ್ತಂ ಸರ್ಪಿಷೋಷ್ಣೇನ ಸೇಚಯೇತ್ ||

ಅರ್ಥಃ— ರಕ್ತಸ್ರಾವವಾದವನಿಗೆ ಶೀತ-ಲೇಪ ಮುಂತಾದ್ದನ್ನು ಮಾಡಿದರೆ ವಾಯು ಕೋಪವಾಗುವದು. ಆದರಿಂದ ಚುಚ್ಚುವಿಕೆ ತಿಂಡಿ ಬಾವುಗಳುಂಟಾಗುವವು. ಅದರ ಮೇಲೆ ಉಷ್ಣ ಘೃತದ ಸೇಚನ ಮಾಡಬೇಕು. (೫೫||)

ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ
ಶಸ್ತ್ರವಿಧಿರ್ನಾಮ ಷಡ್ವಿಂಶೋಽಧ್ಯಾಯಃ ಸಮಾಪ್ತಃ |

ಇತಿ ಶ್ರೀ ಮದಾಧ್ಯಬಾಬಾಚಾರ್ಯಪೂಜ್ಯಪಾದಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗ ಹೃದಯದ ಸೂತ್ರಸ್ಥಾನದಲ್ಲಿಯ 'ಶಸ್ತ್ರವಿಧಿ' ಎಂಬ ೨೬ ನೆಯ ಅಧ್ಯಾಯದ ಟೀಕೆಯು ಮುಗಿದುದು.

# ೨೭ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ ಏಕದೇಶಗತವಾದ ರಕ್ತ-ಸೇಚನವನ್ನು ಶೃಂಗಾದಿಗಳಿಂದ ಮಾಡಲು ಹೇಳಿದರು. ಈಗ್ಗ ರಕ್ತದ ಮುಖ್ಯ ಮುಖ್ಯ ಆಶ್ರಯವಾದ ಶಿರೆಯ ಭೇದ ವಿಧಿಯನ್ನು ವಿಸ್ತಾರವಾಗಿ ಹೇಳುವದಕ್ಕಾಗಿ ಬೇರೆ ಈ ಅಧ್ಯಾಯವನ್ನು ಹೇಳುತ್ತಾರೆ.

**ಅಥಾತಃ ಸಿರಾ*ವ್ಯಧವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ |**

ಅರ್ಥ:— ಇನ್ನುಮೇಲೆ ಸಿರಾವ್ಯಧವಿಧಿಯನ್ನು ಹೇಳುವ ಅಧ್ಯಾಯ ವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ |**

ಅರ್ಥಃ— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಮಧುರಂ ಲವಣಂ ಕಿಂಚಿದಶೀತೋಷ್ಣಮಸಂಹತಮ್ ||**
**ಪದ್ಮೇಂದ್ರಗೋಪಹೇಮಾವಿಶಶಲೋಹಿತಲೋಹಿತಮ್ ||೧||**

**ಲೋಹಿತಂ ಪ್ರವದೇಚ್ಛುದ್ಧಂ ತನೋಸ್ತೇನೈವ ಚ ಸ್ಥಿತಿಃ ||**

ಅರ್ಥಃ— ಮಧುರ, ಸ್ವಲ್ಪ ಉಪ್ಪು, ಸ್ವಲ್ಪ ಶೀತ, ಸ್ವಲ್ಪ ಉಷ್ಣ, ದ್ರವ, ಕೆಂಪು-ಕಮಲ ಇಂದ್ರಗೋಪ (ರೇಶ್ಮೀಹುಳ) ಮಂಜಿಷ್ಠೆ ಕುರಿಯ ರಕ್ತ ಮೊಲದ ರಕ್ತಗಳಂತೆ ಕೆಂಪಾದ ರಕ್ತವು ಶುದ್ಧವೆಂದು ತಿಳಿಯಬೇಕು. ಇದರಿಂದಲೇ ಶರೀರದ ಇರುವಿಕೆಯು. (೧||)

**ತತ್ಪಿತ್ತಶ್ಲೇಷ್ಮಲೈಃ ಪ್ರಾಯೋ ದೂಷ್ಯತೇ ಕುರುತೇ ತತಃ ||೨||**

**ವಿಸರ್ಪವಿದ್ರಧಿಪ್ಲೀಹಗುಲ್ಮಾಗ್ನಿಸದನಜ್ವರಾನ್ ||**
**ಮುಖನೇತ್ರಶಿರೋರೋಗಮದತೃಡ್ ಲವಣಾಸ್ಯತಾಃ ||೩||**

**ಕುಷ್ಠವಾತಾಸ್ರಪಿತ್ತಾಸ್ರಕಟ್ವೆಮ್ಲೋದ್ಗಿರಣಭ್ರಮಾನ್ ||**

---

* ಸಿರಾವ್ಯಧವಿಧಿಯನ್ನು ಚರಕದ ಸೂ. ೨೪ ನೇ, ಸುಶ್ರುತದ ಸೂಂ ೧೪ ನೇ ಅಷ್ಟಾಂಗ ಸಂಗ್ರಹದ ಸೂ. ೩೬ ನೇ ಅಧ್ಯಾಯದಲ್ಲಿ ಹೇಳಿದ್ದಾರೆ.

ಅರ್ಥಃ— ಅದು ಬಹಳ ಮಾಡಿ ಪಿತ್ತ ಕಫ ಕಾರಕ ದ್ರವ್ಯಗಳಿಂದ ದುಷ್ಟವಾಗುತ್ತದೆ. ಆದ್ದರಿಂದ ವಿಸರ್ಪ, ವಿದ್ರಧಿ, ನೀರಬಿಲ್ಲಿ, ಗುಲ್ಮ, ಅಗ್ನಿಮಾಂದ್ಯ, ಜ್ವರ, ಮುಖರೋಗ, ನೇತ್ರರೋಗ, ಶಿರೋರೋಗ, ಮದ, ನೀರಡಿಕೆ, ಬಾಯಿ ಉಪ್ಪಾಗೋಣ, ಕುಷ್ಠ, ವಾತ ರಕ್ತ, ಪಿತ್ತರಕ್ತ, ಕಾರ ಹುಳಿ ತೇಗು, ಭ್ರಮುಗಳನ್ನುಂಟು ಮಾಡುತ್ತದೆ. (೩||

ಶೀತೋಷ್ಣಸ್ನಿಗ್ಧರೂಕ್ಷಾದ್ಯೈರುಪಕ್ರಾಂತಾಶ್ಚ ಯೇ ಗದಾಃ ||೪||
ಸಮ್ಯಕ್ ಸಾಧ್ಯಾ ನ ಸಿಧ್ಯಂತಿ ತೇ ಚ ರಕ್ತಪ್ರಕೋಪಜಾಃ ||

ಅರ್ಥಃ— ಯಾವ ರೋಗಗಳು ಸಾಧ್ಯವಿದ್ದು ಶೀತ ಉಷ್ಣ ಸ್ನಿಗ್ಧ ರುಕ್ಷ ಮುಂತಾದ ಎಲ್ಲ ತರದ ಚಿಕಿತ್ಸೆಗಳಿಂದಲೂ ನೆಟ್ಟಗಾಗುವದಿಲ್ಲವೋ ಅವು ರಕ್ತಪ್ರಕೋಪದಿಂದುಂಟಾದವು ಎಂದು ತಿಳಿಯಬೇಕು. ೪||

ತೇಷು ಸ್ರಾವಯಿತುಂ ರಕ್ತಮುದ್ರಿಕ್ತಂ ವ್ಯಧಯೇತ್ಸಿರಾಮ್ ||೫||

ಅರ್ಥಃ— ಆ ರೋಗಗಳಲ್ಲಿ ಕುಪಿತವಾದ ರಕ್ತದ ಸ್ರಾವಕ್ಕಾಗಿ ಶಿರೆಯನ್ನು ಕಡಿಯಬೇಕು. (೫)

ಸಿರಾವ್ಯಧಕ್ಕೆ ಅನರ್ಹರನ್ನು ಹೇಳುತ್ತಾರೆ.

ನ ತೂನಷೋಡಶಾತೀತಸಪ್ತತ್ಯಬ್ದಸ್ರುತಾಸೃಜಾಮ್ ||
ಅಸ್ನಿಗ್ಧಾಸ್ವೇದಿತಾತ್ಯರ್ಥಸ್ವೇದಿತಾನಿಲರೋಗಿಣಾಮ್ ||೬||

ಗರ್ಭಿಣೀಸೂತಿಕಾಜೀರ್ಣಪಿತ್ತಾಸ್ರಶ್ವಾಸಕಾಸಿನಾಮ್ ||
ಅತಿಸಾರೋದರಚ್ಛರ್ದಿಪಾಂಡುಸರ್ವಾಂಗಶೋಫಿನಾಮ್ ||೭||

ಸ್ನೇಹಪೀತೇ ಪ್ರಯುಕ್ತೇಷು ತಥಾ ಪಂಚಸು ಕರ್ಮಸು ||
ನಾಯಂತ್ರಿತಾಂ ಸಿರಾಂ ವಿಧ್ಯೇನ್ನ ತಿರ್ಯಗ್ನಾಪ್ಯನುತ್ಥಿತಾಮ್ ||೮||

ನಾತಿಶೀತೋಷ್ಣವಾತಾಭ್ರೇಷ್ವನ್ಯತ್ರಾತ್ಯಯಿಕಾದ್ಗದಾತ್ ||

ಅರ್ಥಃ— ಆದರೆ ೧೬ಕ್ಕಿಂತ ಕಡಿಮೆ ವಯಸ್ಸಿನ, ೭೦ ಕ್ಕಿಂತ ಹೆಚ್ಚು ವಯಸ್ಸಿನ, ರಕ್ತ ತೆಗಿಸಿಕೊಂಡವನ, ಸ್ನೇಹ ಅಥವಾ ಸ್ವೇದ ಮಾಡಿಸಿಕೊಳ್ಳದವನ, ಬಹಳ ಸ್ವೇದ ಮಾಡಿಸಿಕೊಂಡವನ, ವಾತ ರೋಗಿಯ,

ಗರ್ಭಿಣಿ ಬಾಣಂತಿ ಅಜೀರ್ಣ-ರೋಗಿಗಳ, ರಕ್ತ ಪಿತ್ತ ಶ್ವಾಸ ಕಾಸ ಅತಿಸಾರ, ಉದರ, ವಾಂತಿ, ಪಾಂಡು, ಸರ್ವಾಂಗ ಬಾವುಗಳುಳ್ಳವರ, ಸ್ನೇಹಪಾನಮಾಡಿದ, ವಮನ ಮುಂತಾದ ಪಂಚಕರ್ಮಮಾಡಿಕೊಂಡ ಜನರ ಸಿರೆಯನ್ನು ಕಡಿಯಬಾರದು. ಕಟ್ಟದೇ ಇದ್ದ ಉಬ್ಬಿ ಬರದೇ ಇದ್ದ ಸಿರೆಯನ್ನು ಕಡಿಯಬಾರದು. ಅದನ್ನು ಡೊಂಕಾಗಿ ಕಡಿಯಬಾರದು. ಮತ್ತು ಭಯಂಕರ ರೋಗದ ಹೊರ್ತಾಗಿ ಅತಿ ಶೀತ, ಅತಿ ಉಷ್ಣ, ಅತಿ ವಾಯು, ಮೋಡಗಳುಳ್ಳ ಕಾಲದಲ್ಲಿ ಕಡಿಯಬಾರದು. (೮||)

**ಶಿರೋನೇತ್ರವಿಕಾರೇಷು ಲಲಾಟ್ಯಾಂ ಮೋಕ್ಷಯೇತ್ಸಿರಾಮ್ ||೯||**
**ಅಪಾಂಗ್ಯಾಮುಪನಾಸ್ಯಾಂ ವಾ ಕರ್ಣರೋಗೇಷು ಕರ್ಣಜಾಮ್ ||**
**ನಾಸಾರೋಗೇಷು ನಾಸಾಗ್ರೇ ಸ್ಥಿತಾಂ ನಾಸಾಲಲಾಟಯೋಃ ||೧೦||**
**ಪೀನಸೇ....... .......................**

ಅರ್ಥಃ— ತಲೆ ಮತ್ತು ಕಣ್ಣಿನ ವಿಕಾರಗಳಲ್ಲಿ ಲಲಾಟ ಅಪಾಂಗ ಅಥವಾ ಮೂಗಿನ ಸಮೀಪದಲ್ಲಿದ್ದ ಶಿರೆಯನ್ನು, ಕರ್ಣರೋಗದಲ್ಲಿ ಕಿವಿಯ ಹತ್ತರವಿದ್ದ ಶಿರೆಯನ್ನು, ಮೂಗಿನ ರೋಗಗಳಲ್ಲಿ ಮೂಗಿನ ಮೇಲಿದ್ದ ಶಿರೆಯನ್ನು, ನೆಗಡಿಯಲ್ಲಿ ಮೂಗು ಹಣೆಗಳ ಮಧ್ಯದಲ್ಲಿದ್ದ ಶಿರೆಯನ್ನು ಕಡಿಯಬೇಕು. (೧೦|)

**................ಮುಖರೋಗೇಷು ಜಿಹ್ವೋಷ್ಠಹನುತಾಲುಗಾಃ ||**
**ಜತ್ರೂರ್ಧ್ವಗ್ರಂಥಿಷು ಗ್ರೀವಾಕಂಠಶಂಖಶಿರಃಶ್ರಿತಾಃ, ||೧೧||**
**ಉರೋಽಪಾಂಗಲಲಾಟಸ್ಥಾ ಉನ್ಮಾದೇಽಪಸ್ಮೃತೌ ಪುನಃ ||**
**ಹನುಸಂಧೌ ಸಮಸ್ತೇ ವಾ ಸಿರಾಂ ಭ್ರೂಮಧ್ಯಗಾಮಿನೀಮ್, ||೧೨||**
**ವಿದ್ರಧೌ ಪಾರ್ಶ್ವಶೂಲೇ ಚ ಪಾರ್ಶ್ವಕಕ್ಷಾಸ್ತನಾಂತರೇ, ||**
**ತೃತೀಯಕೇಂಽಸಯೋರ್ಮಧ್ಯೇ, ಸ್ಕಂಧಸ್ಯಾರ್ಧಶ್ಚತುರ್ಥಕೇ, ||೧೩||**
**ಪ್ರವಾಹಿಕಾಯಾಂ ಶೂಲಿನ್ಯಾಂ ಶ್ರೋಣಿತೋ ದ್ವ್ಯಂಗುಲೇ ಸ್ಥಿತಾಮ್,**
**ಶುಕ್ರಮೇಢ್ರಾಮಯೇ ಮೇಢ್ರೇ, ಊರುಗಾಂ ಗಲಗಂಡಯೋಃ ||೧೪||**

ಗೃಧ್ರಸ್ಯಾಂ ಜಾನುನೋಽಧಸ್ತಾದೂರ್ಧ್ವಂ ವಾ ಚತುರಂಗುಲೇ, ॥
ಇಂದ್ರಬಸ್ತೇರಧೋಽಪಚ್ಯಾಂ ದ್ವ್ಯಂಗುಲೇ, ಚತುರಂಗುಲೇ ॥೧೫॥

ಊರ್ಧ್ವಂ ಗುಲ್ಫಸ್ಯ ಸಕ್ಥ್ಯರ್ತೌ ತಥಾ ಕ್ರೋಷ್ಟುಕಶೀರ್ಷಕೇ, ॥
ಪಾದದಾಹೇ ಖುಡೇ ಹರ್ಷೇ ವಿಪಾದ್ಯಾಂ ವಾತಕಂಟಕೇ ॥೧೬॥

ಚಿಪ್ಪೇ ಚ ದ್ವ್ಯಂಗುಲೇ ವಿಧ್ಯೇದುಪರಿ ಕ್ಷಿಪ್ರಮರ್ಮಣಃ, ॥
ಗೃಧ್ರಸ್ಯಾಮಿವ ವಿಶ್ವಾಚ್ಯಾಂ, ಯಥೋಕ್ತಾನಾಮದರ್ಶನೇ ॥೧೭॥

ಮರ್ಮಹೀನೇ ಯಥಾಸನ್ನೇ ದೇಶೇಽನ್ಯಾಂ ವ್ಯಧಯೇತ್ ಸಿರಾಮ್॥

ಅರ್ಥಃ— ಮುಖರೋಗಗಳಲ್ಲಿ ನಾಲಿಗೆ ತುಟಿ ಗದ್ದ ಅಂಗಳಕೆಳಗಿದ್ದ, ಜತ್ರುವಿನ ಮೇಲಿನ ಗ್ರಂಥಿಗಳಲ್ಲಿ ಕುತ್ತಿಗೆ ಕಿವಿ ಕಪಾಳ ತಲೆಗಳಲ್ಲಿದ್ದ, ಉನ್ಮಾದದಲ್ಲಿ ಎದೆ ಅಪಾಂಗ ಹಣೆಗಳಲ್ಲಿದ್ದ, ಅಪಸ್ಮಾರದಲ್ಲಿ ಗದ್ದದ ಸಂಧಿಯಲ್ಲಿದ್ದ ಅಥವಾ ಈ ಎಲ್ಲ ಶಿರೋನೇತ್ರಾದಿ ವಿಕಾರಗಳಲ್ಲಿ ಹುಬ್ಬಿನ ಮಧ್ಯದಲ್ಲಿದ್ದ ಶಿರೆಯನ್ನು ಕತ್ತರಿಸಬೇಕು. ಕುರುವು ಮತ್ತು ಪಾರ್ಶ್ವಶೂಲಿಗಳಲ್ಲಿ ಪಾರ್ಶ್ವ ಬಗಲು ಸ್ತನಗಳ ನಡುವಿನ, ತೃತೀಯಕ ಜ್ವರದಲ್ಲಿ ಹೆಗಲಿನ ಸಂಧಿಯಲ್ಲಿದ್ದ, ಚತುರ್ಥಕ ಜ್ವರದಲ್ಲಿ ಸ್ಕಂಧದ ಕೆಳಗಿದ್ದ, ಶೂಲವುಳ್ಳ ಪ್ರವಾಹಿಕೆಯಲ್ಲಿ ತಿಗದಿಂದ ಎರಡು ಬೆರಳಿನ ಅಂತರದಲ್ಲಿದ್ದ, ಶುಕ್ರ ಮತ್ತು ಶಿಶ್ನ ರೋಗಗಳಲ್ಲಿ ಶಿಶ್ನದಲ್ಲಿದ್ದ, ಗಲ-ರೋಗ ಗಂಡ-ರೋಗಗಳಲ್ಲಿ ತೊಡೆಯಲ್ಲಿದ್ದ, ಗೃಧ್ರಸಿಯಲ್ಲಿ ಮೊಳಕಾಲಿನಿಂದ ಕೆಳಗೆ ಅಥವಾ ಮೇಲೆ ನಾಲ್ಕು ಬೆರಳು ಅಂತರದಲ್ಲಿದ್ದ, ಅಪಚೀ ( ಗಂಡಮಾಲೆ ) ರೋಗದಲ್ಲಿ ಇಂದ್ರಬಸ್ತಿಯ ( ಮರ್ಮವಿಶೇಷ ) ಕೆಳಗೆ ೨ ಬೆರಳಿನ ಕೆಳಗಿದ್ದ, ತೊಡೆಯ ರೋಗದಲ್ಲಿ ಮತ್ತು ಕ್ರೋಷ್ಟುಕ ಶೀರ್ಷದಲ್ಲಿ-ಗುಲ್ಫ (ಹದಡ) ದಿಂದ ನಾಲ್ಕು ಬಟ್ಟಿನ ಮೇಲಿದ್ದ, ಪಾದದಾಹ ವಾತರಕ್ತ ಪಾದಹರ್ಷ ವಿಪಾದಿಕೆ ವಾತಕಂಟಕ ಚಿಪ್ಪ ( ನಖರೋಗ ) ರೋಗಗಳಲ್ಲಿ ಕ್ಷಿಪ್ರವೆಂಬ ( ಹೆಬ್ಬಟ್ಟಿನಲ್ಲಿಯ ) ಮರ್ಮದ ಎರಡು ಬೆರಳುಗಳ ಮೇಲಿದ್ದ, ವಿಶ್ವಾಚೀ ರೋಗದಲ್ಲಿ ಗೃಧ್ರಸಿಯಂತೆ (ಮೊಳಕಾಲ ಕೆಳಗಿನ) ಶಿರೆಯನ್ನು ಕಡಿಯಬೇಕು. ಹೇಳಿದ ಶಿರೆಗಳು ಅಲ್ಲಿ ಕಾಣದಿರಲು ಮರ್ಮಸ್ಥಾನವನ್ನು ಬಿಟ್ಟು ಅದರ ಸಮೀಪದಲ್ಲಿದ್ದ ಎರಡನೇ ಶಿರೆಯನ್ನು ಕಡಿಯಬೇಕು. (೧೭॥)

ಶಿರಾವ್ಯಧವಿಧಿಯನ್ನು ಹೇಳುತ್ತಾರೆ.

ಅಥ ಸ್ನಿಗ್ಧತನುಃ ಸಜ್ಜಸರ್ವೋಪಕರಣೋ ಬಲೀ ||೧೮||

ಕೃತಸ್ವಸ್ತ್ಯಯನಃ ಸ್ನಿಗ್ಧರಸಾನ್ನಪ್ರತಿಭೋಜಿತಃ ||
ಅಗ್ನಿತಾಪಾತಪಸ್ವಿನ್ನೋ ಜಾನೂಚ್ಚಾಸನಸಂಸ್ಥಿತಃ ||೧೯||

ಮೃದುಪಟ್ಟಾತ್ತಕೇಶಾಂತೋ ಜಾನುಸ್ಥಾಪಿತಕೂರ್ಪರಃ ||
ಮುಷ್ಟಿಭ್ಯಾಂ ವಸ್ತ್ರಗರ್ಭಾಭ್ಯಾಂ ಮನ್ಯೇ ಗಾಢಂ ನಿಪೀಡಯೇತ್ ||೨೦||

ದಂತಪ್ರಪೀಡನೋತ್ಕಾಸಗಂಡಾಽಧ್ಮಾನಾನಿ ಚಾಚರೇತ್ ||
ಪೃಷ್ಠತೋ ಯಂತ್ರಯೇಚ್ಚೈನಂ ವಸ್ತ್ರಮಾವೇಷ್ಟಯನ್ನರಃ ||೨೧||

ಕಂಧರಾಯಾಂ ಪರಿಕ್ಷಿಪ್ಯ ನ್ಯಸ್ಯಾಂತರ್ವಾಮತರ್ಜನೀಮ್ ||
ಏಷೋಽಂತರ್ಮುಖವರ್ಜ್ಯಾನಾಂ ಸಿರಾಣಾಂ ಯಂತ್ರಣೇ ವಿಧಿಃ ||೨೨||

ಅರ್ಥಃ— ಶಿರಾವ್ಯಧ ಮಾಡಿಸಿಕೊಳ್ಳುವವನು ಬಲಿಷ್ಠನೂ ಸ್ನೇಹಪಾನ ಮಾಡಿದವನೂ ಇರಬೇಕು. ಎಲ್ಲ ಸಾಹಿತ್ಯವನ್ನು ಸಿದ್ಧಪಡಿಸಿಕೊಂಡು ಸ್ವಸ್ತಿವಾಚನ ಮಾಡಿಕೊಂಡು ಸ್ನಿಗ್ಧವಾದ ಮಾಂಸರಸ ಅನ್ನವನ್ನು ಊಟಮಾಡಿ ಬೆಂಕಿ ಮತ್ತು ಬಿಸಿಲುಗಳಿಂದ ಕಾಸಿಕೊಂಡು ಮೊಳಕಾಲು ಮಟ್ಟ ಎತ್ತರವಾದ ಆಸನದ ಮೇಲೆ ಕೂಡ್ರಬೇಕು. ಮೆತ್ತಗಿನ ಅರಿವೆಯಿಂದ ಕೂದಲುಗಳ ಕಡೆಯಭಾಗವನ್ನು ಕಟ್ಟಬೇಕು. ಮೊಳಕಾಲುಗಳ ಮೇಲೆ ಮೊಳಕೈಗಳನ್ನು ಇಟ್ಟು ಮುಷ್ಟಿಯಲ್ಲಿ ಹಿಡಿದ ವಸ್ತ್ರಗಳಿಂದ ಕುತ್ತಿಗೆಯ ಹಿಂಭಾಗ ( ಹೆಡಕ ) ವನ್ನು ಗಟ್ಟಿಯಾಗಿ ಒತ್ತಬೇಕು. ಹಲ್ಲು ಕಡಿಯಬೇಕು. ಕೆಮ್ಮಬೇಕು. ಗಲ್ಲಗಳನ್ನು ಉಬ್ಬಿಸಬೇಕು. ಹಿಂದೆ ಒಬ್ಬನು ನಿಂತು ಅವನ ಕುತ್ತಿಗೆಯ ಸುತ್ತಲೂ ಒಂದು ಅರಿವೆಯನ್ನು ತನ್ನ ಎಡ ತರ್ಜನಿಯನ್ನು ಒಳಗೆ ಹಾಕಿ ಸುತ್ತಿ ಅವನನ್ನು ಚನ್ನಾಗಿ ಬಿಗಿಯಬೇಕು. ಮುಖದ ಹೊರ್ತಾಗಿ ಉಳಿದ ಕಡೆಯ ಶಿರೆಗಳ ನಿಯಂತ್ರಣದಲ್ಲಿ ಇದೇ ನಿಯಮವಿರುವದು. (೨೨)

**ತತೋ ಮಧ್ಯಮಯಾಂಗುಲ್ಯಾ ವೈದ್ಯೋಽಂಗುಷ್ಠವಿಮುಕ್ತಯಾ ॥**
**ತಾಡಯೇತ್........... ....................... ....... ............**

ಅರ್ಥಃ— ಆಮೇಲೆ ವೈದ್ಯನು ಹೆಬ್ಬಟ್ಟಿನ ತುದಿಯಲ್ಲಿ ನಡುಬೆರಳನ್ನು ಗಟ್ಟಿಯಾಗಿ ಊರಿ ಅದರಿಂದ ಚಿಟಕಿ ಹೊಡೆಯಬೇಕು (೨೨

**...............ಉತ್ಥಿತಾಂ ಜ್ಞಾತ್ವಾ ಸ್ಪರ್ಶಾಂಗುಷ್ಠಪ್ರಪೀಡನೈಃ ॥೨೩॥**

**ಕುಠಾರ್ಯಾ ಲಕ್ಷಯೇನ್ಮಧ್ಯೇ ವಾಮಹಸ್ತಗೃಹೀತಯಾ ॥**
**ಫಲೋದ್ದೇಶೇ ಸುನಿಷ್ಕಂಪಂ ಸಿರಾಂ, ತದ್ವಚ್ಚ ಮೋಕ್ಷಯೇತ್॥೨೪॥**
**ತಾಡಯನ್ ಪೀಡಯೇಚ್ಚೈನಾಂ......................**

ಅರ್ಥಃ— ಸ್ಪರ್ಶದಿಂದ ಅಥವಾ ಅಂಗುಷ್ಠವನ್ನು ಒತ್ತುವದರಿಂದ ಸಿರೆಯು ಉಬ್ಬಿದ್ದನ್ನು ತಿಳಕೊಂಡು ಎಡಗೈಯಲ್ಲಿ ಕುಠಾರೀ-ಶಸ್ತ್ರವನ್ನು ತಕ್ಕೊಂಡು ಫಲದ ಸ್ಥಾನವಾದಂಥ ಸಿರೆಯ ಮಧ್ಯದಲ್ಲಿ ಕೈ ನಡುಗಿಸದೇ ಇಡಬೇಕು. ಮೊದಲಿನಂತೆ ಚಿಟಿಕೆ ಬಡಿದು ಅದನ್ನು ಸೀಳಬೇಕು ಮತ್ತು ಅದನ್ನು ಹಿಂಡಬೇಕು. ಹೀಗೆ ಸಿರಾಮೋಕ್ಷ ಮಾಡಬೇಕು. (೨೪)

**.............................ವಿಧ್ಯೇದ್ವ್ರೀಹಿಮುಖೇನ ತು ॥**
**ಅಂಗುಷ್ಠೇನೋನ್ನಮಯ್ಯಾಗ್ರೇ ನಾಸಿಕಾಮುಪನಾಸಿಕಾಮ್ ॥೨೫॥**

ಅರ್ಥಃ— ಮೂಗಿನ ತುದಿಯನ್ನು ಅಂಗುಷ್ಠದಿಂದ ಮೇಲಕ್ಕೆತ್ತಿ ಮೂಗಿನ ಹತ್ತರದ ಸಿರೆಯನ್ನು ವ್ರೀಹಿಮುಖಯಂತ್ರದಿಂದ ಸೀಳಬೇಕು.

**ಅಭ್ಯುನ್ನತವಿದಷ್ಟಾಗ್ರಜಿಹ್ವಸ್ಯಾಧಸ್ತದಾಶ್ರಯಾಮ್ ॥**

ಅರ್ಥಃ— ನಾಲಿಗೆಯ ಕೆಳಗಿನ ಸಿರೆಯನ್ನು ಕಡಿಯಬೇಕಾದರೆ ನಾಲಿಗೆಯನ್ನು ಮೇಲಕ್ಕೆತ್ತಿ ಆದರ ತುದಿಯನ್ನು ಹಲ್ಲುಗಳಿಂದ ಒತ್ತಿ ಹಿಡಿದಮೇಲೆ ಛೇದಿಸಬೇಕು. (೨೫)

**ಯಂತ್ರಯೇತ್ ಸ್ತನಯೋರೂರ್ಧ್ವಂ ಗ್ರೀವಾಶ್ರಿತಸಿರಾವ್ಯಧೇ ॥೨೬॥**

ಅರ್ಥಃ— ಕುತ್ತಿಗೆಯಲ್ಲಿದ್ದ ಶಿರಾವ್ಯಧ ಮಾಡಬೇಕಾದರೆ ಅರಿವೆಗಳಿಂದ ಮೊಲೆಗಳ ಮೇಲ್ಭಾಗದಲ್ಲಿ ಗಟ್ಟಿಯಾಗಿ ಬಿಗಿಯಬೇಕು. (೨೬)

**ಪಾಷಾಣಗರ್ಭಹಸ್ತಸ್ಯ ಜಾನುಸ್ಥೇ ಪ್ರಸೃತೇ ಭುಜೇ ||**
**ಕುಕ್ಷೇರಾರಭ್ಯ ಮೃದಿತೇ ವಿಧ್ಯೇದ್ಬದ್ಧ್ವೋರ್ಧ್ವಪಟ್ಟಿಕೇ ||೨೭||**

ಅರ್ಥಃ— ಅವನ ಕೈಯಲ್ಲಿ ಕಲ್ಲು ಹಿಡಿಸಿ ಮೊಳಕಾಲುಗಳ ಮೇಲೆ ಇಟ್ಟು ಕೈ ಚಾಚಿದ ನಂತರ ಕುಕ್ಷಿಯಿಂದ ಕುತ್ತಿಗೆಯವರೆಗೆ ಮೈಯನ್ನುಒತ್ತಿ ಮೇಲ್ಭಾಗಕ್ಕೆ ಅರಿವೆಯಿಂದ ಬಿಗಿದು ಕಟ್ಟಿ ಭುಜದಲ್ಲಿಯ ಸಿರೆಯನ್ನು ಕೊಯ್ಯಬೇಕು. (೨೭)

**ವಿಧ್ಯೇದ್ಧಸ್ತಸಿರಾಂ ಬಾಹಾವನಾಕುಂಚಿತಕೂರ್ಪರೇ ||**
**ಬದ್ಧ್ವಾ ಸುಖೋಪವಿಷ್ಟಸ್ಯ ಮುಷ್ಟಿಮಂಗುಷ್ಠಗರ್ಭಿಣೀಮ್ ||೨೮||**
**ಊರ್ಧ್ವಂ ವೇಧ್ಯಪ್ರದೇಶಾಚ್ಚ ಪಟ್ಟಿಕಾಂ ಚತುರಂಗುಲೇ ||**

ಅರ್ಥಃ— ಕೈಯಲ್ಲಿಯ ಶಿರೆಯನ್ನು ಕಡಿಯಬೇಕಾದರೆ ಮೊಳಕೈಯನ್ನು ನೆಟ್ಟಗೆ ಚಾಚಿ ನೆಟ್ಟಗೆ ಕುಳಿತು ಹೆಬ್ಬಟ್ಟು ಒಳಗಿಟ್ಟು ಮುಷ್ಟಿಯನ್ನು ಮುಚ್ಚಿ ಕಡಿಯತಕ್ಕ ಸ್ಥಳದ ನಾಲ್ಕು ಬೆರಳು ಮೇಲೆ ಅರಿವೆಯಿಂದ ಬಿಗಿದು ವೇಧಮಾಡಬೇಕು. (೨೮)

ಪಾರ್ಶ್ವಶಿರೆಗಳ ಛೇದವನ್ನು ಹೇಳುತ್ತಾರೆ.

**ವಿಧ್ಯೇದಾಲಂಬಮಾನಸ್ಯ ಬಾಹುಭ್ಯಾಂ ಪಾರ್ಶ್ವಯೋಃ ಸಿರಾಮ್ ||೨೯||**

ಅರ್ಥಃ— ಎರಡೂ ಬಾಹುಗಳಿಂದ ಯಾವದಾದರೊಂದು ವಸ್ತುವನ್ನು ಆಶ್ರಯಿಸಿದ ಮೇಲೆ ಪಕ್ಕಡೆಗಳಲ್ಲಿದ್ದ ಸಿರೆಯನ್ನು ಕಡಿಯಬೇಕು. (೨೯)

ಶಿಶ್ನ ಮತ್ತು ಜಂಘಾ ಸಿರೆಗಳ ಛೇದವನ್ನು ಹೇಳುತ್ತಾರೆ.

**ಪ್ರಹೃಷ್ಟೇ ಮೇಹನೇ ಜಂಘಾಸಿರಾಂ ಜಾನುನ್ಯಕುಂಚಿತೇ ||**

ಅರ್ಥಃ— ರಕ್ತಸ್ರಾವವು ಚನ್ನಾಗಿ ಆಗಹತ್ತಲು ಬೆಚ್ಚನ್ನ ತೈಲದಿಂದ ಮತ್ತು ಉಪ್ಪಿನಿಂದ ಲೇಪಿಸಬೇಕು. (೩೭)

**ಅಗ್ರೇ ಸ್ರವತಿ ದುಷ್ಟಾಸ್ರಂ ಕುಸುಂಭಾದಿವ ಪೀತಿಕಾ ||**
**ಸಮ್ಯಕ್‌ಸ್ರುತ್ವಾ ಸ್ವಯಂ ತಿಷ್ಠೇಚ್ಛುದ್ಧಂ ತದಿತಿ ನಾಹರೇತ್ ||೩೮||**

ಅರ್ಥಃ— ಕುಸುಂಭೆಯಿಂದ ಮೊದಲು ಹಳದೀರಸವು ಹೇಗೆ ಹೊರಡುವದೋ ಆದರಂತೆ ಶಿರೆಯಿಂದ ಮೊದಲು ಕೆಟ್ಟ ರಕ್ತವು ಸ್ರವಿಸುವದು. ಚನ್ನಾಗಿ ಸ್ರಾವವಾಗಿ ನಿಲ್ಲಲು ಶಿರೆಯಲ್ಲಿ ಉಳಿದ ರಕ್ತವು ಶುದ್ಧವೆಂದು ತಿಳಿಯಬೇಕು. ಆದ್ದರಿಂದ ಅದನ್ನು ಸೋರಿಸಬಾರದು. (೩೮)

**ಯಂತ್ರಂ ವಿಮುಚ್ಯ ಮೂರ್ಚ್ಛಾಯಾಂ ವೀಜಿತೇ ವ್ಯಜನೈಃ ಪುನಃ ||**
**ಸ್ರಾವಯೇನ್ಮೂರ್ಛತಿ ಪುನಸ್ತ್ವಪರೇದ್ಯುಸ್ತ್ರ್ಯಹೇಽಪಿ ವಾ ||೩೯||**

ಅರ್ಥಃ— ಮೂರ್ಛೆ ಬಂದರೆ ಯಂತ್ರವನ್ನು ಬಿಚ್ಚಿ ಬೀಸಣಿಕೆಗಳಿಂದ ಬೀಸಿದ ಮೇಲೆ ಎಚ್ಚರಾಗಲು ಮನಃ ಸೋರಿಸಬೇಕು. ಪುನಃ ಮೂರ್ಛಿತನಾದರೆ ಎರಡನೇ ದಿವಸ ಅಥವಾ ಮೂರನೇ ದಿವಸ ಅಶುದ್ಧ ರಕ್ತವನ್ನು ತೆಗೆಯಬೇಕು. (೩೯)

**ವಾತಾಚ್ಛ್ಯಾವಾರುಣಂ ರುಕ್ಷಂ ವೇಗಸ್ರಾವ್ಯಚ್ಛಫೇನಿಲಮ್ ||**
**ಪಿತ್ತಾತ್ಪೀತಾಸಿತಂ ವಿಸ್ರಮುಸ್ಕಂದ್ಯೌಷ್ಣ್ಯಾತ್ಸಚಂದ್ರಿಕಮ್ ||೪೦||**

ಅರ್ಥಃ— ರಕ್ತವು ವಾತದಿಂದ ನಸುಗಪ್ಪು ನಸುಗೆಂಪು, ರುಕ್ಷವಾಗಿದ್ದು ವೇಗದಿಂದ ಸೋರುವದು. ಮತ್ತೆ ತೆಳ್ಳಗೆ ಮತ್ತು ಬುರುಗು ಬುರುಗು ಇರುವದು. ಪಿತ್ತದಿಂದ ಹಳದಿ ಕಪ್ಪು ದುರ್ಗಂಧ, ಉಷ್ಣತೆಯಿಂದ ತೆಳ್ಳಗೆ ಮತ್ತು ಮೇಲೆ ಚಿತ್ರವಿಚಿತ್ರ ಗೆರೆಗಳುಳ್ಳದ್ದು ಆಗಿರುವದು. (೪೦)

**ಕಫಾತ್ ಸ್ನಿಗ್ಧಮಸೃಕ್ಪಾಂಡು ತಂತುಮತ್ಪಿಚ್ಛಿಲಂ ಘನಮ್ ||**
**ಸಂಸೃಷ್ಟಲಿಂಗಂ ಸಂಸರ್ಗಾತ್ ತ್ರಿದೋಷಂ ಮಲಿನಾವಿಲಮ್ ||೪೧||**

ಅರ್ಥಃ— ಕಫದಿಂದ ಸ್ನಿಗ್ಧ ಬೆಳ್ಳಗೆ ತಂತುಗಳುಳ್ಳದ್ದು ಹೆಡಸು ಮತ್ತು ಗಟ್ಟಿಯಾಗಿರುವದು. ಸಂಸರ್ಗದಿಂದ ಎರಡೂ ಲಕ್ಷಣವುಳ್ಳದ್ದೂ

ತ್ರಿದೋಷದಿಂದ ಮೇಲಿನ ಲಕ್ಷಣಗಳಲ್ಲದೆ ಹೊಲಸು ಮತ್ತು ರಾಡಿಯೂ ಇರುವದು. (೪೧)

**ಅಶುದ್ಧೌ ಬಲಿನೋಽಪ್ಯಸ್ರಂ ನ ಪ್ರಸ್ಥಾತ್ಸ್ರಾವಯೇತ್ಪರವ್ ॥**
**ಅತಿಸ್ರುತೌ ಹಿ ಮೃತ್ಯುಃ ಸ್ಯಾದ್ದಾರುಣಾ ವಾ ಚಲಾಮಯಾಃ ॥೪೨॥**

**ತತ್ರಾಭ್ಯಂಗರಸಕ್ಷೀರರಕ್ತಪಾನಾನಿ ಭೇಷಜಮ್ ॥**

ಅರ್ಥಃ— ಬಲಿಷ್ಠನದಾದರೂ ೫೦ ತೊಲೆಗಿಂತ ಹೆಚ್ಚು ಅಶುದ್ಧ ರಕ್ತವನ್ನು ಸೋರಿಸಬಾರದು. ಅತಿಸ್ರಾವವಾಗಲು ಮೃತ್ಯುವು ಅಥವಾ ಭಯಂಕರವಾದ ವಾತರೋಗಗಳುಂಟಾಗುವವು. ಅದರ ಮೇಲೆ ಅಭ್ಯಂಗ ಮಾಂಸರಸ, ಹಾಲು, ರಕ್ತಪಾನಗಳು ಔಷಧಗಳು. (೪೨॥)

**ಸ್ರುತೇ ರಕ್ತೇ ಶನೈರ್ಯಂತ್ರಮಪನೀಯ ಹಿಮಾಂಬುನಾ ॥೪೩॥**

**ಪ್ರಕ್ಷಾಲ್ಯ ತೈಲಪ್ಲೋತಾಕ್ತಂ ಬಂಧನೀಯಂ ಸಿರಾಮುಖಮ್ ॥**

ಅರ್ಥಃ— ರಕ್ತಸ್ರಾವವಾಗಲು ಯಂತ್ರವನ್ನು ಸಾವಕಾಶ ಬಿಚ್ಚಿ ಶಿರಾಮುಖವನ್ನು ತಣ್ಣೀರಿನಿಂದ ತೊಳೆದು ಶಿರಾಮುಖಕ್ಕೆ ಎಣ್ಣೆಯಲ್ಲಿ ತೊಯಿಸಿದ ಅರಿವೆಯಿಂದ ಅಭ್ಯಂಗಮಾಡಿ ಕಟ್ಟಬೇಕು. (೪೩॥)

**ಅಶುದ್ಧಂ ಸ್ರಾವಯೇದ್ಭೂಯಃ ಸಾಯಮಹ್ನ್ಯಪರೇಽಪಿ ವಾ ॥೪೪॥**

**ಸ್ನೇಹೋಪಸ್ಕೃತದೇಹಸ್ಯ ಪಕ್ಷಾದ್ವಾ ಭೃಶದೂಷಿತಮ್ ॥**

ಅರ್ಥಃ— ಪುನಃ ಸಾಯಂಕಾಲಕ್ಕೆ ಅಥವಾ ಎರಡನೆಯ ದಿವಸ ಅಶುದ್ಧ ರಕ್ತವನ್ನು ಸೋರಿಸಬೇಕು. ರಕ್ತವು ಬಹಳ ಕೆಟ್ಟದ್ದರೆ ಸ್ನೇಹದಿಂದ ದೇಹವನ್ನು ಸುಸಂಸ್ಕೃತಮಾಡಿ ೧೫ ದಿವಸಗಳ ಮೇಲೆ ಸೋರಿಸಬೇಕು. (೪೪॥)

**ಕಿಂಚಿದ್ಧಿ ಶೇಷೇ ದುಷ್ಟಾಸ್ರೇ ನೈವ ರೋಗೋಽತಿವರ್ತತೇ ॥೪೫॥**

**ಸಶೇಷಮಪ್ಯತೋ ಧಾರ್ಯಂ ನ ಚಾತಿಸ್ರುತಿಮಾಚರೇತ್ ॥**

ಅರ್ಥ:— ದುಷ್ಟ ರಕ್ತವು ಸ್ವಲ್ಪ ಉಳಿಯಲು ರೋಗವು ತಿರುಗುವದಿಲ್ಲ. ಕಾರಣ ಸ್ವಲ್ಪ ಉಳಿದರೂ ಚಿಂತೆಯಿಲ್ಲ. ಅತಿಸ್ರಾವವನ್ನು ಮಾಡಬಾರದು. (೪೫॥)

**ಹರೇಚ್ಛೃಂಗಾದಿಭಿಃ ಶೇಷಂ ಪ್ರಸಾದಮಥವಾ ನಯೇತ್ ॥೪೬॥**

**ಶೀತೋಪಚಾರಪಿತ್ತಾಸ್ರಕ್ರಿಯಾಶುದ್ಧಿವಿಶೋಷಣೈಃ ॥**
**ದುಷ್ಟಂ ರಕ್ತಮನುದ್ರಿಕ್ತಮೇವಮೇವ ಪ್ರಸಾದಯೇತ್ ॥೪೭॥**

ಅರ್ಥಃ— ಉಳಿದ ದುಷ್ಟ ರಕ್ತವನ್ನು ತುಂಬಡಿ ಮುಂತಾದವುಗಳಿಂದ ತೆಗೆಯಬೇಕು. ಅಥವಾ ಶೀತ-ಉಪಚಾರ ರಕ್ತ-ಪಿತ್ತ..ಚಿಕಿತ್ಸೆ ವಮನಾದಿ ಶೋಧನ ಲಂಘನಗಳಿಂದ ಶುದ್ಧಮಾಡಬೇಕು. ಸ್ವಲ್ಪವಿದ್ದದರಿಂದ ಸ್ರಾವ ಮಾಡಲಿಕ್ಕಾಗದ ದುಷ್ಟರಕ್ತವನ್ನೂ ಕೂಡ ಹೀಗೆಯೇ ಶೋಧಿಸಬೇಕು. (೪೭)

**ರಕ್ತೇ ತ್ವತಿಷ್ಠತಿ ಕ್ಷಿಪ್ರಂ ಸ್ತಂಭನೀಮಾಚರೇತ್ಕ್ರಿಯಾಮ್ ॥**

ಅರ್ಥಃ— ರಕ್ತದ ಸ್ರಾವವು ನಿಲ್ಲದಿದ್ದರೆ ಸ್ತಂಭನ ಕ್ರಿಯೆಯನ್ನು ಮಾಡಬೇಕು. (೪೭॥)

**ರೋಧ್ರಪ್ರಿಯಂಗುಪತ್ತಂಗಮಾಷಯಷ್ಟ್ಯಾಹ್ವಗೈರಿಕೈಃ ॥೪೮॥**

**ಮೃತ್ಕಪಾಲಾಂಜನಕ್ಷೌಮಮಷೀಕ್ಷೀರಿತ್ವಗಂಕುರೈಃ ॥**
**ವಿಚೂರ್ಣಯೇದ್ ವ್ರಣಮುಖಂ ಪದ್ಮಕಾದಿಹಿಮಂ ಪಿಬೇತ್ ॥೪೯॥**

ಅರ್ಥ:— ಲೋಧ್ರ, ಪ್ರಿಯಂಗು, ಪತಂಗ, ಉದ್ದು, ಜೇಷ್ಠಮಧು, ಕಾವಿ, ಮಣ್ಣು, ಬಗ್ಗರಿಗೆ, ಸುರಮಾ, ತಾಗದ ಬೂದಿ, ಕ್ಷೀರಿ—ವೃಕ್ಷಗಳ ತೊಗಟೆ ಮತ್ತು ಮೊಳಿಕೆಗಳ ಚೂರ್ಣವನ್ನು ವ್ರಣದ ಮುಖದ ಮೇಲೆ ಹಾಕಬೇಕು. ಪದ್ಮಕಾದಿ ಗಣದ ಹಿಮವನ್ನು ಕುಡಿಯಬೇಕು.

**ಟಿಪ್ಪಣಿ:—** ರಾತ್ರಿಯಲ್ಲಿ ಔಷಧವನ್ನು ಜಜ್ಜಿ ತಣ್ಣೀರಿನಲ್ಲಿ ನೆನೆಯಿಟ್ಟು ಮುಂಜಾನೆ ಸೋಸಿ ತಕ್ಕೊಂಡ ರಸವು ಹಿಮವು. (೪೯

ತಾಮೇವ ವಾ ಸಿರಾಂ ವಿಧ್ಯೇದ್ವ್ಯಧಾತ್ತಸ್ಮಾದನಂತರಮ್ ॥
ಸಿರಾಮುಖಂ ವಾ ತ್ವರಿತಂ ದಹೇತ್ತಪ್ತಶಲಾಕಯಾ ॥೪೦॥

ಅರ್ಥಃ— ಅಥವಾ ಅದೇ ಶಿರೆಯನ್ನು ಮೊದಲು ಕಡಿದ ಸ್ಥಳದ ಹತ್ತರ, ಪುನಃ ಕಡಿಯಬೇಕು. ಅಥವಾ ಕಾದ ಕಬ್ಬಿಣದಿಂದ ಶಿರಾಮುಖ ವನ್ನು ತೀವ್ರ ಸುಡಬೇಕು. (೪೦)

ಉನ್ಮಾರ್ಗಗಾ ಯಂತ್ರನಿಪೀಡನೇನ
ಸ್ವಸ್ಥಾನಮಾಯಾಂತಿ ಪುನರ್ನ ಯಾವತ್ ॥
ದೋಷಾಃ ಪ್ರದುಷ್ಟಾ ರುಧಿರಂ ಪ್ರಪನ್ನಾ-
ಸ್ತಾವದ್ಧಿತಾಹಾರವಿಹಾರಭಾಕ್ಸ್ಯಾತ್ ॥೪೧॥

ಅರ್ಥಃ— ರಕ್ತದಲ್ಲಿ ಕೂಡಕೊಂಡ ದೂಷಿತ ವಾತ ದೋಷಗಳು ಯಂತ್ರದ ಬಂಧನದಿಂದ ಕುಪಿತವಾಗಿರುತ್ತವೆ. ಅವು ಸ್ವಸ್ಥಾನಕ್ಕೆ ಬರುವ ವರೆಗೆ ಹಿತಾಹಾರ ವಿಹಾರ ಮಾಡಬೇಕು. (೪೧)

ನಾತ್ಯುಷ್ಣಶೀತಂ ಲಘು ದೀಪನೀಯಂ
ರಕ್ತೇಽಪನೀತೇ ಹಿತಮನ್ನಪಾನಮ್ ॥
ತದಾ ಶರೀರಂ ಹ್ಯನವಸ್ಥಿತಾಸೃ-
ಗಗ್ನಿರ್ವಿಶೇಷಾದಿತಿ ರಕ್ಷಿತವ್ಯಃ ॥೪೨॥

ಅರ್ಥಃ— ರಕ್ತವನ್ನು ತೆಗೆಯಲು ಶರೀರದಲ್ಲಿಯ ರಕ್ತವು ಅವ್ಯವಸ್ಥಿತವಾಗಿರುತ್ತದೆ. ಆಗ್ಗೆ ಅಗ್ನಿಯ ರಕ್ಷಣ ಮಾಡುವದು ಬಹಳ ಅವಶ್ಯವಿರುತ್ತದೆ. ಕಾರಣ ಸಮಶೀತೋಷ್ಣ, ಲಘು, ಅಗ್ನಿದೀಪಕವಾದ ಅನ್ನಪಾನವನ್ನು ಮಾಡಬೇಕು. (೪೨)

ಪ್ರಸನ್ನ ವರ್ಣೇಂದ್ರಿಯಮಿಂದ್ರಿಯಾರ್ಥಾ-
ನಿಚ್ಛಂತಮವ್ಯಾಹತಪಕ್ತೃವೇಗಮ್ ॥

**ಸುಖಾನ್ವಿತಃ ಪುಷ್ಟಿಬಲೋಪಪನ್ನಂ**
**ವಿಶುದ್ಧರಕ್ತಂ ಪುರುಷಂ ವದಂತಿ**

ಅರ್ಥಃ— ಶುದ್ಧ ರಕ್ತವುಳ್ಳ ಮನುಷ್ಯನಲ್ಲಿ ವರ್ಣ ಇಂದ್ರಿಯಗಳು ಪ್ರಸನ್ನವಾಗಿರುತ್ತವೆ. ಎಲ್ಲ ಇಂದ್ರಿಯಗಳ ವಿಷಯಗಳ ಅಭಿಲಾಷೆಯಾಗುತ್ತದೆ. ಪಚನ ಕ್ರಿಯೆಯು ಅಪ್ರತಿಹತವಾಗಿರುತ್ತದೆ. ಆನಂದ ಪುಷ್ಟಿ ಬಲಗಳು ಇರುತ್ತವೆ. (೫೩)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ**
**ಸಿರಾವ್ಯಧವಿಧಿರ್ನಾಮ ಸಪ್ತವಿಂಶೋಽಧ್ಯಾಯಃ ಸಮಾಪ್ತಃ**

ಇತಿ ಶ್ರೀಮದಾದ್ಯಬಾಬಾಚಾರ್ಯಪೂಜ್ಯಪಾದಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗ ಹೃದಯದ ಸೂತ್ರಸ್ಥಾನದಲ್ಲಿಯ 'ಸಿರಾವ್ಯಧವಿಧಿ' ಎಂಬ ೨೭ ನೆಯ ಅಧ್ಯಾಯದ ಟೀಕೆಯು ಮುಗಿದುದು.



# ೨೮ನೆಯ ಅಧ್ಯಾಯವು

ಹಿಂದಿನ ಅಧ್ಯಾಯದಲ್ಲಿ ಶಲ್ಯರೂಪ(ಅಶುದ್ಧ) ರಕ್ತವನ್ನು ತೆಗೆಯುವ ಉಪಾಯವನ್ನು ಹೇಳಿದರು. ಈಗ್ಗೆ ಶರೀರದ ಏಕದೇಶದಲ್ಲಿ ಇರುವ ಲೋಹಾದಿಶಲ್ಯಗಳ ಜ್ಞಾನ ಮತ್ತು ಅವುಗಳನ್ನು ತೆಗೆಯುವ ಉಪಾಯಗಳನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ.

**ಅಥಾತಃ ಶಲ್ಯಾ*ಹರಣವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥಃ— ಇನ್ನು ಮೇಲೆ ಶಲ್ಯ ತೆಗೆಯುವ ವಿಧಿಯನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ॥**

ಅರ್ಥ:—ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ವಕ್ರರ್ಜುತಿರ್ಯಗೂರ್ಧ್ವಾಧಃ ಶಲ್ಯಾನಾಂ ಪಂಚಧಾ ಗತಿಃ ॥**

ಅರ್ಥಃ— ಡೊಂಕು, ಸರಳ, ಅಡ್ಡ, ಮೇಲೆ, ಕೆಳಗೆ—ಹೀಗೆ ಶಲ್ಯಗಳಿಗೆ ಐದು ಗತಿಗಳಿರುತ್ತವೆ. (೧)

**ಧ್ಯಾಮಂ ಶೋಫರುಜಾವಂತಂ ಸ್ರವಂತಂ ಶೋಣಿತಂ ಮುಹುಃ ॥೧॥**

**ಅಭ್ಯುದ್ಗತಂ ಬುದ್ಬುದವತ್ಪಿಟಿಕೋಪಚಿತಂ ವ್ರಣಮ್ ॥**
**ಮೃದುಮಾಂಸಂ ಚ ಜಾನೀಯಾದಂತಃಶಲ್ಯಂ ಸಮಾಸತಃ ॥೨॥**

ಅರ್ಥಃ— ನಸುಗಪ್ಪು ಬಾವು ಬೇನೆ, ಆಗಾಗ್ಗೆ ರಕ್ತ ಸ್ರಾವವುಳ್ಳ ಬುರುಗಿನಂತೆ ಮೇಲಕ್ಕೆ ಉಬ್ಬಿದ ಮೇಲೆ ಗುಳ್ಳೆಗಳುಳ್ಳ ಮೆತ್ತನ್ನ ಮಾಂಸವುಳ್ಳ ವ್ರಣವು ಸಾಧಾರಣವಾಗಿ ಒಳಗೆ ಶಲ್ಯವುಳ್ಳದ್ದೆಂದು ತಿಳಿಯಬೇಕು. (೨)

ತ್ವಚೆ ಮತ್ತು ಮಾಂಸಗಳಲ್ಲಿದ್ದ ಶಲ್ಯದ ವಿಶೇಷ ಲಕ್ಷಣವನ್ನು ಹೇಳುತ್ತಾರೆ.

**ವಿಶೇಷಾತ್ತ್ವಗ್ಗತೇ ಶಲ್ಯೇ ವಿವರ್ಣಃ ಕಠಿನಾಯತಃ ॥**
**ಶೋಫೋ ಭವತಿ, ಮಾಂಸಸ್ಥೇ ಚೋಷಃ ಶೋಫೋ ವಿವರ್ಧತೇ॥೩॥**

---

* ಶಲ್ಯಾಹರಣವಿಧಿಯು ಸುಶ್ರುತದ ಸೂಂ ೨೬-೨೭ ನೇ ಅಷ್ಟಾಂಗಸಂಗ್ರಹ ಸೂಂ ೩೭ ನೇ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದೆ. ಚರಕದಲ್ಲಿ ಹೇಳಿಲ್ಲ.

ಪೀಡನಾಕ್ಷಮತಾ ಪಾಕಃ ಶಲ್ಯಮಾರ್ಗೋ ನ ರೋಹತಿ ||

ಅರ್ಥಃ— ವಿಶೇಷತಃ, ಶಲ್ಯವು ತ್ವಚೆಯಲ್ಲಿದ್ದರೆ ತ್ವಚೆಯಗಿಂತ ಬೇರೆ ಬಣ್ಣದ ಬಿರುಸಾಹ ದೊಡ್ಡ ಬಾವು ಉಂಟಾಗುವದು. ಮಾಂಸದಲ್ಲಿದ್ದರೆ ಸರ್ವಾಂಗದಲ್ಲಿ ದಾಹವಿದ್ದು ಬಾವು ಹೆಚ್ಚುತ್ತ ನಡೆಯುವದು. ಮತ್ತು ಕೈಹಚ್ಚಗೊಡುವದಿಲ್ಲ. ಕೆಂಪಾಗುತ್ತದೆ. ಶಲ್ಯಮಾರ್ಗವು ಮಾಯುವದಿಲ್ಲ. (೩||)

ಮಾಂಸ ಪೇಶಿಯಲ್ಲಿಯ ಶಲ್ಯ ಲಕ್ಷಣವನ್ನು ಹೇಳುತ್ತಾರೆ.

ಪೇಶ್ಯಂತರಗತೇ ಮಾಂಸಪ್ರಾಪ್ತವಚ್ಛ್ವಯಥುಂ ವಿನಾ ||೪ |

ಅರ್ಥಃ— ಪೇಶಿಗಳ ಮಧ್ಯದಲ್ಲಿ ಶಲ್ಯವಿದ್ದರೆ ಮಾಂಸಗತ ಶಲ್ಯದ ಬಾವಿನ ಹೊರತು ಉಳಿದ ಎಲ್ಲ ಲಕ್ಷಣಗಳೂ ಇರುವವು. (೪)

ಸ್ನಾಯುವಿನಲ್ಲಿದ್ದ ಶಲ್ಯದ ಲಕ್ಷಣವನ್ನು ಹೇಳುತ್ತಾರೆ.

ಆಕ್ಷೇಪಃ ಸ್ನಾಯುಜಾಲಸ್ಯ ಸಂರಂಭಸ್ತಂಭವೇದನಾಃ ||
ಸ್ನಾಯುಗೇ ದುರ್ಹರಂ ಚೈತತ್..........................

ಅರ್ಥಃ— ಸ್ನಾಯುವಿನಲ್ಲಿ ಶಲ್ಯವಿದ್ದರೆ ಸ್ನಾಯುವಿನ ಕ್ಷೋಭ, ಶಟೆ, ವೇದನೆ, ಜಗ್ಗುವಿಕೆಗಳುಂಟಾಗುವವು. ಇದನ್ನು ತೆಗೆಯುವದು ಕಠಿಣ (೪||)

ಸಿರಾ ಸ್ರೋತಸ್ಸುಗಳಲ್ಲಿದ್ದ ಶಲ್ಯ ಲಕ್ಷಣವನ್ನು ಹೇಳುತ್ತಾರೆ.

..........................ಸಿರಾಧ್ಮಾನಂ ಸಿರಾಶ್ರಿತೇ |೫||
ಸ್ವಕರ್ಮಗುಣಹಾನಿಃ ಸ್ಯಾತ್ಸ್ರೋತಸಾಂ ಸ್ರೋತಸಿ ಸ್ಥಿತೇ ||

ಅರ್ಥಃ— ಶಿರೆಯಲ್ಲಿರಲು ಶಿರೆಯು ಉಬ್ಬುವದು. ಸ್ರೋತಸ್ಸಿನಲ್ಲಿರಲು ಸ್ರೋತಸ್ಸುಗಳ ಮಾರ್ದವಾದಿ ಗುಣ ಪ್ರಾಣವಹನಾದಿ ಕರ್ಮಗಳು ನಷ್ಟವಾಗುವವು. (೫||)

ಧಮನಿಯಲ್ಲಿದ್ದ ಶಲ್ಯದ ಲಕ್ಷಣವನ್ನು ಹೇಳುತ್ತಾರೆ.

ಧಮನಿಸ್ಥೇಽನಿಲೋ ರಕ್ತಂ ಫೇನಯುಕ್ತಮುದೀರಯೇತ್ ||೬||
ನಿರ್ಯಾತಿ ಶಬ್ದವಾನ್ ಸ್ಯಾಚ್ಚ ಹೃಲ್ಲಾಸಃ ಸಾಂಗವೇದನಃ

ಅರ್ಥಃ— ಧಮನಿಯಲ್ಲಿ ಶಲ್ಯವಿರಲು ವಾಯುವು ಬುರುಗುಳ್ಳ ರಕ್ತವನ್ನು ಹೊರಗೆಡವುವದು. ತಾನೂ ಶಬ್ದ ಮಾಡುತ್ತ ಹೊರಬೀಳುವದು. ಬಾಯಿಗೆ ನೀರು ಬಿಡುವದು. ಮತ್ತು ಮೈ ನೋಯುವದು. (೬||)

ಅಸ್ಥಿ-ಸಂಧಿಯಲ್ಲಿದ್ದ ಶಲ್ಯದ ಲಕ್ಷಣವನ್ನು ಹೇಳುತ್ತಾರೆ.

**ಸಂಘರ್ಷೋ ಬಲವಾನಸ್ಥಿಸಂಧಿಪ್ರಾಪ್ತೇಽಸ್ಥಿಪೂರ್ಣತಾ ||೭||**

ಅರ್ಥಃ— ಅಸ್ಥಿಸಂಧಿಯಲ್ಲಿದ್ದರೆ ಬಹಳ ಅಳಕುವದು. ಸಂಧಿಯಲ್ಲಿದ್ದ ತೆರವಾದ ಸ್ಥಳವು ತುಂಬುವದು. (೭)

ಅಸ್ಥಿ, ಸಂಧಿ, ಕೋಷ್ಠ, ಮರ್ಮಗಳಲ್ಲಿದ್ದ ಶಲ್ಯದ ಲಕ್ಷಣವನ್ನು ಹೇಳುತ್ತಾರೆ.

**ನೈಕರೂಪಾ ರುಜೋಽಸ್ಥಿಸ್ಥೇ ಶೋಫಃ ತದ್ವಚ್ಚ ಸಂಧಿಗೇ ||**
**ಚೇಷ್ಟಾನಿವೃತ್ತಿಶ್ಚ ಭವೇತ್ ಆಟೋಪಃ ಕೋಷ್ಠಸಂಶ್ರಿತೇ ||೮||**

**ಆನಾಹೋಽನ್ನಶಕೃನ್ಮೂತ್ರದರ್ಶನಂ ಚ ವ್ರಣಾನನೇ ||**
**ವಿದ್ಯಾನ್ಮರ್ಮಗತಂ ಶಲ್ಯಂ ಮರ್ಮವಿದ್ಧೋಪಲಕ್ಷಣೈಃ ||೯||**

ಅರ್ಥಃ— ಅಸ್ಥಿಯಲ್ಲಿದ್ದರೆ ಅನೇಕ ತರದ ನೋವು ಮತ್ತು ಬಾವು ಉಂಟಾಗುವದು. ಇತರ ಸಂಧಿಯಲ್ಲಿ ಶಲ್ಯವಿರಲು ಅಸ್ಥಿಶಲ್ಯದಂತೆ ಲಕ್ಷಣಗಳೂ ಮತ್ತು ಅವುಗಳ ಕ್ರಿಯೆಗೆ ಪ್ರತಿಬಂಧ ಉಂಟಾಗುವವು. ಕೋಷ್ಠದಲ್ಲಿದ್ದರೆ ಕ್ಷೋಭ ಮತ್ತು ಹೊಟ್ಟೆಯುಬ್ಬುಗಳುಂಟಾಗುವದು. ವ್ರಣದ ಮುಖದಲ್ಲಿ ಅನ್ನ ಮಲಮೂತ್ರಗಳು ಕಾಣುವವು. ಮರ್ಮದಲ್ಲಿದ್ದರೆ ಮರ್ಮವಿದ್ಧ ಲಕ್ಷಣಗಳುಂಟಾಗುವವು.

ಟಿಪ್ಪಣಿ:—ದೇಹಪ್ರಸುಪ್ತಿರ್ಗುರುತಾ ಸಮ್ಮೋಹಃ ಶೀತಕಾಮಿತಾ
ಸ್ವೇದೋ ಮೂರ್ಛಾ ವಮಿಃ ಶ್ವಾಸೋ ಮರ್ಮವಿದ್ಧಸ್ಯ ಲಕ್ಷಣಮ್ |

ಹೀಗೆ ಮರ್ಮವಿದ್ಧ ಲಕ್ಷಣಗಳನ್ನು ಸಂಗ್ರಹದಲ್ಲಿ ಹೇಳಿದ್ದಾರೆ. (೯)

**ಯಥಾಸ್ವಂ ಚ ಪರಿಸ್ರಾವೈಸ್ತ್ವಗಾದಿಷು ವಿಭಾವಯೇತ್ ||**

ಅರ್ಥ:— ತ್ವಚ ಮುಂತಾದವುಗಳಲ್ಲಿಯ ಶಲ್ಯವನ್ನು ಆಯಾ ಸ್ಥಳದಿಂದುಂಟಾಗುವ ಸ್ರಾವದಿಂದ ತಿಳಿದುಕೊಳ್ಳಬೇಕು.

ಟಿಪ್ಪಣಿ:— ಲಸೀಕಾಸ್ರಾವದಿಂದ ತ್ವಚೆಯಲ್ಲಿ, ರಕ್ತಸ್ರಾವದಿಂದ ಶಿರೆಯಲ್ಲಿ ಮಜ್ಜಾಸ್ರಾವದಿಂದ ಅಸ್ಥಿಯಲ್ಲಿ ಶಲ್ಯವಿದೆ ಎಂದು ಆವುಗಳಲ್ಲಿರುವ ದ್ರವಗಳಿಂದ ತಿಳಿಯಬೇಕು. (೯||)

ರುಹ್ಯತೇ ಶುದ್ಧದೇಹಾನಾಮನುಲೋಮಸ್ಥಿತಂ ತು ತತ್ ||೧೦||

ಅರ್ಥ:— ಶುದ್ಧ ದೇಹಗಳಲ್ಲಿ ಸರಳವಾಗಿ ನಟ್ಟಿದ್ದ ಶಲ್ಯದ ವ್ರಣವು ಮಾಯುತ್ತದೆ. (೧೦)

ದೋಷಕೋಪಾಽಭಿಘಾತಾದಿಕ್ಷೋಭಾದ್ಭೂಯೋಽಪಿ ಬಾಧತೇ ||

ಅರ್ಥ:— ಆದರೆ ದೋಷಕೋಪ ಮತ್ತು ಅಭಿಘಾತ ಮುಂತಾದ ಕ್ಷೋಭಗಳಿಂದ ಪುನಃ ಬಾಧಿಸುತ್ತದೆ. (೧೦||)

ಇನ್ನು ಮೇಲೆ ಆಯಾ ಸ್ಥಳಗಳಲ್ಲಿ ಹುದುಗಿಕೊಂಡಿದ್ದ ಶಲ್ಯಗಳನ್ನು ತಿಳಿಯುವ ಉಪಾಯಗಳನ್ನು ಹೇಳುತ್ತಾರೆ.

ತ್ವಙ್ನಷ್ಟೇ ಯತ್ರ ತತ್ರ ಸ್ಯುರಭ್ಯಂಗಸ್ವೇದಮರ್ದನೈಃ ||೧೧||

ರಾಗರುಗ್ದಾಹಸಂರಂಭಾ ಯತ್ರ ಚಾಜ್ಯಂ ವಿಲೀಯತೇ ||

ಆಶು ಶುಷ್ಯತಿ ಲೇಪೋ ವಾ ತತ್ ಸ್ಥಾನಂ ಶಲ್ಯವದ್ವದೇತ್ ||೧೨||

ಅರ್ಥ:— ಶಲ್ಯವು ತ್ವಚೆಯಲ್ಲಿ ಅಡಗಿದ್ದರೆ ಎಲ್ಲೆಲ್ಲಿ ಅಭ್ಯಂಗ ಸ್ವೇದ ಮರ್ದನಗಳಿಂದ ಕೆಂಪುಬಣ್ಣ ನೋವು ದಾಹ ಕ್ಷೋಭಗಳುಂಟಾಗುತ್ತವೆಯೋ ಮತ್ತು ಎಲ್ಲಿ ಹಚ್ಚಿದ ತುಪ್ಪವು ಬೇಗ ಕರಗುತ್ತದೆಯೋ ಅಥವಾ ಲೇಪವು ತೀವ್ರ ಒಣಗುತ್ತದೋ ಆ ಸ್ಥಾನದಲ್ಲಿ ಶಲ್ಯವಿದೆಯೆಂದು ತಿಳಿಯಬೇಕು. (೧೨)

ಮಾಂಸಪ್ರಣಷ್ಟಂ ಸಂಶುದ್ಧ್ಯಾ ಕರ್ಶನಾಚ್ಛ್ಲಥತಾಂ ಗತಮ್ ||

ಕ್ಷೋಭಾದ್ರಾಗಾದಿಭಿಃ ಶಲ್ಯಂ ಲಕ್ಷಯೇತ್ ತದ್ವದೇವ ಚ ||೧೩||

ಪೇಶ್ಯಸ್ಥಿಸಂಧಿಕೋಷ್ಠೇಷು ನಷ್ಟಮಸ್ಥಿಷು ಲಕ್ಷಯೇತ್ ||

ಅಸ್ಥ್ನಾಮಭ್ಯಂಜನಸ್ವೇದಬಂಧಪೀಡನಮರ್ದನೈಃ ||೧೪||

ಪ್ರಸಾರಣಾಕುಂಚನತಃ ಸಂಧಿನಷ್ಟಂ ತಥಾಽಸ್ಥಿವತ್ ||

ಅರ್ಥ:— ಮಾಂಸದಲ್ಲಿ ಅಡಗಿದ ಶಲ್ಯವನ್ನು ವಮನ ವಿರೇಚನ ಮುಂತಾದವುಗಳಿಂದ ರೋಗಿಯನ್ನು ಕೃಶಮಾಡಲು ಸಡಿಲಾಗುವದು. ಆಗ್ಗೆ ಕ್ಷೋಭೆಯನ್ನುಂಟುಮಾಡಲು ಕೆಂಪು ಬಣ್ಣ ನೋವು ಮುಂತಾದವುಗಳುಂಟಾಗಲು ಅದನ್ನು ಗೊತ್ತು ಹಿಡಿಯಬೇಕು. ಪೇಶೀ, ಅಸ್ಥಿಸಂಧಿ, ಕೋಷ್ಠಗಳಲ್ಲಿ ಅಡಗಿದ ಶಲ್ಯವನ್ನು ಇದರಂತೆಯೇ ಗುರುತಿಸಬೇಕು. ಅಸ್ಥಿಯಲ್ಲಿ ಅಡಗಿದ ಶಲ್ಯವನ್ನು ಅಸ್ಥಿಗಳಿಗೆ ಅಭ್ಯಂಗ ಸ್ವೇದ ಬಂಧನ ಪೀಡನ ಒತ್ತೋಣಗಳಿಂದ ಮತ್ತು ಸಂಧಿಯಲ್ಲಿ ಅಡಗಿದ್ದನ್ನು ಪ್ರಸರಣಾಕುಂಚನಗಳಿಂದ ಮತ್ತು ಮೇಲೆ ಹೇಳಿದ (ಅಸ್ಥಿನಷ್ಟ) ಲಕ್ಷಣಗಳಿಂದ ತಿಳಿದುಕೊಳ್ಳಬೇಕು. (೧೪।)

**ನಷ್ಟೇ ಸ್ನಾಯುಶಿರಾಸ್ರೋತೋಧಮನೀಷ್ವಸಮೇ ಪಥಿ ||೧೫||**

**ಅಶ್ವಯುಕ್ತಂ ರಥಂ ಖಂಡಚಕ್ರಮಾರೋಪ್ಯ ರೋಗಿಣಮ್ ||**
**ಶೀಘ್ರಂ ನಯೇತ್ತತಸ್ತಸ್ಯ ಸಂರಂಭಾಚ್ಛಲ್ಯಮಾದಿಶೇತ್ ||೧೬||**

ಅರ್ಥ:— ಶಲ್ಯವು ಸ್ನಾಯು ಶಿರಾ ಸ್ರೋತಸ್ಸು ಧಮನಿಗಳಲ್ಲಿ ಅಡಗಿದ್ದರೆ ರೋಗಿಯನ್ನು ಮುರುಕುಗಾಲಿಯ ಕುದುರೆಯ ರಥದಲ್ಲಿ ಕೂಡ್ರಿಸಿ ತಗ್ಗು ದಿನ್ನೆಗಳುಳ್ಳ ಹಾದಿಯ ಮೇಲೆ ಶೀಘ್ರವಾಗಿ ಓಡಿಸಬೇಕು. ಅಂದರೆ ಅದರ ಕ್ಷೋಭದಿಂದ ಶಲ್ಯಸ್ಥಾನವು ಗೊತ್ತಾಗುವದು. (೧೬)

**ಮರ್ಮನಷ್ಟಂ ಪೃಥಙ್ನೋಕ್ತಂ ತೇಷಾಂ ಮಾಂಸಾದಿಸಂಶ್ರಯಾತ್||**

ಅರ್ಥ:— ಮರ್ಮಗಳು ಮಾಂಸಾದಿಗಳ ಆಶ್ರಯದಿಂದಲೇ ಇರುವದರಿಂದ ಅವುಗಳಲ್ಲಿ ಅಡಗಿದ ಶಲ್ಯಗಳ ಜ್ಞಾನೋಪಾಯಗಳನ್ನು ಬೇರೆ ಹೇಳಿಲ್ಲ.

**ಸಾಮಾನ್ಯೇನ ಸಶಲ್ಯಂ ತು ಕ್ಷೋಭಿಣ್ಯಾ ಕ್ರಿಯಯಾ ಸರುಕ್ ||೧೭||**

**ವೃತ್ತಂ ಪೃಥು ಚತುಷ್ಕೋಣಂ ತ್ರಿಪುಟಂ ಚ ಸಮಾಸತಃ ||**
**ಅದೃಶ್ಯಶಲ್ಯಸಂಸ್ಥಾನಂ ವ್ರಣಾಕೃತ್ಯಾ ವಿಭಾವಯೇತ್ ||೧೮||**

ಅರ್ಥ:— ಸಾಮಾನ್ಯವಾಗಿ ಶಲ್ಯಸ್ಥಾನವು ಕ್ಷೋಭಕವಾದ ಕ್ರಿಯೆಯಿಂದ ನೋಯುವದು. ಅದೃಶ್ಯವಾದ ಶಲ್ಯದ ದುಂಡು ಸ್ಥೂಲ ಚತು

ಷ್ಕೋಣ ಅಥವಾ ತ್ರಿಕೋಣ ಮೊದಲಾದ ಆಕಾರವನ್ನು ಸಾಮಾನ್ಯತಃ ವ್ರಣದ ಆಕೃತಿಯಿಂದ ತಿಳಿದುಕೊಳ್ಳತಕ್ಕದ್ದು. (೧೮)

**ತೇಷಾಮಾಹರಣೋಪಾಯೌ ಪ್ರತಿಲೋಮಾನುಲೋಮಕೌ ||**
**ಅರ್ವಾಚೀನಪರಾಚೀನೇ ನಿರ್ಹರೇತ್ತದ್ವಿಪರ್ಯಯಾತ್ ||೧೯||**

ಅರ್ಥಃ— ಶಲ್ಯವನ್ನು ತೆಗೆಯುವದಕ್ಕೆ ಪ್ರತಿಲೋಮ, ಅನುಲೋಮ ಎಂಬ ಎರಡು ಉಪಾಯಗಳುಂಟು. ಮೇಲಕ್ಕೆ ಹೋದ ಶಲ್ಯವನ್ನು ಅದರ ವಿಪರೀತವಾಗಿ ಕೆಳಕ್ಕೆ ಜಗ್ಗಬೇಕು. ಕೆಳಗೆ ಸೇರಿದ ಶಲ್ಯವನ್ನು ಅದರ ವಿಪರೀತವಾಗಿ ಮೇಲಕ್ಕೆ ಜಗ್ಗಬೇಕು. (೧೯)

**ಸುಖಾಹಾರ್ಯಂ ಯತಶ್ಛಿತ್ವಾ ತತಸ್ತಿರ್ಯಗ್ಗತಂ ಹರೇತ್ ||**

ಅರ್ಥಃ— ಡೊಂಕಾಗಿ ಹೋದ ಶಲ್ಯವನ್ನು ಯಾವ ಕಡೆಗೆ ತೂತು ಮಾಡಿದರೆ ಸುಲಭವಾಗಿ ಬರುತ್ತದೋ ಅತ್ತ ಕಡೆಯಿಂದ ತೆಗೆಯಬೇಕು. (೧೯||)

**ಶಲ್ಯಂ ನ ನಿರ್ಘಾತ್ಯಮುರಃಕಕ್ಷಾವಂಕ್ಷಣಪಾರ್ಶ್ವಗಮ್ ||೨೦||**
**ಪ್ರತಿಲೋಮಮನುತ್ತುಂಡಂ ಛೇದ್ಯಂ ಪೃಥುಮುಖಂ ಚ ಯತ್ ||**
**ನೈವಾಹರೇದ್ವಿಶಲ್ಯಘ್ನಂ ನಷ್ಟಂ ವಾ ನಿರುಪದ್ರವಮ್ ||೨೧||**

ಅರ್ಥಃ— ಎದೆ ಬಗಲು ಗೆಜ್ಜೆ ಬರಿಕೆಗಳಲ್ಲಿ ಹೋದ, ಮತ್ತು ಪ್ರತಿಲೋಮವಿದ್ದ, ಮೇಲೆ ಬಾಯಿ ಕಾಣದ, ಛೇದ್ಯವಾದ ಅಗಲು ಬಾಯಿಯುಳ್ಳ ಶಲ್ಯವನ್ನು ಕಿತ್ತಿ ತೆಗೆಯಬಾರದು. ಮತ್ತು ತೆಗೆದರೆ ರೋಗಿಯು ಸಾಯುವಂತಿದ್ದರೆ ಅಥವಾ ಶಲ್ಯವು ಉಪದ್ರವವನ್ನು ಮಾಡದಿದ್ದರೆ ಅದನ್ನು ತೆಗೆಯಬಾರದು. (೨೧)

**ಅಥಾಹರೇತ್ಕರಪ್ರಾಪ್ಯಂ ಕರೇಣೈವೇತರತ್ಪುನಃ ||**
**ದೃಶ್ಯಂ ಸಿಂಹಾಹಿಮಕರವರ್ಮಿಕರ್ಕಟಕಾನನೈಃ**

ಅರ್ಥಃ— ಕೈಗೆ ಬರುವಂತಿದ್ದರೆ ಕೈಯಿಂದಲೇ ತೆಗೆಯಬೇಕು. ಕೈಗೆಬಾರದಿದ್ದ ಶಲ್ಯವನ್ನು ಸಿಂಹಮುಖ, ಸರ್ಪಮುಖ, ಮಕರಮುಖ, ವರ್ಮಿಮುಖ, ಕರ್ಕಟಮುಖ ಎಂಬ ಶಸ್ತ್ರಗಳಿಂದ ತೆಗೆಯಬೇಕು. (೨೨)

**ಅದೃಶ್ಯಂ ವ್ರಣಸಂಸ್ಥಾನಾದ್ಗ್ರಹೀತುಂ ಶಕ್ಯತೇ ಯತಃ ॥**
**ಕಂಕಭೃಂಗಾಹ್ವಕುರರಶರಾರೀವಾಯಸಾನನೈಃ ॥೨೩॥**

ಅರ್ಥಃ— ಅದೃಶ್ಯವಾದ ಶಲ್ಯವು ವ್ರಣದ ಆಕಾರದಿಂದಲೇ ತಿಳಿಯಲು ಶಕ್ಯವಾಗುತ್ತದೆ. ಕಾರಣ ಅದನ್ನು ಕಂಕಮುಖ, ಭೃಂಗಮುಖ, ಕುರರ ಮುಖ, ಶರಾರಿಮುಖ, ವಾಯಸಮುಖ ಎಂಬ ಸ್ವಸ್ತಿಕ ಯಂತ್ರಗಳಿಂದ ತೆಗೆಯಬೇಕು. (೨೩)

**ಸಂದಂಶಾಭ್ಯಾಂ ತ್ವಗಾದಿಸ್ಥಂ ತಾಲಾಭ್ಯಾಂ ಸುಷಿರಂ ಹರೇತ್ ॥**
**ಸುಷಿರಸ್ಥಂ ತು ನಲಕೈಃ ಶೇಷಂ ಶೇಷೈರ್ಯಥಾಯಥಮ್ ॥೨೪॥**

ಅರ್ಥಃ— ತ್ವಚ ಮಾಂಸ ಮುಂತಾದವುಗಳಲ್ಲಿದ್ದ ಶಲ್ಯವನ್ನು ಚಿಮುಟಗಿಗಳಿಂದ ತೆಗೆಯಬೇಕು. ಪೊಳ್ಳು ಶಲ್ಯವನ್ನು ೨ ತಾಲಯಂತ್ರದಿಂದ ತೆಗೆಯಬೇಕು. ತೂತಿನಲ್ಲಿದ್ದ ಶಲ್ಯವನ್ನು ನಾಡೀಯಂತ್ರಗಳಿಂದ ತೆಗೆಯಬೇಕು. ಉಳಿದ ಶಲ್ಯಗಳನ್ನು ಅವಕ್ಕೆ ಯೋಗ್ಯವಾದ ಯಂತ್ರಗಳಿಂದ ತೆಗೆಯಬೇಕು. (೨೪)

ಯಂತ್ರಗಳಿಂದ ತೆಗೆಯಲಿಕ್ಕಾಗದ ಶಲ್ಯಗಳನ್ನು ತೆಗೆಯುವ ಉಪಾಯವನ್ನು ಹೇಳುತ್ತಾರೆ.

**ಶಸ್ತ್ರೇಣ ವಾ ವಿಶಸ್ಯಾಽದೌ ತತೋ ನಿರ್ಲೋಹಿತಂ ವ್ರಣಮ್ ॥**
**ಕೃತ್ವಾ ಘೃತೇನ ಸಂಸ್ವೇದ್ಯ ಬಧ್ವಾಽಽಚಾರಿಕಮಾದಿಶೇತ್ ॥೨೫॥**

ಅರ್ಥಃ— ಅಥವಾ ಶಸ್ತ್ರದಿಂದ ಮೊದಲು ಕೊಯ್ದು ವ್ರಣದಲ್ಲಿ ರಕ್ತವಿಲ್ಲದಂತೆ ಮಾಡಿ ಶಲ್ಯ ತೆಗೆದು ತುಪ್ಪದಿಂದ ಕಾಸಿ ಕಟ್ಟಿ ಸ್ನೇಹ ವಿಧಿಯಲ್ಲಿ ಹೇಳಿದ ಆಹಾರ ವಿಹಾರ ಮಾಡಬೇಕು. (೨೫)

**ಸಿರಾಸ್ನಾಯುವಿಲಗ್ನಂ ತು ಚಾಲಯಿತ್ವಾ ಶಲಾಕಯಾ ॥**
**ಹೃದಯೇ ಸಂಸ್ಥಿತಂ ಶಲ್ಯಂ ತ್ರಾಸಿತಸ್ಯ ಹಿಮಾಂಬುನಾ ॥೨೬॥**
**ತತಃ ಸ್ಥಾನಾಂತರಂ ಪ್ರಾಪ್ತಮಾಹರೇತ್ತದ್ಯಥಾಯಥಮ್ ॥**
**ಯಥಾಮಾರ್ಗಂ ದುರಾಕರ್ಷಂ ಅನ್ಯತೋಽಪ್ಯೇವಮಾಹರೇತ್**
**॥೨೭॥**

ಅರ್ಥ:— ಸಿರಾ ಸ್ನಾಯುಗಳಲ್ಲಿ ನಟ್ಟ ಶಲ್ಯವನ್ನು ಮೊದಲು ಸಲಾಕೆಯಿಂದ ಅಗಲಮಾಡಿಸಿ ಕಿತ್ತಬೇಕು. ಹೃದಯದಲ್ಲಿದ್ದ ಶಲ್ಯವನ್ನು ತೆಗೆಯ ಬೇಕಾದರೆ ಅವನ ಮೋರೆಯ ಮೇಲೆ ನೀರು ಸಿಂಪಡಿಸಿ ಗಾಬರಿಮಾಡಲು ಅದು ಸರಿದು ಎರಡನೇ ಸ್ಥಾನಕ್ಕೆ ಬರುವದು. ಆಗ್ಗೆ ಆ ಸ್ಥಾನಕ್ಕೆ ಯೋಗ್ಯ ವಾದ ಯಂತ್ರದಿಂದ ತೆಗೆಯಬೇಕು, ಹೃದಯದಿಂದ ತೆಗೆಯಲು ಕಠಿಣವಾದ ಶಲ್ಯವನ್ನು ಮಾರ್ಗಕ್ಕೆ ಅನುರೂಪವಾದ ಶೋಧನಮಾಡಿ ತೆಗೆಯಬೇಕು. ಎರಡನೇ ಕಡೆಗೆ ಹೋದ ಶಲ್ಯವನ್ನು ಕೂಡ ಇದೇಪ್ರಕಾರ ತೆಗೆಯತಕ್ಕದ್ದು. (೨೭)

**ಅಸ್ಥಿದಷ್ಟೇ ನರಂ ಪದ್ಭ್ಯಾಂ ಪೀಡಯಿತ್ವಾ ವಿನಿರ್ಹರೇತ್ ||**
**ಇತ್ಯಶಕ್ಯೇ ಸುಬಲಿಭಿಃ ಸುಗೃಹೀತಸ್ಯ ಕಿಂಕರೈಃ ||೨೮||**

ಅರ್ಥಃ— ಅಸ್ಥಿಯಲ್ಲಿ ಸೇರಿದ ಶಲ್ಯವನ್ನು ತೆಗೆಯಬೇಕಾದರೆ ಅವ ನನ್ನು ಕಾಲಿನಿಂದ ಗಟ್ಟಿಯಾಗಿ ಹಿಡಿದು ಕಿತ್ತಬೇಕು. ಅದರಿಂದ ಶಕ್ಯವಾಗ ದಿದ್ದರೆ ಬಲಿಷ್ಠರಾದ ಸೇವಕರಿಂದ ಅವನನ್ನು ಒತ್ತಿ ಹಿಡಿಸಿ ಕಿತ್ತಬೇಕು. (೨೮)

**ತಥಾಽಪ್ಯಶಕ್ಯೇ ವಾರಂಗಂ ವಕ್ರೀಕೃತ್ಯ ಧನುರ್ಜ್ಯಯಾ ||**
**ಸುಬದ್ಧಂ ವಕ್ತ್ರಕಟಕೇ ಬಧ್ನೀಯಾತ್ಸುಸಮಾಹಿತಃ ||೨೯||**

**ಸುಸಂಯತಸ್ಯ ಪಂಚಾಂಗ್ಯಾ ವಾಜಿನಃ ಕಶಯಾಽಥ ತಮ್ ||**
**ತಾಡಯೇದಿತಿ ಮೂರ್ಧಾನಂ ವೇಗೇನೋನಮಯನ್ ಯಥಾ ||೩೦||**

**ಉದ್ಧರೇಚ್ಛಲ್ಯಮೇವಂ ವಾ ಶಾಖಾಯಾಂ ಕಲ್ಪಯೇತ್ತರೋಃ ||**

ಅರ್ಥಃ— ಅದರಿಂದಲೂ ಶಕ್ಯವಾಗದಿದ್ದರೆ ಶಲ್ಯದ ತುದಿಯನು ಡೊಂಕುಮಾಡಿ(ಸ್ನಾಯು ಮುಂತಾದ್ದರಿಂದ ಮಾಡಿದ) ಬಿಲ್ಲಿನ ಹಗ್ಗಕ್ಕೆಕಟ್ಟಿ ಅದನ್ನು ನಾಲ್ಕು ಕಾಲು ಮತ್ತುಮೋರೆಯನ್ನು ಚನ್ನಾಗಿ ಕಟ್ಟಿದ ಕುದುರೆಯ ಮುಖದ ಹಗ್ಗಕ್ಕೆ ಲಕ್ಷಪೂರ್ವಕವಾಗಿ ಕಟ್ಟಬೇಕು. ಆಮೇಲೆ ಬೆತ್ತದಿಂದ ಅದಕ್ಕೆ ಹೊಡೆಯಬೇಕು. ಅಂದರೆ ಅದು ತಲೆಯನ್ನು ಮೇಲಕ್ಕೆ ವೇಗದಿಂದ ಎತ್ತುವದು. ಶಲ್ಯವು ಕಿತ್ತಿ ಬರುವದು. ಇದರಂತೆ ಗಿಡದ ಟೊಂಗೆಯನ್ನು ಮಣಿಸಿ[ಅದಕ್ಕೆ ಆ ಹಗ್ಗವನ್ನು ಕಟ್ಟಿ ಆ ಟೊಂಗೆಯನ್ನು ಬಿಡಲು ಅದು ಶಲ್ಯವನ್ನು ಕಿತ್ತುವದು. (೩೦||)

**ಬದ್ಧ್ವಾ ದುರ್ಬಲವಾರಂಗಂ ಕುಶಾಭಿಃ ಶಲ್ಯಮಾಹರೇತ್ ||೩೧||**

**ಶ್ವಯಥುಗ್ರಸ್ತವಾರಂಗಂ ಶೋಫಮುತ್ಪೀಡ್ಯ ಯುಕ್ತಿತಃ ||**

ಅರ್ಥಃ— ವಾರಂಗವು ದುರ್ಬಲವಿದ್ದರೆ ಬಿದರಿನ ಕಂಬಿಗಳಿಂದ ಕಟ್ಟಿ ಶಲ್ಯವನ್ನು ತೆಗೆಯಬೇಕು. ವಾರಂಗವು ಬಾವಿನಿಂದ ಮುಚ್ಚಿದ್ದರೆ ಬಾವನ್ನು ಎರಡೂ ಬದಿಯಿಂದ ಒತ್ತಿ ಯುಕ್ತಿಯಿಂದ ಶಲ್ಯವನ್ನು ಕಿತ್ತಬೇಕು. (೩೧||)

**ಮುದ್ಗರಾಹತಯಾ ನಾಡ್ಯಾ ನಿರ್ಘಾತ್ಯೋತ್ತುಂಡಿತಂ ಹರೇತ್||೩೨||**

**ತೈರೇವ ಚಾನಯೇನ್ಮಾರ್ಗಮಮಾರ್ಗೋತ್ತುಂಡಿತಂ ತು ಯತ್ ||**

ಅರ್ಥಃ— ಗುಳ್ಳಿಗೆಯಂತೆ ಮೇಲೆ ಬಾಯಿಮಾಡಿದ ಶಲ್ಯಗಳನ್ನು ಸುತ್ತಿಗೆಯಿಂದ ಹೊಡೆದ ನಾಡಿಯಿಂದ ಅಗಳಾಡಿಸಿ ತೆಗೆಯಬೇಕು. ಅಡ್ಡ ಮಾರ್ಗಕ್ಕೆ ಬಾಯಿ ಮಾಡಿದ ಶಲ್ಯವನ್ನು ಅವುಗಳಿಂದಲೇ ಮಾರ್ಗಕ್ಕೆ ತರಬೇಕು. (೩೨||)

**ಮೃದಿತ್ವಾ ಕರ್ಣಿನಾಂ ಕರ್ಣಂ ನಾಡ್ಯಾಸ್ಯೇನ ನಿಗೃಹ್ಯ ವಾ ||೩೩||**

**ಅಯಸ್ಕಾಂತೇನ ನಿಷ್ಕರ್ಣಂ ವಿವೃತಾಸ್ಯಮೃಜುಸ್ಥಿತಮ್ ||**

ಅರ್ಥಃ— ಟಿಸಲುಳ್ಳ ಶಲ್ಯದ ಟಿಸಲನ್ನು ಮುರಿದು ಅಥವಾ ನಾಡೀಯಂತ್ರಮುಖದಿಂದ ಹಿಡಿದು ಕಿತ್ತಬೇಕು. ಟಿಸಲು ಇರದ, ಬಾಯಿ ತೆರೆದ, ಸರಳವಾಗಿದ್ದ ಶಲ್ಯವನ್ನು ಲೋಹಕಾಂತದಿಂದ ತೆಗೆಯಬೇಕು. (೩೩||)

**ಪಕ್ವಾಶಯಗತಂ ಶಲ್ಯಂ ವಿರೇಕೇಣ ವಿನಿರ್ಹರೇತ್ ||೩೪||**

**ದುಷ್ಟವಾತವಿಷಸ್ತನ್ಯರಕ್ತತೋಯಾದಿಚೂಷಣೈಃ ||**

ಅರ್ಥಃ—ಪಕ್ವಾಶಯದಲ್ಲಿದ್ದ ಶಲ್ಯವನ್ನು ವಿರೇಚನದಿಂದ ತೆಗೆಯಬೇಕು. ದುಷ್ಟವಾಯು, ವಿಷ, ಸ್ತನ್ಯ, ರಕ್ತ, ನೀರು ಮುಂತಾದ್ದನ್ನು (ಬಾಯಿಂದ ಅಥವಾ ತುಂಬಡಿ ಮುಂತಾದವುಗಳಿಂದ) ಹೀರಿಕೊಳ್ಳಬೇಕು. (೩೪||)

**ಕಂಠಸ್ರೋತೋಗತೇ ಶಲ್ಯೇ ಸೂತ್ರಂ ಕಂಠೇ ಪ್ರವೇಶಯೇತ್ ||೩೫||**

**ಬಿಸೇನಾತ್ತೇ ತತಃ ಶಲ್ಯೇ ಬಿಸಂ ಸೂತ್ರಂ ಸಮಂ ಹರೇತ್ ||**

ಅರ್ಥ:— ಶಲ್ಯವು ಕಂಠಮಾರ್ಗದಲ್ಲಿ ಸೇರಿರಲು ಕಮಲದ ದೇಟಿನೊಡನೆ ಧಾರವನ್ನು ಕುತ್ತಿಗೆಯಲ್ಲಿ ನೇರಿಸಬೇಕು. ಶಲ್ಯವು ಅದರಲ್ಲಿ ಸಿಗಲು ಆ ದಾರನ್ನು ಶಲ್ಯವನ್ನು ಕೂಡಿಯೇ ಜಗ್ಗಬೇಕು. (೩೫||)

**ನಾಡ್ಯಾಽಗ್ನಿತಾಪಿತಾಂ ಕ್ಷಿಪ್ತ್ವಾ ಶಲಾಕಾಮಪ್ಸ್ಥಿರೀಕೃತಾಮ್ ||೩೬||**
**ಅನಯೋಃಜ್ಜಾತುಷಂ ಕಂಠಾಜ್ಜತುದಿಗ್ಧಾಮಜಾತುಷಮ್ ||**

ಅರ್ಥ:— ಕಂಠದಲ್ಲಿದ್ದ ಅರಗಿನ ಶಲ್ಯವನ್ನು ತೆಗೆಯಬೇಕಾದರೆ ಕಾಸಿದ ಶಲಾಕೆಯನ್ನು ನಾಡೀ-ಯಂತ್ರದಿಂದ ಕಂಠದಲ್ಲಿ ಸೇರಿಸಿ ಶಲ್ಯವು ಅದಕ್ಕೆ ಹತ್ತಲು ನೀರಿನಿಂದ ಆರಿಸಿ ಹೊರಗೆ ತೆಗೆಯಬೇಕು ಅರಗಿನ ಹೊರ್ತಾಗಿ ಉಳಿದ ಶಲ್ಯಗಳನ್ನು ಅರಗು ಹಚ್ಚಿದ ಶಲಾಕೆಯನ್ನು ಒಳಗೆ ಹಾಕಿ ಅದಕ್ಕೆ ಅದು ಹತ್ತಿಕೊಳ್ಳಲು ಹೊರಗೆ ತೆಗೆಯಬೇಕು. ೩೬||)

**ಕೇಶೋಂದುಕೇನ ಪೀತೇನ ದ್ರವೈಃ ಕಂಟಕಮಾಕ್ಷಿಪೇತ್ ||೩೭||**
**ಸಹಸಾ ಸೂತ್ರಬದ್ಧೇನ ವಮತಸ್ತೇನ ಚೇತರತ್ ||**

ಅರ್ಥ:— ಗಂಟಲದಲ್ಲಿ ಮೀನು ಮುಂತಾದವುಗಳ ಮುಳ್ಳು ಸಿಕ್ಕರೆ (ವಾಮಕ) ದ್ರವ ಪದಾರ್ಥಗಳೊಡನೆ ಧಾರಕಟ್ಟಿದ ಕೂದಲುಗಳ ಸಮೂಹವನ್ನು ಕುಡಿಯಬೇಕು. ಆಗ್ಗೆ ವಾಂತಿಯಾಗಹತ್ತಲು ಧಾರವನ್ನು ಎಳೆಯಲು ಅದಕ್ಕೆ ಹತ್ತಿ ಮುಳ್ಳು ಬರುವದು. ಇದರಂತೆ ಮುಳ್ಳಿನಿಂದ ಗಂಟಲಿನಲ್ಲಿ ಸಿಕ್ಕ ಕೂದಲ ಸಮೂಹವನ್ನು ತೆಗೆಯಬೇಕು. (೩೭||)

**ಅಶಕ್ಯಂ ಮುಖನಾಸಾಭ್ಯಾಮಾಹರ್ತುಂ ಪರತೋ ನುದೇತ್ ||೩೮||**

ಅರ್ಥ:— ಮೂಗು ಬಾಯಿಗಳಿಂದ ಬಾರದಿದ್ದುದನ್ನು ಹಿಂದಕ್ಕೆ ನುಗಿಸಬೇಕು. (೩೮)

**ಅಪ್ಪಾನಸ್ಕಂಧಘಾತಾಭ್ಯಾಂ ಗ್ರಾಸಶಲ್ಯಂ ಪ್ರವೇಶಯೇತ್ ||**
**ಸೂಕ್ಷ್ಮಾಕ್ಷಿವ್ರಣಶಲ್ಯಾನಿ ಕ್ಷೌಮವಾಲಜಲೈರ್ಹರೇತ್ ||೩೯||**

ಅರ್ಥ:— ಕುತ್ತಿಗೆಯಲ್ಲಿ ತುತ್ತು ಸಿಕ್ಕಿದ್ದರೆ ನೀರು ಕುಡಿಯೋಣ, ಭುಜದ ಮೇಲೆ ಗುದ್ದೋಣ ಇವುಗಳಿಂದ ಒಳಗೆ ಪ್ರವೇಶ ಮಾಡಿಸಬೇಕು,

ಕಣ್ಣು ವ್ರಣಗಳಲ್ಲಿದ್ದ ಸೂಕ್ಷ್ಮವಾದ ಶಲ್ಯಗಳನ್ನು ರೇಶಿಮೆ ಕೂದಲು ಅಥವಾ ನೀರಿನಿಂದ ತೆಗೆಯಬೇಕು. (೩೯)

**ಅಪಾಂ ಪೂರ್ಣಂ ವಿಧುನುಯಾದವಾಕ್ಶಿರಸಮಾಯತಮ್ ॥**
**ವಾಮಯೇಚ್ಚಾಮುಖಂ ಭಸ್ಮರಾಶೌ ವಾ ನಿಖನೇನ್ನರಮ್ ॥೪೦॥**

ಅರ್ಥಃ— ಹೊಟ್ಟೆಯಲ್ಲಿ ನೀರು ತುಂಬಿದವನಿಗೆ ಕೆಳಗೆ ತಲೆಮಾಡಿ ನೆಟ್ಟಗೆ ತೂಗುಗಟ್ಟಿ ತೂಗಬೇಕು. ಅಥವಾ ವಾಂತಿ ಮಾಡಿಸಬೇಕು. ಅಥವಾ ಕುತ್ತಿಗೆಯ ವರೆಗೆ ಭಸ್ಮದ ರಾಶಿಯಲ್ಲಿ ಹುಗಿಯಬೇಕು. (೪೦)

**ಕರ್ಣೇಽಂಬುಪೂರ್ಣೇ ಹಸ್ತೇನ ಮಥಿತ್ವಾ ತೈಲವಾರಿಣೀ ॥**
**ಕ್ಷಿಪೇದಧೋಮುಖಂ ಕರ್ಣಂ ಹನ್ಯಾದ್ವಾಽಽಚೂಷಯೇತ ವಾ ॥೪೧॥**

ಅರ್ಥಃ— ಕಿವಿಯಲ್ಲಿ ನೀರು ಹೋದರೆ ನೀರು ಎಣ್ಣೆಗಳನ್ನು ಕೈಯಿಂದ ಕೂಡಿಸಿ ಹಾಕಬೇಕು. ಅಥವಾ ಕಿವಿ ಕೆಳಗೆ ಮಾಡಿ ಮೇಲೆ ಬಡಿಯಬೇಕು. ಅಥವಾ ಯಾತರಿಂದಾದರೂ ಹೀರಿಕೊಳ್ಳಬೇಕು. (೪೧)

**ಕೀಟೇ ಸ್ರೋತೋಗತೇ ಕರ್ಣಂ ಪೂರಯೇಲ್ಲವಣಾಂಬುನಾ ॥**
**ಸುಕ್ತೇನ ವಾ ಸುಖೋಷ್ಣೇನ ಮೃತೇ ಕ್ಲೇದಹರೋ ವಿಧಿಃ ॥೪೨॥**

ಅರ್ಥಃ— ಕಿವಿಯಲ್ಲಿ ಹುಳವು ಹೋದರೆ ಉಪ್ಪಿನ ನೀರು ಅಥವಾ ಬೆಚ್ಚಗಿನ ಸುಕ್ತವನ್ನು ಹಾಕಬೇಕು. ಅದು ಸಾಯಲು ಕ್ಲೇದನಾಶಕ ವಿಧಿ ಮಾಡಬೇಕು. (೪೨)

**ಜಾತುಷಂ ಹೇಮರೂಪ್ಯಾದಿಧಾತುಜಂ ಚ ಚಿರಸ್ಥಿತಮ್ ॥**
**ಊಷ್ಮಣಾ ಪ್ರಾಯಶಃ ಶಲ್ಯಂ ದೇಹಜೇನ ವಿಲೀಯತೇ ॥೪೩॥**

ಅರ್ಥಃ— ಅರಗು ಭಂಗಾರ ಬೆಳ್ಳಿ ಮುಂತಾದ ಧಾತುವಿನ ಶಲ್ಯಗಳು ಬಹಳ ದಿವಸವಿದ್ದರೆ ದೇಹದ ಉಷ್ಣತೆಯಿಂದ ಬಹಳ ಮಾಡಿ ಕರಗಿ ಹೋಗುತ್ತವೆ. (೪೩)

**ಮೃದ್ವೇಣುದಾರುಶೃಂಗಾಸ್ಥಿದಂತವಾಲೋಪಲಾನಿ ನ ॥**
**ವಿಷಾಣವೇಣ್ವಯಸ್ತಾಲದಾರುಶಲ್ಯಂ ಚಿರಾದಪಿ ॥೪೪॥**

**ಪ್ರಾಯೋ ನಿರ್ಭುಜ್ಯತೇಃ ತದ್ಧಿ ಪಚತ್ಯಾಶು ಪಲಾಸೃಜೀಃ ॥**

ಅರ್ಥಃ— ಮಣ್ಣು, ಬಿದರು, ಕಟ್ಟಿಗೆ, ಕೋಡು, ಎಲಬು, ಹಲ್ಲು, ಕೂದಲು, ಕಲ್ಲುಗಳು ಶರೀರದಲ್ಲಿ ಬಹಳ ದಿವಸ ವರೆಗೆ ಕರಗುವದಿಲ್ಲ ಕೋಡು, ಬಿದರು, ಲೋಹ, ತಾಲ ಕಟ್ಟಿಗೆಗಳ ಶಲ್ಯವು ಬಹಳ ದಿವಸಕ್ಕೂ ಕೂಡ ಕರಗುವದಿಲ್ಲ. ಏಕೆಂದರೆ ಅವು ಬಹಳ ಮಾಡಿ ಮಣಿಯುತ್ತವೆ. ಮತ್ತು ಮಾಂಸ ರಕ್ತಗಳ ಪಾಕ ಮಾಡುತ್ತವೆ. ।೪೪॥

**ಶಲ್ಯೇ ಮಾಂಸಾವಗಾಢೇ ಚೇತ್ಸ ದೇಶೋ ನ ವಿದಹ್ಯತೇ ॥೪೫॥**
**ತತಸ್ತಂ ಮರ್ದನಸ್ವೇದ ಶುದ್ಧಿಕರ್ಷಣಬೃಂಹಣೈಃ ॥**
**ತೀಕ್ಷ್ಣೋಪನಾಹಪಾನಾನ್ನಘನಶಸ್ತ್ರಪದಾಂಕನೈಃ ॥೪೬॥**

**ಪಾಚಯಿತ್ವಾ ಹರೇಚ್ಛಲ್ಯಂ ಪಾಟನೈಷಣಭೇದನೈಃ ॥**

ಅರ್ಥಃ— ಮಾಂಸದಲ್ಲಿ ಶಲ್ಯವು ಬಹಳ ಒಳಗೆ ಹೋಗಲು ಅಲ್ಲಿ ಪಾಕವಾವದಿಲ್ಲ. ಆದ ಕಾರಣ ಮರ್ದನ, ಸ್ವೇದ, ಶೋಧನ, ಲಂಘನ, ಬೃಂಹಣ, ತೀಕ್ಷ್ಣವಾದ ಪೋಟೀಸ, ಅನ್ನಪಾನ, ದಟ್ಟಾದ ಶಸ್ತ್ರಗಳಿಂದ ಕಚ್ಚುಗಳನ್ನು ಹಾಕಿ ಪಕ್ವಮಾಡಿ ಆ ಮೇಲೆ ವ್ರಣವನ್ನು ಸೀಳೋಣ, ಶಲಾಕೆ ಹಾಕಿ ನೋಡೋಣ ಚುಚ್ಚೋಣಗಳಿಂದ ಶಲ್ಯವನ್ನು ತೆಗೆಯಬೇಕು. (೪೬॥)

**ಶಲ್ಯಪ್ರದೇಶಯಂತ್ರಾಣಾಮವೇಕ್ಷ್ಯ ಬಹುರೂಪತಾಮ್ ॥೪೭॥**
**ತೈಸ್ತೈರುಪಾಯೈರ್ಮತಿಮಾನ್ ಶಲ್ಯಂ ವಿದ್ಯಾತ್ತಥಾಽಽಹರೇತ್ ॥**

ಅರ್ಥಃ— ಶಲ್ಯಗಳೂ ಶಲ್ಯವಿರುವ ಸ್ಥಾನಗಳೂ ಅವುಗಳನ್ನು ತೆಗೆಯುವ ಯಂತ್ರಗಳೂ ಅನೇಕವಾಗಿರುವವು. ಆ ಕಾರಣ ಬುದ್ಧಿವಂತನಾದ ವೈದ್ಯನು ಅನೇಕ ಉಪಾಯಗಳಿಂದ ಶಲ್ಯವನ್ನು ಗೊತ್ತುಹಚ್ಚಬೇಕು. ಮತ್ತೂ ಅದನ್ನು ತೆಗೆಯಬೇಕು. (೪೭॥)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ**
**ಶಲ್ಯಾಹರಣವಿಧಿರ್ನಾಮ ಅಷ್ಟಾವಿಂಶೋಽಧ್ಯಾಯಃ ಸಮಾಪ್ತಃ**

ಇತಿ ಶ್ರೀಮದಾದ್ಯಬಾಬಾಚಾರ್ಯ ಪೂಜ್ಯಪಾದಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ ಅಷ್ಟಾಂಗ ಹೃದಯದ ಸೂತ್ರಸ್ಥಾನದಲ್ಲಿಯ 'ಶಲ್ಯಾಹರಣವಿಧಿ' ಎಂಬ ೨೮ ನೆಯ ಅಧ್ಯಾಯದ ಟೀಕೆಯು ಮುಗಿದುದು.

# ೨೯ನೆಯ ಅಧ್ಯಾಯವು

ಶಲ್ಯವನ್ನು ತೆಗೆಯಬೇಕಾದರೆ ಮಾಂಸವನ್ನು ಶಸ್ತ್ರದಿಂದ ತೆಗೆಯಬೇಕೆಂದು ಹೇಳಿದೆ. ಆದರ ಸಂಗ್ರಹದಿಂದ ಶಸ್ತ್ರಕರ್ಮವಿಧಿಯನ್ನು ಹೇಳುತ್ತಾರೆ.

**ಅಥಾತಃ ಶಸ್ತ್ರಕರ್ಮವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥಃ— ಇನ್ನು ಮೇಲೆ ಶಸ್ತ್ರಕರ್ಮವಿಧಿಯ ಅಧ್ಯಾಯವನ್ನು ಹೇಳುತ್ತೇವೆ.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ।**

ಅರ್ಥಃ— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ವ್ರಣಃ ಸಂಜಾಯತೇ ಪ್ರಾಯಃ ಪಾಕಾಚ್ಛ್ವಯಥುಪೂರ್ವಕಾತ್ ॥**
**ತಮೇವೋಪಚರೇತ್ತಸ್ಮಾದ್ರಕ್ಷನ್ಪಾಕಂ ಪ್ರಯತ್ನತಃ ॥೧॥**

**ಸುಶೀತಲೇಪಸೇಕಾಸ್ರಮೋಕ್ಷಸಂಶೋಧನಾದಿಭಿಃ ॥**

ಅರ್ಥಃ— ಬಹಳ ಮಾಡಿ ಮೊದಲು ಬಾವು ಬಂದು ಆ ಮೇಲೆ ಪಾಕವಾಗಿ ಆದರ ವ್ರಣವುಂಟಾಗುತ್ತದೆ. ಆ ಕಾರಣ ಮೊದಲು ಪಾಕವಾಗದಂತೆ ಶೀತ ಲೇಪ, ಸೇಚನ, ರಕ್ತಸ್ರಾವ, ಶೋಧನ ಮುಂತಾದವುಗಳಿಂದ ಬಾವು ಹಣ್ಣಾಗದಂತೆ ಪ್ರಯತ್ನದಿಂದ ಉಪಚರಿಸಬೇಕು.

ಟಿಪ್ಪಣಿ:— ಆಗಂತು ವ್ರಣವು ಬಾವು ಉಂಟಾಗದೆ ಆಗುವದರಿಂದ 'ಬಹಳ ಮಾಡಿ' ಎಂದು ಹೇಳಿದರು. (೧॥)

**ಶೋಫೋಽಲ್ಪೋಽಲ್ಪೋಷ್ಮರುಕ್ ಸಾಮಃ ಸವರ್ಣಃ ಕಠಿನಃ ಸ್ಥಿರಃ ॥೨॥**

**ಪಚ್ಯಮಾನೋ ವಿವರ್ಣಸ್ತು ರಾಗೀ ಬಸ್ತಿರಿವಾತತಃ ॥**
**ಸ್ಫುಟತೀವ ಸನಿಸ್ತೋದಃ ಸಾಂಗಮರ್ದವಿಜೃಂಭಿಕಃ ॥೩॥**

† ಶಸ್ತ್ರಕರ್ಮವಿಧಿಯು ಸುಶ್ರುತದ ಸೂ. ೫-೧೭-೧೮_೧೯_೨೫ನೇ ಅಷ್ಟಾಂಗ ಸಂಗ್ರಹದ, ಸೂ ೩೮ ನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ ಚರಕದಲ್ಲಿ ಹೇಳಿಲ್ಲ.

**ಸಂರಂಭಾರುಚಿದಾಹೋಷಾತೃಡ್‌ಜ್ವರಾನಿದ್ರತಾನ್ವಿತಃ ||**
**ಸ್ತ್ಯಾನಂ ವಿಷ್ಯಂದಯತ್ಯಾಜ್ಯಂ ವ್ರಣವತ್ಸ್ಪರ್ಶನಾಸಹಃ ||೪||**

ಅರ್ಥಃ— ಅಲ್ಪ ಆಕಾರದ, ಸ್ವಲ್ಪ ಉಷ್ಣ, ಸ್ವಲ್ಪ ಬೇನೆಯುಳ್ಳ ತ್ವಚೆಯ ವರ್ಣದ, ಕಠಿಣವಾದ, ಸ್ಥಿರವಾದ ಬಾವು ಸಾಮವೆಂದು ತಿಳಿಯ ಬೇಕು. ಪಕ್ವವಾಗಲಿಕ್ಕೆ ಹತ್ತಿದ ಬಾವು ತ್ವಚೆಯ ಭಿನ್ನವರ್ಣದ್ದೂ, ಕೆಂಪೂ ಬಸ್ತಿಯಂತೆ ಉಬ್ಬಿದ್ದೂ ಇರುತ್ತದೆ. ಒಡೆಯುವಂತೆ ನೋಯುತ್ತದೆ. ಮೈ ಚುಚ್ಚುವಿಕೆ, ಆಕಳಿಕೆ, ಒಮ್ಮೆಲಿ ನೋವು, ಅರುಚಿ, ದಾಹ, ಉರುಪು, ನೀರ ಡಿಕೆ, ಜ್ವರ, ನಿದ್ರಾಭಾವಗಳನ್ನು ಉಂಟುಮಾಡುವದಲ್ಲದೆ ಗಟ್ಟಿ ತುಪ್ಪವನ್ನು (ಅಲ್ಲಿ ಇಟ್ಟರೆ) ಕರಗಿಸುತ್ತದೆ. ವ್ರಣದಂತೆ ಸ್ಪರ್ಶ ಮಾಡಗೊಡುವದಿಲ್ಲ. (೪)

**ಪಕ್ವೇಽಲ್ಪವೇಗಿತಾ ಮ್ಲಾನಿಃ ಪಾಂಡುತಾ ವಲಿಸಂಭವಃ ||**
**ನಾಮೋಽಂತೇಷೂನ್ನತಿರ್ಮಧ್ಯೇ ಕಂಡೂಶೋಫಾದಿಮಾರ್ದವಮ್ ||೫||**
**ಸ್ಪೃಷ್ಟೇ ಪೂಯಸ್ಯ ಸಂಚಾರೋ ಭವೇದ್ಬಸ್ತಾವಿವಾಂಭಸಃ**

ಅರ್ಥಃ— ಬಾವು ಪಕ್ವವಾಗಲು ವೇದನೆ ಕಡಿಮೆಯಾಗುವದು, ಬಾಡುವದು, ಬೆಳ್ಳಗಾಗುವದು. ಮತ್ತು ಮಡಿಕೆಗಳುಂಟಾಗುವವು. ಸುತ್ತಲೂ ತೆಗ್ಗು ಇದ್ದು ನಡುವೆ ಎತ್ತರ ಕಾಣುವದು. ತಿಂಡಿ ಬಾವು ಮುಂತಾದವುಗಳು ಕಡಿಮೆಯಾಗುವವು. ಪಕಾಲಿಯಲ್ಲಿಯ ನೀರಿನಂತೆ ಒತ್ತಲು ಕೀವು ಅತ್ತಿತ್ತ ಸರಿದಾಡುವದು. (೫||)

**ಶೂಲಂ ನರ್ತೇಽನಿಲಾದ್ದಾಹಃ ಪಿತ್ತಾಚ್ಛೋಫಃ ಕಫೋದಯಾತ್ ||೬||**
**ರಾಗೋ ರಕ್ತಾಚ್ಚ ಪಾಕಃ ಸ್ಯಾದತೋ ದೋಷೈಃ ಸಶೋಣಿತೈಃ ||**

ಅರ್ಥಃ—ವಾಯುವಿನ ಹೊರತು ಶೂಲವೂ,ಪಿತ್ತದ ಹೊರತು ದಾಹವೂ ಕಫದ ಹೊರ್ತು ಬಾವೂ, ರಕ್ತದ ಹೊರ್ತು ಕೆಂಪು ಬಣ್ಣವೂ ಇಲ್ಲದ್ದರಿಂದ ರಕ್ತ ಕೂಡಿದ ಮೂರು ದೋಷಗಳಿಂದ ಪಾಕವಾಗುತ್ತದೆ. (೬||)

**ಪಾಕೇಽತಿವೃತ್ತೇ ಸುಷಿರಸ್ತನುತ್ವಗ್ದೋಷಭಕ್ಷಿತಃ ||೭||**
**ವಲೀಭಿರಾಚಿತಃ ಶ್ಯಾವಃ ಶೀರ್ಯಮಾಣತನೂರುಹಃ ||**

ಅರ್ಥ:— ಪಾಕವು ಬಹಳವಾಗಲು ಒಳಗಿನ ಭಾಗವು ಪೊಳ್ಳಾಗುತ್ತದೆ. ದೋಷದ ತಿನ್ನುವಿಕೆಯಿಂದ ತ್ವಚೆಯು ತೆಳ್ಳಗಾಗುತ್ತದೆ. ಮಡಿಕೆಗಳು ಬೀಳುತ್ತವೆ. ಕಪ್ಪಾಗುತ್ತದೆ. ಮೇಲಿನ ಕೂದಲುಗಳು ಉದರುತ್ತವೆ. (೭॥)

**ಕಫಜೇಷು ತು ಶೋಫೇಷು ಗಂಭೀರಂ ಪಾಕನೇತ್ಯಸೃಕ್ ॥೮॥**

**ಪಕ್ವಲಿಂಗಂ ತತೋಽಸ್ಪಷ್ಟಂ ಯತ್ರ ಸ್ಯಾಚ್ಛೀತಶೋಫತಾ ॥**
**ತ್ವಕ್ಸಾವರ್ಣ್ಯಂ ರುಜೋಽಲ್ಪತ್ವಂ ಘನಸ್ಪರ್ಶತ್ವಮಶ್ಮವತ್ ॥೯॥**
**ರಕ್ತಪಾಕಮಿತಿ ಬ್ರೂಯಾತ್ತಂ ಪ್ರಾಜ್ಞೋ ಮುಕ್ತಸಂಶಯಃ**

ಅರ್ಥಃ— ಕಫದ ಬಾವಿನಲ್ಲಿ ರಕ್ತವು ಬಹಳ ಗುಂಬಿನಲ್ಲಿ ಪಾಕವಾಗುವದು. ಆ ಕಾರಣ ಪಕ್ವ ಚಿನ್ಹಗಳು ಸ್ಪಷ್ಟವಾಗಿರುವದಿಲ್ಲ. ಬಾವು ಶೀತವೂ ತ್ವಚದ ವರ್ಣದ್ದೂ ಸ್ವಲ್ಪ ಬೇನೆಯುಳ್ಳದ್ದೂ ಕಲ್ಲಿನಂತೆ ಕಠಿಣ ಹತ್ತುವದೂ ಆಗಿರುವದು. ಪಂಡಿತರು ಅದಕ್ಕೆ ನಿಃಸಂಶಯವಾಗಿ ರಕ್ತಪಾಕವೆಂದು ಅನ್ನತಕ್ಕದ್ದು. (೯॥)

**ಅಲ್ಪಸತ್ವೇಽಬಲೇ ಬಾಲೇ ಪಾಕಾದ್ವಾತ್ಯರ್ಥಮುದ್ಧತೇ ॥೧೦॥**
**ದಾರಣಂ ಮರ್ಮಸಂಧ್ಯಾದಿಸ್ಥಿತೇ ಚಾನ್ಯತ್ರ ಪಾಟನಮ್ ॥**

ಅರ್ಥಃ— ಅಂಜುಬುರುಕ ಅಶಕ್ತ ಹುಡುಗ ಇವರ ಬಾವನ್ನೂ ಅತಿಶಯ ಹಣ್ಣಾದ ಬಾವನ್ನೂ ಮರ್ಮಸಂಧಿ ಮುಂತಾದವುಗಳಲ್ಲಿದ್ದ ಬಾವನ್ನೂ ಔಷಧಗಳಿಂದ ಒಡೆಯಬೇಕು. ಉಳಿದವೆಲ್ಲವನ್ನು ಶಸ್ತ್ರಗಳಿಂದ ಸೀಳಬೇಕು. (೧೦॥)

**ಆಮಚ್ಛೇದೇ ಸಿರಾಸ್ನಾಯುವ್ಯಾಪದೋಽಸೃಗತಿಸೃತಿಃ ॥೧೧॥**
**ರುಜೋಽತಿವೃದ್ಧಿರ್ದರಣಂ ವಿಸರ್ಪೋ ವಾ ಕ್ಷತೋದ್ಭವಃ ॥**

ಅರ್ಥ:— ಆಮಬಾವಿನ ಛೇದ ಮಾಡಲು ಸಿರಾ ಸ್ನಾಯುಗಳು ನಾಶವಾಗುವವು. ರಕ್ತಸ್ರಾವವಾಗುವದು, ನೋವು ಹೆಚ್ಚುವದು, ತ್ವಚೆಯು ಸೀಳುವದು, ಮತ್ತು ಕ್ಷತಜನ್ಯ ವಿಸರ್ಪ ಉಂಟಾಗುವದು. (ಆದ ಕಾರಣ ಆಮಬಾವಿನ ಛೇದ ಮಾಡಬಾರದು.) (೧೧॥)

ತಿಷ್ಠನ್ನಂತಃ ಪುನಃ ಪೂಯಃ ಸಿರಾಸ್ನಾಯ್ವಸೃಗಾಮಿಷಮ್ ||೧೨||
ವಿವೃದ್ಧೋ ದಹತಿ ಕ್ಷಿಪ್ರಂ ತೃಣೋಲಪಮಿವಾನಲಃ ||

ಅರ್ಥಃ— ಒಳಗೆ ಕೀವು ಉಳಿದರೆ ಅದು ಬೆಳೆದು ಬೆಂಕಿಯು ಹುಲ್ಲಿನ ಸಮೂಹವನ್ನು ಸುಡುವಂತೆ ಸಿರಾ ಸ್ನಾಯು ರಕ್ತ ಮಾಂಸಗಳನ್ನು ತೀವ್ರವಾಗಿ ಸುಡುತ್ತದೆ. (೧೨||)

ಯಚ್ಛಿನತ್ಯಾಮಮಜ್ಞಾನಾದ್ಯಶ್ಚ ಪಕ್ವಮುಪೇಕ್ಷತೇ ||೧೩||
ಶ್ವಪಚಾವಿವ ವಿಜ್ಞೇಯೌ ತಾವನಿಶ್ಚಿತಕಾರಿಣೌ ||

ಅರ್ಥಃ— ಯಾವನು ಅಜ್ಞಾನದಿಂದ ಅಪಕ್ವ ವ್ರಣವನ್ನು ಕೊಯ್ಯುತ್ತಾನೋ ಮತ್ತು ಯಾವನು ಪಕ್ವವನ್ನು ಉಪೇಕ್ಷಿಸುತ್ತಾನೋ ಅವರಿಬ್ಬರು ಅವಿಚಾರಿಗಳು. ಆದ್ದರಿಂದ ಚಾಂಡಾಲರೆಂದು ತಿಳಿಯಬೇಕು. (೧೩||)

(ಅ) ಶಸ್ತ್ರಕರ್ಮ ವಿಧಿಯನ್ನು ಹೇಳುತ್ತಾರೆ.

ಪ್ರಾಕ್ ಶಸ್ತ್ರಕರ್ಮಣಶ್ಚೇಷ್ಟಂ ಭೋಜಯೇದನ್ನಮಾತುರಮ್ ||೧೪||
ಪಾನಪಂ ಪಾಯಯೇನ್ಮದ್ಯಂ ತೀಕ್ಷ್ಣಂ ಯೋ ವೇದನಾಕ್ಷಮಃ ||
ನ ಮೂರ್ಛತ್ಯನ್ನಸಂಯೋಗಾನ್ಮತ್ತಃ ಶಸ್ತ್ರಂ ನ ಬುಧ್ಯತೇ ||೧೫||
ಅನ್ಯತ್ರ ಮೂಢಗರ್ಭಾಶ್ಮಮುಖರೋಗೋದರಾತುರಾತ್ ||

ಅರ್ಥಃ— ಶಸ್ತ್ರ ಕರ್ಮಕ್ಕಿಂತ ಮೊದಲು ರೋಗಿಗೆ ಅವನು ಬೇಡಿದ ಆಹಾರವನ್ನು ಕೊಡಬೇಕು. ಶಸ್ತ್ರದ ವೇದನೆಯು ಸಹನವು ಯಾವನಿಗೆ ಆಗುವದಿಲ್ಲವೋ ಅವನು ಮದ್ಯಪಾನಕ್ಕೆ ಯೋಗ್ಯನಿದ್ದ ಪಕ್ಷದಲ್ಲಿ ಮದ್ಯವನ್ನು ಕೊಡಬೇಕು. ಅನ್ನ ಕೊಡೋಣದರಿಂದ ರೋಗಿಯು ಮೂರ್ಛಿತನಾಗುವದಿಲ್ಲ. ಮತ್ತು ಮದ್ಯದಿಂದ ಶಸ್ತ್ರದ ವೇದನೆ ಗೊತ್ತಾಗುವದಿಲ್ಲ. ಆದರೆ ಮೂಢ-ಗರ್ಭ ಮೂತ್ರಾಶ್ಮರೀ ಮು ರೋಗ ಉದರ-ರೋಗಗಳಲ್ಲಿ ಮಾತ್ರ ಅನ್ನ ಮತ್ತು ಮದ್ಯ ಕೊಡಬಾರದು. (೧೫||)

ಶಸ್ತ್ರ-ಕರ್ಮವಿಧಿಯನ್ನು ಹೇಳುತ್ತಾರೆ.

ಅಥಾಹೃತೋಪಕರಣೋ ವೈದ್ಯಃ ಪ್ರಾಙ್ಮುಖಮಾತುರಮ್ ||೧೬||

ಸಂಮುಖೋ ಯಂತ್ರಯಿತ್ವಾಽಽಶು ನ್ಯಸ್ಯೇನ್ಮರ್ಮಾದಿ ವರ್ಜಯನ್ ||
ಅನುಲೋಮಂ ಸುನಿಶಿತಂ ಶಸ್ತ್ರಮಾಪೂಯದರ್ಶನಾತ್ ||೧೭||

ಸಕೃದೇವಾಹರೇತ್ತಚ್ಚ..............................

ಅರ್ಥಃ— ಆ ಮೇಲೆ ವೈದ್ಯನು ಯಂತ್ರ ಔಷಧ ಮುಂತಾದ ಎಲ್ಲ ಉಪಕರಣಗಳನ್ನು ಸಿದ್ಧ ಮಾಡಿಕೊಂಡು ರೋಗಿಯನ್ನು ಪೂರ್ವಾಭಿಮುಖವಾಗಿ ಕೂಡಿಸಿ ತಾನು ಎದುರು ಕೂತು ಅವನನ್ನು ಗಟ್ಟಿಯಾಗಿ ಹಿಡಿದು ಮರ್ಮಸ್ಥಾನಗಳನ್ನು ಬಿಟ್ಟು ತೀಕ್ಷ್ಣವಾದ ಶಸ್ತ್ರವನ್ನು ಸರಳವಾಗಿ ಕೀವು ಕಾಣುವ ವರೆಗೆ ಒಮ್ಮೆಲೆ ಚುಚ್ಚಬೇಕು. ಮತ್ತು ಅದನ್ನು ಒಮ್ಮೆಲೆ ತೆಗೆಯಬೇಕು. (೧೭)

.ಪಾಕೇ ತು ಸುಮಹತ್ಯಪಿ
ಪಾಟಯೇದ್ದ್ವ್ಯಂಗುಲಂ ಸಮ್ಯಗ್ದ್ವ್ಯಂಗುಲತ್ರ್ಯಂಗುಲಾಂತರಮ್ ||೧೮||

ಏಷಿತ್ವಾ ಸಮ್ಯಗೇಷಿಣ್ಯಾ ಪರಿತಃ ಸುನಿರೂಪಿತಮ್ ||
ಅಂಗುಲೀನಾಲವಾಲೈರ್ವಾ ಯಥಾದೇಶಂ ಯಥಾಶಯಮ್ ||೧೯||

ಅರ್ಥಃ— ಪಾಕವು ದೊಡ್ಡದಿದ್ದರೂ ಎರಡು ಬೆರಳಿನಷ್ಟು ಸೀಳಬೇಕು ಅವಶ್ಯಕಂಡರೆ ಆ ಮೇಲೆ ಎರಡು ಮೂರು ಬೆರಳು ಅಂತರದ ಮೇಲೆ ಪುನಃ ಸೀಳಬೇಕು ಏಷಿಣಿ, ಬೆರಳು, ದೇಟು, ಅಥವಾ (ಕರಡಿ ಮುಂತಾದವುಗಳ) ಕೂದಲುಗಳಿಂದ ಚನ್ನಾಗಿ ವ್ರಣಸ್ಥಾನ ಮತ್ತು ಕಿವೀನ ಆಶ್ರಯವನ್ನು ಪರೀಕ್ಷಿಸಬೇಕು.

ಯತೋ ಗತಾಂ ಗತಿಂ ವಿದ್ಯಾದುತ್ಸಂಗೋ ಯತ್ರ ಯತ್ರ ಚ||
ತತ್ರ ತತ್ರ ವ್ರಣಂ ಕುರ್ಯಾತ್ಸುವಿಭಕ್ತಂ ನಿರಾಶಯಮ್ ||೨೦||

ಆಯತಂ ಚ ವಿಶಾಲಂ ಚ ಯಥಾ ದೋಷೋ ನ ತಿಷ್ಠತಿ ||

ಅರ್ಥಃ—ಯಾವ ಕಡೆಗೆ ಕೀವು ನಾಡೀವ್ರಣ ಮಾಡಿರುವದೋ ಮತ್ತು ಎಲ್ಲಿ ಎಲ್ಲಿ ಉಬ್ಬಿರುವದೋ ಅಲ್ಲಲ್ಲಿ ಕಿವೀಗೆ ಆಶ್ರಯವಿರದಂತೆ ಚನ್ನಾಗಿ

ಕೊಯ್ದು ಉದ್ದವೂ ಮತ್ತು ಅಗಲವೂ ಆದಂಥ ಬಾಯಿ ಮಾಡಬೇಕು. ಅಂದರೆ ಒಳಗೆ ದೋಷವಿರಲಾರದು. (೨೦॥)

**ಶೌರ್ಯಮಾಶುಕ್ರಿಯಾ ತೀಕ್ಷ್ಣಂ ಶಸ್ತ್ರಮಸ್ವೇದವೇಪಥೂ ॥೨೧॥**
**ಅಸಮ್ಮೋಹಶ್ಚ ವೈದ್ಯಸ್ಯ ಶಸ್ತ್ರಕರ್ಮಣಿ ಶಸ್ಯತೇ ॥**

ಅರ್ಥಃ— ಶೌರ್ಯ, ಒಳ್ಳೇ ತೀವ್ರವಾಗಿ ಕೊಯ್ಯೋಣ, ತೀಕ್ಷ್ಣ ಶಸ್ತ್ರ, ಬೆವರು ಬಾರದೇ ಇರೋಣ, ಕೈ ನಡಗದೇಇರೋಣ, ಭ್ರಾಂತಿ ಬಾರದೇ ಇರೋಣ-ಇವು ಶಸ್ತ್ರವೈದ್ಯನಲ್ಲಿ ಮುಖ್ಯವಾಗಿ ಇರಬೇಕಾದ ಗುಣಗಳು(೨೧॥)

**ತಿರ್ಯಕ್ ಛಿಂದ್ಯಾಲ್ಲಲಾಟಭ್ರೂದಂತವೇಷ್ಟಕಜತ್ರುಣಿ ೨೨॥**
**ಕುಕ್ಷಿಕಕ್ಷಾಕ್ಷಿಕೂಟೌಷ್ಠಕಪೋಲಗಲವಂಕ್ಷಣೇ ॥**
**ಅನ್ಯತ್ರ ಛೇದನಾತ್ತಿರ್ಯಕ್ ಸಿರಾಸ್ನಾಯುವಿಪಾಟನಮ್ ॥೨೩॥**

ಅರ್ಥಃ— ಹಣೆ, ಹುಬ್ಬು, ಒಸಡೆ, ಕುತ್ತಿಗೆ ಹೆಗಲುಗಳ ಸಂಧಿ, ಬಗಲು, ಪಕ್ಕಡೆ, ಕಣ್ಣಿನ ಗೂಡು, ತುಟಿ, ಗೆಲ್ಲ, ಕುತ್ತಿಗೆ, ಗೆಜ್ಜೆಗಳಲ್ಲಿ ಡೊಂಕಾಗಿ ಕೊಯ್ಯಬೇಕು. ಬೇರೆ ಕಡೆಯಲ್ಲಿ ಡೊಂಕ ಕೊಯ್ದರೆ ಸಿರಾ ಸ್ನಾಯುಗಳು ಕತ್ತರಿಸುತ್ತವೆ. (೨೩)

**ಶಸ್ತ್ರೇಽವಚಾರಿತೇ ವಾಗ್ಭಿಃ ಶೀತಾಂಭೋಭಿಶ್ಚ ರೋಗಿಣಮ್ ॥**
**ಆಶ್ವಾಸ್ಯ ಪರಿತೋಽಂಗುಲ್ಯಾ ಪರಿಪೀಡ್ಯ ವ್ರಣಂ ತತಃ ॥೨೪॥**
**ಕ್ಷಾಲಯಿತ್ವಾ ಕಷಾಯೇಣ ಪ್ಲೋತೇನಾಂಭೋಽಪನೀಯ ಚ ॥**
**ಗುಗ್ಗುಲ್ವಗುರುಸಿದ್ಧಾರ್ಥಹಿಂಗುಸರ್ಜರಸಾನ್ವಿತೈಃ ॥೨೫॥**
**ಧೂಪಯೇತ್ಪಟುಷಡ್ಗ್ರಂಥಾನಿಂಬಪತ್ರೈರ್ಘೃತಪ್ಲುತೈಃ ॥**

ಅರ್ಥಃ— ಕೊಯ್ದನಂತರ ರೋಗಿಯನ್ನು ಸವಿ ಮಾತುಗಳಿಂದಲೂ ತಣ್ಣೀರಿನಿಂದಲೂ ಸಮಾಧಾನಮಾಡಿ ಆ ಮೇಲೆ ಬೆರಳಿನಿಂದ ವ್ರಣವನ್ನು ಹಿಚುಕಿ ಸ್ತಂಭಕ ಔಷಧದಿಂದ ತೊಳೆದು ಅರಿವೆಯಿಂದ ನೀರನ್ನು ಒಸ

ಗುಗ್ಗುಳು, ಅಗರು, ಸಾಸಿವೆ, ಇಂಗು, ರಾಳ, ಸೈಂಧವ, ಬಜೆ, ಬೇವಿನ ಎಲೆಗಳಿಗೆ ತುಪ್ಪ ಹಚ್ಚಿ ಅವುಗಳ ಧೂಪ ಕೊಡಬೇಕು. (೨೫)

**ತಿಲಕಲ್ಕಾಜ್ಯಮಧುಭಿರ್ಯಥಾಸ್ವಂ ಭೇಷಜೇನ ಚ ॥೨೬॥**

**ದಿಗ್ಧಾಂ ವರ್ತಿಂ ತತೋ ದದ್ಯಾತ್ತೈರೇವಾಚ್ಛಾದಯೇಚ್ಚ ತಾಮ್ ॥**
**ಘೃತಾಕ್ತೈಃ ಸಕ್ತುಭಿಶ್ಚೋರ್ಧ್ವಂ ಘನಾಂ ಕವಲಿಕಾಂ ತತಃ ॥೨೭॥**

**ನಿಧಾಯ ಯುಕ್ತ್ಯಾ ಬಧ್ನೀಯಾತ್ಪಟ್ಟೇನ ಸುಸಮಾಹಿತಮ್ ॥**
**ಪಾರ್ಶ್ವೇ ಸವ್ಯೇಽಪಸವ್ಯೇ ವಾ ನಾಽಧಸ್ತಾನ್ನೈವ ಚೋಪರಿ ॥೨೮॥**

ಅರ್ಥಃ— ಆ ಮೇಲೆ ಆಯಾ ವ್ರಣಗಳಿಗೆ ಹೇಳಿದ ಔಷಧಗಳಿಂದಲೂ ಮತ್ತು ತಿಲಕಲ್ಕ ತುಪ್ಪ ಜೇನತುಪ್ಪಗಳಿಂದ ಲೇಪಿಸಿದ ಬತ್ತಿಯನ್ನು ವ್ರಣದಲ್ಲಿ ಇಟ್ಟು ಅದೇ ಔಷಧಗಳಿಂದ ಅದರ ಬಾಯಿಯನ್ನು ಮುಚ್ಚಿ ಸತುವಿನ ಹಿಟ್ಟು-ತುಪ್ಪದಲ್ಲಿ ಕೂಡಿಸಿ ಮೇಲೆ ಹಚ್ಚಬೇಕು. ಅದರ ಮೇಲೆ ಅರಿವೆಯ ಗಳಿಗೆಯನ್ನಿಟ್ಟು ಸರಿಯಾಗಿ ಅರಿವೆಯ ಪಟ್ಟಿಯಿಂದ ಲಕ್ಷಗೊಟ್ಟು ಯುಕ್ತಿಯಿಂದ ಚನ್ನಾಗಿ ಕಟ್ಟಬೇಕು. ಎಡಕ್ಕೆ ಅಥವಾ ಬಲಕ್ಕೆ ಕಟ್ಟಬೇಕು. ಕೆಳಗೆ ಅಥವಾ ಮೇಲೆ ಕಟ್ಟಬಾರದು. (೨೮)

**ಶುಚಿಸೂಕ್ಷ್ಮದೃಢಾಃ ಪಟ್ಟಾಃ ಕವಲ್ಯಃ ಸವಿಕೇಶಿಕಾಃ ॥**
**ಧೂಪಿತಾ ಮೃದವಃ ಶ್ಲಕ್ಷ್ಣಾಃ ನಿರ್ವಲೀಕಾ ವ್ರಣೇ ಹಿತಾಃ ॥೨೯॥**

ಅರ್ಥಃ— ವ್ರಣಕ್ಕೆ ಹಾಕುವ ಅರಿವೆಗಳು ಬಹಳ ಸ್ವಚ್ಛ, ತೆಳ್ಳಗೆ ಮತ್ತು ಗಟ್ಟಿಯಾಗಿರಬೇಕು. ಗಳಿಗೆಗಳು ಮತ್ತು ಬತ್ತಿಗಳು ಧೂಪ ಕೊಟ್ಟಂಥವೂಮತ್ತುಮೃದು ನುಣುಪಾದವೂ ಮಡಿಕೆ ಇಲ್ಲದ ವೂಇರಬೇಕು. (೨೯)

**ಕುರ್ವೀತಾಽನಂತರಂ ತಸ್ಯ ರಕ್ಷಾಂ ರಕ್ಷೋನಿಷಿದ್ಧಯೇ ॥**
**ಬಲಿಂ ಚೋಪಹರೇತ್ತೇಭ್ಯಃಸದಾ ಮೂರ್ಧ್ನಾ ಚ ಧಾರಯೇತ್ ॥೩೦॥**

**ಲಕ್ಷ್ಮೀಂ ಗುಹಾಮತಿಗುಹಾಂ ಜಟಿಲಾಂ ಬ್ರಹ್ಮಚಾರಿಣೀಮ್ ॥**
**ವಚಾಂ ಛತ್ರಾಮತಿಚ್ಛತ್ರಾಂ ದೂರ್ವಾಂ ಸಿದ್ಧಾರ್ಥಕಾನಪಿ ॥೩೧॥**

ಅರ್ಥ:— ಆಮೇಲೆ ರಾಕ್ಷಸರ ಪೀಡೆಯಾಗಬಾರದೆಂದು ಅದರ ರಕ್ಷಣೆ ಮಾಡಬೇಕು, ಆ ಮೇಲೆ ಅವರಿಗೆ ಬಲಿ ಕೊಡಬೇಕು. ಮತ್ತು ತಲೆಯ ಮೇಲೆ ಯಾವಾಗಲೂ ಬನ್ನಿ, ಒಂದೆಲೆಹೊನ್ನಿ, ಮೂರೆಲೆಹೊನ್ನಿ, ಜಟಾಮಾಂಸಿ, ಬ್ರಾಹ್ಮೀ, ಬಜಿ, ಬಡೆಸೋಪ, ಸಬ್ಬಸಗಿ, ಕರಿಕೆ, ಸಾಸಿವೆ ಗಳನ್ನು ಧರಿಸಬೇಕು. (೩೧)

**ತತಃ ಸ್ನೇಹದಿನೇಹೋಕ್ತಂ ತಸ್ಯಾಽಽಚಾರಂ ಸಮಾದಿಶೇತ್ ||**
**ದಿವಾಸ್ವಪ್ನೋ ವ್ರಣೇ ಕಂಡೂರಾಗರುಕ್ ಶೋಫಪೂಯಕೃತ್ ||೩೨||**

ಅರ್ಥ:— ಆ ಮೇಲೆ ಸ್ನೇಹ ತಕ್ಕೊಂಡ ದಿವಸ ಮಾಡಬೇಕಾದ ಆಚಾರವನ್ನು ಮಾಡಬೇಕು. ಹಗಲು ನಿದ್ರೆಯು ವ್ರಣದಲ್ಲಿ ತಿಂಡಿ, ಕೆಂಪು ಬಣ್ಣ, ಹೊಡೆತ, ಬಾವು, ಕೀವುಗಳನ್ನುಂಟುಮಾಡುವದು. (೩೨)

**ಸ್ತ್ರೀಣಾಂ ತು ಸ್ಮೃತಿಸಂಸ್ಪರ್ಶದರ್ಶನೈಶ್ಚಲಿತಸ್ರುತೇ ||**
**ಶುಕ್ರೇ ವ್ಯವಾಯಜಾನ್ ದೋಷಾನಸಂಸರ್ಗೇಽಪ್ಯವಾಪ್ನುಯಾತ್ ||೩೩||**

ಅರ್ಥ:— ಹೆಂಗಸರ ಸ್ಮರಣ ಸ್ಪರ್ಶ ದರ್ಶನಗಳಿಂದ ಶುಕ್ರವು ಸ್ಥಾನಭ್ರಷ್ಟವಾಗಿ ಸೋರಲು ಸಂಸರ್ಗವಾಗದಿದ್ದರೂ ಸಂಭೋಗ–ಜನ್ಯ ವಿಕಾರಗಳುಂಟಾಗುವವು. (೩೩)

**ಭೋಜನಂ ಚ ಯಥಾಸಾತ್ಮ್ಯಂ ಯವಗೋಧೂಮಷಷ್ಟಿಕಾಃ ||**
**ಮಸೂರಮುದ್ಗತುವರೀಜೀವಂತೀಸುನಿಷಣ್ಣಕಾಃ ||೩೪||**

**ಬಾಲಮೂಲಕವಾರ್ತಾಕತಂಡುಲೀಯಕವಾಸ್ತುಕಮ್ ||**
**ಕಾರವೇಲ್ಲಕಕರ್ಕೋಟಪಟೋಲಕಟುಕಾಫಲಮ್ ||೩೫||**

**ಸೈಂಧವಂ ದಾಡಿಮಂ ಧಾತ್ರೀ ಘೃತಂ ತಪ್ತಹಿಮಂ ಜಲಮ್ ||**
**ಜೀರ್ಣಶಾಲ್ಯೋದನಂ ಸ್ನಿಗ್ಧಮಲ್ಪಮುಷ್ಣಂ ದ್ರವೋತ್ತರಮ್ ||೩೬||**

**ಭುಂಜಾನೋ ಜಾಂಗಲೈರ್ಮಾಂಸೈಃ ಶೀಘ್ರಂ ವ್ರಣಮಪೋಹತಿ ||**

ಅರ್ಥ:—ಜವೆಗೋಧಿ, ಅಕ್ಕಿ, ಚೆನ್ನಂಗಿ, ಹೆಸರು, ತೊಗರಿ, ಶೀಹಾಲಿ, ಪಾಂಡವರ ಹರಿವೆ, ಎಳೆಮೂಲಂಗಿ, ಬದನೆಕಾಯಿ, ಕಿರಸಾಲಿ, ಚಕೋತ, ಹಾಗಲಕಾಯಿ, ಕರ್ಕೋಟ, ಪಡವಲಕಾಯಿ ಕಟುಕಾಫಲ, ಸೈಂಧವ, ದಾಳಿಂಬ, ನೆಲ್ಲಿ, ತುಪ್ಪ ಕಾದಾರಿದ ನೀರು, ಹಳೇ ಅಕ್ಕಿ, ಅನ್ನ ಸ್ನಿಗ್ಧ ಅಲ್ಪ ಬಿಸಿ, ದ್ರವ ಹೆಚ್ಚಾಗಿರುವ ಅನ್ನಗಳಲ್ಲಿ ತನಗೆ ಮಾನಿಸುವದನ್ನು ಜಾಂಗಲ ಮಾಂಸದೊಡನೆ ತಿನ್ನಲು ವ್ರಣವು ಮಾಯುವದು. (೩೬||)

**ಅಶಿತಂ ಮಾತ್ರಯಾ ಕಾಲೇ ಷಥ್ಯಂ ಯಾತಿ ಜರಾಂ ಸುಖಮ್** ।೩೭||

**ಅಜೀರ್ಣೇ ತ್ವನಿಲಾದೀನಾಂ ವಿಭ್ರಮೋ ಬಲವಾನ್ ಭವೇತನ್** ॥

**ತತಃ ಶೋಫರುಜಾಪಾಕದಾಹಾ .ಾಹಾನವಾಪ್ನುಯಾತ್** ||೩೮||

ಅರ್ಥ:— ಯೋಗ್ಯ ಕಾಲದಲ್ಲಿ ಯೋಗ್ಯ ಪ್ರಮಾಣದಿಂದ ತಿಂದ ಪಥ್ಯವಾದ ಆಹಾರವು ಸುಲಭವಾಗಿ ಪಚನವಾಗುತ್ತದೆ. ಅಜೀರ್ಣವಾದರೆ ವಾತ ಮುಂತಾದವು ಅತಿಶಯ ಕುಪಿತವಾಗುತ್ತವೆ. ಆಮೇಲೆ ಬಾವು ಚುಚ್ಚು ವಿಕೆ ಪಾಕ ದಾಹ ಹೊಟ್ಟೆಯುಬ್ಬೋಣ ಉಂಟಾಗುತ್ತದೆ (೩೮)

**ನವಧಾನ್ಯಂ ತಿಲಾನ್ ಮಾಷಾನ್ ಮದ್ಯಂ ಮಾಂಸಮಜಾಂಗಲಮ್** ।

**ಕ್ಷೀರೇಕ್ಷುವಿಕೃತೀರಮ್ಲಂ ಲವಣಂ ಕಟುಕಂ ತ್ಯಜೇತ್** ।೩೯||

**ಯಚ್ಚಾನ್ಯದಪಿ ವಿಷ್ಟಂಭಿ ವಿದಾಹಿ ಗುರು ಶೀತಲಮ್** ॥

**ವರ್ಗೋಽಯಂ ನವಧಾನ್ಯಾದಿರ್ವ್ರಣಿನಃ ಸರ್ವದೋಷಕೃತ್** ||೪೦||

ಅರ್ಥ:— ಹೊಸಧಾನ್ಯ, ಎಳ್ಳು, ಉದ್ದು, ಮದ್ಯ, ಅಜಾಂಗಲ ಮಾಂಸ. ಹಾಲು ಮತ್ತು ಕಬ್ಬುಗಳ ವಿಕಾರ, ಹುಳಿ, ಉಪ್ಪು, ಕಾರಗಳನ್ನು ಬಿಡಬೇಕು. ಇದರಂತೆ ಸ್ತಂಭಕ ವಿದಾಹಿ ಜಡ ಶೀತಲವಾದ ಬೇರೆ ಪದಾರ್ಥ ಗಳನ್ನು ಬಿಡಬೇಕು. ಈ ನವಧಾನ್ಯಾದಿವರ್ಗವು ವ್ರಣವುಳ್ಳ ಮನುಷ್ಯನ ಎಲ್ಲ ದೋಷಗಳನ್ನು ಹೆಚ್ಚಿಸುವದು. (೪೦)

**ಮದ್ಯಂತೀಕ್ಷ್ಣೋಷ್ಣರೂಕ್ಷಾಮ್ಲಮಾಶು ವ್ಯಾಪಾದಯೇದ್ ವ್ರಣಮ್**॥

ಅರ್ಥಃ— ಮದ್ಯವು ತೀಕ್ಷ್ಣ ಉಷ್ಣ ರುಕ್ಷ ಮತ್ತು ಹುಳಿ ಇದ್ದದ ರಿಂದ ವ್ರಣವನ್ನು ತೀವ್ರ ಕೆಡಿಸುವದು. ೪೦||)

ವಾಲೋಶೀರೈಶ್ಚ ವೀಜ್ಯೇತ ನ ಚೈನಂ ಪರಿಘಟ್ಟಯೇತ್ ||೪೧||
ನ ತುದೇನ್ನ ಚ ಕಂಡೂಯೇಚ್ಛೇಷ್ಟಮಾನಶ್ಚ ಪಾಲಯೇತ್ ||
ಸ್ನಿಗ್ಧವೃದ್ಧದ್ವಿಜಾತೀನಾಂ ಕಥಾಃ ಶೃಣ್ವನ್ಮನಃ ಪ್ರಿಯಾಃ |೪೨|
ಆಶಾವಾನ್ ವ್ಯಾಧಿಮೋಕ್ಷಾಯ ಕ್ಷಿಪ್ರಂ ವ್ರಣಮಪೋಹತಿ ||

ಅರ್ಥ:— ಕೂದಲಿನ ಅಥವಾ ಬಾಳದ ಬೇರಿನ ಬೀಸಣಿಕೆಗಳಿಂದ ಗಾಳಿ ಹಾಕಬೇಕು. ಅದಕ್ಕೆ ಪೆಟ್ಟು ತಗಲಿಸಬಾರದು, ನೋವಾಗಗೊಡ ಬಾರದು, ತುರಿಸಬಾರದು, ಅಪಾಯವಾಗದಂತೆ ಅದನ್ನು ಕಾಯಬೇಕು. ಪ್ರಿಯ ಮತ್ತು ವೃದ್ಧ ಜನರ ಮತ್ತು ಬ್ರಾಹ್ಮಣರ ಮನೋಹರವಾದ ಕತೆಗಳನ್ನು ಕೇಳಬೇಕು. ನೆಟ್ಟಗಾಗುವದೆಂಬ ಆಶೆ ಇರಬೇಕು. ಅಂದರೆ ವ್ರಣವು ತೀವ್ರ ನೆಟ್ಟಗಾಗುವದು. (೪೨||)

ತೃತೀಯೇಽಹ್ನಿ ಪುನಃ ಕುರ್ಯಾದ್ವ್ರಣಕರ್ಮ ಚ ಪೂರ್ವವತ್ ||೪೩||
ಪ್ರಕ್ಷಾಲನಾದಿ, ದಿವಸೇ ದ್ವಿತೀಯೇ ನಾಚರೇತ್ ತಥಾ ||
ತೀವ್ರವ್ಯಥೋ ವಿಗ್ರಥಿತಶ್ಚಿರಾತ್ಸಂರೋಹತಿ ವ್ರಣಃ ||೪೪||

ಅರ್ಥಃ— ಮೂರನೇ ದಿವಸ ಪುನಃ ತೊಳೆಯೋಣ ಮುಂತಾದ ವ್ರಣಕರ್ಮಗಳನ್ನು ಮಾಡಬೇಕು. ಎರಡನೇ ದಿವಸ ಅದನ್ನು ಮಾಡಬಾರದು. ಹಾಗೆ ಮಾಡಿದರೆ ಬೇನೆಯು ಹೆಚ್ಚಾಗುವದು. ವ್ರಣದಲ್ಲಿ ಗಂಟುಗಳಾಗುವವು. ತೀವ್ರ ಮಾಯದು. (೪೪)

ಸ್ನಿಗ್ಧಾಂ ರೂಕ್ಷಾಂ ಶ್ಲಥಾಂ ಗಾಢಾಂ ದುರ್ನ್ಯಸ್ತಾಂ ಚ ವಿಕೇಶಿಕಾಮ್ ||
ವ್ರಣೇ ನ ದದ್ಯಾತ್ಕಲ್ಕಂ ವಾ ಸ್ನೇಹಾತ್ಕ್ಲೇದೋ ವಿವರ್ಧತೇ ||೪೫||
ಮಾಂಸಚ್ಛೇದೋಽತಿರುಗ್ರೌಕ್ಷ್ಯಾದ್ದರಣಂ ಶೋಣಿತಾಗಮಃ ||
ಶ್ಲಥಾತಿಗಾಢದುರ್ನ್ಯಸ್ತೈರ್ವ್ರಣವರ್ತ್ಮಾವಘರ್ಷಣಮ್ ||೪೬||

ಸಪೂತಿಮಾಂಸಂ ಸೋತ್ಸಂಗಂ ಸಗತಿಂ ಪೂಯಗರ್ಭಿಣಮ್ ॥
ವ್ರಣಂ ವಿಶೋಧಯೇಚ್ಛೀಘ್ರಂ ಸ್ಥಿತಾ ಹ್ಯಂತರ್ವಿಕೇಶಿಕಾ ॥೪೭॥

ಅರ್ಥಃ— ವ್ರಣಕ್ಕೆ ಹಾಕುವ ಬತ್ತಿಯು ಬಹಳ ಸ್ನಿಗ್ಧ, ಬಹಳ ರುಕ್ಷ, ಬಹಳ ಸಡಿಲ, ಬಹಳ ಗಟ್ಟಿ, ಡೊಂಕ ಇರಬಾರದು. ಇದರಂತೆ ಇದ್ದ ಕಲ್ಕ ವನ್ನು ವ್ರಣದಲ್ಲಿ ಹಚ್ಚಬಾರದು. ಬಹಳ ಸ್ನಿಗ್ಧತ್ವದಿಂದ ಕ್ಲೇದವು ಹೆಚ್ಚಾ ಗುತ್ತದೆ. ರುಕ್ಷತೆಯಿಂದ ಮಾಂಸಭೇದ,ಬಹಳ ನೋವು, ವ್ರಣ ಹರಿಯೋಣ, ರಕ್ತಬರೋಣಗಳುಂಟಾಗುವವು. ಬಹಳ ಸಡಿಲು ಅಥವಾ ಗಟ್ಟಿ ಅಥವಾ ಡೊಂಕ ಕಟ್ಟುವದರಿಂದ ವ್ರಣದ ತುದಿಗಳಿಗೆ ಘರ್ಷಣವಾಗುವದು,ದುರ್ಗಂಧ ಮಾಂಸವುಳ್ಳ, ಉಬ್ಬಿದ, ಬೇರೆ ಕಡೆಗೆ ಗತಿಯುಳ್ಳ, ಕೀವುವುಳ್ಳ, ವ್ರಣ ದೊಳಗೆ ಔಷಧ ಬತ್ತಿಯನ್ನು ಇಟ್ಟರೆ ಅದು ಶೀಘ್ರವಾಗಿ ಅದರ ಶೋಧನ ವನ್ನು ಮಾಡುವದು. (೪೭)

ವ್ಯಮ್ಲಂ ತು ಪಾಟಿತಂ ಶೋಫಂ ಪಾಚನೈಃ ಸಮುಪಾಚರೇತ್ ॥
ಭೋಜನೈರುಪನಾಹೈಶ್ಚ ನಾತಿವ್ರಣವಿರೋಧಿಭಿಃ ॥೪೮॥

ಅರ್ಥಃ— ಚನ್ನಾಗಿ ಪಕ್ವವಾಗಿದ್ದ ಬಾವು (ಅಜ್ಞಾನದಿಂದ) ಸೀಳ ಲ್ಪಟ್ಟರೆ ವ್ರಣಕ್ಕೆ ವಿಶೇಷ ವಿರೋಧಿಯಾಗದಂಥ ವ್ರಣ ಪಾಚಕ ಭೋಜನ ಉಪನಾಹಗಳಿಂದ ಉಪಚರಿಸಬೇಕು. (೪೮)

ಸದ್ಯಃ ಸದ್ಯೋವ್ರಣಾನ್ ಸೀವ್ಯೇದ್ವಿವೃತಾನಭಿಘಾತಜಾನ್ ॥
ಮೇದೋಜಾಂಲ್ಲಿಖಿತಾನ್ ಗ್ರಂಥೀನ್ ಹ್ರಸ್ವಾಃ ಪಾಲೀಶ್ಚ ಕರ್ಣಯೋಃ ॥೪೯॥
ಶಿರೋಕ್ಷಿಕೂಟನಾಸೌಷ್ಠಗಂಡಕರ್ಣೋರುಬಾಹುಷು ॥
ಗ್ರೀವಾಲಲಾಟಮುಷ್ಕಸ್ಫಿಚ್ಮೇಢ್ರಪಾಯೂದರಾದಿಷು ॥೫೦॥

ಗಂಭೀರೇಷು ಪ್ರದೇಶೇಷು ಮಾಂಸಲೇಷ್ವಚಲೇಷು ಚ ॥
ನ ತು ವಂಕ್ಷಣಕಕ್ಷಾದಾವಲ್ಪಮಾಂಸೇ ಚಲೇ ವ್ರಣಾನ್ ॥೫೧॥

ವಾಯುನಿರ್ವಾಹಿಣಃ ಶಲ್ಯಗರ್ಭಾನ್ ಕ್ಷಾರವಿಷಾಗ್ನಿಜಾನ್ ॥

ಅರ್ಥಃ— ಬಡತರದಿಂದ ಆದ ಅಗಲ ಬಾಯುಳ್ಳ ವ್ರಣವನ್ನು ಕೂಡಲೇ ಹೊಲಿಯಬೇಕು. ಮೇದದಿಂದುಂಟಾದ ಗಂಟುಗಳನ್ನೂ ಕಿವಿಯ ಸಣ್ಣ ಹಾಲೆಗಳನ್ನೂ ಕೆರೆದು ಹೊಲಿಯಬೇಕು. ತಲೆ ಕಣ್ಣು ಮೂಗು ತುಟಿ ಗಲ್ಲ ಕಿವಿ ತೊಡೆ ಭುಜ ಕುತ್ತಿಗೆ ಹಣೆ ಅಂಡ ತೊಡೆಯ-ಮೇಲ್ಭಾಗ ಶಿಶ್ನ ಗುದ ಹೊಟ್ಟೆಗಳಲ್ಲಿ, ಮತ್ತು ಗಂಭೀರ ಮಾಂಸವುಳ್ಳ ಅಗಳಾಡದ ಭಾಗಗಳಲ್ಲಿ ಇದ್ದ ವ್ರಣಗಳನ್ನು ತತ್ಕಾಲ ಹೊಲಿಯಬೇಕು. ಗೆಜ್ಜೆ ಬಗಲು ಮತ್ತು ಸ್ವಲ್ಪ ಮಾಂಸವುಳ್ಳ ಅಗಳಾಡುವ ಭಾಗಗಳಲ್ಲಿದ್ದ ವ್ರಣಗಳನ್ನೂ ವಾಯುವನ್ನು ಬಿಡುವ, ಒಳಗೆ ಶಲ್ಯವುಳ್ಳ, ಕ್ಷಾರ ವಿಷ ಅಗ್ನಿಗಳಿಂದುಂಟಾದ ವ್ರಣಗಳನ್ನೂ ಹೊಲಿಯಬಾರದು. (೫೧||)

ಹೊಲಿಯುವ ಪೂರ್ವದಲ್ಲಿ ಮಾಡುವ ಕಾರ್ಯವನ್ನು ಹೇಳುತ್ತಾರೆ.

**ಸೀವ್ಯೇಚ್ಚಲಾಸ್ಥಿಶುಷ್ಕಾಸ್ರತೃಣರೋಮಾಪನೀಯ ತು ||೫೨||**

**ಪ್ರಲಂಬಿ ಮಾಂಸಂ ವಿಚ್ಛಿನ್ನಂ ನಿವೇಶ್ಯ ಸ್ವನಿವೇಶನೇ ||**
**ಸಂಧ್ಯಸ್ಥಿ ಚ ಸ್ಥಿತೇ ರಕ್ತೇ ಸ್ನಾಯ್ವಾ ಸೂತ್ರೇಣ ವಲ್ಕಲೈಃ ||೫೩||**

ಅರ್ಥಃ— ಹೊಲಿಯುವ ಮುಂಚೆ ಅದರಲ್ಲಿ ಅಲ್ಲಾಡುವ ಎಲಬು, ಒಣಗಿದ ರಕ್ತ, ಹುಲ್ಲು, ಕೂದಲು, ಇವುಗಳನ್ನು ತೆಗೆದು, ಕತ್ತರಿಸಿದ ಜೋತಾಡುವ ಮಾಂಸವನ್ನೂ ಸಂಧಿಯಲ್ಲಿಯ ಅಸ್ಥಿಯನ್ನೂ ಅವುಗಳ ಸ್ಥಾನದಲ್ಲಿಟ್ಟು ರಕ್ತವು ನಿಲ್ಲಲು ಆಮೇಲೆ ಸ್ನಾಯು ಅಥವಾ ದಾರ ಅಥವಾ ಒಣಗಿದ ತೊಗಟೆಯ ಎಳೆಗಳಿಂದ ಹೊಲಿಯಬೇಕು. (೫೩)

**ಸೀವ್ಯೇನ್ನ ದೂರೇ ನಾಸನ್ನೇ ಗೃಹ್ಣನ್ನಾಲ್ಪಂ ನ ವಾ ಬಹು ||**

ಅರ್ಥಃ— ಹೊಲಿಗೆಗಳನ್ನು ಬಹಳ ದೂರ ದೂರ, ಬಹಳ ಸಮೀಪ ಸಮೀಪ ಹಾಕಬಾರದು. ಮತ್ತು ವ್ರಣದ ಬಹಳ ತುದಿಗೆ ಇಲ್ಲವೆ ಬಹಳ ಒಳಗೆ ಹಾಕಬಾರದು. (೫೩||)

**ಸಾಂತ್ವಯಿತ್ವಾ ತತಶ್ಚಾರ್ತಂ ವ್ರಣೇ ಮಧುಘೃತದ್ರುತೈಃ ||೫೪||**

**ಅಂಜನಕ್ಷೌಮಜಮಷೀಫಲಿನೀಶಲ್ಲಕೀಫಲೈಃ ||**
**ಸರೋಧ್ರಮಧುಕೈರ್ದಿಗ್ಧೇ ಯುಂಜ್ಯಾದ್ಬಂಧಾದಿ ಪೂರ್ವವತ್ ||೫೫||**

ಅರ್ಥಃ— ಆಮೇಲೆ ರೋಗಿಯನ್ನು ಸಮಾಧಾನಮಾಡಿ ಸೌವೀರಾಂಜನ, ತಾಗದ ಬೂದಿ, ಗವ್ವಲ್ಲಾ, ಶಲ್ಲಕೀ ಫಲ, ಲೋಧ್ರ ಜ್ಯೇಷ್ಠಮಧುಗಳ ಚೂರ್ಣವನ್ನು ತುಪ್ಪ ಜೇನುತುಪ್ಪದಲ್ಲಿ ಕಲಿಸಿ ಅದರ ಮೇಲೆ ತೊಡೆಯಬೇಕು. ಆಮೇಲೆ ಕಟ್ಟೋಣ ಮುಂತಾದ್ದನ್ನು ಮೊದಲಿನಂತೆ ಮಾಡಬೇಕು. (೫೫)

ವ್ರಣೋ ನಿಃಶೋಣಿತೌಷ್ಠೋ ಯಃ ಕಿಂಚಿದೇವಾವಲಿಖ್ಯ ತಮ್ ||
ಸಂಜಾತರುಧಿರಂ ಸೀವ್ಯೇತ್ಸಂಧಾನಂ ಹ್ಯಸ್ಯ ಶೋಣಿತಮ್ ||೫೬||

ಅರ್ಥಃ— ವ್ರಣದ ತುದಿಗಳಲ್ಲಿ ರಕ್ತವಿಲ್ಲದಿದ್ದರೆ ಸ್ವಲ್ಪ ಅವನ್ನು ಕೆರೆದು ರಕ್ತ ಬರಲು ಅದನ್ನು ಹೊಲಿಯಬೇಕು. ಯಾಕೆಂದರೆ ವ್ರಣಗಳ ಅಂಚುಗಳನ್ನು ಕೂಡಿಸುವದು ರಕ್ತವೇ ಆಗಿರುವದು. (೫೬)

ಬಂಧನಾನಿ ತು ದೇಶಾದೀನ್ ವೀಕ್ಷ್ಯ ಯುಂಜೀತ ತೇಷು ಚ ||
ಆವಿಕಾಜಿನಕೌಶೇಯಮುಷ್ಣಂ, ಕ್ಷೌಮಂ ತು ಶೀತಲಮ್ ||೫೭||
ಶೀತೋಷ್ಣಂ ತೂಲಸಂತಾನಕಾರ್ಪಾಸಸ್ನಾಯುವಲ್ಕಜಮ್ ||

ಅರ್ಥಃ— ಆಯಾ ಪ್ರದೇಶ ಕಾಲ ಮುಂತಾದವುಗಳನ್ನು ನೋಡಿಕೊಂಡು ಬಂಧನಗಳನ್ನು ಉಪಯೋಗಿಸಬೇಕು. ಉಣ್ಣೆಯ, ತೊಗಲಿನ, ರೇಶಿಮೆಯ ಬಂಧನಗಳು ಉಷ್ಣ ವೀರ್ಯ ಇರುವವು. ತಾಗಿನ ಬಂಧನವು ಶೀತವೀರ್ಯ; ಬೂರಲಅರಳಿ, ತಂತು, ಹತ್ತಿ, ಸ್ನಾಯು, ಗಿಡದ ತೊಗಟೆಗಳ ಬಂಧನವು ಸಮಶೀತೋಷ್ಣವಿರುವದು. (೫೭||)

ತಾಮ್ರಾಯಸ್ತ್ರಪುಸೀಸಾನಿ ವ್ರಣೇ ಮೇದಃಕಫಾಧಿಕೇ ||೫೮||
ಭಂಗೇ ಚ ಯುಂಜ್ಯಾತ್ಫಲಕಂ ಚರ್ಮವಲ್ಕಕುಶಾದಿ ಚ ||

ಅರ್ಥಃ— ಮೇದ ಮತ್ತು ಕಫ ಹೆಚ್ಚಿದ್ದ ವ್ರಣದಲ್ಲಿ ತಾಮ್ರ ಕಬ್ಬಿಣ ತವರು ಶೀಸ ಇವುಗಳ ಪಟ್ಟಿಯನ್ನು ಕಟ್ಟಬೇಕು. ಅಸ್ಥಿಭಂಗದ ಮೇಲೆ ಹಲಿಗೆ, ಚರ್ಮ, ಗಿಡದ ತೊಗಟೆ, ಬಿದರಿನ ಕಂಬಿ ಮುಂತಾದವುಗಳನ್ನು ಕಟ್ಟಬೇಕು. (೫೮||)

ಬಂಧನ ಭೇದಗಳನ್ನು ಹೇಳುತ್ತಾರೆ.

**ಸ್ವನಾಮಾನುಗತಾಕಾರಾ ಬಂಧಾಸ್ತು ದಶ ಪಂಚ ಚ ||೫೯||**
**ಕೋಶಸ್ವಸ್ತಿಕಮುತ್ತೋಲೀಚೀನದಾಮಾನುವೇಲ್ಲಿತಂ ||**
**ಖಟ್ವಾವಿಬಂಧಸ್ಥಗಿಕಾವಿತಾನೋತ್ಸಂಗಗೋಫಣಾಃ ||೬೦||**
**ಯಮಕಂ ಮಂಡಲಾಖ್ಯಂ ಚ ಪಂಚಾಂಗೀ ಚೇತಿ ಯೋಜಯೇತ್||**
**ಯೋ ಯತ್ರ ಸುನಿವಿಷ್ಟಃಸ್ಯಾತ್ತಂ ತೇಷಾಂ ತತ್ರ ಬುದ್ಧಿಮಾನ್||೬೧||**

ಅರ್ಥಃ— ತಮ್ಮ ತಮ್ಮ ಹೆಸರುಗಳಂತೆ ಆಕಾರವುಳ್ಳ ಬಂಧನಗಳು ೧೫ ಇರುತ್ತವೆ.

೧. ಕೋಶಬಂಧ
೨. ಸ್ವಸ್ತಿಕಬಂಧ
೩. ಮುತ್ತೋಲೀಬಂಧ
೪. ಚೀನಬಂಧ
೫. ದಾಮಬಂಧ
೬. ಅನುವೇಲ್ಲಿತಬಂಧ
೭. ಖಟ್ವಾಬಂಧ
೮. ವಿಬಂಧಬಂಧ
೯. ಸ್ಥಗಿಕಾಬಂಧ
೧೦. ವಿತಾನಬಂಧ
೧೧. ಉತ್ಸಂಗಬಂಧ
೧೨. ಗೋಫಣಾಬಂಧ
೧೩. ಯಮಕಬಂಧ
೧೪. ಮಂಡಲಬಂಧ
೧೫. ಪಂಚಾಂಗೀಬಂಧ

ಬುದ್ಧಿವಂತನು ಇವುಗಳಲ್ಲಿ ಯಾವದು ಎಲ್ಲಿ ಕೂಡುತ್ತದೋ ಅದನ್ನು ಕಟ್ಟಬೇಕು.

**ಬಧ್ನೀಯಾದ್ಗಾಢಮೂರುಸ್ಫಿಕ್ಕಕ್ಷಾವಂಕ್ಷಣಮೂರ್ಧಸು ||**
**ಶಾಖಾವದನ ಕರ್ಣೋರಃಪೃಷ್ಠಪಾರ್ಶ್ವಗಲೋದರೇ ||೬೨||**
**ಸಮಂ ಮೇಹನಮುಷ್ಕೇ ಚ ನೇತ್ರೇ ಸಂಧಿಷು ಚ ಶ್ಲಥಮ್ ||**

ಅರ್ಥಃ— ತೊಡೆ ತಿಗ ಬಗಲು ಗೆಜ್ಜೆ ತಲೆಗಳಲ್ಲಿ ಗಟ್ಟಿಯಾಗಿ ಕಟ್ಟಬೇಕು. ಕೈಕಾಲು ಬಾಯಿ ಎದೆ ಕಿವಿ ಬೆನ್ನು ಪಕ್ಕಗೆ ಕುತ್ತಿಗೆ ಹೊಟ್ಟೆ ಶಿಶ್ನ

ವೃಷಣಗಳಲ್ಲಿ ಮಧ್ಯಮ ಕಟ್ಟಬೇಕು. ಕಣ್ಣು ಮತ್ತು ಸಂಧಿಗಳಲ್ಲಿ ಸಡಿಲಾಗಿ ಕಟ್ಟಬೇಕು. (೬೨||)

ಬಧ್ನೀಯಾಚ್ಛಿಥಿಲಸ್ಥಾನೇ ವಾತಶ್ಲೇಷ್ಮೋದ್ಭವೇ ಸಮಮ್ ||೬೩||

ಗಾಢಮೇವ ಸಮಸ್ಥಾನೇ, ಭೃಶಂ ಗಾಢಂ ತದಾಶ್ರಯೇ ||
ಶೀತೇ ವಸಂತೇ ಚ ತಥಾ ಮೋಕ್ಷಣೀಯೌ ತ್ರ್ಯಹಾತ್ತ್ರ್ಯಹಾತ್ |೬೪|

ಅರ್ಥಃ— ವಾತ-ಕಫ-ಜನ್ಯಗಳಲ್ಲಿ, ಸಡಿಲ ಕಟ್ಟುವ ಸ್ಥಳಗಳಲ್ಲಿ ಸಮ; ಸಮಕಟ್ಟುವ ಸ್ಥಳಗಳಲ್ಲಿ ಗಟ್ಟಿ; ಗಟ್ಟಿ ಕಟ್ಟುವ ಸ್ಥಳಗಳಲ್ಲಿ ಬಹಳೇ ಗಟ್ಟಿ ಕಟ್ಟಬೇಕು. ಹೇಮಂತ ಶಿಶಿರ ವಸಂತ ಋತುಗಳಲ್ಲಿ ವಾತ ಕಫ ವ್ರಣಗಳನ್ನು ಮೂರು ಮೂರು ದಿವಸಕ್ಕೆ ಬಿಚ್ಚಬೇಕು. (೬೪)

ಪಿತ್ತರಕ್ತೋತ್ಥಯೋರ್ಬಂಧೋ ಗಾಢಸ್ಥಾನೇ ಸಮೋ ಮತಃ ||
ಸಮಸ್ಥಾನೇ ಶ್ಲಥೋ, ನೈವ ಶಿಥಿಲಸ್ಥಾಶಯೇ ತಥಾ ||೬೫||

ಸಾಯಂಪ್ರಾತಸ್ತಯೋರ್ಮೋಕ್ಷೋ ಗ್ರೀಷ್ಮೇ ಶರದಿ ಚೇಷ್ಯತೇ ||

ಅರ್ಥಃ— ಪಿತ್ತ ಅಥವಾ ರಕ್ತಜನ್ಯ ವ್ರಣಗಳಲ್ಲಿ ಬಂಧನವನ್ನು ಗಟ್ಟಿ ಕಟ್ಟುವ ಸ್ಥಾನದಲ್ಲಿ ಮಧ್ಯಮ; ಮಧ್ಯಮಸ್ಥಾನದಲ್ಲಿ ಸಡಿಲು ಕಟ್ಟಬೇಕು. ಸಡಿಲುಸ್ಥಾನದಲ್ಲಿ ಕಟ್ಟಬಾರದು. ಗ್ರೀಷ್ಮ ಮತ್ತು ಶರತ್ಕಾಲದಲ್ಲಿ ಮುಂಜಾನೆ ಮತ್ತು ಸಂಜೆಗೆ ಅದನ್ನು ಬಿಚ್ಚಬೇಕು. (೬೫||)

ಬಂಧನವಿಲ್ಲದಿದ್ದರೆ ಆಗುವ ಹಾನಿಗಳನ್ನು ಹೇಳುತ್ತಾರೆ.

ಅಬದ್ಧೋ ದಂಶಮಶಕಶೀತವಾತಾದಿಪೀಡಿತಃ ||೬೬||

ದುಷ್ಟೀಭವೇಚ್ಚಿರಂ ಚಾತ್ರ ನ ತಿಷ್ಠೇತ್ಸ್ನೇಹಭೇಷಜಮ್ ||
ಕೃಚ್ಛ್ರೇಣ ಶುದ್ಧಿಂ ರೂಢಿಂ ವಾ ಯಾತಿ ರೂಢೋ ವಿವರ್ಣತಾಮ್ ||೬೭||

ಅರ್ಥ:— ವ್ರಣದ ಮೇಲೆ ಪಟ್ಟಿಯನ್ನು ಕಟ್ಟದೆ ಹಾಗೆ ಬಿಟ್ಟರೆ ನೊಣ ನೊರಜು ಶೀತಗಾಳಿ ಮುಂತಾದವುಗಳಿಂದ ಪೀಡಿತವಾಗಿ ದುಷ್ಟವಾಗುವವು. ಅದರ ಮೇಲೆ ಇಟ್ಟ ಸ್ನಿಗ್ಧ ಔಷಧವು ನಿಲ್ಲುವದಿಲ್ಲ.

ಬಹಳ ಕಷ್ಟದಿಂದ ಶುದ್ಧವಾಗುವದು ಅಥವಾ ಮಾಯುವದು; ಯಾವ್ದರೂ ಬೇರೆ ವರ್ಣದ್ದಾಗುವದು.

ಬಂಧನ-ಲಾಭಗಳನ್ನು ಹೇಳುತ್ತಾರೆ.

**ಬದ್ಧಸ್ತು ಚೂರ್ಣಿತೋ ಭಗ್ನೋ ವಿಶ್ಲಿಷ್ಟಃ ಪಾಟಿತೋಽಪಿ ವಾ ॥**
**ಛಿನ್ನಸ್ನಾಯುಸಿರೋಽಪ್ಯಾಶು ಸುಖಂ ಸಂರೋಹತಿ ವ್ರಣಃ ॥೬೮॥**

**ಉತ್ಥಾನಶಯನಾದ್ಯಾಸು ಸರ್ವೇಹಾಸು ನ ಪೀಡ್ಯತೇ ॥**

ಅರ್ಥಃ— ಕಟ್ಟಿದರೆ ವ್ರಣದ ಒಳಗಿನ ಸ್ನಾಯುಶಿರೆಗಳು ಪುಡಿಯಾಗಿದ್ದರೂ ಮುರಿದಿದ್ದರೂ ಬೇರೆಬೇರೆಯಾಗಿದ್ದರೂ ಹರಿದಿದ್ದರೂ ಕಡಿದಿದ್ದರೂ ತೀವ್ರವಾಗಿ ಸುಖದಿಂದ ಮಾಯುವದು. ಏಳೋಣ ಮಲಗೋಣ ಮುಂತಾದ ಎಲ್ಲ ಕ್ರಿಯೆಗಳಲ್ಲಿ ಅದಕ್ಕೆ ಪೆಟ್ಟು ಹತ್ತುವದಿಲ್ಲ. (೬೮॥)

**ಉದ್ವೃತ್ತೌಷ್ಠಃ ಸಮುತ್ಸನ್ನೋ ವಿಷಮಃ ಕಠಿನೋಽತಿರುಕ್ ॥೬೯॥**
**ಸಮೋ ಮೃದುರರುಕ್ ಶೀಘ್ರಂ ವ್ರಣಃ ಶುಧ್ಯತಿ ರೋಹತಿ ॥**

ಅರ್ಥಃ—ಕಟ್ಟುವದರಿಂದ ಅಂಚು ಮೇಲೆ ಹಾಯ್ದ,ಮಾಂಸ ಮೇಲಕ್ಕೆ ಬಂದ,ಒಂದು ಕಡೆ ಎತ್ತರ ಒಂದು ಕಡೆ ತಗ್ಗು ಹೀಗೆ ಇದ್ದ, ವ್ರಣವು ಸಮವಾಗುವದು. ಬಿರುಸಾದ ವ್ರಣವು ಮೃದು,ಬಹಳ ನೋಯುವ ವ್ರಣವು ಶಾಂತವಾಗುವದು. ತೀವ್ರವಾಗಿ ಶುದ್ಧವಾಗುವದು. ಮತ್ತು ಮಾಯುವದು. (೬೯॥)

**ಸ್ಥಿರಾಣಾಮಲ್ಪಮಾಂಸಾನಾಂ ರೌಕ್ಷ್ಯಾದನುಪರೋಹತಾಮ್ ॥೭೦॥**

**ಪ್ರಚ್ಛಾದ್ಯಮೌಷಧಂ ಪತ್ರೈರ್ಯಥಾದೋಷಂ ಯಥರ್ತು ಚ ॥**
**ಅಜೀರ್ಣತರುಣಾಚ್ಛಿದ್ರೈಃ ಸಮಂತಾತ್ಸುನಿವೇಶಿತೈಃ ॥೭೦॥**

**ಧೌತೈರಕರ್ಕಶೈಃ ಕ್ಷೀರಿಭೂರ್ಜಾರ್ಜುನಕದಂಬಜೈಃ ॥**

ಅರ್ಥಃ— ಬಹಳ ದಿವಸ ಮಾಯದೇ ಸ್ಥಿರವಾಗಿದ್ದ, ಸ್ವಲ್ಪ ಮಾಂಸವುಳ್ಳ, ರುಕ್ಷತೆಯಿಂದ ಮಾಯದೇ ಇರುವ ವ್ರಣಗಳ ಮೇಲೆ ಹಚ್ಚಿದ ಔಷಧವನ್ನು ಆಯಾ ದೋಷ ಮತ್ತು ಋತುಗಳಿಗನುಸಾರವಾಗಿ ಆಲ [illegible]

ಮುಂತಾದ ಕ್ಷೀರಿವೃಕ್ಷ ಭೂರ್ಜ ಮತ್ತು ಕದಂಬವೃಕ್ಷಗಳ ಬಹಳ ಕೋಮಲ ಮತ್ತು ಬಹಳ ಹಳೇದಲ್ಲದ, ತೂತುಗಳಿಲ್ಲದ, ಬಹಳ ಬಿರುಸಲ್ಲದ, ತೊಳೆದ ಎಲೆಗಳನ್ನು ನಾಲ್ಕು ಕಡೆಗೆ ಚನ್ನಾಗಿ ಹಾಕಿ ಮುಚ್ಚಬೇಕು. (೭೧॥)

**ಕುಷ್ಠಿನಾಮಗ್ನಿದಗ್ಧಾನಾಂ ಪಿಟಿಕಾ ಮಧುಮೇಹಿನಾಮ್ ॥೭೨॥**

**ಕರ್ಣಿಕಾಶ್ಚೋಂದುರುವಿಷೇ ಕ್ಷಾರದಗ್ಧಾ ವಿಷಾನ್ವಿತಾಃ**
**ಬಂಧನೀಯಾ ನ ಮಾಂಸ್ಪಾಕೇ ಗುದಪಾಕೇ ಚ ದಾರುಣೇ ॥೭೩॥**

**ಶೀರ್ಯಮಾಣಾಃ ಸರುಗ್ದಾಹಾಃ ಶೋಫಾವಸ್ಥಾ ವಿಸರ್ಪಿಣಃ ॥**

ಅರ್ಥ:— ಕುಷ್ಠರೋಗಿಗಳ ಅಗ್ನಿಯಿಂದ ಸುಟ್ಟವರ ವ್ರಣಗಳನ್ನೂ, ಮಧುಮೇಹಿಗಳ ಬಕ್ಕಿಗಳನ್ನೂ, ಇಲಿಯ ವಿಷದಿಂದ ಉಂಟಾದ ಗಂಟುಗಳನ್ನೂ, ಕ್ಷಾರದಿಂದ ದಗ್ಧವಾದ, ವಿಷದಿಂದ ಕೂಡಿದ, ಮಾಂಸದ ಪಾಕದ, ಭಯಂಕರ ಗುದಪಾಕದ, ಮಾಂಸವು ಕೊಳೆತು ಕಡಿದು ಬೀಳುತ್ತಿದ್ದ, ನೋವು ಮತ್ತು ದಾಹ ಬಹಳವಿದ್ದ ಶೋಫಾವಸ್ಥೆಯಲ್ಲಿದ್ದ, ಮತ್ತು ಅತ್ತಿತ್ತ ಪಸರಿಸುವ ವ್ರಣಗಳನ್ನೂ ಕಟ್ಟಬಾರದು. (೭೩॥)

**ಅರಕ್ಷ್ಯಮಾ ವ್ರಣೇ ಯಸ್ಮಿನ್ ಮಕ್ಷಿಕಾ ನಿಕ್ಷಿಪೇತ್ಕ್ರಿಮೀನ್ ॥೭೪॥**

**ತೇ ಭಕ್ಷಯಂತಃ ಕುರ್ವಂತಿ ರುಜಾಶೋಫಾಸ್ರಸಂಸ್ರವಾನ್ ॥**
**ಸುರಸಾದಿ ಪ್ರಯುಂಜೀತ ತತ್ರ ಧಾವನಪೂರಣೇ ॥೭೫॥**

**ಸಪ್ತಪರ್ಣಕರಂಜಾರ್ಕನಿಂಬರಾಜಾದನತ್ವಚಃ ॥**
**ಗೋಮೂತ್ರಕಲ್ಕಿತೋ ಲೇಪಃ ಸೇಕಃ ಕ್ಷಾರಾಂಬುನಾ ಹಿತಃ ॥೭೬॥**

**ಪ್ರಚ್ಛಾದ್ಯ ಮಾಂಸಪೇಶ್ಯಾ ವಾ ವ್ರಣಂ ತಾನಾಶು ನಿರ್ಹರೇತ್ ॥**

ಅರ್ಥಃ— ಚನ್ನಾಗಿ ಮುಚ್ಚದೆ ಇರೋಣದರಿಂದ ನೊಣವು ಅವುಗಳಲ್ಲಿ ಕ್ರಿಮಿಗಳನ್ನು ಚಲ್ಲುತ್ತದೆ. ಅದು ವ್ರಣವನ್ನು ತಿನ್ನುವದರಿಂದ ನೋವು ಬಾವು ರಕ್ತಸ್ರಾವಗಳುಂಟಾಗುವವು. ಆದಕ್ಕೆ ಸುರಸಾದಿಗಣದ ಔಷಧದಿಂದ ತೊಳೆಯೋಣವನ್ನೂ ಅವುಗಳ ಚೂರ್ಣ ಅಥವಾ ಕಲ್ಕದ ಪೂರಣವನ್ನೂ ಮಾಡಬೇಕು. ಸಪ್ತಪರ್ಣ ಹುಲಗಿಲು ಎಕ್ಕಿ ಬೇವು

ರಾಜಾದನ (ಖಿರಣಿ) ವೃಕ್ಷಗಳ ತೊಗಟೆಗಳ ಚೂರ್ಣವನ್ನು ಗೋಮೂತ್ರ ದಲ್ಲಿ ಕಲಿಸಿ ಹಚ್ಚಬೇಕು. ಕ್ಷಾರ ನೀರನ್ನು ಮೇಲೆ ಹಾಕಬೇಕು. ಅಥವಾ ಮೇಲೆ ಮಾಂಸದ ಕರಣೆಯನ್ನು ಮುಚ್ಚಿ ಅದಕ್ಕೆ ಕ್ರಿಮಿಗಳು ಅಂಟಿಕೊಳ್ಳಲು ಅವನ್ನು ತೀವ್ರವಾಗಿ ತೆಗೆಯಬೇಕು. (೭೬||)

**ನ ಚೈನಂ ತ್ವರಮಾಣೋಽಂತಃಸದೋಷಮುಪರೋಹಯೇತ್||೭೭||**

**ಸೋಽಲ್ಪೇನಾಪ್ಯಪಚಾರೇಣ ಭೂಯೋ ವಿಕುರುತೇ ಯತಃ ||**

ಅರ್ಥಃ— ಒಳಗೆ ದೋಷವಿದ್ದ ವ್ರಣವನ್ನು ಮಾಯಿಸಲಿಕ್ಕೆ ತ್ವರೆಮಾಡಬಾರದು. ಯಾಕೆಂದರೆ ಅದು ಸ್ವಲ್ಪ ಅಪಥ್ಯದಿಂದಲೇ ಪುನಃ ವಿಕೃತಿಯನ್ನು ಹೊಂದುವದು. (೭೭

**ರೂಢೇಽಪ್ಯಜೀರ್ಣವ್ಯಾಯಾಮವ್ಯವಾಯಾದೀನ್ ವಿವರ್ಜಯೇತ್ ||೭೮||**

**ಹರ್ಷಂ ಕ್ರೋಧಂ ಭಯಂ ವಾಽಪಿ ಯಾವದಾಸ್ಥೈರ್ಯಸಂಭವಾತ್||**
**ಆದರೇಣಾನುವರ್ತ್ಯೋಽಯಂ ಮಾಸಾನ್ಷಟ್‌ಸಪ್ತ ವಾ ವಿಧಿಃ ||೭೯||**

ಅರ್ಥಃ— ಮಾಯ್ದು ಮೇಲೆಯೂ ಅದಕ್ಕೆ ಸ್ಥೈರ್ಯ ಬರುವ ವರೆಗೆ ಅಜೀರ್ಣ ವ್ಯಾಯಾಮ ಮೈಥುನ ಹರ್ಷ ಕ್ರೋಧ ಭಯ ಮುಂತಾದ ವುಗಳನ್ನು ಬಿಡಬೇಕು. ಈ ವಿಧಿಯನ್ನು ಆರು ಅಥವಾ ಏಳು ತಿಂಗಳ ವರೆಗೆ ಆದರದಿಂದ ಅನುಸರಿಸಬೇಕು. (೭೯)

**ಉತ್ಪದ್ಯಮಾನಾಸು ಚ ತಾಸು ತಾಸು**
**ವಾರ್ತಾಸು ದೋಷಾದಿಬಲಾನುಸಾರೀ ||**
**ತೈಸ್ತೈರುಪಾಯೈಃ ಪ್ರಯತಶ್ಚಿಕಿತ್ಸೇ-**
**ದಾಲೋಚಯನ್ ವಿಸ್ತರಮುತ್ತರೋಕ್ತಂ ||೮೦||**

ಅರ್ಥ:— ಆಯಾ ಅವಸ್ಥೆಗಳುಂಟಾಗಲು ದೋಷಾದಿಗಳ ಬಲವನ್ನು ಅನುಸರಿಸಿ ಆಯಾ ಉಪಾಯಗಳಿಂದ ಉತ್ತರ ಸ್ಥಾನದಲ್ಲಿ ಹೇಳಿದ್ದನ್ನು ಆಲೋಚಿಸಿ ಯತ್ನದಿಂದ ಚಿಕಿತ್ಸೆ ಮಾಡಬೇಕು. (೮೦)

**ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ ಶಸ್ತ್ರಕರ್ಮವಿಧಿರ್ನಾಮೈಕೋನತ್ರಿಂಶೋಽಧ್ಯಾಯಃ ಸಮಾಪ್ತಃ**

ಇತಿಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಸೂತ್ರಸ್ಥಾನದಲ್ಲಿಯ '**ಶಸ್ತ್ರಕರ್ಮವಿಧಿ**' ಎಂಬ ೨೯ನೆಯ ಅಧ್ಯಾಯದ ಟೀಕೆಯು ಮುಗಿದುದು.

# ೩೦ನೆಯ ಅಧ್ಯಾಯವು

ಪಾಟನಾದಿ ಕರ್ಮಗಳು ಶಸ್ತ್ರದಂತೆ-ಕ್ಷಾರಅಗ್ನಿ-ಕರ್ಮಗಳಿಂದಲೂ ಆಗುವದರಿಂದ ಅವುಗಳನ್ನು ಹೇಳುತ್ತಾರೆ.

**ಅಥಾತಃ ಕ್ಷಾರಾ†ಗ್ನಿ ಕರ್ಮವಿಧಿಮಧ್ಯಾಯಂ ವ್ಯಾಖ್ಯಾಸ್ಯಾಮಃ ।**

ಅರ್ಥಃ— ಇನ್ನು ಮೇಲೆ ಕ್ಷಾರ-ಅಗ್ನಿ-ಕರ್ಮ ವಿಧಿಯ ಅಧ್ಯಾಯವನ್ನು ಹೇಳುವೆವು.

**ಇತಿ ಹ ಸ್ಮಾಹುರಾತ್ರೇಯಾದಯೋ ಮಹರ್ಷಯಃ ।**

ಅರ್ಥಃ— ಆತ್ರೇಯ ಮೊದಲಾದ ಮಹರ್ಷಿಗಳು ಹೀಗೆ ಹೇಳಿರುವರು.

**ಸರ್ವಶಸ್ತ್ರಾನುಶಸ್ತ್ರಾಣಾಂ ಕ್ಷಾರಃ ಶ್ರೇಷ್ಠೋ ಬಹೂನಿ ಯತ್ ॥**
**ಛೇದ್ಯಭೇದ್ಯಾದಿಕರ್ಮಾಣಿ ಕುರುತೇ ವಿಷಮೇಷ್ವಪಿ ॥೧॥**

**ದುಃಖಾವಚಾರ್ಯಶಸ್ತ್ರೇಷು ತೇನ ಸಿದ್ಧಿಮಯಾತ್ಸು ಚ ॥**
**ಅತಿಕೃಚ್ಛ್ರೇಷು ರೋಗೇಷು ಯಚ್ಚ ಪಾನೇಽಪಿ ಯುಜ್ಯತೇ ॥೨॥**

ಅರ್ಥಃ— ಎಲ್ಲ ಶಸ್ತ್ರ ಮತ್ತು ಅನುಶಸ್ತ್ರಗಳಲ್ಲಿ ಕ್ಷಾರವೇ ಶ್ರೇಷ್ಠವು. ಯಾಕೆಂದರೆ ಅದು ಛೇದನ ಭೇದನ ಲೇಖನ ಪಾಟನ ಮುಂತಾದ ಅನೇಕ ಕರ್ಮಗಳನ್ನು ಮಾಡುತ್ತದೆ. ಮತ್ತು ಶಸ್ತ್ರಗಳು ನಡೆಯದ ಸಂದಿಗೊಂದಿಗಳಲ್ಲಿ ಕೂಡ ಕೆಲಸಮಾಡುವದು. ಮತ್ತು ಶಸ್ತ್ರಗಳಿಂದ ಗುಣಹೊಂದದ ಅತಿ ಕಠಿಣವಾದ ರೋಗಗಳಲ್ಲಿ ಕೂಡ ಅದರ ಉಪಯೋಗವಾಗುವದು. ಮತ್ತು ಕುಡಿಯುವದರಲ್ಲಿಯೂ ಉಪಯೋಗವಾಗೋಣದರಿಂದ ಶರೀರದೊಳಗಿನ ರೋಗಗಳನ್ನು ನಾಶಮಾಡುವದು. (೨)

**ಸ ಪೇಯೋಽರ್ಶೋಽಗ್ನಿಸಾದಾಶ್ಮಗುಲ್ಮೋದರಗರಾದಿಷು ॥**
**ಯೋಜ್ಯಃ ಸಾಕ್ಷಾನ್ಮಷಶ್ವಿತ್ರಬಾಹ್ಯಾರ್ಶಃಕುಷ್ಠಸುಪ್ತಿಷು ॥೩॥**

† ಕ್ಷಾರಾಗ್ನಿಕರ್ಮವಿಧಿಯು ಸುಶ್ರುತದ ಸೂತ್ರಸ್ಥಾನ ೧೧-೧೨ನೇ, ಅಷ್ಟಾಂಗ ಸಂಗ್ರಹದ ಸೂ. ೩೯-೪೦ ನೇ ಅಧ್ಯಾಯದಲ್ಲಿ ಹೇಳಲಾಗಿದೆ. ಚರಕದಲ್ಲಿ ಹೇಳಿಲ್ಲ.

ಭಗಂದರಾರ್ಬುದಗ್ರಂಥಿದುಷ್ಟನಾಡೀವ್ರಣಾದಿಷು ॥

ಅರ್ಥಃ— ಮೂಲವ್ಯಾಧಿ ಅಗ್ನಿಮಾಂದ್ಯ ಮೂತ್ರಾಶ್ಮರಿ ಗುಲ್ಮ ಉದರ ಕೃತ್ರಿಮ-ವಿಷ ಮುಂತಾದ ರೋಗಗಳಲ್ಲಿ ಕ್ಷಾರವನ್ನು ಕುಡಿಯಬೇಕು. ಮುಷಶ್ವಿತ್ರ, ಹೊರಮೂಲವ್ಯಾಧಿ, ಕುಷ್ಠ, ಸ್ಪರ್ಶಜ್ಞಾನಶೂನ್ಯಸ್ಥಳ, ಭಗಂದರ, ಅರ್ಬುದ, ಗ್ರಂಥಿ, ದುಷ್ಟನಾಡೀವ್ರಣ ಮುಂತಾದವುಗಳಲ್ಲಿ ಮೇಲೆ ಹಚ್ಚಬೇಕು. (೩॥)

ನ ತೂಭಯೋಽಪಿ ಯೋಕ್ತವ್ಯಃ ಪಿತ್ತೇ ರಕ್ತೇ ಚಲೇಽಬಲೇ ॥೪॥

ಜ್ವರೇಽತಿಸಾರೇ ಹೃನ್ಮೂರ್ಧರೋಗೇ ಪಾಂಡ್ವಾಮಯೇಽರುಚೌ ॥
ತಿಮಿರೇ ಕೃತಸಂಶುದ್ಧೌ ಶ್ವಯಥೌ ಸರ್ವಗಾತ್ರಗೇ

ಭೀರುಗರ್ಭಿಣ್ಯೃತುಮತೀಪ್ರೋದ್ವೃತ್ತಫಲಯೋನಿಷು ॥
ಅಜೀರ್ಣೇಽನ್ನೇ ಶಿಶೌ ವೃದ್ಧೇ ಧಮನೀಸಂಧಿಮರ್ಮಸು ೬॥

ತರುಣಾಸ್ಥಿಸಿರಾಸ್ನಾಯುಸೇವನೀಗಲನಾಭಿಷು ॥
ದೇಶೇಽಲ್ಪಮಾಂಸೇ ವೃಷಣಮೇಢ್ರಸ್ರೋತೋನಖಾಂತರೇ ॥೭॥

ವರ್ತ್ಮರೋಗಾದೃತೇಽಕ್ಷ್ಣೋಶ್ಚ ಶೀತವರ್ಷೋಷ್ಣದುರ್ದಿನೇ

ಅರ್ಥಃ— ಪಿತ್ತವಿಕಾರ ರಕ್ತವಿಕಾರ ದುರ್ಬಲ-ವಾತವಿಕಾರ ಜ್ವರ ಅತಿಸಾರ ಹೃದ್ರೋಗ ತಲೆನೋವು ಪಾಂಡುರೋಗ ಅರುಚಿ ತಿಮಿರರೋಗಗಳಲ್ಲಿಯೂ ವಮನ ವಿರೇಚನ ತಕ್ಕೊಂಡ ಮೇಲೆಯೂ, ಸರ್ವಾಂಗ ಬಾವಿನಲ್ಲಿಯೂ, ಅಂಜುಬುರುಕ ಗರ್ಭಿಣೀ ಋತುಮತಿ ಉದಾವೃತ್ತವೆಂಬ ಯೋನಿರೋಗಿಗಳಲ್ಲಿಯೂ,ಅನ್ನವು ಜೀರ್ಣವಾಗದಿದ್ದಾಗ್ಗೆಯೂ, ಶಿಶು ಮತ್ತು ವೃದ್ಧರಿಗೂ, ಧಮನಿ ಸಂಧಿ ಮರ್ಮಗಳಲ್ಲಿಯೂ, ತರುಣಾಸ್ಥಿ ಸಿರಾಸ್ನಾಯು ಸೇವನೀ (ಗುದದ್ವಾರದಿಂದ ಶಿಶ್ನದವರೆಗೆ ಹೊಲಿಗೆಯಂತೆ ಇರುವ ಭಾಗ) ಕುತ್ತಿಗೆ ಹೊಕ್ಕಳುಗಳಲ್ಲಿಯೂ, ಸ್ವಲ್ಪ ಮಾಂಸವುಳ್ಳ ಪ್ರದೇಶಗಳಲ್ಲಿಯೂ, ವೃಷಣ ಶಿಶ್ನ ಸ್ರೋತಸ್ಸುಗಳಲ್ಲಿಯೂ, ಉಗುರಿನ ಸಂಧಿಗಳಲ್ಲಿಯೂ, ಎವೆರೋಗ ಹೊರ್ತಾಗಿ ಉಳಿದ ಕಣ್ಣಿನ ರೋಗಗಳಲ್ಲಿಯೂ ಶಿಶಿರವಸಂತ ಮಳೆ

ಉಷ್ಣ ದಿವಸಗಳಲ್ಲಿಯೂ, ಸೂರ್ಯನು ಮೇಘದಿಂದ ಮುಚ್ಚಿದಾಗ್ಗೆಯೂ. ಕ್ಷಾರವನ್ನು ಪಾನ ಅಥವಾ ಲೇಪನದ್ವಾರಾ ಉಪಯೋಗಿಸಬಾರದು. (೭||)

ಇನ್ನು ಮೇಲೆ ಕ್ಷಾರಕ್ರಿಯೆಯನ್ನು ಹೇಳುತ್ತಾರೆ.

**ಕಾಲಮುಷ್ಕಕಶಮ್ಯಾಕಕದಲೀಪಾರಿಭದ್ರಕಾನ್ ||೮||**

**ಅಶ್ವಕರ್ಣಮಹಾವೃಕ್ಷಪಲಾಶಾಸ್ಫೋತವೃಕ್ಷಕಾನ್ ||**
**ಇಂದ್ರವೃಕ್ಷಾರ್ಕಪೂತೀಕನಕ್ತಮಾಲಾಶ್ವಮಾರಕಾನ್ ||೯||**

**ಕಾಕಜಂಘಾಮಪಾಮಾರ್ಗಮಗ್ನಿಮಂಥಾಗ್ನಿತಿಲ್ವಕಾನ್ ||**
**ಸಾರ್ದ್ರಾನ್ ಸಮೂಲಶಾಖಾದೀನ್ ಖಂಡಶಃ ಪರಿಕಲ್ಪಿತಾನ್ ||೧೦||**

**ಕೋಶಾತಕೀಶ್ಚತಸ್ರಶ್ಚ ಶೂಕಂ ನಾಲಂ ಯವಸ್ಯ ಚ ||**
**ನಿವಾತೇ ನಿಚಯೀಕೃತ್ಯ ಪೃಥಕ್ತಾನಿ ಶಿಲಾತಲೇ ||೧೧||**

**ಪ್ರಕ್ಷಿಪ್ಯ ಮುಷ್ಕಕಚಯೇ ಸುಧಾಶ್ಮಾನಿ ಚ ದೀಪಯೇತ್ ||**
**ತತಸ್ತಿಲಾನಾಂ ಕುಂತಾಲೈರ್ದಗ್ಧಾಗ್ನೌ ವಿಗತೇ ಪೃಥಕ್ ||೧೨||**

**ಕೃತ್ವಾ ಸುಧಾಶ್ಮನಾಂ ಭಸ್ಮ ದ್ರೋಣಂ ತ್ವಿತರಭಸ್ಮನಃ ||**
**ಮುಷ್ಕಕೋತ್ತರಮಾದಾಯ ಪ್ರತ್ಯೇಕಂ ಜಲಮೂತ್ರಯೋಃ ||೧೩||**

**ಗಾಲಯೇದರ್ಧಭಾರೇಣ ಮಹತಾ ವಾಸಸಾ ಚ ತತ್ ||**
**ಯಾವತ್ಪಿಚ್ಛಿಲರಕ್ತಾಚ್ಛಸ್ತೀಕ್ಷ್ಣೋ ಜಾತಸ್ತದಾ ಚ ತಮ್ ||೧೪||**

**ಗೃಹೀತ್ವಾ ಕ್ಷಾರನಿಷ್ಯಂದಂ ಪಚೇಲ್ಲೋಹ್ಯಾಂ ವಿಘಟ್ಟಯನ್ ||**

ಅರ್ಥಃ—ಕಾಲಮುಷ್ಕಕ (ಮುಳ್ಳುಮುತ್ತುಗ), ಕಕ್ಕೆ, ಬಾಳೆ, ಬೇವು, ಧೂಪದಮರ, ಮೂರೇಣಿನಕಳ್ಳಿ, ಮುತ್ತಲ, ಗಿರಿಕರ್ಣಿಕೆ, ನಂದೀವೃಕ್ಷ ಹಲಗತ್ತಿ, ಎಕ್ಕೆ, ನಾರುವ ಹುಲಗಿಲು, ಹುಲಗಿಲು, ಕಣಗಿಲು, ಕಾಕಜಂಘೆ ಉತ್ತರಾಣಿ,ಅಗ್ನಿಮಂಥ, ಚಿತ್ರಕ, ಲೋಧ್ರ ಈ ಗಿಡಗಳನ್ನು ಹಸಿ ಇದ್ದಾಗ್ಗೆ ಬೇರು ಟೊಂಗೆ ಸಹಿತ ಚೂರು ಚೂರುಮಾಡಬೇಕು. ಅದರಂತೆ ನಾಲ್ಕುತರದ

ಹೀರಿ (ಕಹಿಹೀರಿ, ಕಹಿತಿಪ್ಪರಿ, ಕಹಿ ಹಾಲಗುಂಬಳ, ದೇವಡಾಂಗರಿ) ಮತ್ತು ಜವಿಯುದೇಟು ಮತ್ತು ಹೊಟ್ಟು ಇವುಗಳನ್ನು ಗಾಳಿ ಇಲ್ಲದಲ್ಲಿ ಕಲ್ಲುಗಳ ಮೇಲೆ ಬೇರೆ ಬೇರೆ ಗುಂಪುಮಾಡಿ ಇಡಬೇಕು. ಆ ಮೇಲೆ ಸುಣ್ಣದ ಹರಳು ಗಳನ್ನು (ಸಣ್ಣ ಮಾಡಿ) ಮುಳ್ಳುಮುತ್ತುಗದ ರಾಶಿಯಲ್ಲಿ ಹಾಕಿ ಎಳ್ಳಿನ ಕಟ್ಟಿಗೆಗಳಿಂದ ಎಲ್ಲಕ್ಕೂ ಬೆಂಕಿ ಹಚ್ಚಬೇಕು. ಬೆಂಕಿಯು ಆರಿದ ಮೇಲೆ ಸುಣ್ಣವನ್ನು ಬೇರೆ ಮಾಡಿ ಮತ್ತು ಇತರ ಎಲ್ಲ ಗಿಡಗಳ ಬೂದಿಯನ್ನು ೧೦೨೪ ತೊಲಿ ತಕ್ಕೊಂಡು, ಅದರ ¼ ೨೫೬ ತೊಲಿ ಮುಷ್ಕಕದ ಬೂದಿಯನ್ನು ತಕ್ಕೊಂಡು, ೪೦೦೦ ತೊಲಿ ನೀರು, ಅಷ್ಟೇ ಗೋಮೂತ್ರ ಕೂಡಿಸಿ, ಅದರೊಳಗೆ ಆ ಬೂದಿಯನ್ನು ಹಾಕಿ, ಲೋಳಿಲೋಳಿ ಕೆಂಪು ತಿಳಿ ತೀಕ್ಷ್ಣ ಆಗುವವರೆಗೆ ದೊಡ್ಡ ವಸ್ತ್ರದಲ್ಲಿ ಅನೇಕಸಾರೆ ಸೋಸಬೇಕು. ಆ ಮೇಲೆ ಆ ಕ್ಷಾರೋದಕವನ್ನು ಕಬ್ಬಿಣದ ಕಢಾಯಿಯಲ್ಲಿ ಹಾಕಿ ಗಟ್ಟಿಸುತ್ತ ಕುದಿಸಬೇಕು. (೧೪॥)

ಪಚ್ಯಮಾನೇ ತತಸ್ತಸ್ಮಿಂಸ್ತಾಃ ಸುಧಾಭಸ್ಮಶರ್ಕರಾಃ ॥೧೫॥
ಶುಕ್ತೀಃ ಕ್ಷೀರಪಕಂ ಶಂಖನಾಭೀಶ್ಚಾಽಽಯಸಭಾಜನೇ ॥
ಕೃತ್ವಾಽಗ್ನಿವರ್ಣಾನ್ ಬಹುಶಃ ಕ್ಷಾರೋತ್ಥೇ ಕುಡವೋನ್ಮಿತೇ ॥೧೬॥
ನಿರ್ವಾಪ್ಯ ಪಿಷ್ಟ್ವಾ ತೇನೈವ ಪ್ರತೀವಾಪಂ ವಿನಿಕ್ಷಿಪೇತ್ ॥
ಶ್ಲಕ್ಷ್ಣಂ ಶಕೃದ್ದಕ್ಷಶಿಖಿಗೃಧ್ರಕಂಕಕಪೋತಜಮ್ ॥೧೭॥
ಚತುಷ್ಪಾತ್ಪಕ್ಷಿಪಿತ್ತಾಲಮನೋಹ್ವಾಲವಣಾನಿ ಚ ॥
ಪರಿತಃ ಸುತರಾಂ ಚಾಽತೋ ದರ್ವ್ಯಾ ತಮವಘಟ್ಟಯೇತ್ ॥೧೮॥

ಅರ್ಥಃ— ಅದು ಕುದಿಯುಹತ್ತಲು ಅದರೊಳಗಿಂದಲೇ ೩೨ ತೊಲಿ ಕ್ಷಾರ ನೀರು ತಕ್ಕೊಂಡು ಹಾಕಿದ ಲೋಹಪಾತ್ರೆಯಲ್ಲಿ, ಬೇರೆ ತೆಗೆದು ಇಟ್ಟ ಸುಣ್ಣದ ಹರಳು ಮತ್ತು ಸಿಂಪಿ ಕ್ಷಾರ ಖಡೂ ಶಂಖನಾಭಿಗಳನ್ನು ಅನೇಕ ಸಾರೆ ಕೆಂಪಗೆ ಕಾಸಿ ಕಾಸಿ ಅದರಲ್ಲಿ ಆರಿಸಿ ಅದರಲ್ಲಿಯೇ ಸಣ್ಣಾಗಿ ಅರೆದು ಹಾಕಬೇಕು. ಅದರಂತೆ ಅದರಲ್ಲಿ ಕೋಳಿ ನವಿಲು ಹದ್ದು ಕಾಗೆ ಪಾರಿವಾಳಗಳ ಮಲ, ಪಶುಪಕ್ಷಿಗಳ ಪಿತ್ತ, ಹರಿತಾಳ, ಮನಸಿಳ, ಉಪ್ಪುಗಳನ್ನು ಹಾಕಬೇಕು. ಮತ್ತು ಸುತ್ತಲೂ ಚನ್ನಾಗಿ ಸವಟನಿಂದ ತಿರುವಿ ಗಟ್ಟಿಸಬೇಕು. (೧೮)

ಸಬಾಷ್ಪೈಶ್ಚ ಯದೋತ್ತಿಷ್ಠೇದ್ಬುದ್ಬುದೈರ್ಲೇಹವದ್ಘನಃ
ಅವತಾರ್ಯ ತತಃ ಶೀತೋ ಯವರಾಶಾವಯೋಮಯೇ ||೧೯||

ಸ್ಥಾಪ್ಯೋಽಯಂ ಮಧ್ಯಮಃ ಕ್ಷಾರಃ......................

ಅರ್ಥಃ— ಆಮೇಲೆ ಆದರೊಳಗಿಂದ ಉಗಿಯೊಡನೆ ಗುಳ್ಳಿಗಳ ಸಂಗಡ ಲೇಹದಂತೆ ಗಟ್ಟಿಯಾದ ಕ್ಷಾರವು ಮೇಲಕ್ಕೆ ಏಳಹತ್ತಲು ಇಳಿಸಿ ಆರಿಸಿ ಲೋಹಪಾತ್ರೆಯಲ್ಲಿ ಹಾಕಿ ಯವದ ರಾಶಿಯಲ್ಲಿ ಇಡಬೇಕು. ಇದು ಮಧ್ಯಮ ಕ್ಷಾರವಾಗುವದು. (೧೯)

.....................ನ ತು ಪಿಷ್ಟ್ವಾಽಕ್ಷಿಪೇನ್ಮೃದೌ ||
ನಿರ್ವಾಪ್ಯಾಪನಯೇತ್ ತೀಕ್ಷ್ಣೇ ಪೂರ್ವವತ್
ಪ್ರತಿವಾಪನಮ್ ||೨೦||
ತಥಾ ಲಾಂಗಲಿಕಾದಂತೀಚಿತ್ರಕಾತಿವಿಷಾವಚಾಃ ||
ಸ್ವರ್ಜಿಕಾಕನಕಕ್ಷೀರಿಹಿಂಗುಪೂತೀಕಪಲ್ಲವಾಃ ||೨೧||

ತಾಲಪತ್ರೀ ಬಿಡಂ ಚೇತಿ ಸಪ್ತರಾತ್ರಾತ್ಪರಂ ತು ಸಃ ||
ಯೋಜ್ಯಃ.....................................

ಅರ್ಥಃ— ಮೃದು-ಕ್ಷಾರ ಮಾಡಬೇಕಾಗಿದ್ದರೆ ಸುಣ್ಣ ಮುಂತಾದ್ದನ್ನು ಅರೆದು ಹಾಕದೇ ಬರೇ ಕಾಸಿ ಆದರೊಳಗೆ ಎದ್ದಿ ತೆಗೆಯಬೇಕು. ತೀಕ್ಷ್ಣ ಕ್ಷಾರ ಮಾಡಬೇಕಾಗಿದ್ದರೆ ಮೇಲಿನಂತೆ ಎಲ್ಲ ಔಷಧಗಳನ್ನು ಹಾಕಿ ಮತ್ತೆ ಕೋಳಿಕುಟಮನ-ಗಡ್ಡೆ ದಂತಿ ಚಿತ್ರಕ ಅತಿವಿಷ ಬಜಿ ಸಜ್ಜೀಖಾರ ಗೊಳ-ಗೊಳಿಕೆ ಹಿಂಗು ನಾರುವ-ಹುಲಗಿಲುಗಳ-ಎಲೆ ಮುಸಳಿ ಬಿಡಲವಣಗಳನ್ನು ಅರೆದು ಹಾಕಬೇಕು. ೭ ರಾತ್ರಿ ಆದನಂತರ ಅದನ್ನು ಉಪಯೋಗಿಸಬೇಕು. (೨೧||)

ಈ ಮೂರು ತರದ ಕ್ಷಾರಗಳನ್ನು ಉಪಯೋಗಿಸುವ ಸ್ಥಳಗಳನ್ನು ಹೇಳುತ್ತಾರೆ.

........ತೀಕ್ಷ್ಣೋಽನಿಲಶ್ಲೇಷ್ಮಮೇದೋಜೇಷ್ವರ್ಬುದಾದಿಷು ||೨೨||
ಮಧ್ಯೇಷ್ವೇವ ಚ ಮಧ್ಯೋಽನ್ಯಃ ಪಿತ್ತಾಸ್ರಗುದಜನ್ಮಸು ||

ಅರ್ಥಃ— ತೀಕ್ಷ್ಣ ಕ್ಷಾರವನ್ನು ವಾತ ಕಫ ಮೇದಗಳಿಂದ ಉತ್ಪನ್ನವಾದ ಅರ್ಬುದ ಮುಂತಾದವುಗಳ ಮೇಲೆ ಉಪಯೋಗಿಸಬೇಕು. ಈ ವಿಕಾರಗಳು ಮಧ್ಯಮವಿದ್ದರೆ ಮಧ್ಯಮ ಕ್ಷಾರವನ್ನು ಹಚ್ಚಬೇಕು. ಸೌಮ್ಯ ಕ್ಷಾರವನ್ನು ಪಿತ್ತ ಮೂಲವ್ಯಾಧಿ ಮತ್ತು ರಕ್ತ-ಮೂಲವ್ಯಾಧಿಗಳ ಮೇಲೆ ಉಪಯೋಗಿಸಬೇಕು. (೨೨||)

**ಬಲಾರ್ಥಂ ಕ್ಷೀಣಪಾನೀಯೇ ಕ್ಷಾರಾಂಬು ಪುನರಾವಪೇತ್ ||೨೩||**

ಅರ್ಥಃ— ಕ್ಷಾರದಲ್ಲಿ ನೀರು ಒಣಗಿದರೆ ಅದಕ್ಕೆ ಬಲಬರುವದಕ್ಕಾಗಿ ಕ್ಷಾರನೀರು ಹಾಕಬೇಕು. (೨೩)

ಕ್ಷಾರ ಗುಣವನ್ನು ಹೇಳುತ್ತಾರೆ.

**ನಾತಿತೀಕ್ಷ್ಣೋ ಮೃದುಃ ಶ್ಲಕ್ಷ್ಣಃ ಪಿಚ್ಛಿಲಃ ಶೀಘ್ರಗಃ ಸಿತಃ||**
**ಶಿಖರೀ ಸುಖನಿರ್ವಾಪ್ಯೋ ನ ವಿಷ್ಯಂದೀ ನ ಚಾತಿರುಕ್ ||೨೪||**

**ಕ್ಷಾರೋ ದಶಗುಣಃ ಶಸ್ತ್ರತೇಜಸೋರಪಿ ಕರ್ಮಕೃತ್ ||**

ಅರ್ಥಃ— ಕ್ಷಾರವು ಬಹಳ ತೀಕ್ಷ್ಣವೂ ಅಲ್ಲ. ಮೃದುವೂ ಅಲ್ಲ, ಮೆತ್ತಗೆ, ಹೆಡಸುಳ್ಳದ್ದು, ಶೀಘ್ರವಾಗಿ ಶರೀರದಲ್ಲಿ ಕೆಲಸಮಾಡುವಂತಹದು, ಬೆಳ್ಳಗೆ, ಕೆಲವು ದಿವಸ ಇಟ್ಟರೆ ಮೇಲೆ ಗುಳ್ಳೆ ಬರುವಂತಹದು, ಸುಲಭವಾಗಿ ಪ್ರತಿಕಾರಮಾಡಲಿಕ್ಕೆ ಬರುವಂತಹದು, ಸ್ರಾವವನ್ನು ಮಾಡದಿರುವಂತಹದು. ಮತ್ತು ಬಹಳ ಪೀಡೆ ಕೊಡದಂತ ಹದು-ಹೀಗೆ ಹತ್ತು ಗುಣವುಳ್ಳದ್ದು ಇರುತ್ತದೆ. ಮತ್ತು ಶಸ್ತ್ರ ಅಗ್ನಿಗಳ ಕರ್ಮಗಳನ್ನು ಮಾಡುತ್ತದೆ. (೨೪||)

**ಆಚೂಷನ್ನಿವ ಸಂರಂಭಾದ್ಗಾತ್ರಮಾಪೀಡಯನ್ನಿವ ||೨೫||**

**ಸರ್ವತೋಽನುಸರನ್ ದೋಷಾನುನ್ಮೂಲಯತಿ ಮೂಲತಃ ||**
**ಕರ್ಮ ಕೃತ್ವಾ ಗತರುಜಃ ಸ್ವಯಮೇವೋಪಶಾಮ್ಯತಿ ||೨೬||**

ಅರ್ಥಃ— ಕ್ಷಾರವು ಕ್ಷೋಭೆಯನ್ನುಂಟುಮಾಡಿ ಆ ಅವಯವಗಳನ್ನು ಹೀರಿಕೊಳ್ಳುವಂತೆ ಎಲ್ಲ ಕಡೆಗೆ ವ್ಯಾಪಿಸಿ ತನ್ನಿಂದ ಸಾಧ್ಯವಾದ ರೋಗ

ಗಳನ್ನು ಮೂಲದಿಂದಲೇ ಕಿತ್ತುಹಾಕಿ ತನ್ನ ಕೆಲಸವನ್ನು ಮಾಡಿ, ಅವನ ರೋಗವು ಶಾಂತವಾಗಲು ತನ್ನಿಂದ ತಾನೇ ಶಾಂತವಾಗುವದು. (೨೬)

ಕ್ಷಾರ-ಪ್ರಯೋಗ-ವಿಧಿಯನ್ನು ಹೇಳುತ್ತಾರೆ

**ಕ್ಷಾರಸಾಧ್ಯೇ ಗದೇ ಛಿನ್ನೇ ಲಿಖಿತೇ ಸ್ರಾವಿತೇಽಥವಾ ॥**
**ಕ್ಷಾರಂ ಶಲಾಕಯಾ ದತ್ವಾ ಪ್ಲೋತಪ್ರಾವೃತದೇಹಯಾ ॥೨೭॥**
**ಮಾತ್ರಾಶತಮುಪೇಕ್ಷೇತ..............................**

ಅರ್ಥಃ— ಕ್ಷಾರಸಾಧ್ಯವಾದಂಥ ಬೇನೆಯಲ್ಲಿ ಕೊಯ್ದು ಅಥವಾ ಕೆರೆದು ಅಥವಾ ರಕ್ತ ತೆಗೆದು, ಶಲಾಕೆಯ ತುದಿಗೆ ಅರಿವೆ ಇಲ್ಲವೆ ಅರಳೆ ಸುತ್ತಿ ಅದರಿಂದ ಕ್ಷಾರವನ್ನು ಹಚ್ಚಿ ೧೦೦ ಅಂಕಿ ಎಣಿಸುವವರೆಗೆ ಹಾಗೇ ಬಿಡಬೇಕು. (೨೭)

**.ತತ್ರಾರ್ಶಃಸ್ವಾವೃತಾನನಮ್**
**ಹಸ್ತೇನ ಯಂತ್ರಂ ಕುರ್ವೀತ..........................**

ಅರ್ಥಃ— ಮೂಲವ್ಯಾಧಿಯಲ್ಲಿ ಕ್ಷಾರವನ್ನು ಹಚ್ಚಿ ನೂರು ಮಾತ್ರೆಯು ಕಾಲ ಕೈಯಿಂದ ಆ ಯಂತ್ರದ ಮುಖವನ್ನು ಮುಚ್ಚಬೇಕು. (೨೭।।)

**............... ...........ವರ್ತ್ಮರೋಗೇಷು ವರ್ತ್ಮನೀ ॥೨೮॥**
**ನಿರ್ಭುಜ್ಯ ಪಿಚುನಾಚ್ಛಾದ್ಯ ಕೃಷ್ಣಭಾಗಂ ವಿನಿಕ್ಷಿಪೇತ್ ॥**
**ಪದ್ಮಪತ್ರತನುಃ ಕ್ಷಾರಲೇಪೋ, ಘ್ರಾಣಾರ್ಬುದೇಷು ಚ ॥೨೯॥**

ಅರ್ಥಃ— ಎವೆರೋಗಗಳಲ್ಲಿ ಎವೆಗಳನ್ನು ಮಡಚಿ ಅರಳೆ ಮುಂತಾದವುಗಳ ಬತ್ತಿಯಿಂದ ಕಣ್ಣಿನ ಕರೀ ಭಾಗವನ್ನು ಮುಚ್ಚಿ ಕ್ಷಾರವನ್ನು ಹಚ್ಚಬೇಕು. ಇದರಲ್ಲಿಯೂ ಮೂಗಿನ ಅರ್ಬುದದಲ್ಲಿಯೂ ಕಮಲಪತ್ರದಷ್ಟು ತೆಳ್ಳಗೆ ಕ್ಷಾರ ಲೇಪನ ಮಾಡಬೇಕು. (೨೯)

**ಪ್ರತ್ಯಾದಿತ್ಯಂ ನಿಷಣ್ಣಸ್ಯ ಸಮುನ್ನಮ್ಯಾಗ್ರನಾಸಿಕಾಮ್ ॥**
**ಮಾತ್ರಾ ವಿಧಾಯರ್ಾಃ ಪಂಚಾಶತ್ ತದ್ವದರ್ಶಸಿ ಕರ್ಣಜೇ ॥೩೦॥**

ಅರ್ಥಃ— ಮೂಗಿನ ಅರ್ಬುದದಲ್ಲಿ ಸೂರ್ಯನ ಎದುರಿಗೆ ಕೂಡ್ರಿಸಿ ಮೂಗಿನ ತುದಿಯನ್ನು ಮೇಲಕ್ಕೆತ್ತಿ ಕ್ಷಾರ ಹಚ್ಚಬೇಕು. ಮತ್ತು ೫೦ ಮಾತ್ರೆಯ ವರೆಗೆ ಅದನ್ನು ಇಡಬೇಕು. ಅದರಂತೆಯೇ ಕಿವಿಯ ಅರ್ಶಕ್ಕೂ ಹಚ್ಚಬೇಕು.

**ಕ್ಷಾರಂ ಪ್ರಮಾರ್ಜನೇನಾನು ಪರಿಮೃಜ್ಯಾವಗಮ್ಯ ಚ ॥**
**ಸುದಗ್ಧಂ ಘೃತಮಧ್ವಕ್ತಂ ತತ್ಪಯೋಮಸ್ತುಕಾಂಜಿಕೈಃ ॥೩೧॥**
**ನಿರ್ವಾಪಯೇತ್ತತಃ ಸಾಜ್ಯೈಃ ಸ್ವಾದುಶೀತೈಃ ಪ್ರದೇಹಯೇತ್ ॥**
**ಅಭಿಷ್ಯಂದೀನಿ ಭೋಜ್ಯಾನಿ ಭೋಜ್ಯಾನಿ ಕ್ಲೇದನಾಯ ಚ ॥೩೨॥**

ಅರ್ಥ:— ಆ ಮೇಲೆ ಒರಿಸುವ ವಸ್ತ್ರದಿಂದ ಕ್ಷಾರವನ್ನು ಒರಿಸಿ ಚನ್ನಾಗಿ ಸುಟ್ಟಿದ್ದನ್ನು ನೋಡಿಕೊಂಡು ಅದಕ್ಕೆ ತುಪ್ಪ ಜೇನತುಪ್ಪ ಹಚ್ಚಿ ಆ ಮೇಲೆ ಹಾಲು, ಮೊಸರಿನ ನೀರು, ಅಂಬಲಿಗಳಿಂದ ಶಾಂತ ಮಾಡಬೇಕು. ಮತ್ತು ತುಪ್ಪ ಹಾಕಿದ ಮಧುರ ಶೀತ ಔಷಧಗಳಿಂದ ಲೇಪ ಮಾಡಬೇಕು. ಅದರಲ್ಲಿ ಸ್ರಾವವಾಗುವದಕ್ಕಾಗಿ ಕಫಕಾರಕ ಆಹಾರಗಳನ್ನು ತಿನ್ನಲು ಕೊಡಬೇಕು. (೩೨)

**ಯದಿ ಚ ಸ್ಥಿರಮೂಲತ್ವಾತ್ ಕ್ಷಾರದಗ್ಧಂ ನ ಶೀರ್ಯತೇ ॥**
**ಧಾನ್ಯಾಮ್ಲಬೀಜಯಷ್ಟ್ಯಾಹ್ವತಿಲೈರಾಲೇಪಯೇತ್ತತಃ ॥೩೩॥**

ಅರ್ಥಃ— ರೋಗದ ಮೂಲವು ಗಟ್ಟಿ ಇದ್ದದರಿಂದ ಕ್ಷಾರದಿಂದ ಸುಟ್ಟರೂ ರೋಗದ ಮೂಲವು ಹೋಗದಿದ್ದರೆ ಅದರ ಮೇಲೆ ಅಂಬಲಿಯ ಗಟ್ಟಿ ರಾಡಿ ಜೇಷ್ಠಮಧು ಎಳ್ಳುಗಳ ಲೇಪ ಮಾಡಬೇಕು. (೩೩)

**ತಿಲಕಲ್ಕಃ ಸಮಧುಕೋ ಘೃತಾಕ್ತೋ ವ್ರಣರೋಪಣಃ ॥**

ಅರ್ಥಃ— ಎಳ್ಳಿನಕಲ್ಕ, ಜೇಷ್ಠಮಧು, ತುಪ್ಪಗಳ ಲೇಪವು ವ್ರಣವನ್ನು ಮಾಯಿಸುವದು. (೩೩॥)

ದಾಹದ ಸಮ್ಯಗ್ಯೋಗ-ಅಯೋಗಗಳನ್ನು ಹೇಳುತ್ತಾರೆ.

**ಪಕ್ವಜಂಬ್ವಸಿತಂ ಸನ್ನಂ ಸಮ್ಯಗ್ದಗ್ಧಂ ವಿಪರ್ಯಯೇ ॥೩೪॥**
**ತಾಮ್ರತಾತೋದಕಂಡ್ವಾದ್ಯೈರ್ದುರ್ದಗ್ಧಂ ತಂ ಪುನರ್ದಹೇತ್ ॥**

ಅರ್ಥಃ—ಚನ್ನಾಗಿ ಸುಟ್ಟರೆ ಹಣ್ಣಾದ ನೇರಿಲ ಹಣ್ಣಿನಂತೆ ಕಪ್ಪಾಗುವದು, ಮತ್ತು ತಗ್ಗು ಬೀಳುವದು. ಇಲ್ಲವಾದರೆ ಕೆಂಪು ಬಣ್ಣ, ಚುಚ್ಚುವಿಕೆ, ತಿಂಡಿ ಮುಂತಾದವುಗಳುಂಟಾಗುವವು. ಆಗ್ಗೆ ಇನ್ನೂ ನೆಟ್ಟಗೆ ಸುಟ್ಟಿಲ್ಲವೆಂದು ತಿಳಿದು ಪುನಃ ಸುಡಬೇಕು.

ದಾಹದ ಅತಿಯೋಗವನ್ನು ಹೇಳುತ್ತಾರೆ.

**ಅತಿದಗ್ಧೇ ಸ್ರವೇದ್ರಕ್ತಂ ಮೂರ್ಛಾದಾಹಜ್ವರಾದಯಃ ||೩೫||**

ಅರ್ಥ:— ಬಹಳ ಸುಡಲು ರಕ್ತಸ್ರಾವ ಮೂರ್ಛೆ ದಾಹ ಜ್ವರ ಮುಂತಾದವುಗಳುಂಟಾಗುವವು. (೩೫)

**ಗುದೇ ವಿಶೇಷಾದ್ವಿಣ್ಮೂತ್ರಸಂರೋಧೋಽತಿಪ್ರವರ್ತನಮ್ ||**
**ಪುಂಸ್ತ್ವೋಪಘಾತೋ ಮೃತ್ಯುರ್ವಾ ಗುದಸ್ಯ ಶಾತನಾದ್ ಧ್ರುವಮ್ ||೩೬||**

ಅರ್ಥಃ— ಗುದವು ಬಹಳ ಸುಡಲು ವಿಶೇಷವಾಗಿ ಮಲಮೂತ್ರಗಳ ಪ್ರತಿಬಂಧ ಅಥವಾ ಅತಿಪ್ರವೃತ್ತಿ, ನಪುಂಸಕತ್ವಗಳು ಉಂಟಾಗುವವು. ಗುದದ ನಾಶದಿಂದ ನಿಶ್ಚಿತವಾಗಿ ಮೃತ್ಯುವು ಬರುತ್ತದೆ. (೩೬)

**ನಾಸಾಯಾಂ ನಾಸಿಕಾವಂಶದರಣಾಕುಂಚನೋದ್ಭವಃ ||**
**ಭವೇಚ್ಚ ವಿಷಯಾಜ್ಞಾನಂ ತದ್ವಚ್ಚ್ರೋತ್ರಾದಿಕೇಷ್ವಪಿ |೩೭||**

ಅರ್ಥಃ— ಮೂಗು ಅತಿ ದಗ್ಧವಾಗಲು ಮೂಗಿನ ಎಲಬು ಆಕುಂಚಿತ ಇಲ್ಲವೇ ನಷ್ಟವಾಗುವದು. ಮತ್ತು ಗಂಧಜ್ಞಾನವಾಗದು. ಇದರಂತೆ ಕಿವಿ ಮುಂತಾದವುಗಳಲ್ಲಿಯೂ ಅತಿ ದಾಹದಿಂದ ವಿಕಾರಗಳುಂಟಾಗುತ್ತವೆ. (೩೭)

ಅತಿದಗ್ಧದಿಂದುಂಟಾದ ವಿಕಾರಗಳ ಪ್ರತಿಕಾರವನ್ನು ಹೇಳುತ್ತಾರೆ.

**ವಿಶೇಷಾದತ್ರ ಸೇಕೋಽಮ್ಲೈರ್ಲೇಪೋ ಮಧು ಘೃತಂ ತಿಲಾಃ ||**
**ವಾತಪಿತ್ತಹರಾ ಚೇಷ್ಟಾ ಸರ್ವೈವ ಶಿಶಿರಾ ಕ್ರಿಯಾ ||೩೮||**

ಅರ್ಥ:— ಈ ವಿಕಾರದ ಮೇಲೆ ವಿಶೇಷವಾಗಿ ಅಂಬಲಿ ಮುಂತಾದ ಹುಳಿ ಪದಾರ್ಥಗಳ ಮತ್ತು ತುಪ್ಪ ಜೇನುತುಪ್ಪ ಎಳ್ಳುಗಳ ಲೇಪವೂ ವಾತ ಪಿತ್ತನಾಶಕ ಮತ್ತು ಎಲ್ಲ ಶೀತ ಕರ್ಮಗಳೂ ಹಿತಕರವು. (೩೮)

**ಅಮ್ಲೋಹಿ ಶೀತಃ ಸ್ಪರ್ಶೇನ ಕ್ಷಾರಸ್ತೇನೋಪಸಂಹಿತಃ ||**
**ಯಾತ್ಯಾಶು ಸ್ವಾದುತಾಂ ತಸ್ಮಾದಮ್ಲೈರ್ನಿರ್ವಾಪಯೇತ್ತರಾಮ್ ||೩೯||**

ಅರ್ಥ:— ಏಕೆಂದರೆ ಹುಳಿ ಪದಾರ್ಥವು ಸ್ಪರ್ಶದಿಂದ ಶೀತವಿರುವದು. ಅದರಿಂದ ಕೂಡಿದ ಕ್ಷಾರವು ಕೂಡಲೇ ಮಧುರವಾಗುವದು. ಆದ್ದರಿಂದ ದಾಹವನ್ನು ಹುಳಿಯಿಂದ ಶಾಂತಮಾಡತಕ್ಕದ್ದು. (೩೯)

ಅಗ್ನಿಕರ್ಮವಿಧಿಯನ್ನು ಹೇಳುತ್ತಾಳೆ.

**ಅಗ್ನಿಃ ಕ್ಷಾರಾದಪಿ ಶ್ರೇಷ್ಠಸ್ತದ್ದಗ್ಧಾನಾಮಸಂಭವಾತ್ ||**
**ಭೇಷಜಕ್ಷಾರಶಸ್ತ್ರೈಶ್ಚ ನ ಸಿದ್ಧಾನಾಂ ಪ್ರಸಾದನಾತ್ ||೪೦||**

**ತ್ವಚಿ ಮಾಂಸೇ ಸಿರಾಸ್ನಾಯುಸಂಧ್ಯಸ್ಥಿಷು ಸ ಯುಜ್ಯತೇ ||**

ಅರ್ಥ:— ಅಗ್ನಿಯು ಕ್ಷಾರಕ್ಕಿಂತಲೂ ಶ್ರೇಷ್ಠವು. ಯಾಕೆಂದರೆ ಅದರಿಂದ ಸುಟ್ಟ ರೋಗಗಳು ಪುನಃ ಉಂಟಾಗುವದಿಲ್ಲ. ಮತ್ತು ಔಷಧ ಕ್ಷಾರ ಶಸ್ತ್ರಗಳಿಂದ ನೆಟ್ಟಗಾಗದಿದ್ದ ರೋಗಗಳನ್ನು ಅದು ನೆಟ್ಟಗೆ ಮಾಡುತ್ತದೆ. ತ್ವಚೆ ಮಾಂಸ ಶಿರಾ ಸ್ನಾಯು ಸಂಧಿ ಎಲಬುಗಳ ಮೇಲೆ ಅದರ ಉಪಯೋಗ ವಾಗುವದು. (೪೦||)

**ಮಷಾಂಗಗ್ಲಾನಿಮೂರ್ಧಾರ್ತಿಮಂಥಕೀಲತಿಲಾದಿಷು ||೪೧||**
**ತ್ವಗ್ದಾಹೋ ವರ್ತಿಗೋದಂತಸೂರ್ಯಕಾಂತಶರಾದಿಭಿಃ ||**

ಅರ್ಥ:— ಮಷ, (ಕ್ಷುದ್ರರೋಗ), ಅವಯವದ ಗ್ಲಾನಿ, ತಲೆಶೂಲಿ, ಅಧಿಮಂಥ (ನೇತ್ರರೋಗ), ಚರ್ಮಕೀಲ ನರೋಲಿ), ಎಳ್ಳು ಮುಂತಾದ ವುಗಳ ಮೇಲೆ ಬತ್ತಿ, ಆಕಳಹಲ್ಲು, ಸೂರ್ಯಕಾಂತಮಣಿ, ಬಾಣ ಮುಂತಾ ದವುಗಳಿಂದ ತ್ವಚೆಯನ್ನು ಸುಡಬೇಕು. (೪೧||)

**ಅರ್ಶೋರ್ಭಗಂದರಗ್ರಂಥಿನಾಡೀದುಷ್ಟವ್ರಣಾದಿಷು** ||೪೨||
**ಮಾಂಸದಾಹೋ ಮಧುಸ್ನೇಹಜಾಂಬವೋಷ್ಠಗುಡಾದಿಭಿಃ** ||

ಅರ್ಥಃ— ಮೂಲವ್ಯಾಧಿ, ಭಗಂದರ, ಗ್ರಂಥಿ, ನಾಡೀವ್ರಣ, ದುಷ್ಟ ವ್ರಣ ಮುಂತಾದ ರೋಗಗಳ ಮೇಲೆ ಜೇನತುಪ್ಪ ಸ್ನೇಹ ಜಾಂಬವೋಷ್ಠ ಬೆಲ್ಲ ಮುಂತಾದವುಗಳಿಂದ ಮಾಂಸಕ್ಕೆ ದಾಹ ಕೊಡಬೇಕು. (೪೨||)

**ಶ್ಲಿಷ್ಟವರ್ತ್ಮನ್ಯಸೃಕ್ಸ್ರಾವನೀಲ್ಯಸಮ್ಯಗ್ವ್ಯಧಾದಿಷು** ||೪೩||

**ಸಿರಾದಿದಾಹಸ್ತೈರೇವ, ನ ದಹೇತ್ ಕ್ಷಾರವಾರಿತಾನ್** ||
**ಅಂತಃಶಲ್ಯಾಸೃಜೋ ಭಿನ್ನಕೋಷ್ಠಾನ್ ಭೂರಿವ್ರಣಾತುರಾನ್** ||೪೪||

ಅರ್ಥಃ— ಕಣ್ಣಿನ ಎವೆಗಳ ಆಕುಂಚನ, ರಕ್ತಸ್ರಾವ, ನೀಲಿಕೆ, ನೆಟ್ಟಗೆ ಮಾಡದ ಶಿರಾವೇಧ, ಮುಂತಾದವುಗಳ ಮೇಲೆ ಅವುಗಳಿಂದಲೇ ಶಿರೆ ಮುಂತಾದವುಗಳ ದಾಹ ಮಾಡಬೇಕು. ಯಾರಿಗೆ ಕ್ಷಾರವು ವರ್ಜ್ಯವೆಂದು ಹೇಳಿದೆಯೋ, ಯಾರ ಶರೀರದಲ್ಲಿ ಶಲ್ಯ ಅಥವಾ ರಕ್ತಸ್ರಾವ ವಾಗಿದೆಯೋ, ಯಾರ ಕೋಷ್ಠವು ಶೀಳಿದೆಯೋ, ಮತ್ತು ಯಾರು ಬಹಳ ವ್ರಣಗಳಿಂದ ಪೀಡಿತರಾಗಿದ್ದಾರೋ ಅಂಥವರಿಗೆ ದಾಹ ಕೊಡಬಾರದು. (೪೪)

**ಸುದಗ್ಧಂ ಘೃತಮಧ್ವಕ್ತಂ ಸ್ನಿಗ್ಧಶೀತೈಃ ಪ್ರದೇಹಯೇತ್** ||

ಅರ್ಥಃ— ಚನ್ನಾಗಿ ದಾಹವಾಗಿದ್ದರೆ ತುಪ್ಪ ಜೇನತುಪ್ಪ ಕೂಡಿಸಿ ಹಚ್ಚಿ ಸ್ನಿಗ್ಧ ಶೀತ ಲೇಪ ಮಾಡಬೇಕು. (೪೪||)

**ತಸ್ಯ ಲಿಂಗಂ ಸ್ಥಿತೇ ರಕ್ತೇ ಶಬ್ದವಲ್ಲಸಿಕಾನ್ವಿತಮ್** ||೪೫||
**ಪಕ್ವತಾಲಕಪೋತಾಭಂ ಸುರೋಹಂ ನಾತಿವೇದನಮ್** ||

ಅರ್ಥಃ— ಚನ್ನಾಗಿ ದಾಹವಾಗಿದ್ದರೆ ರಕ್ತವು ಬಂದಾಗಿ ಬುರುಗಿನ ಸಪ್ಪಳದಂತೆ ಸಪ್ಪಳವಾಗುವದು. ರಸಿಕೆ ಬರುವದು. ಹಣ್ಣಾದ ತಾಲಫಲ ದಂತೆ ಪಾರಿವಾಳದಂತೆ ಬಣ್ಣ ಇರುವದು, ತೀವ್ರ ಮಾಯುವದು. ಬಹಳ ವೇದನೆ ಇರುವದಿಲ್ಲ. (೪೫||)

ಪ್ರಮಾದ-ದಗ್ಧ ಲಕ್ಷಣಗಳನ್ನು ಹೇಳುತ್ತಾರೆ.

**ಪ್ರಮಾದದಗ್ಧವತ್ಸರ್ವಂ ದುರ್ದಗ್ಧಾತ್ಯರ್ಥದಗ್ಧಯೋಃ ||೪೬||**

ಅರ್ಥಃ— ಕಡಿಮೆ ಅಥವಾ ಹೆಚ್ಚು ಸುಟ್ಟಿದ್ದರೆ ಪ್ರಮಾದದಿಂದ ಸುಟ್ಟಿದ್ದರ ಲಕ್ಷಣಗಳಾಗುವವು. (೪೬)

**ಚತುರ್ಧಾ ತತ್ತು ತುಚ್ಛೇನ ಸಹ ತುಚ್ಛಸ್ಯ ಲಕ್ಷಣಮ್ ||**
**ತ್ವಗ್ವಿವರ್ಣೋಽಷ್ಯತೇಽತ್ಯರ್ಥಂ ನ ಚ ಸ್ಫೋಟಸಮುದ್ಭವಃ ||೪೭||**

ಅರ್ಥಃ— ತುಚ್ಛದಗ್ಧ ಕೂಡಿ ಪ್ರಮಾದ ದಗ್ಧದಲ್ಲಿ (ತುಚ್ಛದಗ್ಧ, ದುರ್ದಗ್ಧ, ಅತಿದಗ್ಧ, ಸುದಗ್ಧ ಎಂದು) ನಾಲ್ಕು ಭೇದಗಳುಂಟು. ತ್ವಚೆಯ ಬಣ್ಣವು ಸ್ವಲ್ಪ ಬೇರೆಯಾಗಿ ಉರುಪು ಬಹಳವಿದ್ದು ಗುಳ್ಳೆಗಳು ಏಳದಿದ್ದರೆ ಅದಕ್ಕೆ ತುಚ್ಛದಗ್ಧವೆಂದು ಹೇಳಬೇಕು. (೪೭)

**ಸಸ್ಫೋಟದಾಹತೀವ್ರೋಷಂ ದುರ್ದಗ್ಧಮತಿದಾಹತಃ ||**
**ಮಾಂಸಲಂಬನಸಂಕೋಚದಾಹಧೂಪನ ವೇದನಾ: ||೪೮||**

**ಸಿರಾದಿನಾಶಸ್ತೃಣ್ಮೂರ್ಛಾವ್ರಣಗಾಂಭೀರ್ಯಮೃತ್ಯವಃ ||**

ಅರ್ಥಃ— ದುರ್ದಗ್ಧದಲ್ಲಿ ಗುಳ್ಳೆಗಳೂ, ಬಹಳ ಉರುಪೂ, ದಾಹವೂ ಇರುತ್ತದೆ. ಅತಿದಗ್ಧದಲ್ಲಿ ಮಾಂಸವು ಜೋತಾಡುವದು. ಸಿರೆ ಮುಂತಾದವುಗಳ ಸಂಕೋಚ, ದಾಹ, ಹೊಗೆ ಹೊರಟಂತಾಗೋಣ, ನೋವು ಸಿರಾದಿಗಳ ನಾಶ, ನೀರಡಿಕೆ, ಮೂರ್ಛೆ, ಗಂಭೀರ ವ್ರಣ, ಮತ್ತು ಮೃತ್ಯು ಉಂಟಾಗುವವು. (೪೮||)

**ತುಚ್ಛಸ್ಯಾಗ್ನಿಪ್ರತಪನಂ ಕಾರ್ಯಮುಷ್ಣಂ ಚ ಭೇಷಜಮ್ ||೪೯||**
**ಸ್ತ್ಯಾನೇಽಸ್ರೇ ವೇದನಾಽತ್ಯರ್ಥಂ ವಿಲೀನೇ ಮಂದತಾ ರುಜಃ ||**

ಅರ್ಥಃ— ತುಚ್ಛದಗ್ಧಕ್ಕೆ ಬೆಂಕಿ ಕಾಸೋಣ ಮತ್ತು ಉಷ್ಣ ಔಷಧವನ್ನು ಮಾಡಬೇಕು. ಯಾಕೆಂದರೆ ಅದರಲ್ಲಿ ರಕ್ತವು ಗಟ್ಟಿಯಾಗಿರುತ್ತದೆ. ಗಟ್ಟಿಯಾದ್ದರಿಂದ ಬಹಳ ವೇದನೆಯಾಗುವದು. (ಉಷ್ಣ ಉಪಚಾರದಿಂದ ರಕ್ತವು ತೆಳ್ಳಗಾಗಲು ವೇದನೆಯು ಮಂದವಾಗುವದು.) (೪೯||)

ಸುದರ್ಗ್ಧೇ ಶೀತಮುಷ್ಣಂ ಚ ಯುಂಜ್ಯಾದಾದೌ ತತೋ ಹಿಮಮ್
||೫೦||

ಅರ್ಥ:— ದುದರ್ಗ್ಧದ ಮೇಲೆ ಮೊದಲು ಶೀತ ಆ ಮೇಲೆ ಉಷ್ಣ ಆ ಮೇಲೆ ಪುನಃ ಶೀತ-ಉಪಚಾರ ಮಾಡಬೇಕು. (೫೦)

ಸಮ್ಯಗ್ದಗ್ಧೇ ತುಗಾಕ್ಷೀರಿಪ್ಲಕ್ಷಚಂದನಗೈರಿಕೈಃ ||
ಲಿಂಪೇತ್ಸಾಜ್ಯಾಮೃತೈರೂರ್ಧ್ವಂ ಪಿತ್ತವಿದ್ರಧಿವತ್ಕ್ರಿಯಾ ||೫೧||

ಅರ್ಥ:— ಸುದಗ್ಧದಲ್ಲಿ ವಂಶಲೋಚನ, ಬಸರಿ, ಚಂದನ, ಕಾವಿ, ಅಮೃತಬಳ್ಳಿ, ಮತ್ತು ತುಪ್ಪ ಇವುಗಳ ಲೇಪ ಮಾಡಿ ಅನಂತರ ಪಿತ್ತ-ವಿದ್ರಧಿಯ ಮೇಲಿನ ಚಿಕಿತ್ಸೆ ಮಾಡಬೇಕು. (೫೧)

ಅತಿದಗ್ಧೇ ದ್ರುತಂ ಕುರ್ಯಾತ್ಸರ್ವಂ ಪಿತ್ತ ವಿಸರ್ಪವತ್ ||

ಅರ್ಥ:— ಅತಿ-ದಗ್ಧದ ಮೇಲೆ ಪಿತ್ತ-ವಿಸರ್ಪದಂತೆ ಎಲ್ಲ ಕ್ರಿಯೆ ಮಾಡಬೇಕು. (೫೧||)

ಸ್ನೇಹದಗ್ಧೇ ಭೃಶತರಂ ರೂಕ್ಷಂ ತತ್ರ ತು ಯೋಜಯೇತ್ ||೫೨||

ಅರ್ಥ:—ಸ್ನೇಹ ದಗ್ಧದ ಮೇಲೆ ಅತ್ಯಂತ ರುಕ್ಷ ಲೇಪಾದಿಗಳನ್ನು ಮಾಡಬೇಕು. (೫೨)

ಸಮಾಪ್ಯತೇ ಸ್ಥಾನಮಿದಂ ಹೃದಯಸ್ಯ ರಹಸ್ಯವತ್ ||
ಅತ್ರಾರ್ಥಾಃ ಸೂತ್ರಿತಾಃ ಸೂಕ್ಷ್ಮಾಃ ಪ್ರತನ್ಯಂತೇ ಹಿ ಸರ್ವತಃ ||೫೩||

ಅರ್ಥ:— ಅಷ್ಟಾಂಗ ಹೃದಯದ ರಹಸ್ಯವುಳ್ಳ ಈ ಭಾಗವು ಮುಗಿಸಲ್ಪಡುತ್ತದೆ. ಇಲ್ಲಿ ಸೂತ್ರ ರೂಪದಿಂದ ಹೇಳಿದ ಸೂಕ್ಷ್ಮವಾದ ಸಂಗತಿಗಳು ಮುಂದಿನ ಎಲ್ಲ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲ್ಪಡುತ್ತವೆ. (೫೩)

ಇತಿ ಅಷ್ಟಾಂಗಹೃದಯಸಂಹಿತಾಯಾಂ ಸೂತ್ರಸ್ಥಾನೇ
ಕ್ಷಾರಾಗ್ನಿಕರ್ಮವಿಧಿರ್ನಾಮ ತ್ರಿಂಶತ್ತಮೋಽಧ್ಯಾಯಃ ಸಮಾಪ್ತಃ

ಇತಿಶ್ರೀಮದಾದ್ಯ ಬಾಬಾಚಾರ್ಯ ಪೂಜ್ಯಪಾದ ಶಿಷ್ಯ ಆದ್ಯ ಅನಂತಾಚಾರ್ಯರಿಂದ ರಚಿತವಾದ 'ರಹಸ್ಯಪ್ರಕಾಶಿನೀ' ಎಂಬ 'ಅಷ್ಟಾಂಗಹೃದಯ'ದ ಸೂತ್ರಸ್ಥಾನದಲ್ಲಿಯ'ಕ್ಷಾರಾಗ್ನಿಕರ್ಮವಿಧಿ' ಎಂಬ ೩೦ನೆಯ ಅಧ್ಯಾಯದ ಟೀಕೆಯು ಮುಗಿದುದು.

ಸೂತ್ರಸ್ಥಾನ ಸಮಾಪ್ತ